ಶಿವಕೋಟ್ಯಾಚಾರ್ಯ ವಿರಚಿತ

# ವಡ್ಡಾರಾಧನೆ

ಸಂಪಾದಕರು

ಡಾ|| ಡಿ. ಎಲ್. ನರಸಿಂಹಾಚಾರ್

'ವಡ್ಡಾರಾಧನೆ' ಹತ್ತೊಂಬತ್ತು 'ಮಹಾಪುರುಷರ್ಕಳ ಕಥೆಗಳಂ' ಹೇಳುವುದಾಗಿದೆ. ಈ ಕಥೆಗಳೆಲ್ಲ ಧರ್ಮಕಥೆಗಳು. ಅವುಗಳ ನಾಯಕರೆಲ್ಲ ಧರ್ಮವೀರರು ; ಕೆಲವರು ಮೋಕ್ಷವನ್ನು ಸಂಪಾದಿಸಿಕೊಳ್ಳುತ್ತಾರೆ ; ಕೆಲವರು ಮೋಕ್ಷಕ್ಕೆ ನೆರೆಮನೆಯಾದ ಸರ್ವಾರ್ಥಸಿದ್ಧಿಯೆಂಬ ಸ್ವರ್ಗಕ್ಕೆ ಹೋಗುತ್ತಾರೆ ; ಅವರು ಪಡೆದ ಸಿದ್ಧಿಗಳು ಇವು. ಅವರಿಗೆ ಇವು ಉಂಟಾದದ್ದು ಪುಣ್ಯಪಾಪರೂಪವಾದ ಕರ್ಮಕ್ಷಯದಿಂದ ಅಥವಾ ಅದರ ಉಪಶಮನದಿಂದ.

— ಡಿ. ಎಲ್. ಎನ್.

ಡಿ. ವಿ. ಕೆ. ಮೂರ್ತಿ :: ಪ್ರಕಾಶಕರು :: ಮೈಸೂರು ೪

ನಂದೀಶ್. ಎಂ. ಎನ್.

ಶಿವಕೋಟ್ಯಾಚಾರ್ಯ

ವಿರಚಿತ

# ವಡ್ಡಾರಾಧನೆ

ಸಂಪಾದಕರು

ಡಾ|| ಡಿ. ಎಲ್. ನರಸಿಂಹಾಚಾರ್

ಡಿ. ವಿ. ಕೆ. ಮೂರ್ತಿ

ಕೃಷ್ಣಮೂರ್ತಿಪುರಂ :: ಮೈಸೂರು ೪

*VADDARADHANE*—in Kannada. Edited by Dr. D. L. Narasimhachar. Ninth Edition: 1996. Published by D.V.K. Murthy, Krishnamurthipuram, Mysore 570 004.

ಒಂಭತ್ತನೆಯ ಮುದ್ರಣ: ೧೯೯೬



ಮುದ್ರಕರು: ಜಿ. ಎಚ್. ಕೃಷ್ಣಮೂರ್ತಿ, ಮೈಸೂರು ಪ್ರಿಂಟಿಂಗ್ ಪ್ರೆಸ್
೧೨೧೦, ಕಾಂತರಾಜ ಅರಸು ರಸ್ತೆ, ಕೃಷ್ಣಮೂರ್ತಿಪುರಂ, ಮೈಸೂರು ೫೭೦ ೦೦೪

# ಅರ್ಪಣೆ

ನನ್ನ ವಿದ್ಯಾಗುರುಗಳೂ
ಹಿತೈಷಿಗಳೂ ಶಿಷ್ಯವಾತ್ಸಲ್ಯಪೂರ್ಣರೂ ಆಗಿದ್ದು
ದಿವಂಗತರಾಗಿರುವ
ರಾಜಸೇವಾಸಕ್ತ

**ಬಿ. ಎಂ. ಶ್ರೀಕಂಠಯ್ಯ,** ಎಂ.ಎ., ಬಿ.ಎಲ್.

ಅವರ ನೆನಪಿಗಾಗಿ
ಭಕ್ತಿಯಿಂದ ಈ ಪರಿಷ್ಕೃತ ಗ್ರಂಥವು
ಅರ್ಪಿತವಾಗಿದೆ

ಶ್ರೀಕಂಠಗುರುವ ಕಾವ್ಯಮ
ನಾಕರ್ಣಿಸಿ ರಸದ ಮಡುವೊಳಾಟಿದನಾಮಂ
ಕೇಕಿಕ ನೃತ್ಯದ್ ಬರ್ಹಾ
ಲೋಕದವೋಲದುಪೆ ಚಿತ್ರವರ್ಣಾಕೀರ್ಣಂ

ಅದು ಕನ್ನಡ ಕಲ್ಪಿಯೊಳ್ ಪರಿಣತಂ ತಾನಾಗಿ ತನ್ನುಕ್ತಿಯಿಂ
ತೀವುತ್ತುಂ ನಿಜ ಶಿಷ್ಯವೃಂದದೆರ್ದೆಯೊಳ್ ಸಾಹಿತ್ಯ ಸಂಪ್ರೀತಿಯಂ
ಭಾವಾವೇಶ ರಸಂಗಳಂ ತುಳುಕಿಪಾ ಶ್ರೀಕಂಠ ವಾಗ್ಧಾರೆಯಿಂ
ದೋವೋ ಕೀರ್ತಿಯನಾಂತನಾ ಗುರುವರಂಗೀ ಗ್ರಂಥಮಾಯ್ತರ್ಪಿತಂ

**ಡಿ. ಎಲ್. ಎಸ್.**

# ಮೊದಲ ಮಾತು

(ಮೊದಲ ಮುದ್ರಣಕ್ಕೆ ಬರೆದದ್ದು)

'ವಡ್ಡಾರಾಧನೆ'ಯಲ್ಲಿನ ಕಥೆಗಳಲ್ಲಿ ಮೂರನ್ನು ೧೯೩೧ನೆಯ ಇಸವಿಯಲ್ಲೇ 'ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆ'ಯ ಆಗಿನ ಮಾನ್ಯ ಸಂಪಾದಕರಾಗಿದ್ದ ಬೆಳ್ಳಾವೆ ವೆಂಕಟನಾರಾಯಣಪ್ಪನವರ ಕೃಪೆಯಿಂದ ಪ್ರಕಟಿಸಲಾಗಿತ್ತು. ಅಂದಿನಿಂದ ಸಮಗ್ರ ಗ್ರಂಥವನ್ನು ಪ್ರಚುರಪಡಿಸಬೇಕೆಂಬ ಉದ್ದೇಶವಿತ್ತು. ಆಗ ದೊರೆತಿದ್ದ ಒಂದೇ ಒಂದು ಪ್ರತಿಯಿಂದ ಗ್ರಂಥ ಪರಿಶೋಧನೆಯ ಕಾರ್ಯ ಸಮರ್ಪಕವಾಗುವುದಿಲ್ಲವೆಂದು ಕಂಡುಬಂದದ್ದರಿಂದ ಮಾದರಿಗಾಗಿ ಮೂರು ಕಥೆಗಳನ್ನು ಮಾತ್ರ ಕೊಟ್ಟು ಉಳಿದುವನ್ನು ಪ್ರತ್ಯಂತರಗಳು ದೊರೆತಮೇಲೆ ಪ್ರಕಟಿಸುವುದು ಒಳ್ಳಿತೆಂದು ಸುಮ್ಮನಿರಬೇಕಾಯಿತು. ಅಲ್ಲಿಂದ ಈಚೆಗೆ 'ವಡ್ಡಾರಾಧನೆ'ಯ ಬೇರೆ ಐದಾರು ಪ್ರತಿಗಳು ಸಿಕ್ಕಿವೆ. ಇವುಗಳ ಸಹಾಯದಿಂದ ಈಗ ಆ ಗ್ರಂಥವನ್ನು ಈ ರೂಪದಲ್ಲಿ ಪ್ರಕಟಿಸಿದೆ.

* * *

ವಡ್ಡಾರಾಧನೆಯ ಮೂಲ ಪ್ರತಿಗಳು, ಕರ್ತೃತ್ವ, ಕಾಲ, ಕಥೆಗಳ ಮೂಲ ಮತ್ತು ಬೆಳವಣಿಗೆ, ಶೈಲಿ, ಭಾಷೆಯ ಲಕ್ಷಣ, ಕಾವ್ಯವಿಮರ್ಶೆ, ಶಬ್ದಕೋಶ, ಟಿಪ್ಪಣಿ—ಎಂಬಿವೇ ಮುಂತಾದ ವಿಷಯಗಳನ್ನೊಳಗೊಂಡ ಪೀಠಿಕೆಯೊಂದನ್ನು ಬರೆಯಬೇಕೆಂಬ ಸಂಕಲ್ಪವಿದ್ದುದರಿಂದಲೂ, ಇನ್ನೂ ಹಲವು ಕಾರಣಗಳಿಂದಲೂ ಈ ಗ್ರಂಥ ಪ್ರಕಟವಾಗುವುದು ಬಹಳ ತಡವಾಯಿತು. ಆದರೂ ಆ ಪೀಠಿಕೆಯನ್ನು ಬರೆಯುವುದು ಇದುವರೆಗೆ ಸಾಧ್ಯವಾಗಿಲ್ಲ. ಮುಂದಿನ ಮುದ್ರಣದ ಹೊತ್ತಿಗೆ ಅದು ಸಿದ್ಧವಾಗುವುದೆಂಬ ಭರವಸೆ ಇದೆ. ಡಾ. ಎ. ಎನ್. ಉಪಾಧ್ಯೆ ಇವರು ತಮ್ಮಿಂದ ಸಂಪಾದಿತವಾದ ಹರಿಷೇಣನ 'ಬೃಹತ್ಕಥಾಕೋಶ'ಕ್ಕೆ ಬರೆದಿರುವ ಪ್ರೌಢವೂ ಪರಿಪೂರ್ಣವೂ ಆದ ಪ್ರಸ್ತಾವನೆಯನ್ನು ಎಲ್ಲರೂ ಅವಲೋಕಿಸಬಹುದು.

ತಮ್ಮಲ್ಲಿದ್ದ ಮೂರು ಪ್ರತಿಗಳನ್ನು ಉದಾರಬುದ್ಧಿಯಿಂದ ನನಗೆ ದೊರಕಿಸಿಕೊಟ್ಟ ಸರಾಫ್ ಪದ್ಮರಾಜಯ್ಯನವರ ಉಪಕಾರವು ಸ್ಮರಣೀಯವಾಗಿದೆ. ಈ ಮಹನೀಯರು ಗ್ರಂಥವು ಪೂರ್ತಿ ಅಚ್ಚಾಗಿ ಪ್ರಕಟವಾದದ್ದನ್ನು ಕಣ್ಣಾರನೋಡಿ ಸಂತೋಷಪಡಬೇಕೆಂಬ ಆಸೆಯನ್ನು ಇಟ್ಟುಕೊಂಡಿದ್ದರು. ಆದರೆ ಅದು ಪ್ರಕಟವಾಗುವುದರೊಳಗೆ ಅವರು ದಿವಂಗತರಾದದ್ದು ವಿಷಾದದ ಸಂಗತಿ. ಉಳಿದ ಪ್ರತಿಗಳನ್ನು ಉಪಯೋಗಿಸಿಕೊಳ್ಳುವುದಕ್ಕೆ ಅವಕಾಶವನ್ನು ಕೊಟ್ಟ ಮೇಲ್ಕಂಡ ಸಂಸ್ಥೆಗಳಿಗೂ ಮಹನೀಯರಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಗ್ರಂಥಸಂಪಾದನೆಯ ಕಾರ್ಯದಲ್ಲಿ ನನಗೆ ಮೊದಲಿನಿಂದಲೂ ಪ್ರೋತ್ಸಾಹ ಕೊಟ್ಟು ಅಚ್ಚಿನ ಕರಡುಗಳನ್ನು ನೋಡಿ ತಿದ್ದಿ, ಅಮೂಲ್ಯವಾದ ಸೂಚನೆಗಳನ್ನು ಕೊಟ್ಟವರು, ನನ್ನ ವಿದ್ಯಾಗುರುಗಳಾದ ಬಿ. ಎಂ. ಶ್ರೀಕಂಠಯ್ಯನವರು. ಪುಸ್ತಕ ಹೊರಬೀಳುವುದರೊಳಗಾಗಿ ಅವರು ಸ್ವರ್ಗವಾಸಿಗಳಾದದ್ದು ತುಂಬಾ ದುಃಖಕ್ಕೆ ಕಾರಣವಾಗಿದೆ. ಅವರ ನೆನಪಿಗೆ ಈ ಗ್ರಂಥವನ್ನು ಮೀಸಲಾಗಿ ಇಟ್ಟಿದೆ. ಇದರಲ್ಲಿ ಬರುವ ಪ್ರಾಕೃತ–ಸಂಸ್ಕೃತ ಪದ್ಯಗಳ ಪಾಠ ನಿರ್ಣಯದಲ್ಲಿ ಮೇಲಿಂದ ಮೇಲೆ, ಬೇಸರಪಟ್ಟುಕೊಳ್ಳದೆ ಸಹಾಯ ಮಾಡಿದ ಡಾ. ಎ. ಎನ್. ಉಪಾಧ್ಯೆ ಅವರಿಗೆ ನಾನು ತುಂಬಾ ಋಣಿಯಾಗಿದ್ದೇನೆ. ಈ ಪುಸ್ತಕದ ಮುದ್ರಣಕಾರ್ಯದಲ್ಲಿ ಬಹಳ ಶ್ರದ್ಧೆಯನ್ನು ವಹಿಸಿದ ನನ್ನ ಗೆಳೆಯರಾದ ಶ್ರೀಮಾನ್ ವೆಂಕಟಾಚಲಪತಿಯವರಿಗೂ, ಪರಿಷತ್ತಿನ ಮುದ್ರಣಾಲಯದ ಅಧಿಕಾರಿಗಳಿಗೂ, ಪರಿಷತ್ ಪತ್ರಿಕೆಯಲ್ಲಿ ಇದನ್ನು ಭಾಗಶಃ ಅಚ್ಚುಹಾಕಿಸಿಕೊಟ್ಟ ಪರಿಷತ್ ಪತ್ರಿಕೆಯ ಸಂಪಾದಕರುಗಳಿಗೂ ನನ್ನ ವಂದನೆಗಳನ್ನು ಅರ್ಪಿಸುತ್ತೇನೆ.

ಮೈಸೂರು
ಆಗಸ್ಟ್ ೧, ೧೯೪೯

**ಡಿ. ಎಲ್. ನರಸಿಂಹಾಚಾರ್**

# ನಾಲ್ಕನೆಯ ಮುದ್ರಣದ ಅರಿಕೆ

ಕನ್ನಡ ಸಾಹಿತ್ಯ ಪರಿಷತ್ತು, ವಿದ್ಯಾಭ್ಯಾಸದ ಇಲಾಖೆ, ಕನ್ನಡನಾಡಿನ ವಿಶ್ವವಿದ್ಯಾನಿಲಯಗಳು ಈ ಗ್ರಂಥವನ್ನು ವಿವಿಧ ಪರೀಕ್ಷೆಗಳಿಗೆ ಪಠ್ಯಪುಸ್ತಕವನ್ನಾಗಿ ಗೊತ್ತುಮಾಡಿದ ಕಾರಣ ಇದರ ಪುನರ್ ಮುದ್ರಣಕ್ಕೆ ಅವಕಾಶವುಂಟಾಯಿತು. ಈ ಅವಕಾಶ ದೊರಕಿದ್ದಕ್ಕಾಗಿ ಮೇಲ್ಕಂಡ ಸಂಸ್ಥೆಗಳಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಗ್ರಂಥದ ಪುನರ್ ಮುದ್ರಣದ ಈ ಸಂದರ್ಭವನ್ನು ಉಪಯೋಗಿಸಿಕೊಂಡು, ಇದಕ್ಕೆ ವಿಸ್ತಾರವಾದ ಟಿಪ್ಪಣಿಗಳನ್ನೂ, ಉಪಯುಕ್ತವಾದ ಅನುಬಂಧಗಳನ್ನೂ ಸೇರಿಸಿದೆ. ಪೀಠಿಕೆ ಮಾತ್ರ ಅಸಂಪೂರ್ಣವಾಗಿಯೇ ಉಳಿದಿದೆ. ಗ್ರಂಥವಿಮರ್ಶೆ, ವಡ್ಡಾರಾಧನೆಯ ಶೈಲಿಯ ಸ್ವರೂಪ, ಗ್ರಂಥದಲ್ಲಿ ಕಂಡುಬರುವ ಸಾಮಾಜಿಕ ಜೀವನ ಇವೇ ಮೊದಲಾದ ವಿಷಯಗಳನ್ನು ಪೀಠಿಕೆಯಲ್ಲಿ ಸೇರಿಸಬೇಕೆಂಬ ಆಸೆ ಕೈಗೂಡಲಿಲ್ಲ. ಗ್ರಂಥಕ್ಕೆ ಇನ್ನೊಂದು ಮುದ್ರಣದ ಅವಕಾಶ ದೊರಕಿದರೆ ಮೇಲೆ ಹೇಳಿದ ಅಂಶಗಳನ್ನು ಸೇರಿಸಿ ಗ್ರಂಥವನ್ನು ಸಮಗ್ರಗೊಳಿಸುವ ಭರವಸೆ ಇದೆ.

ಇನ್ನು ನೆರವು–ನೆನವು. ಕಠಿಣ ಶಬ್ದಗಳ ಕೋಶ, ಪಾರಿಭಾಷಿಕ ಶಬ್ದಗಳ ಕೋಶ, ಸಂಕೇತಗಳ ವಿವರ, ಅಚ್ಚಿನ ತಪ್ಪುಗಳು ಇವುಗಳ ಪಟ್ಟಿಯನ್ನು ನನ್ನ ತರುಣ ಮಿತ್ರರಾದ ಶ್ರೀ ಜಿ. ಜಿ. ಮಂಜುನಾಥನ್‌ರವರೂ, ಗ್ರಂಥದಲ್ಲಿ ಉದ್ಧೃತಪದ್ಯಗಳ ಅಕಾರಾದಿಯನ್ನು ಶ್ರೀ ಎಚ್. ಎಸ್. ಹರಿಶಂಕರ್ ಅವರೂ ಸಿದ್ಧಪಡಿಸಿಕೊಟ್ಟಿದ್ದಾರೆ. ಪ್ರಾಕೃತ–ಸಂಸ್ಕೃತ ಪದ್ಯಗಳ ಪಾಠಗಳನ್ನು ಸರಿನೋಡಿ ಕೊಟ್ಟ ಡಾ. ಎ. ಎನ್. ಉಪಾಧ್ಯೆ ಅವರ ಸಹಾಯ ಸ್ಮರಣೀಯವಾಗಿದೆ. ಗ್ರಂಥದಲ್ಲಿ ಉದ್ಧೃತವಾಗಿರುವ ಸಂಸ್ಕೃತ ಪದ್ಯಗಳನ್ನು ಅರ್ಥಮಾಡುವಲ್ಲಿ ವೇದಾಂತರತ್ನಂ, ಪಂಡಿತಭೂಷಣಂ ಬ್ರಹ್ಮಶ್ರೀ ವಿದ್ವಾನ್ ಎನ್. ವಿ. ಪದ್ಮನಾಭಾಚಾರ್ಯರ ಸಹಾಯವನ್ನು ತುಂಬುಮನಸ್ಸಿನಿಂದ ನೆನೆಯುತ್ತೇನೆ. ಈ ಎಲ್ಲ ಮಹನೀಯರಿಗೂ ನನ್ನ ಹಾರ್ದಿಕವಾದ ಕೃತಜ್ಞತೆಗಳು ಸಲ್ಲುತ್ತವೆ.

ಗ್ರಂಥದ ಮುದ್ರಣದ ವಿಷಯದಲ್ಲಿ ಅತ್ಯಂತ ಆಸಕ್ತಿ ವಹಿಸಿ, ಕೆಲಸವನ್ನು ತುಂಬ ದಕ್ಷತೆಯಿಂದ ಕ್ಷಿಪ್ರವಾಗಿ ನಿರ್ವಹಿಸಿದ ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿನ ಜಿ. ಎಚ್. ಕೃಷ್ಣಮೂರ್ತಿಯ ಶ್ರಮವನ್ನು ಎಷ್ಟು ಹೊಗಳಿದರೂ ಸ್ವಲ್ಪವೇ.

ವಿಸ್ತೃತವಾದ ಈ ಗ್ರಂಥವನ್ನು ಕನ್ನಡಿಗರು ಆದರದಿಂದ ಬರಮಾಡಿಕೊಳ್ಳುವರೆಂದು ನಂಬುತ್ತೇನೆ.

ಮೈಸೂರು
ನವೆಂಬರ್ ೨, ೧೯೭೦

**ಡಿ. ಎಲ್. ನರಸಿಂಹಾಚಾರ್**

# ವಿಷಯಸೂಚಿಕೆ

# ಪೀಠಿಕೆ

೧೯೩೦ನೆಯ ಇಸವಿಯಲ್ಲಿ ನಾನು ಮೈಸೂರಿನ ಓರಿಯಂಟಲ್ ಲೈಬ್ರರಿಯಲ್ಲಿ ಹೊಸದಾಗಿ ಕೆಲಸಕ್ಕೆ ಸೇರಿಕೊಂಡಾಗ, ಅಲ್ಲಿ ನನ್ನ ಪಾಲಿಗೆ ನಿಯೋಜಿತವಾಗಿದ್ದ ಒಂದು ವೈದ್ಯಗ್ರಂಥದ ಸಂಪಾದನಾ ಕಾರ್ಯವನ್ನು ಮುಂದುವರಿಸುತ್ತ, ವಿರಾಮಕಾಲದಲ್ಲಿ ನನಗೆ ತೋರಿದ ಕೆಲಸವನ್ನು ಮಾಡುತ್ತಿದ್ದೆ. 'ಕರ್ನಾಟಕ ಕವಿಚರಿತೆ'ಯಲ್ಲಿ ಉಕ್ತವಾಗದಿರುವ ಗ್ರಂಥಗಳು ಯಾವುವಾದರೂ ಇವೆಯೇ ಎಂಬುದನ್ನು ತಿಳಿಯಲು ಆ ಲೈಬ್ರರಿಯ ಕನ್ನಡ ಹಸ್ತಪ್ರತಿಗಳ ಪಟ್ಟಿಗಳನ್ನು ನೋಡುವ ಕುತೂಹಲವುಂಟಾಯಿತು. ೧೯೨೨–೨೯ನೆಯ ವರ್ಷಗಳಲ್ಲಿ ಸಂಗ್ರಹಿಸಿದ ಕೈಬರಹದ ಕನ್ನಡ ಪುಸ್ತಕಗಳ ಪಟ್ಟಿಯನ್ನು. ೧೯೩೦ರಲ್ಲಿ ಅಚ್ಚಾದುದನ್ನು, ನೋಡುತ್ತಿರುವಾಗ, ೨೦ನೆಯ ಪುಟದಲ್ಲಿ 'ವೊಡ್ಡಾರಾಧಣಂ' ಎಂಬ ಪುಸ್ತಕ ಕಣ್ಣಿಗೆ ಬಿತ್ತು. ಇದರ ನಂಬರು K. 915; ಇದರ ಕವಿಯ ಹೆಸರು ಉಕ್ತವಾಗಿಲ್ಲ; ಇದು ವಾ.ಷ. ಎಂದರೆ ವಾರ್ಧಕಷಟ್ಪದಿಯಲ್ಲಿ ರಚಿತವಾದುದೆಂದು ಅಲ್ಲಿ ಹೇಳಿದೆ. ಗ್ರಂಥದ ಹೆಸರು ವಿಚಿತ್ರವಾಗಿ ಕಂಡಿತು. ಇದು ಯಾವುದೋ ಸ್ತೋತ್ರಗ್ರಂಥವಿರಬಹುದೆಂದು ಮನದಲ್ಲಿ ಒಂದು ತೆರನಾದ ಔದಾಸೀನ್ಯ ತಲೆದೋರಿದರೂ ನೋಡಿಯೇ ಬಿಡೋಣವೆಂದು ಆ ಗ್ರಂಥವನ್ನು ತರಿಸಿ ಅದರ ಓಲೆಗಳನ್ನು ತಿರುವಿಹಾಕಿದಾಗ ಅದು ವಾರ್ಧಕಷಟ್ಪದಿಯಲ್ಲಿಲ್ಲದಿರುವುದೂ ಗದ್ಯದಲ್ಲಿ ರಚಿತವಾಗಿರುವುದೂ ಗೊತ್ತಾಯಿತು. ಆರಂಭದ ಕೆಲವು ಓಲೆಗಳನ್ನು ಓದುತ್ತಹೋದಾಗ, ಅಲ್ಲಿನ ಗದ್ಯಶೈಲಿ ನನ್ನನ್ನು ಆಕರ್ಷಿಸಿತು. ಇಷ್ಟು ಒಳ್ಳೆಯ ಗದ್ಯ ಹಳಗನ್ನಡದಲ್ಲಿ ರಚಿತವಾಗಿರುವುದನ್ನು ಕಂಡ ನನಗೆ ಮಿಗಿಲಾದ ಸಂತೋಷವೂ ಆಶ್ಚರ್ಯವೂ ಉಂಟಾದವು. ಕೂಡಲೇ ಆ ಗ್ರಂಥವನ್ನು ಓದಿ ನನಗೆ ಬೇಕಾದ ಟಿಪ್ಪಣಿಗಳನ್ನು ಬರೆದುಕೊಂಡೆ. ಆಮೇಲೆ ಅದರಲ್ಲಿರುವ ೧೯ ಕಥೆಗಳಲ್ಲಿ ಮೂರನ್ನು ಮಾತ್ರ ಆರಿಸಿಕೊಂಡು, ಅಚ್ಚಿಗಾಗಿ ಅವುಗಳ ಒಂದು ಪ್ರತಿಯನ್ನು ಸಿದ್ಧಪಡಿಸಿ, ಅದನ್ನು 'ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ'ಯ ಸಂಪಾದಕರಿಗೆ—ಈಗ ದಿವಂಗತರಾಗಿರುವ ಬೆಳ್ಳಾವೆ ವೆಂಕಟನಾರಾಯಣಪ್ಪನವರಿಗೆ—ಕಳಿಸಿಕೊಡಲಾಯಿತು. ಅದು ಆ ಪತ್ರಿಕೆಯ ೧೯೩೧ನೆಯ ಅಕ್ಟೋಬರ್ ಸಂಚಿಕೆಯಲ್ಲಿ ಅಚ್ಚಾಗಿ ಪ್ರಕಟವಾಯಿತು (ಪುಟ ೧೭೩-೨೩೧). ಗ್ರಂಥದ ಮತ್ತು ಅದರ ಕರ್ತೃವಿನ ವಿಷಯವಾಗಿ ನನಗೆ ಆಗ ತಿಳಿದುಬಂದಷ್ಟು ವಿಷಯಗಳನ್ನು ಒಳಗೊಂಡ ಒಂದು ಸಣ್ಣ ಮುನ್ನುಡಿಯೂ ಇದರಲ್ಲಿದೆ (ಪುಟ ೧೭೩-೧೭೮). ಲಭ್ಯವಾಗಿದ್ದ ಒಂದೇ ಹಸ್ತಪ್ರತಿಯ ಸಹಾಯದಿಂದ ಗ್ರಂಥಪರಿಷ್ಕರಣಕಾರ್ಯ ಸಮರ್ಪಕವಾಗಿ ನಡೆಯಲು ಸಾಧ್ಯವಿಲ್ಲವೆಂದು ಇಡೀ ಗ್ರಂಥವನ್ನು ಮುದ್ರಿಸದೆ ಇಷ್ಟರಿಂದಲೇ ತೃಪ್ತಿಪಡಬೇಕಾಯಿತು. ಇನ್ನೂ ಒಂದೆರಡಾದರೂ ಹಸ್ತಪ್ರತಿಗಳು ದೊರೆತರೆ ಒಳ್ಳೆಯದೆಂಬ ನಿರೀಕ್ಷೆ ಇತ್ತು.

ಪ್ರತ್ಯಂತರಗಳ ನಿರೀಕ್ಷೆಯಲ್ಲಿ ಸುಮಾರು ಎಂಟು ವರ್ಷಗಳು ಕಳೆದುಹೋದುವು. ೧೯೩೯ನೆಯ ಇಸವಿಯ ಆರಂಭಭಾಗದಲ್ಲಿ ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿ ಕನ್ನಡ ಪಂಡಿತರಾಗಿದ್ದ ಶ್ರೀಮಾನ್ ಎನ್. ಅನಂತರಂಗಾಚಾರ್ಯ, ಎಂ.ಎ., ಬಿ.ಟಿ., ಅವರು ಕನ್ನಡ ಹಸ್ತಪ್ರತಿಗಳ ಅನ್ವೇಷಣೆಯಲ್ಲಿ ತೊಡಗಿದ್ದಾಗ ಮೂಡಬಿದರೆಯ ಶ್ರೀಮಾನ್ ಲೋಕನಾಥಶಾಸ್ತ್ರಿಗಳೆಂಬ ಮಹನೀಯರ ಬಳಿ 'ವಡ್ಡಾರಾಧನೆ'ಯ ಒಂದು ಓಲೆಯ ಪ್ರತಿ ದೊರೆಯಿತು. ಇದರಲ್ಲಿರುವ ಪಾಠಾಂತರಗಳನ್ನು ಗುರುತುಹಾಕಿಕೊಳ್ಳಲು ತಮ್ಮ ಶ್ರಮವನ್ನು ಲೆಕ್ಕಿಸದೆ, ಸ್ನೇಹಭಾವದಿಂದ ನನಗೆ ಸಹಾಯ ಮಾಡಿದವರು ಶ್ರೀಮಾನ್ ಅನಂತರಂಗಾಚಾರ್ಯರು. ಈ ಪ್ರತಿಯಿಂದ ಪಾಠಸಂಕಲನ ಕಾರ್ಯ ಮುಗಿದಿತ್ತು. ಈ ಸಮಯದ ಸಾಲಿಗ್ರಾಮದ ಶ್ರೀಮಾನ್ ಸರಾಫ್ ಪದ್ಮರಾಜಯ್ಯನವರಲ್ಲಿ 'ವಡ್ಡಾರಾಧನೆ'ಯ ಮತ್ತೊಂದು ಪ್ರತಿ ಇರುವುದಾಗಿ ತಿಳಿಯಬಂತು. ಆ ಊರಿಗೆ ಹೋಗಿ ಅವರನ್ನು ನಾನು ಕಂಡಾಗ ಅವರು ದಯವಿಟ್ಟು ಆ ಪ್ರತಿಯನ್ನು ನನಗೆ ತೋರಿಸಿದರು. ಅದರ

ಅದನ್ನು ನನ್ನ ಉಪಯೋಗಕ್ಕಾಗಿ ಕೊಡಲು ಅವರು ಏಕೋ ಸ್ವಲ್ಪ ಹಿಂದೆಗೆದರು. ೧೯೩೯ನೆಯ ಇಸವಿಯಲ್ಲಿ ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು ಕರ್ಣಾಟಕ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದರು. ಒಂದು ದಿವಸ ಅವರ ಸಂದರ್ಶನಾರ್ಥವಾಗಿ ಅವರ ಬಳಿಗೆ ಹೋದಾಗ 'ವಡ್ಡಾರಾಧನೆ'ಯ ಇನ್ನೊಂದು ಪ್ರತಿ ಸಿಕ್ಕಿದೆಯೆಂಬ ವಿಷಯವನ್ನು ಅವರಿಗೆ ತಿಳಿಸಲು, ಅವರು ತುಂಬ ಸಂತೋಷವನ್ನು ವ್ಯಕ್ತಪಡಿಸಿ ಆ ಗ್ರಂಥವನ್ನು ಪರಿಷ್ಕರಿಸಿ ಸಂಪಾದಿಸಿಕೊಡಬೇಕೆಂದೂ ಅದನ್ನು ಪರಿಷತ್ಪತ್ರಿಕೆಯಲ್ಲಿ ಭಾಗಶಃ ಮುದ್ರಿಸಲಾಗುವುದೆಂದೂ ಪ್ರೋತ್ಸಾಹಕರವಾದ ಮಾತುಗಳನ್ನಾಡಿದರು. ಅದನ್ನು ಅಪ್ಪಣೆಯೆಂದು ಭಾವಿಸಿ ದೊರೆತಿದ್ದ ಎರಡು ಪ್ರತಿಗಳ ಸಹಾಯದಿಂದ ಆ ಗ್ರಂಥದ ಮೊದಲ ಕಥೆಯಾಗಿರುವ ಸುಕುಮಾರಸ್ವಾಮಿಯ ಕಥೆಯನ್ನು ಸಂಪಾದಿಸಿ ಮುದ್ರಣಕ್ಕೆ ಸಿದ್ಧಗೊಳಿಸಲಾಯಿತು. ಆಗ ಪರಿಷತ್ಪತ್ರಿಕೆಯ ಸಂಪಾದಕರಾಗಿದ್ದ ಮಾನ್ಯ ಶ್ರೀ ಡಿ. ಸಿ. ಸುಬ್ಬರಾಯಪ್ಪ, ಬಿ.ಎ., ಬಿ.ಎಲ್., ಅವರು ಆ ಕಥೆಯನ್ನು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂಪುಟ ೨೪, ಸಂಚಿಕೆ ೪ರಲ್ಲಿ ಮುದ್ರಿಸಿ ಪ್ರಕಟಿಸಿದರು.

ಸಾಹಿತ್ಯ ಪರಿಷತ್ಪತ್ರಿಕೆಯ ಮುಂದಿನ ಸಂಚಿಕೆ ಪ್ರಕಟವಾಗುವಷ್ಟರಲ್ಲಿ 'ವಡ್ಡಾರಾಧನೆ'ಯ ಬೇರೆ ಮೂರು ಹಸ್ತಪ್ರತಿಗಳು ನನ್ನ ಕೈಸೇರಿದವು. ಮೊದಲ ಕಥೆ ಪ್ರಕಟವಾದುದನ್ನೂ, ಇಡೀ ಗ್ರಂಥದ ಮುದ್ರಣಕ್ಕಾಗಿ ಸಾಹಿತ್ಯ ಪರಿಷತ್ತು ಮಾಡಿದ್ದ ಏರ್ಪಾಟನ್ನೂ ನೋಡಿ ತಿಳಿದು ಶ್ರೀ ಸರಾಫ್ ಪದ್ಮರಾಜಯ್ಯನವರು ತಮ್ಮ ಬಳಿಯಲ್ಲಿದ್ದ ಮೂರು ಹಸ್ತಪ್ರತಿಗಳನ್ನೂ, ಗ್ರಂಥವು ಅಚ್ಚಾಗಿಬಿಡುವುದೆಂಬ ಭರವಸೆ ತಮ್ಮಲ್ಲಿ ಮೂಡಿದ ಮೇಲೆ, ನನಗೆ ಕಳುಹಿಸಿಕೊಟ್ಟರು. ಅವರ ಔದಾರ್ಯವು ಇಲ್ಲಿ ಸ್ಮರಣೀಯವಾಗಿದೆ. ಈ ಮೂರು ಪ್ರತಿಗಳು ದೊರೆತಮೇಲೆ ಆರಾದ ಸೆಂಟ್ರಲ್ ಜೈನ ಲೈಬ್ರರಿಯಲ್ಲಿದ್ದ ಇನ್ನೊಂದು ಪ್ರತಿಯನ್ನು ಸಾಹಿತ್ಯ ಪರಿಷತ್ತಿನ ಮೂಲಕ ತರಿಸಿಕೊಂಡುದಾಯಿತು. ಈ ಆರು ಪ್ರತಿಗಳ ಸಹಾಯದಿಂದ ಗ್ರಂಥದ ಸಂಸ್ಕರಣಕಾರ್ಯ ಮುಂದುವರಿಯುತ್ತ, ಪರಿಷತ್ಪತ್ರಿಕೆಯ ಸಂಚಿಕೆಯಲ್ಲಿ ಭಾಗಶಃ ಮುದ್ರಣವಾಗುತ್ತ ೧೯೪೯ನೆಯ ಇಸವಿಯಲ್ಲಿ ಇಡೀ ಗ್ರಂಥವು ಅಚ್ಚಾಗಿ ಪ್ರಕಟವಾಯಿತು.

## ಹಸ್ತಪ್ರತಿಗಳು

'ವಡ್ಡಾರಾಧನೆ'ಯ ಸಂಪಾದನೆಗಾಗಿ ಉಪಯೋಗಿಸಿಕೊಂಡಿರುವ ಆರು ಹಸ್ತಪ್ರತಿಗಳ ಸ್ವರೂಪವನ್ನು ಇಲ್ಲಿ ತಿಳಿಸಬೇಕಾಗಿದೆ. ಪ್ರತಿಯೊಂದು ಪ್ರತಿಗೆ ಒಂದೊಂದು ಸಂಕೇತವನ್ನು ಕೊಟ್ಟಿದೆ.

(ಕ)—ಇದು ಮೈಸೂರಿನ ಓರಿಯಂಟಲ್ ಲೈಬ್ರರಿಯಲ್ಲಿರುವ K 415ನೆಯ ನಂಬರಿನ ಓಲೆಯ ಪ್ರತಿ. ಈ ಪ್ರತಿ ಮೊದಲಿಗೆ ಸರಾಫ್ ಪದ್ಮರಾಜಯ್ಯನವರ ಪುಸ್ತಕ ಭಂಡಾರದಲ್ಲಿದ್ದಿತೆಂದೂ, ೧೯೨೦ನೆಯ ಇಸವಿಯಲ್ಲಿ ಅವರು ಅದನ್ನು ಓರಿಯಂಟಲ್ ಲೈಬ್ರರಿಗೆ ಕೊಟ್ಟರೆಂದೂ ತಿಳಿದು ಬರುತ್ತದೆ. ಇದರಲ್ಲಿ ಒಟ್ಟು ೧೦೮ ಪತ್ರಗಳಿವೆ. ೫೪ನೆಯ ಪತ್ರ ನಷ್ಟವಾಗಿದೆ; ಕೆಲವು ಮುರಿದು ಹೋಗಿವೆ. ಪತ್ರಗಳ ಉದ್ದ ೧೭.೫ ಅಂಗುಲಗಳು; ಅಗಲ ೧.೯ ಅಂಗುಲಗಳು. ಪ್ರತಿಯೊಂದು ಪತ್ರದ ಒಂದೊಂದು ಪಾರ್ಶ್ವದಲ್ಲಿ ೯ ಪಂಕ್ತಿಗಳು ಲಿಖಿತವಾಗಿವೆ. ಪ್ರತಿ ಪಂಕ್ತಿಯಲ್ಲಿರುವ ಅಕ್ಷರ ಸಂಖ್ಯೆ ೬೫. ಱಕಾರ ಅದು ಇರಬೇಕಾದ ಎಡೆಗಳಲ್ಲಿ ತಪ್ಪಿಲ್ಲದಂತೆ ಲಿಖಿತವಾಗಿದೆ. ೞಕಾರವನ್ನು ಎಲ್ಲಿಯೂ ಬರೆದಿಲ್ಲ; ಅದು ಇರಬೇಕಾದ ಸ್ಥಾನಗಳಲ್ಲಿ ಳಕಾರವಾಗಿ ಬರೆದಿದೆ. ಈ ಪ್ರತಿಯಲ್ಲಿರುವ ಲಿಪಿರೂಪ ವಿಜಯನಗರದ ದೊರೆಗಳ ಕಾಲದ ಕನ್ನಡ ಶಾಸನಾಕ್ಷರಗಳನ್ನು ಹೋಲುತ್ತದೆ. ಋ, ತ, ಹ,—ಎಂಬ ಈ ಅಕ್ಷರಗಳನ್ನು ನಿರ್ದೇಶಿಸುವ ಲಿಪಿಗಳು ಈಗಿನ ತೆಲುಗು ವರ್ಣಮಾಲೆಯಲ್ಲಿ ಕಾಣುವ ಅಂಥಾ ಅಕ್ಷರದ ಲಿಪಿರೂಪಕ್ಕೆ ಸದೃಶವಾಗಿವೆ. ಗ್ರಂಥದ ಆದಿಯಲ್ಲಿ 'ನಮಃ ಶ್ರೀ ವರ್ಧಮಾನಾಯ...' ಎಂಬ ಶ್ಲೋಕವಿದೆ. ಅನಂತರ "× × ಯಂತರ್ಗೆ ನಮಸ್ಕಾರಂಗೆಯ್ದು... ಸುಕುಮಾರಸ್ವಾಮಿಯ ಕಥೆಯಂ ಪೇಳ್ವೆಂ" ಎಂಬ ಗದ್ಯವಿದ್ದು 'ಭಲ್ಲುಂಕಿಯೇಣ ಣೀಚ್ಚಂ...' ಎಂಬ ಗಾಹೆಯಿಂದ ಮೊದಲ ಕಥೆ ಆರಂಭವಾಗುತ್ತದೆ. ಗ್ರಂಥಾಂತ್ಯದಲ್ಲಿ,

"ಯಿಾ ಪೇಳ್ದ ಪತ್ತೊಂಬತ್ತು ಕಥೆಗ × × × × ಶ್ಯಾಚಾರ್ಯರು ಪೇಳ್ದ ವೊಡ್ಡಾರಾಧಣಂ ಸಂಪೂರ್ಣ್ಣಂ ಶುಭಮಸ್ತು. ಆನಂದ ಸಂವತ್ಸರದ ಕಾರ್ತೀಕ ಬಹುಳ ಪಾಡ್ಯ ಸೋಮವಾರದಲು ಮಲ್ಲರಸನು ಬರೆದ ವೊಡ್ಡಾರಾಧನೆ ಸಮಾಪ್ತಂ."

ಎಂಬ ಬರಹವಿದೆ. ಗ್ರಂಥವನ್ನು ಹೇಳಿದಾತನ ಹೆಸರು ಪೂರ್ಣವಾಗಿ ತಿಳಿಯದ ಅದರ ಅಂತ್ಯಭಾಗ ಮಾತ್ರ ಗೊತ್ತಾಗುತ್ತದೆ. ಹೇಳಿರುವ ಆನಂದ ಸಂವತ್ಸರವು ಯಾವುದೆಂಬುದನ್ನು ಖಚಿತವಾಗಿ ನಿಶ್ಚಯಿಸುವುದು ಸಾಧ್ಯವಿಲ್ಲವಾಗಿದೆ. ಮೇಲ್ಕಂಡ ಸಂವತ್ಸರ ಮಾಸ ತಿಥಿ ವಾರಗಳು ಕೆಳಗೆ ಕಾಣಿಸಿರುವ ವರ್ಷಗಳಲ್ಲಿ ಪ್ರಾಪ್ತವಾಗಿದ್ದುವು.

(೧) ಕ್ರಿ.ಶ. ೧೪೯೪ನೆಯ ಅಕ್ಟೋಬರ್ ೧೮ನೆಯ ತಾರೀಖು ಸೋಮವಾರ.

(೨) ಕ್ರಿ.ಶ. ೧೬೧೪ನೆಯ ನವೆಂಬರ್ ೭ನೆಯ ತಾರೀಖು ಸೋಮವಾರ.

ಮಲ್ಲರಸನು ಈ ಗ್ರಂಥವನ್ನು ಪ್ರತಿ ಮಾಡಿದ ಕಾಲವು ಈ ಎರಡು ಇಸವಿಗಳಲ್ಲಿ ಯಾವುದೋ ಒಂದಾಗಿರಬೇಕು. ಈ ಪುಸ್ತಕದ ಓಲೆಗಳ ಜೀರ್ಣಾವಸ್ಥೆಯನ್ನೂ ಲಿಪಿರೂಪವನ್ನೂ ಗಮನಿಸಿದಾಗ ಇದು ಬಹುಶಃ ಕ್ರಿ.ಶ. ೧೪೯೪ರಲ್ಲಿ ಲಿಖಿತವಾಗಿರಬಹುದೆಂದು ತೋರುತ್ತದೆ.

(ಖ)—ಇದು ಓಲೆಯ ಪ್ರತಿ. ಪತ್ರಸಂಖ್ಯೆಯನ್ನೂ ಪತ್ರಗಳ ಉದ್ದ ಅಗಲಗಳನ್ನೂ ಪಂಕ್ತಿಗಳ ಸಂಖ್ಯೆಯನ್ನೂ ಪ್ರತಿ ಪಂಕ್ತಿಗಳ ಅಕ್ಷರಸಂಖ್ಯೆಯನ್ನೂ ಆ ಪ್ರತಿ ಸಿಕ್ಕಿದ್ದಾಗ ಗುರುತುಹಾಕಿಕೊಳ್ಳಲಿಲ್ಲವಾದ್ದರಿಂದ ಅವುಗಳನ್ನು ಹೇಳಲು ಸಾಧ್ಯವಿಲ್ಲ. ಈ ಪ್ರತಿ ಮೂಡಬಿದರೆಯ ಶ್ರೀ ಶ್ರೀ ಚಾರುಕೀರ್ತಿಪಂಡಿತಾಚಾರ್ಯರ ಶ್ರೀಮಠಕ್ಕೆ ಸೇರಿದ್ದು. ಅದೇ ಊರಿನ ಶ್ರೀ ಎಚ್. ಲೋಕನಾಥಶಾಸ್ತ್ರಿಗಳವರ ಮೂಲಕ ಶ್ರೀ ಎಸ್. ಅನಂತರಂಗಾಚಾರ್, ಎಂ.ಎ., ಬಿ.ಟಿ., ಅವರಿಗೆ ದೊರೆಯಿತು. ಇದರಲ್ಲಿರುವ ಪಾಠಾಂತರಗಳನ್ನು ಗುರುತು ಹಾಕಿಕೊಳ್ಳುವ ಕೆಲಸ ಮುಗಿದದ್ದು ೨೮–೧೨–೧೯೫೧ರಂದು : ಅಲ್ಲಲ್ಲಿ ಇದರ ಕೆಲವು ಓಲೆಗಳು ನಷ್ಟವಾಗಿರುವುದರಿಂದ ದೀರ್ಘವಾದ ಗ್ರಂಥಪಾತಗಳು ಹಲವಿವೆ. (ಕ) ಪ್ರತಿಯು ಆರಂಭವಾಗುವ ಹಾಗೆಯೇ ಇದೂ ಆರಂಭವಾಗಿದೆ. ಶಕಟರೇಫವನ್ನು ತಪ್ಪಿಲ್ಲದೆ ಬರೆದಿದೆ: ಱಕಾರ ಎಲ್ಲಿಯೂ ಲಿಖಿತವಾಗಿಲ್ಲ; ಅದಕ್ಕೆ ಪ್ರತಿಯಾಗಿ ಳಕಾರ ಲಿಖಿತವಾಗಿದೆ. ಪ್ರತಿಯ ಅಂತ್ಯದಲ್ಲಿ,

"ಯಿಾ ಪೇಳ್ದ ಪತ್ತೊಂಭತ್ತು ಕಥೆಗಳ್ ಶಿವಕೋಟಾಚಾರ್ಯರ್ ಪೇಳ್ದ ವಡ್ಡಾರಾಧನೆಯ ಕವಚವು ಮಂಗಳ ಮಹಾಶ್ರೀ ಶ್ರೀ. ಸ್ವಸ್ತಿ ಶ್ರೀಮದ್ರಾಯರಾಜಗುರು ಮಂಡಲಾಚಾರ್ಯ ಮಹಾವಾದಿ ವಾದಿರಾಯ ಪಿತಾಮಹ ಸಕಳ ವಿದ್ವಜ್ಜನ ಚಕ್ರವರ್ತಿಗಳುಮಪ್ಪ ಶ್ರೀ ಚಿಕ್ಕದೇವರ ಪ್ರಿಯಾಗ್ರಗುಡ್ಡನು ಕ್ಷೇಮಪುರದ ಅಮ್ಮಿಯಣ್ಣ ಸೆಟ್ಟಿಯ ಮಗ ಹರಿಯಣ್ಣನು ಯಮನಿಯಮ ಸ್ವಾಧ್ಯಾಯ ಧ್ಯಾನಮೌನಾನುಷ್ಠಾನ ಜಪತಪಸ್ಸಮಾಧಿಶೀಲಗುಣಸಂಪನ್ನರುಮಪ್ಪ ಶ್ರೀ ಭಾನುಮುನಿಗಳ ವಾಕ್ಯಾಮೃತದಿಂ ಬರೆದುಕೊಟ್ಟನು ಬರೆಸಿಕೊಟ್ಟಾತನು ಓಜಣ್ಣಸೆಟ್ಟಿಯವರ ಮಗ ಕಲ್ಲಪ್ಪಸೆಟ್ಟಿಯ ಕಮಲಶ್ರೀ ಅವ್ವಗಳಿಗೆ ಆತ್ಮಾರ್ಥವಾದೀ ವೊಡ್ಡಾರಾಧನೆಯ ಬರೆಯಿಸಿಕೊಟ್ಟು ದರ್ಕೆ ಮಂಗಳಮಹಾಶ್ರೀ"

ಎಂದು ಲಿಪಿಕಾರ ಪ್ರಶಸ್ತಿ ಇದೆ. ಇದರಿಂದ ಈ ಪ್ರತಿ ಕ್ರಿ.ಶ. ೧೭೦೩ರಲ್ಲಿ ಹುಟ್ಟಿದಂತೆ ತಿಳಿದು ಬರುತ್ತದೆ. ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿರುವ K A 297 ಎಂಬ ಸಂಖ್ಯೆಯನ್ನುಳ್ಳ ಕಾಗದದ ಹಸ್ತಪ್ರತಿ ಈ (ಖ) ಪ್ರತಿಯ ನಕಲಾಗಿದೆ. ಇದರ ಮಾತೃಕೆಯಲ್ಲಿ ಲುಪ್ತವಾಗಿರುವ ಭಾಗಗಳನ್ನು ಮೇಲೆ ಹೇಳಿರುವ (ಕ) ಪ್ರತಿಯ ಆಧಾರದ ಮೇಲೆ ತುಂಬಿ ಬರೆದಿದೆ. (ಖ) ಪ್ರತಿಯೇ ಲಭ್ಯವಾಗಿದ್ದುದರಿಂದ ಇದರ ನಕಲನ್ನು ಸಂಪಾದನಕಾರ್ಯಕ್ಕೆ ಉಪಯೋಗಿಸಿಕೊಳ್ಳಲಿಲ್ಲ.

(ಗ)—ಇದು ಸಾಲಿಗ್ರಾಮದ ಸರಾಫ್ ಪದ್ಮರಾಜಯ್ಯನವರ ಭಂಡಾರಕ್ಕೆ ಸೇರಿದ್ದು. ದಪ್ಪ ಕಾಗದದ ಪ್ರತಿ. ಒಟ್ಟು ಹಾಳೆಗಳು 119. ಪ್ರತಿಹಾಳೆಯ ಉದ್ದಗಲ 12¾ ಅಂ. × 7¾ ಅಂ. ಪ್ರತಿಹಾಳೆಯ ಇಕ್ಕಡೆಗಳಲ್ಲೂ ಬರಹವಿದೆ. ಪಂಕ್ತಿಗಳ ಸಂಖ್ಯೆ 15. ಪ್ರತಿ ಪಂಕ್ತಿಯ ಅಕ್ಷರ ಸಂಖ್ಯೆ

28ರಿಂದ ಹಿಡಿದು 38ರವರೆಗೆ. ಸರಾಸರಿ 32. ಆಕಾರವನ್ನು ಬರೆದಿಲ್ಲ. ವ್ಯಂಜನಾಂತಗಳನ್ನು ಸ್ವರಾಂತಗಳನ್ನಾಗಿ ಲಿಖಿಸಿದೆ: ಮುತ್ತಿದಾಗಳು. ಬಿಲ್ಲೊಳು, ಕುದುರೆಯೊಳು. ಯಾನೆಯೊಳು (ಹಾಳೆ 90 (b), 10-13), ಪುಟ್ಟಿದರು (ಹಾಳೆ 84-10). ಗ್ರಂಥದ ಆರಂಭದಲ್ಲಿ

ಓಂ ನಮಸ್ಸಿದ್ಧೇಭ್ಯಃ ॥ ಶ್ರೀ ವೀತರಾಗಾಯ ನಮಃ। ಶ್ರೀಮತ್ಪಂಚಗುರುಭ್ಯೋ ನಮಃ। ಶ್ರೀಮದುಭಯಲಕ್ಷ್ಮೀ ಸಮಣಾಯ ನಮಃ। ನಿರ್ವಿಘ್ನಮಸ್ತು ॥ ಶ್ರೀಸ್ಯಾದ್ವಾದ ಧ್ವಜಾ ಪರಮಾಗದು ಪ್ರಕಾಶರೂ ಭಾರತ್ಯೈ ನಮಃ

ಎಂದಿದ್ದು 'ನಮಃ ಶ್ರೀವರ್ಧಮಾನಾಯ' ಎಂಬ ಶ್ಲೋಕದಿಂದ ಮೂಲಗ್ರಂಥ ಪ್ರಾರಂಭವಾಗುತ್ತದೆ. ಅಕ್ಷರಗಳು ದುಂಡಗೆ ದಪ್ಪಗೆ ಬಿಡಿಬಿಡಿಯಾಗಿ ಬರೆದಿವೆ. ಈ ಕಾರಕ್ಕೆ ಪ್ರತಿಯಾಗಿ ಅದರ ಬದ್ಧ ರೂಪ ಚಿಹ್ನೆಯನ್ನು (ೀ) ಬರೆದಿರುತ್ತದೆ. ಅಂತ್ಯದಲ್ಲಿ.

ಆನಂದ ಸಂವತ್ಸರದ ಕಾರ್ತೀಕ ಬಹುಳ ಪಾಡ್ಯ ಸೋಮವಾರದಲ್ಲೂ ಮಲ್ಲರಸನು ಬರೆದ ವೊಡ್ಡಾರಾಧನೆ ಎಂದು ಮೂಲಪ್ರತಿಯಲ್ಲಿ ಇದೆ॥ ಯಿಂತು ಶಕ ಸಾವಿರದ ಯಂಟುನೂರು ಇಪ್ಪತ್ತನೆಯ ವಿಳಂಬಿನಾಮ ಸಂವತ್ಸರದ ಪುಷ್ಯ ಬಹುಳ ಅಮಾವಾಸ್ಯೆ ಶುಕ್ರವಾರದಲ್ಲೂ ಬ್ರಹ್ಮಯ್ಯನು ಬರೆದ ಪುಸ್ತುಕಕ್ಕೆ ಭದ್ರಂ ಶುಭಂ ಮಂಗಳಂ

ಎಂದು ಲಿಪಿಕಾರಪ್ರಶಸ್ತಿ ಇದೆ. ಇದರಲ್ಲಿ ಮೊದಲನೆಯ ವಾಕ್ಯ (ಕ) ಪ್ರತಿಯ ಅಂತ್ಯದಲ್ಲಿರುವ ಹಾಗೆಯೇ ಇದೆ. ಆ ವಾಕ್ಯದ 'ಮೂಲಪ್ರತಿ' ಎಂಬ ಅಕ್ಷರಗಳ ಮೇಲೆ ಪಂಕ್ತಿಯ ನಡುವೆ 'ನನ್ನ ಸ್ವಂತ' ಎಂದು ಕೆಂಪು ಶಾಯಿಯಲ್ಲಿ ಬರೆದಿದೆ. ಮುಂದಿನ ವಾಕ್ಯದ 'ಶುಕ್ರವಾರದಲ್ಲೂ' ಎಂದಾದ ಮೇಲೆ ಕುಂಟು ಪಂಕ್ತಿಯಲ್ಲಿ 'ಮೂಲಪ್ರತಿ ಜೀರ್ಣವಾಗಿದ್ದುದರಿಂದ' ಎಂದು ಕೆಂಪು ಮಸಿಯಲ್ಲಿ ಬರಹವಿದೆ. ಇಲ್ಲಿ ಹೇಳಿರುವ ಮೂಲಪ್ರತಿ (ಕ) ಪ್ರತಿಯೇ ಆಗಿದೆ. ಅದರ ನೇರ ನಕಲಾದ (ಗ) ಪ್ರತಿ ಕ್ರಿ.ಶ. ೧೮೯೮ನೆಯ ಇಸವಿಯಲ್ಲಿ ಸಿದ್ಧವಾಯಿತೆಂದು ತಿಳಿದು ಬರುತ್ತದೆ. (ಕ) ಮಾತ್ರ ಕೈಯೇ ದೊರೆತಿರುವಾಗ ಅದರ ನಕಲಾದ (ಗ)ದಿಂದ ಸಂಪಾದನಕಾರ್ಯಕ್ಕೆ ಪ್ರಯೋಜನವೇನು ಎಂದು ಶಂಕಿಸಬಹುದು. (ಕ) ಪ್ರತಿಗೆ ಈಗ ಇರುವಷ್ಟು ಜೀರ್ಣಾವಸ್ಥೆ ೧೮೯೮ನೆಯ ಇಸವಿಯಲ್ಲಿ ಇದ್ದಿರಲಾರದೆಂದು ಹೇಳಬಹುದು. ಅದರಲ್ಲಿ ಈಗ ಮುರಿದುಹೋಗಿರುವ ಭಾಗಗಳು ಆಗ ಇನ್ನೂ ಸರಿಯಾಗಿಯೇ ಇದ್ದುವು. ಗ್ರಂಥಾಂತ್ಯದಲ್ಲಿ ಬರುವ ಗ್ರಂಥಕರ್ತನ ಹೆಸರು (ಕ)ದಲ್ಲಿ 'ಟ್ಯಾಚಾರ್ಯ' ಎಂದು ಇದ್ದು ಹಿಂದಿನ ಅಕ್ಷರಗಳ ಭಾಗ ತ್ರುಟಿತವಾಗಿದೆ: ಅದರ ನಕಲಾದ (ಗ)ದಲ್ಲಿ 'ಶಿವಕೋಟ್ಯಾಚಾರ್ಯ' ಎಂದು ಆ ಹೆಸರು ಪೂರ್ಣವಾಗಿದೆ. ಆದ್ದರಿಂದ (ಕ)ದಲ್ಲಿ ಈಗ ತ್ರುಟಿತವಾಗಿ ನಷ್ಟವಾಗಿರುವ ಅಕ್ಷರಗಳನ್ನೋ ಶಬ್ದಗಳನ್ನೋ (ಗ)ದಿಂದ ತುಂಬಬಹುದಾಗಿದೆ. ಈ ದೃಷ್ಟಿಯಿಂದ ಅದು ಸಂಪಾದನ ಕಾರ್ಯಕ್ಕೆ ನೆರವಾಗುತ್ತದೆ.

(ಘ)—ಈ ಓಲೆಯ ಪ್ರತಿಯೂ ಸರಾಫ್ ಪದ್ಮರಾಜಯ್ಯನವರ ಪುಸ್ತಕಭಂಡಾರಕ್ಕೆ ಸೇರಿದ್ದು ಇದರಲ್ಲಿ 119 ಓಲೆಗಳಿದ್ದು ಗ್ರಂಥ ಸಮಗ್ರವಾಗಿದೆ. ಪ್ರತಿ ಓಲೆಯ ಅಳತೆ 13½″ × 1″ ; ಓಲೆಯ ಒಂದು ಪಾರ್ಶ್ವದ ಪಂಕ್ತಿಗಳ ಸಂಖ್ಯೆ ೮-೯ ; ಪ್ರತಿ ಪಂಕ್ತಿಯಲ್ಲಿಯೂ ಅಕ್ಷರಗಳ ಸಂಖ್ಯೆ 64ರಿಂದ 66ರವರೆಗೆ, ಱಕಾರವನ್ನು ಸರಿಯಾಗಿ ಬರೆದಿದೆ; ೞಕಾರವನ್ನು ಬರೆದಿಲ್ಲ: ಅದಕ್ಕೆ ಬದಲಾಗಿ ಇದರಲ್ಲಿ ಳಕಾರ ಲಿಖಿತವಾಗಿದೆ. ವ್ಯಂಜನಾಂತಗಳು ಹಾಗೆಯೇ ಅನೇಕ ಎಡೆ ಲಿಖಿತವಾಗಿವೆ; ಅವು ಸ್ವರಾಂತಗಳಾಗಿಲ್ಲ. ಮುತ್ತಿದಾಗಳ್, ಬಿಲ್ಲೊಳ್. ಕುದುರೆಯೊಳ್, ಯಾನೆಯೊಳ್ (ಓಲೆ 96 b), ಪೇಳಲ್ ತೊಡಗಿದರ್ (ಓಲೆ 60 b) ; ಕೆಲವೆಡೆ ಸ್ವರಾಂತಗಳಿವೆ; ಸ್ನೇಹದೊಳು ಕೂಡಿ (ಓಲೆ 33 b), "ಶ್ರೀವೀತರಾಗಾಯ ನಮಃ" ಎಂದು ಬರವಣಿಗೆ ಆರಂಭವಾಗಿ "ತಿಳೋಯ ಸಬ್ಬ ಜೀವಾಣಂ..." ಎಂಬ ಗಾಹೆಯಿಂದ ಗ್ರಂಥಾರಂಭವಾಗಿದೆ. ಮೊದಲನೆಯ ಪತ್ರದ ಎರಡನೆಯ ಪಾರ್ಶ್ವ(b)ದಲ್ಲಿ ಏನೂ ಬರವಣಿಗೆಯಿಲ್ಲ. ಅಲ್ಲಲ್ಲಿ ಹುಳು ತಿಂದು ಓಲೆಗಳಲ್ಲಿ ರಂಧ್ರಗಳಾಗಿವೆ. ಕೊನೆಯಲ್ಲಿ ಜದಿತಾಏವಂ ಅನಗಾರಾ. ಕಿಂಪುಣ ಅಣಗಾರ, ಸಹಾದುಗೇಣ, ಜಿಣ ವಯಣ ಮರುದಘೂದಂ—ಎಂಬ ಮೂರು ಗಾಹೆಗಳಾದ ಮೇಲೆ 'ಈ ಪೇಳ್ದ ಪತ್ತೊಂಭತ್ತು ಕಥೆಯಂ ಶೇವಾಕೋಟ್ಯಾಚಾರ್ಯಪ್ಪೇಳ್ದ ವಡ್ಡಾರಾಧನೆಯ ಕವಚವೆಂಬಧಿಕಾರಲು' ಎಂದು ಲಿಖಿತವಿದ್ದು

ಆಮೇಲೆ 'ಆವಾವ ಜನ್ಮಜನ್ಮದೊಳ್' ಎಂದು ಆರಂಭವಾಗುವ ಕಂದ ಪದ್ಯವಿದೆ. ಅನಂತರ

ಭಾವ ಸಂವತ್ಸರದ ಪುಷ್ಯ ಬ ೫ ಸೋಮವಾರದಲು ಪದುಮಿಸೆಟ್ಟಿಯ ಮಗ ಹರಿಯಪ್ಪನ ವಡ್ಡಾರಾಧನೆ.

ಎಂದು ಲಿಪಿಕಾರನ ಬರವಣಿಗೆ ಇದೆ. ಇದರಿಂದ ಈ ಪ್ರತಿ ಲಿಖಿತವಾದ ಕಾಲವನ್ನು ಖಚಿತವಾಗಿ ಹೇಳುವುದಕ್ಕಾಗದಿದ್ದರೂ ಇದು ಸುಮಾರು ೨೦೦–೨೫೦ ವರ್ಷಗಳಷ್ಟು ಹಿಂದಿನದೆಂದು ಊಹಿಸ ಬಹುದಾಗಿದೆ. ಇಲ್ಲಿನ ರೇವಾಕೋಟ್ಯಾಚಾರ್ಯ ಎಂಬ ಹೆಸರಿನ ಎರಡನೆಯ ಅಕ್ಷರವನ್ನು ಮೊದಲು ವ ಎಂದು ಬರೆದಿದ್ದು ಅನಂತರ ಅದಕ್ಕೆ ದೀರ್ಘ ಚಿಹ್ನೆಯನ್ನು (ಾ) ಬರೆದಿದೆ.

(ಚ)—ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ತಾಲ್ಲೂಕಿನ ಸರಗೂರಿಗೆ ಸೇರಿದ ಪ್ರತಿ ಇದೆಂದು ತಿಳಿದುಬಂದಿದೆ. ಈ ಓಲೆಯ ಪ್ರತಿಯೂ ಸರಾಫ್ ಪದ್ಮರಾಜಯ್ಯನವರ ಬಳಿಯಲ್ಲೇ ಇತ್ತು. ಇದರ ಓಲೆಗಳ ಸಂಖ್ಯೆ ೧೨೭-೧೯೦ ; ಓಲೆಯ ಉದ್ದಗಲಗಳು 18″ × 2.4″ ; ಪ್ರತಿ ಪುಟಕ್ಕೆ ೧೦-೧೧ರ ವರೆಗೆ ಪಂಕ್ತಿಗಳಿವೆ ; ಪ್ರತಿ ಪಂಕ್ತಿಯಲ್ಲಿ ಸರಾಸರಿ 80 ಅಕ್ಷರಗಳಿವೆ. ಅರ್ಧಾಕ್ಷರ ಗಳು ಅಲ್ಲಲ್ಲಿ ಲಿಖಿತವಾಗಿದ್ದರೂ ಸಾಧಾರಣವಾಗಿ ಅವುಗಳು ಸ್ವರಾಂತವಾಗಿ ಲಿಖಿತವಾಗಿರುವುದೇ ಹೆಚ್ಚು : ಎಂಬುಳು (ಓಲೆ 144 b) ; ಮೂಲದೊಳು (ಅದೇ), ಪಸುಂಬೆಗಳೊಳು ತೀವಿ (149 ಓ) ಇತ್ಯಾದಿ. ಱಕಾರವನ್ನು ಅದಿರಬೇಕಾದ ಎಡೆಗಳಲ್ಲಿ ಸರಿಯಾಗಿಯೇ ಬರೆದಿದೆ ; ೞಕಾರ ಲಿಖಿತ ವಾಗಿಲ್ಲ. ಅಕ್ಷರಗಳು ದುಂಡಾಗಿ ಮುದ್ದಾಗಿ ದಪ್ಪವಾಗಿವೆ. ಪ್ರತಿಯೊಂದು ಓಲೆಯೂ ಒಂದಲ್ಲ ಒಂದು ರೀತಿಯಲ್ಲಿ ತ್ರುಟಿತವಾಗಿದೆ. "ತಿಳೋಯ ಸಬ್ಬ ಜೀವಾಣಂ" ಎಂಬ ಗಾಹೆಯಿಂದ ಗ್ರಂಥಾರಂಭವಾಗಿದೆ. ಈ ಪುಸ್ತಕ ಅಪೂರ್ಣವಾಗಿರುವುದರಿಂದ ಕೊನೆಯಲ್ಲಿ ಇದ್ದಿರಬಹುದಾದ ಲಿಪಿಕಾರನ ಪ್ರಶಸ್ತಿ ದೊರೆತಿಲ್ಲ. ಈ ಪ್ರತಿಯೂ ಸುಮಾರು ೨೦೦-೩೦೦ ವರ್ಷಗಳಷ್ಟು ಹಿಂದಿನ ದಾಗಿರಬಹುದು. ಚಾಣಾಕ್ಯರಿಸಿಯ ಕಥೆಯಲ್ಲಿನ 'ದ್ರವ್ಯಮಂ ಕೊಟ್ಟು' (ಪುಟ ೧೮೧-ಪಂ. ೯) ಎಂಬವರೆಗೆ ಮಾತ್ರ ಈ ಓಲೆಯ ಪುಸ್ತಕದಲ್ಲಿ ಗ್ರಂಥ ಲಭ್ಯವಾಗಿದೆ.

(ಛ)—ಇದು ಆರಾದ ಸೆಂಟ್ರಲ್ ಜೈನ್ ಓರಿಯಂಟಲ್ ಲೈಬ್ರರಿಗೆ ಸೇರಿದ್ದು. ಈ ಓಲೆಯ ಪ್ರತಿ ಅಸಮಗ್ರವಾಗಿದೆ. ಓಲೆಗಳ ಸಂಖ್ಯೆ ೧೮೦ ; ೧೬೪ರಿಂದ ೧೭೦ರ ವರೆಗಿನ ಓಲೆಗಳು ಎರಡನೆಯ ದಾರ ಪೋಣಿಸುವ ರಂಧ್ರದ ಸುತ್ತಲೂ ಮುರಿದುಹೋಗಿವೆ ; ೧೭೧ನೆಯ ಓಲೆಯಿಂದ ಮುಂದಕ್ಕೆ ರಂಧ್ರವು ವಿಶಾಲತರವಾಗುತ್ತ ಬಂದು ಅಲ್ಲಿನ ಬರವಣಿಗೆ ನಷ್ಟವಾಗಿದೆ ; ಕೊನೆಯ ಎರಡು ಓಲೆಗಳು ಒಡೆದಿವೆ. ಪ್ರತಿ ಓಲೆಯ ಉದ್ದಗಲ $11\frac{1}{2}$″ × 1.8″ ; ಪಂಕ್ತಿಗಳ ಸಂಖ್ಯೆ ೭-೮ ; ಅಕ್ಷರಗಳ ಸಂಖ್ಯೆ 42–46. ರುಷಿಯರ್ಕಳ್ (135 a), ವನಿತ್ಯಂಗಳ್ (133 a), ಮನೆಗಳೊಳ್ (124 ಓ) ಇತ್ಯಾದಿಯಾಗಿ ವ್ಯಂಜನಾಂತಗಳು ಕೆಲವೆಡೆ ಬಂದಿವೆ. ಸ್ವರಾಂತಗಳೂ ಲಿಖಿತವಾಗಿಲ್ಲದಿಲ್ಲ ; ಮಡಕೆಗಳೊಳು (96), ಯುವಜನೊಳು (94) ಇತ್ಯಾದಿ. ಱಕಾರವನ್ನು ಶುದ್ಧವಾಗಿ ಬರೆದಿದೆ. ಅಕ್ಷರಗಳು ಗುಂಡಾಗಿ ಸುಂದರವಾಗಿವೆ. ಆರಂಭದಲ್ಲಿ 'ಶ್ರೀ ಪಂಚಗುರುಭ್ಯೋ ನಮಃ ಶುಭಮಸ್ತು' ಎಂದಿದ್ದು 'ತಿಳೋಯ ಸಬ್ಬ...' ಎಂಬ ಗಾಹೆಯಿಂದ ಗ್ರಂಥಲೇಖನ ಆರಂಭವಾಗಿದೆ. ಇದರಲ್ಲಿ ಲಿಪಿಕಾರನ ಪ್ರಶಸ್ತಿ ಇಲ್ಲ. ಇದೂ ಸುಮಾರು 300 ವರ್ಷಗಳಷ್ಟು ಹಳೆಯ ಪ್ರತಿಯೆಂದು ತೋರುತ್ತದೆ.

ಈ ಆರು ಹಸ್ತಪ್ರತಿಗಳ ಪಾಠಸಂಕಲನ ಕಾರ್ಯ ಮುಗಿದಮೇಲೆ ಇನ್ನೊಂದು ಓಲೆಯ ಪ್ರತಿ ಡಾ. ಆದಿನಾಥ ನೇಮಿನಾಥ ಉಪಾಧ್ಯೆಯವರ ಮೂಲಕ ಲಭ್ಯವಾಯಿತು. ಇದರಲ್ಲಿನ ೨೫ ಓಲೆ ಗಳನ್ನು ಮಾತ್ರ ತರಿಸಿಕೊಂಡು ಪಾಠಾಂತರಗಳನ್ನು ಗಮನಿಸಿದ ತರುವಾಯ ಇದು ಘ.ಚ.ಛ. ಪ್ರತಿಗಳ ಸಂಪ್ರದಾಯಕ್ಕೆ ಸೇರಿದ್ದೆಂದು ಖಚಿತವಾಯಿತು. ಆದ್ದರಿಂದ ಸಂಪಾದನಕಾರ್ಯಕ್ಕೆ ಈ ಪ್ರತಿಯನ್ನು 'ಸುಕುಮಾರನ ಕಥೆ'ಯಿಂದ ಮುಂದಕ್ಕೆ ಉಪಯೋಗಿಸಿಕೊಳ್ಳಲಿಲ್ಲ. ಇದರ ವಿಷಯವಾಗಿ ಡಾ. ಉಪಾಧ್ಯೆಯವರು ಕೆಲವಂಶಗಳನ್ನು ತಿಳಿಸಿರುತ್ತಾರೆ—

ಈ ಪ್ರತಿ ಕೊಲ್ಹಾಪುರದಲ್ಲಿರುವ ಶ್ರೀ ಲಕ್ಷ್ಮೀಸೇನಭಟ್ಟಾರಕರವರ ಜೈನಮಠದ ಪುಸ್ತಕ ಭಂಡಾರಕ್ಕೆ ಸೇರಿದ್ದು ; ಇದಕ್ಕೆ 45 ಎಂಬ ಸಂಖ್ಯೆಯನ್ನು ಕೊಟ್ಟಿದೆ. ಇದು ತಾಳಿಯೋಲೆಯ

ಪ್ರತಿ. ಇದರ ಒಂದು ಕಡೆಯ ಮರದ ಪಟ್ಟಿಕೆಯ ಮೇಲೆ 'ಉಪಸರ್ಗ ಕೇವಲಿ ಕಥೆ' ಎಂಬ ಬರಹ ಹಳಗನ್ನಡ ಅಕ್ಷರಗಳಲ್ಲಿ ಕಾಣುತ್ತದೆ. ಈ ಹೆಸರು ಗ್ರಂಥದ ಒಳಗಡೆಯೂ ಓಲೆಯಲ್ಲಿಯೂ ಕಾಣುವುದಿಲ್ಲವಾದ್ದರಿಂದ ಆ ಭಂಡಾರದ ಅಧಿಕಾರಿ ಅದಕ್ಕೆ ಒಂದು ಹೆಸರನ್ನು ಕೊಡುವ ಸಂದರ್ಭದಲ್ಲಿ ಆರಂಭದ ಕೆಲವು ಓಲೆಗಳನ್ನು ಓದಿ ನೋಡಿ ಈ ಹೆಸರನ್ನು ಬರೆದಿರುವನೆಂದು ಊಹಿಸಬೇಕಾಗಿದೆ. ಇದರಲ್ಲಿ 147 ಓಲೆಗಳಿವೆ. ಕೊನೆಯ ಓಲೆಯ ಒಂದು ಪಕ್ಕದಲ್ಲಿ ಮಾತ್ರ ಬರಹವಿದೆ; ಉಳಿದ ಓಲೆಗಳ ಇಕ್ಕೆಡೆಗಳಲ್ಲೂ ಬರಹವಿದೆ. ಇಕ್ಕೆಡೆಯ ಮರದ ಪಟ್ಟಿಗಳನ್ನು ಬಿಟ್ಟು ಇದರ ಗಾತ್ರ 11.75 × 1.5 × 2 ಅಂಗುಲಗಳು. ಪ್ರತಿ ಓಲೆಯಲ್ಲೂ 8 ಪಂಕ್ತಿಗಳಿದ್ದು ಪಂಕ್ತಿಯೊಂದಕ್ಕೆ 55ರಿಂದ 60 ಅಕ್ಷರಗಳಿವೆ. ಱಕಾರವು ಸರಿಯಾಗಿ ಲಿಖಿತವಾಗಿದೆ. ೞಕಾರವನ್ನು ಬರೆದಿಲ್ಲ; ಅದಿರಬೇಕಾದ ಎಡೆಗಳಲ್ಲಿ ಳಕಾರವನ್ನು ಬರೆದಿದೆ. ಗ್ರಂಥವು ಆರಂಭವಾಗುವುದು ಹೀಗೆ—

ಸುಕುಮಾರಸ್ವಾಮಿ॥ ನಮಃ ಸಿದ್ಧೇಭ್ಯಃ॥ ಇಂದಸಯವಂದಿಯಾಣಂ ಇತ್ಯಾದಿ॥ ಏಸಸುರಾಸುರ...॥ ತಿಳೋಯ ಸಬ್ಬ ಜೀವಾಣಂ ಹಿಯಂ ಧಮ್ಮೋವ ದೇಸಿಣಂ। ವಡ್ಢಮಾಣಂ ಮಹಾವೀರಂ ವಂದಿತಾ ಸವ್ವ ವೇಇಣಂ॥ ನಮಃ ಶ್ರೀ ವರ್ಧಮಾನಾಯ ..॥ ಯೆಂದಿಂತು ಶ್ರೀ ವರ್ಧಮಾನ ಭಟ್ಟಾರಕರ್ಗ್ಗೆ...ಇತ್ಯಾದಿ.

ಗ್ರಂಥಾಂತ್ಯದಲ್ಲಿ ಕೊನೆಯ ಕಥೆಯನ್ನು ಬರೆದು ಮುಗಿಸಿದಮೇಲೆ ಮೂರು ಪ್ರಾಕೃತ ಗಾಹೆಗಳು ಲಿಖಿತವಾಗಿವೆ: ಜದಿತಾ ಏವಂ...॥ ಕಿಂ ಪುಣ॥ ಜಿಣವಯಣ...॥ ಈ ಗಾಹೆಗಳ ಪಾಠ ತುಂಬ ಕೆಟ್ಟುಹೋಗಿದೆ. ಇದನ್ನು ಬರೆದಾದಮೇಲೆ

ಯಿಾ ಪೇಳ್ದ ಪತ್ತೊಂಭತ್ತು ಕಥೆಯ ರೇವಕೊಟ್ಟಾಚಾರ್ಯ್ಯರ್ಪೇಳ್ದ ವಡ್ಡಾರಾಧನೆಯ ಕವಚ ಮೇಂಬಧಿಕಾರಉ॥ ಶ್ರೀ ಪಂಚಗುರುಶರಣು॥ ಪ್ಲವ ಸಂವತ್ಸರದ ಕಾರ್ತೀಕ ಸುದ ೧ ಶುಕ್ರವಾರ ಬೇಲೂರ ಚಂದ್ರಯ್ಯವೈಶ್ಯರ ಚಂದ್ರಯ್ಯನು ವಡ್ಡಾರಾಧನೆಯ ಪುಸ್ತಕವನ್ನು ಬರೆದನು ಮಂಗಲಮಹಾಶ್ರೀ ೪॥

ಎಂದು ಲಿಪಿಕಾರ ಪ್ರಶಸ್ತಿ ಇದೆ. ಈ ಪ್ರತಿ ಹುಟ್ಟಿದ ಕಾಲವನ್ನು ನಿಷ್ಕರ್ಷಿಸುವುದಾಗದಿದ್ದರೂ ಇದು ಮುನ್ನೂರು ವರ್ಷಗಳಷ್ಟು ಹಿಂದೆ ಲಿಖಿತವಾಗಿರಬೇಕೆಂದು ಊಹಿಸಬಹುದಾಗಿದೆ. ಇದು ಲಿಖಿತವಾದದ್ದು ಬೇಲೂರಿನಲ್ಲಿ. ಇದು ಬಹುಶಃ ಹಾಸನ ಜಿಲ್ಲೆಯಲ್ಲಿರುವ ಬೇಲೂರೇ ಇರಬಹುದು.[1] ಈ ಪ್ರತಿಯ ಪಾಠಗಳು ಘ ಚ ಛ ಪ್ರತಿಗಳ ಪಾಠಗಳಂತೆಯೇ ಇವೆ; ಈ ನಾಲ್ಕೂ ಒಂದು ಪಾಠ ಸಂಪ್ರದಾಯಕ್ಕೆ ಸೇರಿದುವಾಗಿವೆ.

## ಹಸ್ತಪ್ರತಿಗಳ ಪರಸ್ಪರ ಸಂಬಂಧ

ಮೇಲೆ ವರ್ಣಿಸಿರುವ ಏಳು ಪ್ರತಿಗಳಿಗೆ ಇರುವ ಅಥವಾ ಇದ್ದಿರಬಹುದಾದ ಪರಸ್ಪರ ಸಂಬಂಧಗಳನ್ನು ತಿಳಿದುಕೊಳ್ಳಬೇಕಾಗಿದೆ. ಇದಕ್ಕಾಗಿ ಸಮಾನಪಾಠಗಳು, ವಿಚ್ಛೇದಕ ಸ್ಖಾಲಿತ್ಯಗಳು, ವಿಶೇಷ ಸ್ಖಾಲಿತ್ಯಗಳು ಎಂಬಿವೇ ಮುಂತಾದುವನ್ನು ಪರಿಶೀಲಿಸುವುದು ಆವಶ್ಯಕ. ಈ ಪ್ರತಿಗಳಲ್ಲಿ ಕ.ಖ.ಗ. ಎಂಬ ಮೂರರಲ್ಲಿ ಸಮಾನಪಾಠಗಳಿರುವುದರಿಂದಲೂ ಅವುಗಳಿಗೂ ಘ.ಚ.ಛ.ಜ. ಪ್ರತಿಗಳಲ್ಲಿರುವ ಪಾಠಗಳಿಗೂ ವ್ಯತ್ಯಾಸಗಳಿರುವುದರಿಂದಲೂ ಕ ಖ ಗ ಪ್ರತಿಗಳನ್ನು ಒಂದು ಗುಂಪೆಂದು ಭಾವಿಸಬಹುದು; ಉಳಿದ ನಾಲ್ಕು ಪ್ರತಿಗಳು ಇನ್ನೊಂದು ಗುಂಪಾಗುತ್ತವೆ.[2] ಮೊದಲ ಗುಂಪಿನ ಕ ಗ ಎಂಬೆರಡು ಪ್ರತಿಗಳಿಗೆ ಜನ್ಯಜನಕ ಸಂಬಂಧವಿರುವುದನ್ನು ಬೇರೆ ಪ್ರತ್ಯಕ್ಷ ಆಧಾರಗಳಿಂದ ಸ್ಥಾಪಿಸಬಹುದು. ಕ.ದ ನೇರಾದ ನಕಲೇ ಗ ಆಗಿದೆ. ಇನ್ನು ಕ.ಖ.ಗಳ ಸಂಬಂಧ. ಇವು ಒಂದರಿಂದ ಇನ್ನೊಂದು ಬಂದಿದೆಯೆ ಇಲ್ಲವೆ? ಇಲ್ಲಿ ಗ್ರಂಥಪಾಠವೊಂದು ಸಹಾಯಕ್ಕೆ ಬರುತ್ತದೆ. ವಿದ್ಯುಚ್ಚೋರನೆಂಬ ರಿಸಿಯ ಕತೆಯಲ್ಲಿ (ವಡ್ಡಾ. ೧೨೬) ಕೆಳಗಿನ ವಾಕ್ಯವಿದೆ :

---

[1] *Brhatkathakosa,* **Intro., p. 64.**

[2] ಈ ವಿಷಯವಾಗಿ 'ಕನ್ನಡ ಗ್ರಂಥಸಂಪಾದನೆ' ೧೫೫–೧೫೯ ಪುಟಗಳನ್ನು ನೋಡಬಹುದು.

ವಿಸ್ತೀರ್ಣ ಗುಹೆಯುಂಟದಱ ಬಾಗಿಲಂ ಮುಚ್ಚಿರ್ದ ಸಿಲೆಯಂ ಕಳೆದದಱೊಳಗೆ ಪೊಕ್ಕು ಹಾರಮಂ ಕೊಂಡು* ಪೊಱಲ ಜನಮನೆಲ್ಲಮನೆಂದಂ ನಿಮ್ಮ ಕಸವರಮುಪ್ಪುದನಾರಯ್ದು ಪಲ್ಲಟಿಸಲೀಯದೆ ನೋಡಿಕೊಳ್ಳಿಮೆಂದು ತೋಱಿದೊಡವರುಂ ತಂತಮ್ಮ ಕಸವರಮೆಲ್ಲಮನಾರಯ್ದು ಕೊಂಡರ್ ಮತ್ತೆ ವಿದ್ಯುಚ್ಚೋರನುಂ ಹಾರಮಂ ಕೊಂಡು* ಪೋಗಿಯರಸಂಗೊಪ್ಪಿಸಿದೊಡೆ...

ಇಲ್ಲಿ ಚುಕ್ಕಿಗಳ ನಡುವೆ [*—*] ಇರುವ ಭಾಗ ಕ ಪ್ರತಿಯಲ್ಲಿ ಇಲ್ಲ; ಅದರ ನೇರ ನಕಲಾದ ಗ ದಲ್ಲಿಯೂ ಇಲ್ಲ. ಆದರೆ ಇದು ಖ ದಲ್ಲಿದೆ. ಇದು ಕ ದಿಂದ ಖ ಬಂದಿಲ್ಲ ಎಂಬುದನ್ನು ಸ್ಥಾಪಿಸುತ್ತದೆ: ಇವೆರಡರ ಮೂಲ ಒಂದು ಪ್ರತಿ ಇದ್ದಿರಬೇಕೆಂದೂ ಆ ಪ್ರತಿಯ ಸ್ವತಂತ್ರ ನಕಲುಗಳು ಇವಾಗಿರಬೇಕೆಂದೂ ಸ್ಥಾಪಿಸಬಹುದು; ಜೊತೆಗೆ ಖ ದಲ್ಲಿ ಮಾತ್ರವೇ ಅದಕ್ಕೆ ವಿಶಿಷ್ಟವಾಗಿರುವ ಪಾಠಗಳು ಇವೆ: ಪುಷ್ಪರೂಪೆಲ್ಲಿಯುಮಿಲ್ಲೊಂದರದ (33–7), + ಪೊಡವಟ್ಟು (ಅದೇ–9), ದಿವಸ (ಅದೇ–14). ಇದನ್ನು ನೋಡಿದರೆ ಕ. ಖ. ಗಳಿಗೆ ಜನ್ಯಜನಕ ಸಂಬಂಧವಿಲ್ಲವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಈ ಮೂರು ಪ್ರತಿಗಳ ಸಂಬಂಧ ಕೆಳಗೆ ಕಾಣಿಸಿದಂತೆ ಇರಬಹುದು.




ಇನ್ನು ಎರಡನೆಯ ಗುಂಪಿನ ಪ್ರತಿಗಳ ವಿಚಾರ. ಇದರ ನಾಲ್ಕು ಪ್ರತಿಗಳಲ್ಲೂ ಸಮಾನ ಸ್ಖಾಲಿತ್ಯಗಳು ಎಂದರೆ ಪಾಠಗಳು ಹೇರಳವಾಗಿವೆ; ಒಂದೊಂದಕ್ಕೂ ವಿಶಿಷ್ಟವಾದ ಸ್ಖಾಲಿತ್ಯಗಳೂ ಇವೆ. ಉದಾ—ಪುಟ 8–9. ಇವರೆ (ಘ), ಅವರಂ (ಚ), ಇವರ್ಗೆ (ಛ), ಳನಾಂ (ಅದೇ 16) ಇತ್ಯಾದಿ. ಅಲ್ಲದೆ ಒಂದೊಂದು ಪ್ರತಿಯಲ್ಲೂ ಇರುವ ತಪ್ಪು ಉಳಿದ ಮೂರರಲ್ಲಿ ಇಲ್ಲದಿರುವುದನ್ನು ನೋಡಬಹುದು. ಐಮ್ಮುಕಿವ ಎಂಬ ತಪ್ಪು ಚಛಜಗಳಲ್ಲಿಲ್ಲ. ಚದಲ್ಲಿರುವ + ತಿರಸ್ಕರಿಸಿ ಎಂಬ ಅಧಿಕ ಪಾಠ ಘಛಜಗಳಲ್ಲಿಲ್ಲ. ಛ ದಲ್ಲಿರುವ ನುಱಿ . (೧೨–೧) ಎಂಬುದು ಘಚಜಗಳಲ್ಲಿಲ್ಲ. ಜ ದಲ್ಲಿರುವ 'ವಿಧಿವಶದೆ' ಎಂಬ ಪಾಠವು (13–4) ಘಚಛಗಳಲ್ಲಿಲ್ಲ. ಇದರಿಂದ ಈ ನಾಲ್ಕು ಪ್ರತಿಗಳೂ ಸಮಾನಮೂಲದಿಂದ ಸ್ವತಂತ್ರವಾಗಿ ಬಂದಿರುವ ನಕಲುಗಳೆಂದು ಹೇಳುವುದು ಸಾಧ್ಯವಾಗುತ್ತದೆ; ಎಂದರೆ ಇವಕ್ಕೆ ಜನ್ಯಜನಕ ಸಂಬಂಧವಿಲ್ಲವೆಂದಾಗುತ್ತದೆ. ಭದ್ರಬಾಹು ಭಟಾರರ ಕಥೆಯಲ್ಲಿ ಬರುವ ಒಂದು ದೀರ್ಘವಾದ ಅಧಿಕಪಾಠ ಘಚಛ ಪ್ರತಿಗಳಲ್ಲಿ ಮಾತ್ರವೇ ಇರುವುದೂ (ಬಹುಶಃ ಇದು ಜದಲ್ಲಿಯೂ ಇರಬೇಕು.) ಇದಕ್ಕೆ ಸಮಾನ ಮೂಲವೊಂದರ ಸೂಚಕವಾಗಬಹುದು. ಆದ್ದರಿಂದ ಈ ನಾಲ್ಕು ಪ್ರತಿಗಳ ಸಂಬಂಧ ಹೀಗಿರಬಹುದು:




ಆದ್ದರಿಂದ ಈ ಏಳು ಪ್ರತಿಗಳ ಪರಸ್ಪರ ಸಂಬಂಧವನ್ನು ಕೆಳಗೆ ಕಾಣಿಸಿರುವಂತೆ ನಿರೂಪಿಸಬಹುದು.




ಮೊದಲ ಗುಂಪಿನ ಪ್ರತಿಗಳಲ್ಲಿ ಕಾಣುವ ಕೆಲವು ಕ್ಲಿಷ್ಟಪಾಠಗಳಿಗೆ ಎರಡನೆ ತಂಡದಿಂದ ಪ್ರತಿಗಳಲ್ಲಿ ಸಮಾನಾರ್ಥಕ ಶಬ್ದಗಳ ಪ್ರತಿನಿಧಾನಗಳು ಹೇರಳವಾಗಿ ದೊರೆಯುತ್ತವೆ. ಎರಡನೆ ಗುಂಪಿನ ಪ್ರತಿಗಳು ಮಾತೃಕೆ ವ ದಲ್ಲಿಯೋ ಅದಕ್ಕೆ ಮೂಲವಾದ ಲ ಪ್ರತಿಯಲ್ಲಿಯೋ ಓಲೆಯ ಅಂಚುಗಳಲ್ಲಿ ಬರೆದಿರಬೇಕಾಗಿದ್ದ ಸಮಾನಾರ್ಥಕವಾದ ಟಿಪ್ಪಣಿಗಳ ಸ್ವೀಕರಣ ನಡೆದುಹೋಗಿರಬೇಕು ಎಂಬ ಊಹೆಯನ್ನು ಮಾಡಲು ಸಾಧ್ಯವಾಗುತ್ತದೆ. ಇಲ್ಲಿ ಕ.ಖ.ಗ. ಪ್ರತಿಗಳ ಪಾಠ ಒಂದು ಸಂಪ್ರದಾಯವಾಗಿಯೂ ಘ.ಚ.ಥ.ಜ.ಗಳ ಪಾಠ ಇನ್ನೊಂದು ಸಂಪ್ರದಾಯವಾಗಿಯೂ ಬೇರೆ ಬೇರೆ ನಿಲ್ಲುತ್ತವೆ. ಇವೆರಡರಲ್ಲಿಯೂ ಐಕ್ಯತೆ ಇದ್ದಾಗ ಮೂಲಪಾಠ ಎಂದರೆ ಕವಿಪ್ರತಿಯಾದ (ಯ) ದ ಪಾಠ ಲಭ್ಯವಾಗುತ್ತದೆ. ಮೊದಲನೆಯ ಗುಂಪಿನ ಯಾವುದಾದರೂ ಒಂದು ಪ್ರತಿಯ ಪಾಠ ಎರಡನೆಯ ಗುಂಪಿನ ಯಾವುದಾದರೂ ಒಂದು ಪ್ರತಿಯ ಪಾಠಕ್ಕೆ ಸಮಾನವಾಗಿದ್ದರೆ ಆಗ ಅದೇ ಮೂಲಪಾಠವೆಂದು ನಿರ್ಣೀತವಾಗುತ್ತದೆ. ಇವೆರಡು ಪಾಠಸಂಪ್ರದಾಯಗಳಲ್ಲಿ ಮೊದಲನೆಯದು ಪ್ರಾಚೀನತರವಾಗಿದ್ದು ಮೂಲಪ್ರತಿಗೆ ಸಮೀಪತರವಾಗಿದೆ, ಎರಡನೆಯದು ಪ್ರಾಚೀನವಾದರೂ ಮೂಲಪ್ರತಿಗೆ ಸ್ವಲ್ಪ ದೂರವಾಗಿದೆ.

## ಗ್ರಂಥದ ಹೆಸರು

ವಡ್ಡಾರಾಧನೆ ಎಂಬ ಹೆಸರಿನಿಂದ ಈಗ ಈ ಗ್ರಂಥ ಪ್ರಚಾರದಲ್ಲಿರುವುದಾದರೂ ಇದನ್ನು ರಚಿಸಿದಾತನು ಇದಕ್ಕೆ ಕೊಟ್ಟ ಹೆಸರೇನೆಂಬುದನ್ನು ತಿಳಿಯಬೇಕಾಗಿದೆ. ಗ್ರಂಥ ಆದಿಯಲ್ಲೋ ಅಂತ್ಯದಲ್ಲೋ ಅಥವಾ ಎರಡೂ ಎಡೆಗಳಲ್ಲಿಯೋ ಕವಿ ಸ್ವಕೀಯ ವೃತ್ತಾಂತವನ್ನು ತಿಳಿಸುವುದು ಸಾಧಾರಣವಾದ ಸಂಪ್ರದಾಯವಾಗಿದೆ. ಇದಕ್ಕೆ ಈ ಗ್ರಂಥದಲ್ಲಿ ಭಂಗವುಂಟಾಗಿದೆ. ಆದಿಯಲ್ಲಾಗಲಿ ಅಂತ್ಯದಲ್ಲಾಗಲಿ ಕವಿ ತನ್ನ ವಿಷಯವಾಗಿ ಏನನ್ನೂ ಹೇಳಿಕೊಂಡಿಲ್ಲ. ಗ್ರಂಥಕ್ಕೆ ಪೀಠಿಕಾರೂಪವಾಗಿರುವ ಆರಂಭದ ಚಿಕ್ಕ ವಾಕ್ಯವೃಂದದ ಕೊನೆಯಲ್ಲಿ 'ಮುನ್ನಂ ಸುಕುಮಾರಸ್ವಾಮಿಯ ಕಥೆಯಂ ಪೇೞ್ವೆಂ' ಎಂಬ ವಾಕ್ಯ ದೊರೆಯುತ್ತದೆ. ಇಲ್ಲಿರುವ 'ಪೇೞ್ವೆಂ' ಎಂಬ ಉತ್ತಮಪುರುಷದ ಕ್ರಿಯೆ ಹೇಳಿದವನು ಯಾರೆಂಬುದನ್ನು ತಿಳಿಸಲು ಸಮರ್ಥವಾಗಿಲ್ಲ. ಗ್ರಂಥಾಂತ್ಯದಲ್ಲಿ ಬರುವ "ಈ ಪೇೞ್ದ ಪತ್ತೊಂ[ಬ]ತ್ತು ಕಥೆಗ[ಳಂ] ಶಿವಕೋಟ್ಯಾಚಾರ್ಯರ್ ಪೇೞ್ದ[ರ್] ವಡ್ಡಾರಾಧನೆ ಸಂಪೂರ್ಣಂ" ಎಂಬ ವಾಕ್ಯಗಳು ಗ್ರಂಥಕರ್ತನ ಹೆಸರನ್ನೂ ಗ್ರಂಥದ ಹೆಸರನ್ನೂ ತಿಳಿಸಿಕೊಡುತ್ತವೆಯೆಂದು ಹೇಳಬಹುದು. ಈ ವಾಕ್ಯಗಳನ್ನು ಮೂಲಕವಿಯೇ ಬರೆದಿದ್ದ ಪಕ್ಷದಲ್ಲಿ ಮೇಲಿನ ಅಭಿಪ್ರಾಯ ಸಾಧುವಾಗುತ್ತದೆ. ಇವುಗಳನ್ನು ಯಾವನಾದರೂ ಲಿಪಿಕಾರನು ಬರೆದಿದ್ದ ಪಕ್ಷದಲ್ಲಿ ಗ್ರಂಥದ ಹೆಸರಿನ ವಿಷಯದಲ್ಲೂ ಅದರ ಕರ್ತೃವಿನ ವಿಷಯದಲ್ಲೂ ಸಂದೇಹಕ್ಕೆ ಅವಕಾಶವಾಗುತ್ತದೆ. ಆದ್ದರಿಂದ ಈ ವಾಕ್ಯಗಳ ರಚಕನ ವಿಷಯವಾಗಿ ವಿಚಾರಮಾಡಬೇಕಾಗಿದೆ.

ಇವೆರಡು ವಾಕ್ಯಗಳು ಕವಿಯವಲ್ಲವೆಂದೂ ಅವು ಅವನ ಸ್ವಹಸ್ತಪ್ರತಿಯಲ್ಲಿ ಇರಲಿಲ್ಲವೆಂದೂ

ಭಾವಿಸೋಣ. ಇವು ಲಿಪಿಕಾರ ರಚಿತವೆಂದು ಹೇಳಿದರೆ ಅವನಿಗೆ ಕವಿಯ ಹೆಸರಾಗಲಿ, ಗ್ರಂಥದ ಹೆಸರಾಗಲಿ, ಅವು ಏನೇ ಇದ್ದಿರಲಿ, ಹೇಗೆ ತಿಳಿಯಿತು? ಗ್ರಂಥಕ್ಕೂ ಕವಿಗೂ ಒಬ್ಬೊಬ್ಬ ಲಿಪಿಕಾರ ಒಂದೊಂದು ಹೆಸರನ್ನು ಕೊಡಬಹುದಾಗಿತ್ತಲ್ಲ, ಮೂಲತಃ ಗ್ರಂಥದಲ್ಲಿ ಯಾವ ಹೆಸರುಗಳೂ ಇಲ್ಲದ ಕಾರಣದಿಂದ. ಕೊಲ್ಲಾಪುರದ ಪ್ರತಿಯ (ಜ) ಮರದ ಪಟ್ಟಿಯ ಮೇಲೆ 'ಉಪಸರ್ಗ ಕೇವಲಿ ಕಥೆ' ಎಂದು ಗ್ರಂಥದ ಹೆಸರನ್ನು ಯಾರೋ ಬರೆದಿರುವುದು ಇದಕ್ಕೆ ಒಂದು ನಿದರ್ಶನವಾಗಿದೆ. ಅದೇ ಪ್ರತಿಯ ಅಂತ್ಯದಲ್ಲಿ 'ವಡ್ಡಾರಾಧನೆ' ಎಂಬ ಹೆಸರೇ ಇದ್ದರೂ ಅದನ್ನು ಬಿಟ್ಟು ಈ ಹೊಸ ಹೆಸರನ್ನೂ ಬರೆದಿದೆ. ಹೀಗೆಯೇ ಇತರ ಪ್ರತಿಕಾರರೂ ಏಕೆ ಮಾಡಲಿಲ್ಲ? ವಸ್ತುಸ್ಥಿತಿ ಹೀಗಿಲ್ಲ. ಒಂದು ಸಂಪ್ರದಾಯಕ್ಕೆ ಸೇರಿರುವ ಪ್ರತಿಗಳಲ್ಲಿ (ಕಜಗ) ಗ್ರಂಥಕರ್ತನ ಹೆಸರು ಶಿವಕೋಟ್ಯಾಚಾರ್ಯನೆಂದೂ ಇನ್ನೊಂದು ಸಂಪ್ರದಾಯದ ಎರಡು ಪ್ರತಿಗಳಲ್ಲಿ (ಘಜ) ರೇವಕೋಟ್ಯಾಚಾರ್ಯನೆಂದೂ ಇರುವುದನ್ನು ನೋಡಿದರೆ ಅವುಗಳಿಗೆ ಮೂಲವಾದ ಮಾತೃಕೆಗಳಲ್ಲಿ ಆಯಾ ಹೆಸರುಗಳು ಲಿಖಿತವಾಗಿದ್ದುವೆಂದು ಹೇಳಬೇಕಾಗುತ್ತದೆ. ಶಿವಕೋಟ್ಯಾಚಾರ್ಯ ಎಂಬ ಹೆಸರಿನ ಮೊದಲ ಅಕ್ಷರ ಶಿ ಎಂಬುದನ್ನು ಘ.ಜ.ಗಳ ಪ್ರತಿಕಾರರು ರೆ ಎಂದು ಓದಿರಬಹುದು. ಇವೆರಡಕ್ಷರಗಳಿರುವ ರೂಪಸಾದೃಶ್ಯ ಇಂಥ ಭ್ರಾಂತಿಗೆ ಕಾರಣವಾಗಿದೆ. ಇದಕ್ಕೆ ಒಂದು ಉದಾಹರಣೆಯನ್ನು ಕೊಡಬಹುದು. ಶಕ ೧೦೫೭ರಲ್ಲಿ ಲಿಖಿತವಾದ ಒಂದು ಶಾಸನದಲ್ಲಿ[3] ಕೆಳಗೆ ಕಾಣಿಸಿರುವ ಕಂದಪದ್ಯವಿದೆ:

ಕೊಳದೊಳ್ತಾವರೆ ಗಗನ
ಸ್ಥಳದೊಳ್ಕರೆಯೊಗೆವ ತೆಜದಿನೊಗೆದಂ ನಿಜ ನಿ।
ರ್ಮ್ಮಳ ಯಶಮೆಸೆಯೆ ಸುಪುತ್ರಃ
ಕುಳದೀಪಕನೆನಿಸಿ ಪೊಗಳೆ ಧರೆ ಕಲಿದೇವ [೦] ॥

ಇಲ್ಲಿ 'ಗಗನಸ್ಥಳದೊಳ್ಕರೆಯೊಗೆವ' ಎಂಬಲ್ಲಿನ ರೆ ಅಕ್ಷರ ಶಿ ಎಂದಿದ್ದಿರಬೇಕು; ಇಲ್ಲವೆ ಹೋದರೆ ಅರ್ಥವಾಗುವುದಿಲ್ಲ. ಶಾಸನವನ್ನು ರಚಿಸಿದ ಕವಿ ಬಳಸಿದ ಶಿ ಅಕ್ಷರ ಲಿಪಿಕಾರನಿಂದಲೋ ಕಂಡರಣೆಕಾರನಿಂದಲೋ ರೆ ಆಗಿ ಪರಿಣಮಿಸಿರುವುದು ಸ್ಪಷ್ಟವಾಗಿದೆ. ಆದ್ದರಿಂದ ಮೇಲಿನ ಘ ಜ ಪ್ರತಿಗಳ ಮಾತೃಕೆಯಲ್ಲಿ 'ಶಿವಕೋಟ್ಯಾಚಾರ್ಯ' ಎಂಬ ಹೆಸರೇ ಇದ್ದಿರಬಹುದೆಂಬ ಊಹೆ ಸಂಗತವಾಗುತ್ತದೆ. ಆದರೆ ಇಬ್ಬರು ಪ್ರತಿಕಾರರು ಸಮಾನ ಸ್ಖಾಲಿತ್ಯವನ್ನು ಸ್ವತಂತ್ರವಾಗಿ ಮಾಡುವುದು ಸಾಧಾರಣವಾಗಿ ಅಸಂಭವವಾಗಿರುವ ಕಾರಣದಿಂದ ಆ ಮಾತೃಕೆಯಲ್ಲೇ 'ರೆ' ಎಂದು ಲಿಖಿತವಾಗಿದ್ದರೂ ಇರಬಹುದು. ಅಥವಾ ಘ ಜ ಪ್ರತಿಗಳಲ್ಲಿ ಒಂದು ಇನ್ನೊಂದಕ್ಕೆ ಮಾತೃಕೆಯಾಗಿರಬಹುದು. ಆದುದರಿಂದ ಗ್ರಂಥಾಂತ್ಯದ ಆ ಎರಡು ವಾಕ್ಯಗಳು ಲಿಪಿಕಾರರಚಿತವಲ್ಲವೆಂದೂ ಕವಿರಚಿತವಾದುವೆಂದೂ ನಿರ್ಣಯಿಸಬೇಕಾಗಿದೆ. ಗ್ರಂಥಕರ್ತನ ವಿಷಯವಾಗಿ ಮುಂದೆ ಹೇಳಲಿರುವುದರಿಂದ ಸದ್ಯಕ್ಕೆ ಗ್ರಂಥದ ಹೆಸರನ್ನು ಮಾತ್ರ ಗಮನಿಸಬಹುದು.

ಐದು ಪ್ರತಿಗಳಲ್ಲೂ ಗ್ರಂಥದ ಹೆಸರು ವಡ್ಡಾರಾಧನೆ ಅಥವಾ ಅದರ ಇತರ ರೂಪಗಳಲ್ಲಿ ಲಿಖಿತವಾಗಿರುವುದು ಕಾಣುತ್ತದೆ. ಗ್ರಂಥಕರ್ತನೇ ಇಟ್ಟ ಹೆಸರು ಲಿಪಿಕಾರರ ಕೈಯಲ್ಲಿ ನಾನಾ ಬಗೆಯಾಗಿ ವಿಕಾರಗೊಂಡಿರಬಹುದು. ಇವರ ಬೇರೆಬೇರೆ ರೂಪಗಳನ್ನು ಕೆಳಗೆ ಕಾಣಿಸಿ—ವಡ್ಡಾರಾಧನೆ ಎಂಬ ಹೆಸರೇ ಉಚಿತವೆಂದು ತೋರಿಸಿದೆ.[4]

| ೧ | ೨ | ೩ | ೪ |
|---|---|---|---|
| ವೃದ್ಧಾರಾಧಸಂ | ವ(ವು)ಡ್ಡಾರಾಧಣಂ | ವೊಡ್ಡಾರಾಧಣಂ | ಒಡ್ಡಾರಾಧಣಂ |
| ವೃದ್ಧಾರಾಧನಾ | ವ(ವು)ಡ್ಡಾರಾಧನೆ | ವೊಡ್ಡಾರಾಧನೆ | ಒಡ್ಡಾರಾಧನೆ |

[3] *Andhra Pradesh Govt. Archaeological Series*—9, No. 23, 144–45.

[4] ಇದೇ ಗ್ರಂಥದ ೩೪೦–೩೪೩ನೆಯ ಪುಟಗಳನ್ನು ನೋಡಿ.

ಎರಡನೆಯ ಪಂಗಡದ ಹೆಸರುಗಳು ಮಿಕ್ಕ ಪಂಗಡದ ಹೆಸರುಗಳಿಗಿಂತ ಸಂಸ್ಕೃತಕ್ಕೆ ಸಮೀಪತಮ ವಾಗಿದ್ದು ಪ್ರಾಚೀನತರವಾಗಿಯೂ ಇವೆ. 'ವಡ್ಡಾರಾಧಣಂ' ಎಂಬಲ್ಲಿಯ ಎರಡನೆಯ ಶಬ್ದದ ರೂಪ ಸಂದೇಹಾಸ್ಪದವಾದುದೆಂದು ಹಿಂದೆಯೇ ಸೂಚಿಸಿದೆ. ಆದ್ದರಿಂದ ಅದನ್ನು ಬಿಟ್ಟು 'ವಡ್ಡಾರಾಧನೆ' ಎಂಬ ರೂಪವನ್ನೇ ಅಂಗೀಕರಿಸಿ ಅದೇ ಹೆಸರಿನಿಂದ ಈ ಗ್ರಂಥವನ್ನು ಕರೆಯ ಬಹುದಾಗಿದೆ. ಕವಿ ಇಟ್ಟ ಹೆಸರೂ ಇದೇ ಎಂದು ತೋರುತ್ತದೆ.

ಡಾ. ಆ. ನೇ. ಉಪಾಧ್ಯೆ ಅವರು ಈ ವಿಷಯವಾಗಿ ಬೇರೊಂದು ಅಭಿಪ್ರಾಯವನ್ನು ವ್ಯಕ್ತ ಪಡಿಸಿದ್ದಾರೆ. ಹಲವು ವರ್ಷಗಳು ಮುಂಚಿತವಾಗಿಯೇ, ಎಂದರೆ ೧೯೪೩ನೆಯ ಇಸವಿಯಲ್ಲೇ, "ಈ ಕನ್ನಡ ಕಥೆಗಳಿಗೆ ವಡ್ಡಾರಾಧನೆ ಎಂಬ ಹೆಸರು ಬಂದುಬಿಟ್ಟಿದೆ; ಅವುಗಳ ಸಂಪಾದಕರೂ ಈಚಿನ ಇತರ ಲೇಖಕರೂ ಇದೇ ಹೆಸರನ್ನೇ ತಮ್ಮ ಪ್ರತಿಗಳಿಗೆ ಧಾರಾಳವಾಗಿ ಇರಿಸಿದ್ದಾರೆ. ಖಚಿತವಾಗಿ ಹೇಳುವುದಾದರೆ ಈ ಹತ್ತೊಂಬತ್ತು ಕಥೆಗಳಿಗೆ ಅವುಗಳನ್ನು ರಚಿಸಿದಾತನು ಒಟ್ಟಾಗಿ ಇಟ್ಟ ಹೆಸರೇನೋ ನಿರ್ಣಯಿಸಲು ಯಾವ ಆಧಾರವೂ ಇಲ್ಲ: ನನ್ನ ಅಭಿಪ್ರಾಯದಲ್ಲಿ ಆ ಹೆಸರು ನಮ್ಮವರೆಗೆ ಉಳಿದುಕೊಂಡು ಬಂದಿಲ್ಲ."[5] ಮುಂದುವರಿಯುತ್ತ ಅವರು "ಗ್ರಂಥದ ಪರಿಸಮಾಪ್ತಿ ವಾಕ್ಯದಲ್ಲಿ ಕಾಣುವ ಶಿವಕೋಟಿ ಮತ್ತು ವಡ್ಡಾರಾಧನೆ ಎಂಬ ಹೆಸರುಗಳು ಪ್ರಕೃತ ಕನ್ನಡ ಗ್ರಂಥಕರ್ತನನ್ನೂ, ಆ ಗ್ರಂಥವನ್ನೂ ನಿರ್ದೇಶಿಸುವುದಿಲ್ಲ. ಕೆಲವು ಪ್ರತಿಗಳಲ್ಲಿ ವಡ್ಡಾರಾಧನೆಯ ಕವಚ, ವಡ್ಡಾರಾಧನೆಯ ಕವಚವೆಂಬಧಿಕಾರವು ಎಂದು ಲಿಖಿತವಿದೆಯಷ್ಟೆ. ಇಲ್ಲಿನ ಕವಚ ಎಂಬ ಪದ ಗಮನಾರ್ಹ—ಈ ಪದವು ಭಾರತೀಯ ಸಾಹಿತ್ಯದಲ್ಲಿ ಯಾವುದಾದರೂ ದೇವತೆಯನ್ನು ಕುರಿತ ಮಂತ್ರಸ್ತೋತ್ರ ವಿಭಾಗದ ಗ್ರಂಥವನ್ನು ನಿರ್ದೇಶಿಸುತ್ತದೆ; ಈ ಮಂತ್ರಗಳ ಪುನಶ್ಚರಣೆಯಿಂದ ಭಕ್ತನಿಗೆ ಎಲ್ಲ ತೊಂದರೆಗಳೂ ನಿವಾರಣೆಯಾಗುತ್ತವೆಯೆಂದೂ, ಅವುಗಳಲ್ಲಿ ಅದ್ಭುತವಾದ ಶಕ್ತಿ ಇರುವುದೆಂದೂ ಭಕ್ತನು ಭಾವಿಸುತ್ತಾನೆ, ಸಿಪಾಯಿಯನ್ನು ಕವಚವು ರಕ್ಷಿಸುವಂತೆ ಈ ಮಂತ್ರಗಳೂ ರಕ್ಷಿಸುತ್ತವೆಯೆಂದು ನಂಬಿಕೆಯಿದೆ. ಜೈನಸಾಹಿತ್ಯದಲ್ಲಿ ಇಂಥ ಕವಚ ಗ್ರಂಥಗಳು ಕೆಲವಿವೆ. ಶಿವಕೋಟಿಯಿಂದ ಪ್ರಾಕೃತಭಾಷೆಯಲ್ಲಿ ರಚಿತವಾದ 'ಭಗವತೀ ಆರಾಧನಾ' ಎಂಬ ಗ್ರಂಥದ (೧೫೪೯-೧೬೮೨ ವರೆಗಿರುವ) ಗಾಹೆಗಳನ್ನೊಳಗೊಂಡ ಭಾಗಕ್ಕೆ ಕವಚವೆಂಬ ಹೆಸರೇ ಇದೆ. ಕನ್ನಡ ಕಥೆಗಳ ಆರಂಭದಲ್ಲಿ ಕಾಣುವ ಗಾಹೆಗಳು ಈ 'ಕವಚ' ವಿಭಾಗದಿಂದ ಉದ್ಧೃತವಾಗಿವೆ. ಕನ್ನಡ ಗ್ರಂಥದಲ್ಲಿ ಕೊನೆಯ ಕಥೆಯಾಗಿರುವ ವೃಷಭಸೇನನ ಕಥೆ ಶ್ರೀಚಂದ್ರನ ಅಪಭ್ರಂಶ ಕಥಾಕೋಶದಲ್ಲೂ ಇದೆ. ಇದು ಮುಗಿದಮೇಲೆ ಅಲ್ಲಿ 'ಕವಚಾಹಿಯಾರೋಯಂ' (ಕವಚಾಧಿಕಾರೋಯಂ) ಎಂದು ಬರೆದಿದೆ. ಆದ್ದರಿಂದ 'ವಡ್ಡಾರಾಧನೆಯ ಕವಚವು' ಎಂಬುದು 'ಭಗವತೀ ಆರಾಧನಾ' ಗ್ರಂಥವನ್ನೇ ನಿರ್ದೇಶಿಸುತ್ತದೆ. 'ವಡ್ಡಾರಾಧನೆ' ಎಂಬುದು ಆ ಗ್ರಂಥದ ಮತ್ತೊಂದು ಹೆಸರೇ ಹೊರತು ಕನ್ನಡ ಗ್ರಂಥದ ಹೆಸರಲ್ಲ. ಇಲ್ಲಿ ಹೇಳಿರುವ ಶಿವಕೋಟಿ ಆ ಪ್ರಾಕೃತ ಗ್ರಂಥದ ಕರ್ತನೇ ಹೊರತು ಕನ್ನಡ ಗ್ರಂಥದ ಕರ್ತನ ಹೆಸರಲ್ಲ. ಈ ಕಥೆಗಳನ್ನು ವಡ್ಡಾರಾಧನೆ ಎಂದು ಕರೆಯಬಹುದು; ಅವುಗಳ ಕರ್ತ ಯಾರೊ ನಮಗೆ ತಿಳಿಯದು"—ಎಂಬ ನಿರ್ಣಯಕ್ಕೆ ಬಂದಿದ್ದಾರೆ.[6]

ಇದರಂತೆ ಈ ಕನ್ನಡ ಗ್ರಂಥಕ್ಕೆ ಅದನ್ನು ರಚಿಸಿದಾತನು ಯಾವ ಹೆಸರನ್ನೂ ಇಡಲಿಲ್ಲವೆಂದೂ,

---

5 "The title *Vaddaradhane* for these stories has come to stay; it has been made sufficiently popular by their editor as well as, by subsequent writers; and without any hesitation the writers of the Moodabidri and Kolhapur MSS use the title for their copies. To be more accurate there is no evidence to say what name the author of the Kannada work gave to his collection of these nineteen stories; in my opinion this name has not come down to us." (*Brhatkathakosa*, Intro., p 67-68).

6 To conclude, we call these stories by the name *Vaddaradhane*, but we do not know who the author was (Ibid., p. 69)

ಬೇಕಾದರೆ 'ವಡ್ಡಾರಾಧನೆ'ಯೆಂಬ ಹೆಸರಿನಿಂದ ಕರೆಯಬಹುದೆಂದೂ ಹೇಳಿದಹಾಗಾಯಿತು. ಕೊಲ್ಹಾಪುರದ ಪ್ರತಿಯ ಮರದ ಪಟ್ಟಿಕೆಯ ಮೇಲೆ ಬರೆದಿರುವ 'ಉಪಸರ್ಗ ಕೇವಲಿಗಳ ಕಥೆ' ಎಂಬ ಹೆಸರಿನಿಂದ ಈ ಗ್ರಂಥವನ್ನು ಕರೆಯಲೂಬಹುದು. 'ಪುಣ್ಯಾಸ್ರವ ಕಥಾಕೋಶ'ವೆಂಬ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದಿರುವ ರಾಮಚಂದ್ರ ಮುಮುಕ್ಷು[7] ಆ ಗ್ರಂಥದ ಶ್ರೇಣಿಕನ ಕಥೆಯ ಅಂತ್ಯದಲ್ಲಿ "ಭ್ರಾಜಿಷ್ಣ್ವಾರಾಧನಾಶಾಸ್ತ್ರೇ ಕರ್ಣಾಟಟೀಕಾ ಕಥಿತ ಕ್ರಮೇಣೋಲ್ಲೇಖ ಮಾತ್ರಂ ಕಥಿತೇಯಂ ಕಥಾ" ಎಂದು ಹೇಳಿದ್ದಾನೆ. ಈ ಕರ್ನಾಟ ಟೀಕೆ ಪ್ರಕೃತ ಕನ್ನಡ ಗ್ರಂಥವೇ; ಏಕೆಂದರೆ ಇಂಥ ಗ್ರಂಥ ಕನ್ನಡದಲ್ಲಿ ಬೇರೊಂದಿಲ್ಲ. ಆದ್ದರಿಂದ ಈ ಗ್ರಂಥವನ್ನು 'ಆರಾಧನಾಶಾಸ್ತ್ರ ಕರ್ಣಾಟಟೀಕಾ' ಎಂದು ಬೇಕಾದರೂ ಕರೆಯಬಹುದು. ಈ ವಿಷಯ ಹಾಗಿರಲಿ. ಈ ಕನ್ನಡ ಗ್ರಂಥವನ್ನು ಬರೆದವನು ತಾನೇ ಬರೆದ[8] ಪರಿಸಮಾಪ್ತಿವಾಕ್ಯದಲ್ಲಿ ತನ್ನ ಗ್ರಂಥದ ಹೆಸರನ್ನು ಹೇಳಿಕೊಳ್ಳದೆ ತನಗಿಂತ ಹಲವು ಶತಮಾನಗಳ ಹಿಂದೆ ರಚಿತವಾಗಿದ್ದ ಪ್ರಾಕೃತ ಗ್ರಂಥದ ಹೆಸರನ್ನು ಹೇಳುವುದು ಎಷ್ಟರಮಟ್ಟಿಗೆ ಸಂಭವನೀಯ? ಇದಕ್ಕೆ ನಿದರ್ಶನಗಳು ಬೇರೆ ಎಲ್ಲಿಯಾದರೂ ಇವೆಯೆ? ಶಿವಕೋಟಿರಚಿತವಾದ ಆ ಪ್ರಾಕೃತ ಗ್ರಂಥಕ್ಕೆ ಆರಾಹಣಾ (= ಆರಾಧನಾ) ಎಂಬ ಹೆಸರಷ್ಟೇ ಇದ್ದಿತು.[9] ಆ ಗ್ರಂಥದ ೨೧೬೪ನೆಯ ಗಾಹೆಯಲ್ಲಿ 'ಆರಾಹಣಾ ಭಗವದೀ ಏವಂ ಭತ್ತೀಏ ವಣ್ಣಿದಾಸಂತೀ" ಎಂಬ ವಾಕ್ಯದಲ್ಲಿ ಭಗವತೀ ಎಂಬ ಹೆಸರು ವಿಶೇಷಣವಾಗಿ ಬಂದಿದೆ.[10] ಈ ಗ್ರಂಥವನ್ನು ಸಂಸ್ಕೃತಕ್ಕೆ ಭಾಷಾಂತರಿಸಿದ ಅಮಿತಗತಿ "ಆರಾಧನಾ ಭಗವತೀ ಕಥಿತಾ ಸ್ವಶಕ್ತ್ಯಾ" ಎಂದು ಭಗವತೀ ಎಂಬುದನ್ನು ವಿಶೇಷಣವಾಗಿಯೇ ಬಳಸಿದ್ದಾನೆ.[11] ಕಾಲಕ್ರಮದಲ್ಲಿ ಆ ಗ್ರಂಥಕ್ಕೆ 'ಭಗವತೀ ಆರಾಧನಾ' (= ಭಗವತ್ಯಾರಾಧನಾ) ಎಂದು ಹೆಸರಾಗಲು ಇದು ಕಾರಣವಿರಬಹುದು. ಇದೇ ಅಲ್ಲದೆ ಈ ಗ್ರಂಥಕ್ಕೆ 'ಮೂಲಾರಾಧನಾ' ಎಂಬ ನಾಮಾಂತರವೂ ಉಂಟಾಯಿತು. ಆಶಾಧರನು (೧೩ನೆಯ ಶತಮಾನ) ಈ ಗ್ರಂಥದ ಮೇಲೆ ಬರೆದಿರುವ ತನ್ನ ಟೀಕೆಯನ್ನು 'ಮೂಲಾರಾಧನ ದರ್ಪಣ'ವೆಂದು ಹೆಸರಿಸಿದ್ದಾನೆ. ಈ ಆಧಾರಗಳಿಂದ ಶಿವಕೋಟಿ ಬರೆದ ಆ ಪ್ರಾಕೃತ ಗ್ರಂಥಕ್ಕೆ ಆರಾಧನಾ, ಭಗವತೀ ಆರಾಧನಾ, ಮೂಲಾರಾಧನಾ ಎಂಬ ನಾಮಾಂತರಗಳಿದ್ದುವೆಂದು ಸುವ್ಯಕ್ತವಾಗಿದೆ; ಇವುಗಳನ್ನು ಡಾ. ಉಪಾಧ್ಯೆ ಅವರೇ ಹೇಳಿದ್ದಾರೆ.[12] ವಡ್ಡಾರಾಧನೆ (ವಡ್ಡಾರಾಧಣಂ), ಬೃಹದಾರಾಧನಾ ಎಂಬ ಇತರ ನಾಮಾಂತರಗಳೂ ಈ ಗ್ರಂಥಕ್ಕೆ ಇದ್ದುವೆಂದು ಹೇಳುವುದಕ್ಕೆ ಸ್ವತಂತ್ರವಾದ ಆಧಾರಗಳನ್ನು ಅವರು ತೋರಿಸಿಲ್ಲ. ಸಂಸ್ಕೃತದಲ್ಲಾಗಲಿ ಪ್ರಾಕೃತದಲ್ಲಾಗಲಿ ಈ ಹೆಸರುಗಳು ಆ ಗ್ರಂಥದ ವಿಷಯದಲ್ಲಿ ವ್ಯವಹಾರದಲ್ಲಿದ್ದುವೆಂಬುದನ್ನು ವಿಶದಪಡಿಸಬೇಕಾಗಿದೆ. ಕನ್ನಡ ಗ್ರಂಥಾಂತ್ಯ ಗದ್ಯದಲ್ಲಿ ಮಾತ್ರ ಇರುವ 'ವಡ್ಡಾರಾಧನೆ' ಎಂಬುದನ್ನಷ್ಟನ್ನೇ ಇಟ್ಟುಕೊಂಡು ಅದು 'ಭಗವತೀ ಆರಾಧನಾ'ದ ಇನ್ನೊಂದು ಹೆಸರೆಂದು ಹೇಳುವುದು ಸಂಗತವಾಗಲಾರದು. ಈ ಎರಡು ಶಂಕೆಗಳು ಪರಿಹಾರವಾಗುವವರೆಗೆ ಈ ಕನ್ನಡ ಗ್ರಂಥಕ್ಕೆ ಕವಿ ಇಟ್ಟ ಹೆಸರು 'ವಡ್ಡಾರಾಧನೆ' ಎಂದೇ ಗ್ರಹಿಸಬೇಕಾಗಿದೆ.

---

7 ಇವನು ಕುಂದಕುಂದಾನ್ವಯದ ಕೇಶವನಂದಿದೇವ ಯತಿಪತಿಯ ಶಿಷ್ಯನು. ಇವನ ಗ್ರಂಥವನ್ನು ೧೩೩೧ನೆಯ ಇಸವಿಯಲ್ಲಿ ನಾಗರಾಜನು ಕನ್ನಡಿಸಿರುವುದರಿಂದ ಇವನು ಆ ಕಾಲಕ್ಕೆ ಹಿಂದೆ ಇದ್ದನೆಂದು ತಿಳಿಯುತ್ತದೆ.

8 ಇದನ್ನು ಡಾ. ಉಪಾಧ್ಯೆಯವರೂ ಒಪ್ಪಿಕೊಂಡಿರುವಂತೆ ತೋರುತ್ತದೆ.

9 "ಆರಾಹಣಾ ಸಿವಜ್ಜೇಣ ಪಾಣಿದಲಭೋಇಣಾ ರಇದಾ" (ಗಾಹೆ ೨೧೬೨).

10 ಜೈನಸಾಹಿತ್ಯ ಔರ್ ಇತಿಹಾಸ್ : ೨೩.

11 ಅಮಿತಗತಿ ಅನೇಕ ಗ್ರಂಥಗಳನ್ನು ಬರೆದಿದ್ದಾನೆ. ಅವುಗಳಲ್ಲಿ ಒಂದಾದ 'ಧರ್ಮಪರೀಕ್ಷೆ'ಯನ್ನು ಕ್ರಿ.ಶ. ೧೦೧೪ರಲ್ಲಿ ರಚಿಸಿದನು. (ಅದೇ, ೬೨)

12 *Ibid.*, p. 62.

## ಕರ್ತೃತ್ವ ವಿಚಾರ

"ಈ ಪೇೞ್ದ ಪತ್ತೊಂ[ಬತ್ತು ಕಥೆಗ[ಳಂ] ಶಿವಕೋಟ್ಯಾಚಾರ್ಯರ್ ಪೇೞ್ದ[ರ್]" ಎಂಬ ಗ್ರಂಥಪರಿಸಮಾಪ್ತಿ ವಾಕ್ಯದಲ್ಲಿರುವ 'ಶಿವಕೋಟ್ಯಾಚಾರ್ಯ' ಎಂಬ ಹೆಸರು ಕನ್ನಡ ಗ್ರಂಥಕರ್ತನ ಹೆಸರಲ್ಲವೆಂದೂ ಪ್ರಾಕೃತ ಗ್ರಂಥವಾದ 'ಭಗವತೀ ಆರಾಧನಾ' ಎಂಬುದನ್ನು ರಚಿಸಿದ ಶಿವಾರ್ಯ ಅಥವಾ ಶಿವಕೋಟಿಯನ್ನು ಅದು ನಿರ್ದೇಶಿಸುವುದೆಂದೂ ಡಾ. ಉಪಾಧ್ಯೆಯವರ ಅಭಿಪ್ರಾಯ ವೆಂದು ಹಿಂದೆಯೇ ಹೇಳಿದೆ. ಕನ್ನಡ ಗ್ರಂಥವನ್ನು ಹೇಳಿದಾತನು 'ರೇವಾಕೋಟ್ಯಾಚಾರ್ಯ'ನೆಂಬ ಪಾಠಕರ ಮತ್ತು ಅವರನ್ನು ಅನುಸರಿಸಿದ ಕನ್ನಡ ಕವಿಚರಿತಕಾರರಾದ ರಾ. ನರಸಿಂಹಾಚಾರ್ಯರ ಅಭಿಪ್ರಾಯಗಳು ಈಚೆಗೆ ಪ್ರತ್ಯಂತರಗಳಲ್ಲಿ ದೊರೆತಿರುವ ಆಧಾರಗಳಿಂದ ಸರಿಯಲ್ಲವೆಂದೂ ಕನ್ನಡ ಕವಿಯ ಹೆಸರು 'ಶಿವಕೋಟ್ಯಾಚಾರ್ಯ'ನೆಂದೂ ಡಾ. ಉಪಾಧ್ಯೆ ಅವರೇ ಸ್ಥಾಪಿಸಿರುವುದರಿಂದ[13] ಈ ವಿಷಯವಾಗಿ ಹೆಚ್ಚು ಹೇಳಬೇಕಾಗಿಲ್ಲ. ಇಲ್ಲಿ ಡಾ. ಉಪಾಧ್ಯೆ ಅವರ ಅಭಿಪ್ರಾಯವನ್ನು ಮಾತ್ರ ನೋಡಬೇಕಾಗಿದೆ. ಯಾವನೋ ಕನ್ನಡ ಕವಿ ತನ್ನ ಗ್ರಂಥದ ಪರಿಸಮಾಪ್ತಿಯಲ್ಲಿ ತನ್ನ ಕರ್ತೃತ್ವ ಸೂಚಕವಾಗಿ ತನ್ನ ಹೆಸರನ್ನು ಹೇಳಿಕೊಳ್ಳದೆ ತನಗಿಂತ ಹಲವು ಶತಮಾನಗಳ ಹಿಂದೆ ಆಗಿಹೋದ ಪ್ರಾಕೃತ ಕವಿಯೊಬ್ಬನ ಹೆಸರನ್ನು ಹೇಳಿರುವನೆಂದು ನಂಬುವುದು ಹೇಗೆ ಸಾಧ್ಯ? ಅವನು ತನ್ನ ಕೃತಿಯ ಕರ್ತೃತ್ವವನ್ನು ಇನ್ನೊಬ್ಬ ಕನ್ನಡ ಕವಿಗೆ ಆರೋಪಿಸಿದ್ದರೆ ಅದನ್ನು ಒಂದು ವೇಳೆ ನಂಬ ಬಹುದಾಗಿತ್ತೋ ಏನೋ! ಯಾರೋ ಸಂಸ್ಕೃತದಲ್ಲಿ 'ಶ್ರುತಬೋಧ'ವೆಂಬ ಛಂದೋಗ್ರಂಥವನ್ನು ಬರೆದು ಸಂಸ್ಕೃತ ಕವಿಯೇ ಆಗಿರುವ ಕಾಲಿದಾಸನಿಗೆ ಆರೋಪಿಸುವುದು ನಂಬಿಕೆಗೆ ಅಯೋಗ್ಯವೆಂದು ಯಾರೂ ಖಂಡಿತವಾಗಿ ಹೇಳಲಾಗುವುದಿಲ್ಲ. ಹೀಗಿಲ್ಲದೆ ಕನ್ನಡ ಗ್ರಂಥವೊಂದರ ಕರ್ತೃತ್ವವನ್ನು ಅದೇ ಕಾಲಿದಾಸನಿಗೆ ಆರೋಪಿಸಿದರೆ ಅದು ಅಪನಂಬಿಕೆಗೆ ಕಾರಣವಾಗುವುದಲ್ಲದೆ ಪರಿಹಾಸಕ್ಕೂ ಎಡೆಕೊಡುತ್ತದೆ. ಆದ್ದರಿಂದ ತಮ್ಮ ಅಭಿಪ್ರಾಯವನ್ನು ಡಾ. ಉಪಾಧ್ಯೆಯವರು ಸ್ಥಾಪಿಸಲು ಬಲವಾದ ಇತರ ಆಧಾರಗಳನ್ನು ಕಾಣಿಸಬೇಕಾದ ಆವಶ್ಯಕತೆಯಿದೆ. ಕನ್ನಡ ಗ್ರಂಥದ ಶಿವಕೋಟಿ ಆ ಪ್ರಾಕೃತ ಗ್ರಂಥದ ಶಿವಕೋಟಿಯೇ ಏಕಾಗಬೇಕು? ಒಂದೇ ಹೆಸರಿನ ಹಲವು ವ್ಯಕ್ತಿಗಳು ಇರಬಾರದೇಕೆ? ಸುದೀರ್ಘವೂ, ಸುವಿಸ್ತಾರವೂ ಆಗಿರುವ ಜೈನಸಾಹಿತ್ಯದ ಚರಿತ್ರೆಯಲ್ಲಿ ಶಿವಕೋಟಿ ನಾಮಕರಣದ ಹಲವು ವ್ಯಕ್ತಿಗಳು ಇದ್ದಿರಬಹುದು. ಈ ದೃಷ್ಟಿಯಿಂದ ಪ್ರಕೃತ ವಿಷಯವನ್ನು ಪರಿಶೀಲಿಸುವುದು ಮೇಲು. ಇದುವರೆಗೆ ತಿಳಿಯಬಂದಿರುವ ಶಿವಕೋಟಿನಾಮಕ ಗ್ರಂಥಕರ್ತರನ್ನು ಕೆಳಗೆ ಕಾಣಿಸಿದೆ.

(೧) ಭಗವತೀ ಆರಾಧನಾ ಅಥವಾ ಮೂಲಾರಾಧನಾ ಎಂಬ ಆರಾಧನಾ ಗ್ರಂಥವನ್ನು ಜೈನ ಶೌರಸೇನೀ ಪ್ರಾಕೃತ ಭಾಷೆಯಲ್ಲಿ ಶಿವಾರ್ಯನೆಂಬಾತನು ರಚಿಸಿದ್ದಾನೆ. ಈ ಗ್ರಂಥಕ್ಕೆ 'ಮೂಲಾ ರಾಧನ ದರ್ಪಣ'ವೆಂಬ ಟೀಕೆಯನ್ನು ಬರೆದ ಆಶಾಧರನು 'ಸಿವಜ್ಜೇಣ ಶಿವಕೋಟ್ಯಾಚಾರ್ಯೇಣ' ಎಂದು ಹೇಳಿರುವುದರಿಂದಲೂ, 'ಭಗವಾನ್ ಶಿವಕೋಟ್ಯಾಚಾರ್ಯವರ್ಯಃ' ಎಂಬ ಆತನ ಮಾತಿ ನಿಂದಲೂ ಶಿವಾರ್ಯ, ಶಿವಕೋಟಿ—ಇವೆರಡೂ ಒಬ್ಬನೇ ವ್ಯಕ್ತಿಯ ಹೆಸರುಗಳೆಂದು ಹೇಳ ಬಹುದು. ಇವನು ಆರ್ಯಜಿನನಂದಿಗಣಿ, ಸರ್ವಗುಪ್ತಗಣಿ, ಆರ್ಯಮಿತ್ರನಂದಿ—ಇವರ ಪಾದಮೂಲ ದಲ್ಲಿ ಮೂಲಸೂತ್ರಾರ್ಥಗಳನ್ನು ಓದಿ ಕಲಿತನು. ತನ್ನನ್ನು 'ಪಾಣಿದಲಭೋಇ' ಎಂದರೆ ಹಸ್ತತಲ ಭೋಜನ ವ್ರತವನ್ನುಳ್ಳವನು ಎಂದು ಕರೆದುಕೊಂಡಿರುವನು. ಪೂರ್ವಾಚಾರ್ಯರ ರಚನೆ ಗಳನ್ನು ಅವಲಂಬಿಸಿ ಇವನು ತನ್ನ ಗ್ರಂಥವನ್ನು ರಚಿಸಿದನು. ಇವನ ವಿಷಯವಾಗಿ ಬೇರೆ ಯಾವ ಸಂಗತಿಗಳೂ ಇವನ ಗ್ರಂಥದಲ್ಲಿ ದೊರೆಯುತ್ತಿಲ್ಲ. ಭಗವಜ್ಜಿನಸೇನಾಚಾರ್ಯರು ತಮ್ಮ 'ಆದಿಪುರಾಣ'ದ

ಶೀತೀಭೂತಂ ಜಗದ್ಯಸ್ಯ ವಾಚಾಽಽರಾಧ್ಯ ಚತುಷ್ಟಯಂ
ಮೋಕ್ಷಮಾರ್ಗಂ ಸಪಾಯನ್ನಃ ಶಿವಕೋಟಿ ಮುನೀಶ್ವರಃ ॥ 1–49

13 *Brhatkathakosa*, p: 69.

ಎಂಬ ಶ್ಲೋಕದಲ್ಲಿ ಈತನನ್ನು ಸ್ತುತಿಸಿದ್ದಾರೆ. ಕ್ರಿ.ಶ. ೧೧ನೆಯ ಶತಮಾನದ ಅಂತ್ಯಾರ್ಧದಲ್ಲಿದ್ದ ಶ್ರೀಚಂದ್ರನು ತನ್ನ ಅಪಭ್ರಂಶ 'ಕಥಾಕೋಶ'ದ

> ಸಿವಕೋಡಿ ಮುಣಿಂದಂ ಜೇಮ ಜವಿ
> ಕಹಕೋಸು ಕಹಿಉ ಪಂಚಮ ಸಮವಿ ॥

ಎಂಬ ಪಂಕ್ತಿಗಳಲ್ಲಿ ಶಿವಕೋಟಿಯನ್ನು ಸ್ಮರಿಸಿ ಅವನಿಂದ ಕಥಾಕೋಶವು ಕಥಿತವಾಯಿತೆಂದು ಹೇಳಿದ್ದಾನೆ.[14] ಶಿವಕೋಟಿಯ ಕಾಲದೇಶಗಳ ಬಗ್ಗೆ ಯಾವ ಸಂಗತಿಗಳೂ ತಿಳಿದುಬಂದಿಲ್ಲ. ಕ್ರಿ.ಶ. ಒಂದನೆಯ ಶತಮಾನದಲ್ಲಿ ಈತನಿದ್ದಿರಬೇಕೆಂದು ವಿದ್ವಾಂಸರ ಊಹೆ.[15] ಇವನು ಭರತ ಖಂಡದ ಉತ್ತರಭಾಗಕ್ಕೆ ಬಹುಶಃ ಮಥುರಾನಗರದ ಪ್ರಾಂತಕ್ಕೆ ಸೇರಿದವನಿದ್ದಿರಬಹುದು.[16] ಇವನ ಗ್ರಂಥ ಸಂಸ್ಕೃತ ಪ್ರಾಕೃತಗಳಲ್ಲಿರುವ ಎಲ್ಲ ಜೈನ ಕಥಾಕೋಶಗಳಿಗೂ ಮೂಲಾಧಾರವೆಂದು ಹೇಳುತ್ತಾರೆ.[17] ಇದರ ಮೇಲೆ ಅನೇಕ ವ್ಯಾಖ್ಯಾನಗಳೂ ವಿವರಣೆಗಳೂ ರಚಿತವಾಗಿವೆ. ಇದುವರೆಗೆ ಲಭ್ಯವಾಗಿರುವ ಟೀಕೆಗಳಲ್ಲಿ ಅಪರಾಜಿತ ಸೂರಿಯ (ಕ್ರಿ.ಶ. ಸು. ೭೦೦) 'ವಿಜಯೋದಯಾ' ಎಂಬ ಸಂಸ್ಕೃತ ಟೀಕೆ ಅತ್ಯಂತ ಪ್ರಾಚೀನ. ಇದಕ್ಕೂ ಹಿಂದೆ ಹಲವು ವ್ಯಾಖ್ಯಾನಗಳಿದ್ದುವೆಂದು ಈ ಟೀಕೆಯಲ್ಲಿಯೇ ಹೇಳಿದೆ.

(೨) ಸ್ವಾಮಿ ಸಮಂತಭದ್ರಾಚಾರ್ಯರ ಶಿಷ್ಯನಾಗಿದ್ದ ಶಿವಕೋಟಿ ಮಹಾರಾಜನ ವಿಷಯವಾಗಿ ಕೆಲವು ಕಥೆಗಳು ಪ್ರಚಾರದಲ್ಲಿವೆ. (೧) ದೇವಚಂದ್ರನ (ಕ್ರಿ.ಶ. ೧೮೩೮) ಕನ್ನಡ ರಾಜಾವಳೀ ಕಥೆಯ ಪ್ರಕಾರ: ಶಿವಕೋಟಿ ಮಹಾರಾಜನು ತನ್ನ ತಮ್ಮ ಶಿವಾಯನ ಸಮೇತವಾಗಿ ಕಾಂಚೀ ಪುರಿಯಲ್ಲಿ ಆಳುತ್ತಿದ್ದನು. ಇವನು ಶಿವಭಕ್ತನಾಗಿದ್ದು ಭೀಮಲಿಂಗವನ್ನು ಪೂಜಿಸುತ್ತಿದ್ದನು. ಆ ದೇವರಿಗೆ ಪ್ರತಿದಿನವೂ ಹನ್ನೆರಡು ಖಂಡುಗದಕ್ಕಿಯೋಗರದ ನೈವೇದ್ಯವಾಗುತ್ತಿತ್ತು. ಹೀಗಿರಲು ಮಣುವಕ ಹಳ್ಳಿಯಲ್ಲಿ ತಪಸ್ಸು ಮಾಡುತ್ತಿದ್ದ ಸಮಂತಭದ್ರಾಚಾರ್ಯರೆಂಬ ಯತಿಪತಿಗಳು ಭಸ್ಮಕ ರೋಗದಿಂದ ಪೀಡಿತರಾಗಿ ಗುರುಗಳನುಮತದಂತೆ ಅದರ ಉಪಶಮನಾರ್ಥವಾಗಿ ಕಾಂಚೀಪುರಕ್ಕೆ ಬಂದು ಶಿವಕೋಟಿಯನ್ನು ಕಂಡು ಭೀಮಲಿಂಗದ ನೈವೇದ್ಯವನ್ನೆಲ್ಲ ತಾವೊಬ್ಬರೆ ತಿಂದು ಆ ಲಿಂಗದ ಎಡೆಯಲ್ಲಿ ಚಂದ್ರಪ್ರಭಜಿನಮೂರ್ತಿ ಆವಿರ್ಭಾವವಾಗುವಂತೆ ಮಾಡಿದರು. ಇದನ್ನು ಕಂಡ ಶಿವ ಕೋಟಿ ತನ್ನ ತಮ್ಮನೊಡನೆ ಜೈನದೀಕ್ಷೆಯನ್ನು ಸ್ವೀಕರಿಸಿದನು. ಇವನು ರತ್ನಮಾಲಾದಿ ಅನೇಕ ಶಾಸ್ತ್ರಪ್ರವರ್ತಕನಾದನು. (೨) ಪ್ರಭಾಚಂದ್ರನ ಆರಾಧನಾ ಕಥಾಕೋಶ (೧೧ನೆಯ ಶತಮಾನ) ಮತ್ತು ಬ್ರಹ್ಮನೇಮಿದತ್ತನ ಕಥಾಕೋಶದ (೧೬ನೆಯ ಶತಮಾನ) ಪ್ರಕಾರ: ಶಿವಕೋಟಿ ಕಾಶೀ ನಗರಕ್ಕೆ ರಾಜನಾಗಿದ್ದನು. ಕಾಂಚೀನಗರ ನಿವಾಸಿಯಾಗಿದ್ದ ಸಮಂತಭದ್ರನು ಉದರವ್ಯಾಧಿ ಪೀಡಿತನಾಗಿ ಕಾಂಚಿಯಿಂದ ಹೊರಟು ಪೌಂಡ್ರಪುರ ದಶಪುರಗಳಿಗೆ ಬಂದು ಅಲ್ಲಿಂದ ಕಾಶಿಗೆ ಹೋದನು. ಇಲ್ಲಿನ ಶಿವಲಿಂಗದೆಡೆಯಲ್ಲಿ ಪಾರ್ಶ್ವನಾಥಜಿನಬಿಂಬವನ್ನು ಮೂಡಿಸುವ ಪವಾಡವನ್ನು ಅವನು ಮಾಡಿದನು. ಶಿವಕೋಟಿಗೆ ಜೈನದೀಕ್ಷೆಯನ್ನು ಕೊಟ್ಟನು. (೩) ಶ್ರವಣಬೆಳಗೊಳ ೧೦೫ನೆಯ ಶಾಸನದಲ್ಲಿ (ಕ್ರಿ.ಶ. ೧೩೯೮) ಸಮಂತಭದ್ರನ ವಿಷಯವಾಗಿ ಹೇಳುತ್ತ ಅವನ ಶಿಷ್ಯ ಶಿವಕೋಟಿಸೂರಿ ತಪಸ್ವಿಯಾಗಿದ್ದು ತತ್ತ್ವಾರ್ಥಸೂತ್ರವನ್ನು ಅಲಂಕರಿಸಿದನೆಂದು ಹೇಳಿದೆ.[18] (೪)

---

[14] *Brhatkathakosa*, Intro., p. 59. ಇಲ್ಲಿ ಶಿವಕೋಟಿಯು ಗ್ರಂಥದ ಹೆಸರನ್ನು ಭಗವತೀ ಆರಾಧನಾ ಎಂದು ಹೇಳದೆ ಕಹಕೋಸು (ಕಥಾಕೋಶ) ಎಂದು ಹೇಳಿರುವುದು ಗಮನಾರ್ಹ.

[15] Jyoti Prasad Jain, *The Jaina Sources of the History of Ancient India*. p. 131.

[16] ಅದೇ, 130.

[17] ಅದೇ, 128.

[18] ತಸ್ಯೈವ ಶಿಷ್ಯಃ ಶಿವಕೋಟಿಸೂರಿಸ್ತಪೋಲತಾಲಂಬನ ದೇಹಯಷ್ಟಿಃ । ಸಂಸಾರವಾರಾಕರ ಪೋತಮೇತತ್ತತ್ತ್ವಾರ್ಥಸೂತ್ರಂ ತದಲಂಚಕಾರ ॥

ಶಿವಮೊಗ್ಗ ಜಿಲ್ಲೆಯ ನಗರದ ೩೫ನೆಯ ಶಾಸನದಲ್ಲಿ (ಕ್ರಿ.ಶ. ೧೦೭೭) "ಕಲಿಕಾಲಗಣಧರರುಂ ಶಾಸ್ತ್ರಕರ್ತೃಗಳುಮೆನಿಸಿರ್ದ ಸಮಂತಭದ್ರಸ್ವಾಮಿಗಳವರ ಶಿಷ್ಯ ಸನ್ತಾನಂ ಶಿವಕೋಟ್ಯಾಚಾರ್ಯರವರಿಂ ವರದತ್ತಾಚಾರ್ಯರ್" ಎಂದು ಹೇಳಿದೆ. (೫) ಹಸ್ತಿಮಲ್ಲನ (ಕ್ರಿ.ಶ. ೧೨೯೦) 'ವಿಕ್ರಾಂತ ಕೌರವ'ವೆಂಬ ನಾಟಕದ ಅಂತ್ಯದಲ್ಲಿರುವ ಪ್ರಶಸ್ತಿಯಲ್ಲಿ ಸಮಂತಭದ್ರ, ಶಿವಕೋಟಿ, ಶಿವಾಯನ, ವೀರಸೇನ, ಜಿನಸೇನ, ಗುಣಭದ್ರ—ಇವರ ಹೆಸರುಗಳನ್ನು ಹೇಳಿದೆ. ಸಮಂತಭದ್ರನ ಶಿಷ್ಯರ ವಿಷಯವಾಗಿ ಈ ಕೆಳಗಿನ ಪದ್ಯವಿದೆ:

ಶಿಷ್ಯಾಸ್ತದೀಯೌ ಶಿವಕೋಟಿ ನಾಮಾ
ಶಿವಾಯನಃ ಶಾಸ್ತ್ರವಿದಾಂ ವರೇಣ್ಯೌ ।
ಕೃತ್ಸ್ನಂ ಶ್ರುತಂ ಶ್ರೀಗುಣಪಾದಮೂಲೇ
ಹ್ಯಧೀತವಂತೌ ಭವತಃ ಕೃತಾರ್ಥೌ ॥

(೬) ಕನ್ನಡ ಕವಿ ಗುಣವರ್ಮನ (ಕ್ರಿ.ಶ. ಸು. ೧೨೩೫) 'ಪುಷ್ಪದಂತಪುರಾಣ'ದಲ್ಲಿ ಸಮಂತಭದ್ರ ಸ್ತುತಿರೂಪವಾದ ಈ ಕೆಳಗಿನ ಪದ್ಯವಿದೆ:

ಬಿತ್ತರವಾಗಿ ಸೂತಗತಿಯಿಂ ಮಿಗೆ ಪೇೞ್ದ ಗಂಧಹಸ್ತಿ ತೊಂ
ಬತ್ತೞು ಸಾಸಿರಕ್ಕೆ ಶಿವಕೋಟಿಯ ಕೋಟಿ ವಿಪಕ್ಷವಿದ್ವದು
ನ್ಮತ್ತ ಮತಂಗಜಂ ಮದಂ ಬಱಿತು ಕೈಯಡೆಗೊಟ್ಟುದೆನಲ್ಕೆ ಪೇೞ್ವುದೇಂ
ಮತ್ತೆ ಸಮಂತಭದ್ರಮುನಿರಾಜನುದಾತ್ತ ಜಯಪ್ರಶಸ್ತಿಯಂ ॥ ೧–೨೨

ಸಮಂತಭದ್ರನು ಉಮಾಸ್ವಾತಿಕೃತ ತತ್ತ್ವಾರ್ಥಸೂತ್ರಕ್ಕೆ ವ್ಯಾಖ್ಯಾನರೂಪವಾಗಿ ೯೬೦೦೦ ಗ್ರಂಥ ಪರಿಮಿತಿಯುಳ್ಳ ಗಂಧಹಸ್ತಿ ಮಹಾಭಾಷ್ಯವನ್ನು ಬರೆದನೆಂದೂ, ಅದನ್ನು ನೋಡಿದ ವಿಪಕ್ಷ ವಿದ್ವಜ್ಜನರು, ಶಿವಕೋಟಿಯ ಕಡೆಯವರು, ಗರ್ವವನ್ನು ಉಡುಗಿಸಿಕೊಂಡರೆಂದೂ ಇದರಿಂದ ಹೇಳಬಹುದಾಗಿದೆ. ಅನಂತರ ಶಿವಕೋಟಿಗೆ ಸಮಂತಭದ್ರ ಶಿಷ್ಯತ್ವವು ಸಂಪ್ರಾಪ್ತವಾಗಿರಬಹುದು. (೭) ಇಂದ್ರನಂದಿಯ 'ನೀತಿಸಾರ'ದ ೭೯ನೆಯ ಪದ್ಯದಲ್ಲಿ ಸಮಂತಭದ್ರ, ಶ್ರೀಕುಂಭ, ಶಿವಕೋಟಿ, ಶಿವಾಯನ, ವಿಷ್ಣುಸೇನ, ಗುಣಭದ್ರ—ಇವರ ಹೆಸರುಗಳನ್ನು ಹೇಳಿದೆ. ಸಮಂತಭದ್ರನಿಗೂ ಶಿವಕೋಟಿಗೂ ಗುರುಶಿಷ್ಯಸಂಬಂಧವಿದ್ದಂತೆ ಇದರಿಂದ ತಿಳಿದುಬರುವುದಿಲ್ಲ.

ಮೇಲೆ ಕೊಟ್ಟಿರುವ ೭ ಉಲ್ಲೇಖಗಳಿಂದ ಶಿವಕೋಟಿಯ ವಿಷಯವಾಗಿ ತಿಳಿದುಬರುವ ಸಂಗತಿಗಳು—ಇವನು ಕಾಶಿಯಲ್ಲಿಯೋ ಕಂಚಿಯಲ್ಲಿಯೋ ರಾಜನಾಗಿದ್ದ; ಇವನಿಗೆ ಸಮಂತಭದ್ರಾಚಾರ್ಯನ ಪರಿಚಯವಾಯಿತು; ಆ ಆಚಾರ್ಯನಿಗೆ ಇವನು ಶಿಷ್ಯನಾಗಿದ್ದನು ಅಥವಾ ಅವನ ಶಿಷ್ಯಸಂತಾನದಲ್ಲಿ ಒಬ್ಬನಾಗಿದ್ದನು; ರತ್ನಮಾಲಾದಿ ಶಾಸ್ತ್ರಗ್ರಂಥಗಳನ್ನು ಬರೆದನು. ಮತ್ತು ತತ್ತ್ವಾರ್ಥಸೂತ್ರಕ್ಕೆ ಸಂಬಂಧಿಸಿದಂತೆ ಯಾವುದೋ ಒಂದು ಗ್ರಂಥವನ್ನು ರಚಿಸಿರಬಹುದು.

ಈ ಶಿವಕೋಟಿಯ ಕಾಲವೂ ತಿಳಿಯದು. ಇವನು ಎಲ್ಲಿ ರಾಜನಾಗಿದ್ದನೋ, ಯಾವ ರಾಜವಂಶಕ್ಕೆ ಸೇರಿದ್ದನೋ ಹೇಳಲಾಗುವುದಿಲ್ಲ. ಇವನ ಗುರುವಾಗಿದ್ದ ಸಮಂತಭದ್ರಾಚಾರ್ಯರ ಕಾಲವೂ ಅನಿರ್ದಿಷ್ಟವಾಗಿಯೇ ಇದೆ. ಕ್ರಿ.ಶ. ೨ನೆಯ ಶತಮಾನದಲ್ಲಿ ಸಮಂತಭದ್ರರಿದ್ದಿರಬಹುದೆಂದು, ಎಂದರೆ ಸು. ಕ್ರಿ.ಶ. ೧೨೦–೧೮೫ರ ವರೆಗೆ ಅವನ ಕಾಲವೆಂದು, ಕೆಲ ವಿದ್ವಾಂಸರು ಹೇಳುತ್ತಾರೆ.[10] ಮೇಲೆ ಹೇಳಿರುವ ಇಬ್ಬರು ಶಿವಕೋಟಿಗಳು ಅಭಿನ್ನರೆಂದು ಕೆಲವರು ಹೇಳಬಹುದು.[20] ಒಂದನೆಯ ಶಿವಕೋಟಿ ತನ್ನ ಗುರುಗಳ ಹೆಸರುಗಳನ್ನು ಹೇಳುವಾಗ ಸಮಂತಭದ್ರನ

19 *The Jaina Sources of the History of Ancient India*, p. 148.

20 The tendency is to identify the author of *Mularadhana* with this convert of Samanta Bhadra. "*Catalogue of Sanskrit and Prakrit Manuscripts in C. P. and Berar*, p. XIX.

ಹೆಸರನ್ನು ಹೇಳಿಲ್ಲವಾದ್ದರಿಂದ ಈ ಊಹೆಗೆ ಆವಸ ಗ್ರಂಥದಲ್ಲಿ ಆಧಾರವಿಲ್ಲ. ಆದರೆ ಪ್ರಭಾಚಂದ್ರನ ಕಥಾಕೋಶವು ಸಮಂತಭದ್ರನಿಂದ ಜೈನದೀಕ್ಷೆ ವಹಿಸಿದ ಶಿವಕೋಟಿ ಸಕಲಶಾಸ್ತ್ರಗಳನ್ನು ಕಲಿತು ೮೪೦೦೦ ಪದ್ಯಗಳಿದ್ದ ಆರಾಧನಾ ಎಂಬ ಗ್ರಂಥವನ್ನು, ಲೋಹಾಚಾರ್ಯಕೃತವಾದುದನ್ನು, ೨೫೦೦ ಪದ್ಯಗಳಲ್ಲಿ ಸಂಗ್ರಹಿಸಿ ಮೂಲಾರಾಧನಾ ಎಂಬ ಗ್ರಂಥವನ್ನು ಮಾಡಿದನೆಂದು[21] ಹೇಳುತ್ತದೆ. ಈ ಕಥೆಗೆ ಬೇರೆ ಎಲ್ಲಿಯೂ ಸಮರ್ಥನೆ ದೊರೆತಿಲ್ಲ. ಆದ್ದರಿಂದ ಇದಕ್ಕೆ ಹೆಚ್ಚು ಗಮನವನ್ನು ಕೊಡ ಬೇಕಾಗಿಲ್ಲ.

(೩) 'ರತ್ನಮಾಲಾ' ಎಂಬೊಂದು ಚಿಕ್ಕ ಸಂಸ್ಕೃತ ಗ್ರಂಥ. ೬೭ (೬೬) ಶ್ಲೋಕಗಳನ್ನುಳ್ಳದ್ದು. ಒಬ್ಬ ಶಿವಕೋಟಿಯಿಂದ ರಚಿತವಾಗಿರುವಂತೆ ತಿಳಿದುಬರುತ್ತದೆ. ಈ ಗ್ರಂಥದ ಅಂತ್ಯದಲ್ಲಿರುವ "ಇತಿ ಶ್ರೀ ಸಮಂತಭದ್ರಸ್ವಾಮಿ ಶಿಷ್ಯ ಶಿವಕೋಟ್ಯಾಚಾರ್ಯ ವಿರಚಿತಾ ರತ್ನಮಾಲಾ ಸಮಾಪ್ತಾ" ಎಂಬ ಪ್ರಶಸ್ತಿವಾಕ್ಯದಲ್ಲಿ ಇದನ್ನು ಬರೆದ ಶಿವಕೋಟಿ ಸಮಂತಭದ್ರನ ಶಿಷ್ಯನೆಂದು ಹೇಳಿದೆ. ಗ್ರಂಥದ ಅಂತ್ಯಶ್ಲೋಕ—

ಯೋ ನಿತ್ಯಂ ಪಠತಿ ಶ್ರೀಮಾನ್ ರತ್ನಮಾಲಾಮಿಮಾಂ ಪರಂ ।
ಸಶುದ್ಧಭಾವತೋಽನೂನಂ ಶಿವಕೋಟಿತ್ವಮಾಪ್ನುಯಾತ್ ॥

ಇದರಲ್ಲಿ 'ಶುದ್ಧಭಾವತೋ' ಎಂಬುದಕ್ಕೆ 'ಶುದ್ಧಚರಣೋ' ಎಂಬ ಪಾಠಾಂತರವಿದೆ.[22] 'ಶಿವಕೋಟಿತ್ವಂ' ಎಂಬಲ್ಲಿ ಶ್ಲೇಷೆಯಿಂದ ಗ್ರಂಥಕರ್ತನ ನಾಮಸೂಚನೆ ಇದೆಯೆಂದು ಹೇಳಬಹುದು. ೨ನೆಯ ಶ್ಲೋಕದಲ್ಲಿ ಸಿದ್ಧಸೇನ ಗುರುವಿನ ಸ್ಮರಣೆಯನ್ನು ಮಾಡಿದೆ. ೪ನೆಯದರಲ್ಲಿ 'ಸ್ವಾಮೀ ಸಮಂತಭದ್ರೋ ಮೇ ಮನಸೇ ಮಾನಸೇನ ಘಃ । ತಿಷ್ಠತಾತ್' ಎಂದು ಪ್ರಾರ್ಥನೆಯಿದೆ. ಇಲ್ಲಿಂದ ಮುಂದಕ್ಕೆ ಜೈನ ಶ್ರಾವಕರ ಆಚಾರವ್ಯವಹಾರಗಳು ಹೇಗಿರಬೇಕೆಂದು ವಿಷಯದ ಪ್ರತಿಪಾದನೆ ಕಾಣುತ್ತದೆ.

ಈ ಗ್ರಂಥವನ್ನು ಬರೆದ ಶಿವಕೋಟಿ ಭಗವತೀ ಆರಾಧನಾ ಕರ್ತೃವಾದ ಶಿವಕೋಟಿಯಲ್ಲ: ಯಾರೋ ಇದನ್ನು ಬರೆದು ಶಿವಕೋಟಿಯ ಹೆಸರಿನಲ್ಲಿ ಪ್ರಚಾರ ಮಾಡಿರಬೇಕು. ಇಲ್ಲವಾದರೆ ಈ ಶಿವಕೋಟಿಯೇ ಇನ್ನೊಬ್ಬನಿರಬಹುದು. ರತ್ನಮಾಲಾ ಗ್ರಂಥದ ರಚನೆ ತುಂಬಾ ಸಾಧಾರಣ. ಇದರಲ್ಲಿ ಯಾವ ಪ್ರೌಢಿಮೆಯೂ ಇಲ್ಲ; ಈ ಗ್ರಂಥದ ಉಲ್ಲೇಖವನ್ನು ಯಾರೂ ಮಾಡಿಲ್ಲ. ಇದರ ಯಾವ ಪದ್ಯವನ್ನೂ ಪ್ರಮಾಣವೆಂದು ಯಾರೂ ಉದಾಹರಿಸಿಲ್ಲ—ಎಂಬ ಪಂಡಿತ ನಾಥೂರಾಮ ಪ್ರೇಮಿ ಅವರು ಹೇಳುತ್ತಾರೆ. ಮುಂದುವರಿಯುತ್ತ ಈ ಗ್ರಂಥದಲ್ಲಿ ಕಾಣುವ ೨೨ನೆಯ ಪದ್ಯ ಹೀಗಿದೆ:

ಕಲೌಕಾಲೇ ವನೇ ವಾಸೋ ವರ್ಜ್ಯತೇ ಮುನಿಸತ್ತಮೈಃ ।
ಸ್ಥೀಯತೇ ಚ ಜಿನಾಗಾರೇ ಗ್ರಾಮಾದಿಸು ವಿಶೇಷತಃ ॥

ಕಲಿಕಾಲದಲ್ಲಿ ಜೈನಯತಿಗಳು ವನದಲ್ಲಿ ವಾಸಮಾಡುವುದನ್ನು ಬಿಡಬೇಕು; ಜಿನಾಲಯಗಳಲ್ಲಾಗಲಿ, ಗ್ರಾಮಗಳಲ್ಲಾಗಲಿ, ಅವರು ಬರಬೇಕು—ಎಂದು ಇದರ ಅಭಿಪ್ರಾಯ. ಇದು 'ಮೂಲಾರಾಧನೆ'ಯ ಅಭಿಪ್ರಾಯಕ್ಕೆ ವಿರುದ್ಧವಾಗಿದೆ. ಆದ್ದರಿಂದ ಈ ಗ್ರಂಥವನ್ನು ಬರೆದವನು ಆ ಗ್ರಂಥದ ಶಿವಕೋಟಿಯಲ್ಲ'—ಎಂಬ ನಿರ್ಣಯಕ್ಕೆ ಅವರು ಬಂದಿದ್ದಾರೆ. ಸ್ವಾಮಿ ಸಮಂತಭದ್ರ ಕೃತ ರತ್ನಕರಂಡಕ ಶ್ರಾವಕಾಚಾರದಲ್ಲಿ ಬರುವ ಅಭಿಪ್ರಾಯಕ್ಕೂ (೫-೧೪೭) ಇದು ವಿರುದ್ಧವಾಗಿರುವುದರಿಂದ ರತ್ನಮಾಲೆಯನ್ನು ಬರೆದಾತ ಸಮಂತಭದ್ರಶಿಷ್ಯ ಶಿವಕೋಟಿಯಲ್ಲವೆಂದು ಹೇಳಬಹುದು. ರತ್ನಮಾಲೆಯಲ್ಲಿರುವ

---

21 *Brhatkathakosa*, p. 53.

22 ಶ್ರೀ ಸಿ. ಮಹದೇವಪ್ಪ, ಎಂ.ಎ., ಅವರು ನನಗೆ ಕಳಿಸಿದ 'ರತ್ನಮಾಲಾ' ಗ್ರಂಥದ ಒಂದು ಹಸ್ತಪ್ರತಿಯಲ್ಲಿ.

ಸರ್ವಮೇಧ ವಿಧಿರ್ಜೈನಃ ಪ್ರಮಾಣಂ ಲೌಕಿಕಃ ಸತಾಂ।
ಯತ್ರ ನ ವ್ರತಹಾನಿಃ ಸ್ಯಾತ್ಸಂಯುಕ್ತಸ್ಯ ಖಂಡನಂ ॥ ೬೫

ಎಂಬ ಪದ್ಯ ಸ್ವಲ್ಪ ಪಾಠಭೇದಗಳೊಡನೆ ಸೋಮದೇವ ಸೂರಿಯ (ಕ್ರಿ.ಶ. ೯೫೯) 'ಯಶಸ್ತಿಲಕ ಚಂಪು'ವಿನಲ್ಲಿ ದೊರೆಯುವುದರಿಂದ ಆ ಕಾಲಕ್ಕೆ ಸ್ವಲ್ಪ ಹಿಂದೆ ರತ್ನಮಾಲೆ ರಚಿತವಾಗಿರಬಹುದು.[23] ನಾಥೂರಾಮ ಪ್ರೇಮಿ ಅವರ ಈ ಅಭಿಪ್ರಾಯವನ್ನು ಡಾ. ಉಪಾಧ್ಯೆಯವರೂ ಅನುಮೋದಿಸಿದ್ದಾರೆ.[24] ಈ ಕಾರಣಗಳಿಂದ ರತ್ನಮಾಲಾ ಕರ್ತೃವಾದ ಶಿವಕೋಟಿ ಬೇರೊಬ್ಬ ಶಿವಕೋಟಿ ಎಂದು ಹೇಳಬಹುದು. ಇವನ ಗುರುವಾಗಿದ್ದ ಸಮಂತಭದ್ರನು ಕೂಡಾ ಇನ್ನಾರೋ ಸಮಂತಭದ್ರನಾಗಿರಬೇಕು.[25]

ಪೂರ್ವೋಕ್ತರಾದ ಮೂವರು ಶಿವಕೋಟಿಗಳಲ್ಲದೆ ಬರಿ ಕೋಟಾಚಾರ್ಯ ಅಥವಾ ಕೋಟ್ಯಾಚಾರ್ಯ ಎಂಬೊಬ್ಬ ಜೈನ ಟೀಕಾಕಾರನಿದ್ದಂತೆ ತಿಳಿದುಬರುತ್ತದೆ. ಇವನು ವಿಶೇಷಾವಶ್ಯಕಭಾಷ್ಯ ಟೀಕೆಯನ್ನು ಬರೆದಿದ್ದಾನೆ. ಇದರ ಒಂದು ಹಸ್ತಪ್ರತಿ ಕ್ರಿ.ಶ. ೧೦೮೧ರಲ್ಲಿ ಲಿಖಿತವಾಗಿರುವುದು ದೊರೆಯುವುದರಿಂದ[26] ಕೋಟ್ಯಾಚಾರ್ಯನು ಆ ಕಾಲಕ್ಕಿಂತ ಹಿಂದಿದ್ದವನೆಂದು ಹೇಳಬಹುದು. ಮೊದಲ ಇಬ್ಬರು ಶಿವಕೋಟಿಗಳು ಅತಿ ಪ್ರಾಚೀನ ಕಾಲಕ್ಕೆ ಸೇರಿದವರಾಗಿರುವುದರಿಂದ ಅವರು ಪ್ರಕೃತ ಕನ್ನಡ ವಡ್ಡಾರಾಧನೆಯ ಕರ್ತೃಗಳಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ಮೂರನೆಯ ಶಿವಕೋಟಿ ಅದರ ಕರ್ತೃವಾಗಿದ್ದಿರಬಹುದಾದ ಸಂಭವವಿದೆ. ಇಲ್ಲದಿದ್ದರೆ ವಡ್ಡಾರಾಧನೆಯ ರಚಕನಾದವನು ಬೇರೊಬ್ಬ ಶಿವಕೋಟಿಯಾಗಿದ್ದನೆಂದು ಹೇಳಬೇಕಾಗುತ್ತದೆ. ಒಟ್ಟಿನಲ್ಲಿ ಈ ಕನ್ನಡ ಗ್ರಂಥದ ಹೆಸರು ವಡ್ಡಾರಾಧನೆಯೆಂದೂ, ಅದನ್ನು ಹೇಳಿದವನು ಒಬ್ಬ ಶಿವಕೋಟಿಯೆಂದೂ ಸದ್ಯಕ್ಕೆ ನಿರ್ಣಯಿಸಬಹುದು. ಖಚಿತವಾದ ನೂತನಾಧಾರಗಳು ದೊರೆಯುವವರೆಗೆ ಬೇರೆ ಯಾವ ನಿರ್ಣಯಕ್ಕೂ ಅವಕಾಶವಿದೆಯೆಂದು ತೋರುವುದಿಲ್ಲ. ಗ್ರಂಥಸಮಾಪ್ತಿಯಲ್ಲಿರುವ ಗದ್ಯವನ್ನು ಎರಡು ವಾಕ್ಯಗಳಂತೆ ಭಾವಿಸಿ ಮೊದಲನೆಯದು ಕವಿಯ ಹೆಸರನ್ನು ಹೇಳುವುದೆಂದೂ, ಎರಡನೆಯದು ಗ್ರಂಥದ ಹೆಸರನ್ನು ಸೂಚಿಸುವುದೆಂದೂ ಸ್ವಾಭಾವಿಕವಾದ ಅರ್ಥವನ್ನು ಗ್ರಹಿಸಬೇಕಾಗಿದೆ.

## ಕಾಲ

'ವಡ್ಡಾರಾಧನೆ' ಯಾವ ಕಾಲದಲ್ಲಿ ರಚಿತವಾಯಿತೆಂಬ ವಿಷಯವೂ ತುಂಬಾ ತೊಡಕಾದ ಪ್ರಶ್ನೆಯಾಗಿದೆ. ಬಾಹ್ಯಾಭ್ಯಂತರ ಪ್ರಮಾಣಗಳನ್ನು ಅಧಿಕರಿಸಿ ಈ ಸಮಸ್ಯೆಯ ವಿಚಾರ ನಡೆಯಬೇಕಾಗಿದೆ. ಕೆಲವರು ವಿದ್ವಾಂಸರು ಈ ವಿಷಯದಲ್ಲಿ ತುಂಬ ಬೆಳಕನ್ನು ಬೀರಿದ್ದಾರೆ. ಕೆ. ಬಿ. ಪಾಠಕ್ ಅವರು ತೊರೆಗಲ್ಲು ಶಾಸನದ ಕಾಲವಾದ ೧೨೮೮ನ್ನು ಈ ಗ್ರಂಥದ ಕಾಲವಾಗಿ ಭಾವಿಸಿದರು. ಅವರನ್ನು ಅನುಸರಿಸಿ ಆರ್. ನರಸಿಂಹಾಚಾರ್ಯರು ಇದರ ಕಾಲವನ್ನು ಸು. ೧೧೮೦ ಎಂದು ಹೇಳಿದರು. ಈ ಗ್ರಂಥದ ಮೂರು ಕಥೆಗಳನ್ನು ೧೯೩೧ನೆಯ ಇಸವಿಯಲ್ಲಿ ಮೊದಲ ಬಾರಿಗೆ ಪ್ರಕಟಿಸಿದಾಗ ಅದರ ಪೀಠಿಕೆಯಲ್ಲಿ ಈ ಗ್ರಂಥದ ಕಾಲವು ಕ್ರಿ.ಶ. ಸು. ೯೫೦ ಆಗಿರಬಹುದೆಂದು ಸದ್ಯಕ್ಕೆ ಊಹಿಸಬಹುದಾಗಿದೆಯೆಂದು ಕೆಲವು ಆಧಾರಗಳನ್ನು ಅವಲಂಬಿಸಿ ಬರೆಯಲಾಗಿತ್ತು.[27]

೧. ಶ್ರೀಮಾನ್ ಎಂ. ಗೋವಿಂದ ಪೈಗಳು ೧೯೫೦ರಲ್ಲಿ ಪ್ರಕಟವಾದ 'ಮೂರು ಉಪನ್ಯಾಸಗಳು' ಎಂಬ ತಮ್ಮ ಗ್ರಂಥದಲ್ಲಿ 'ವಡ್ಡಾರಾಧನೆ'ಯ ಕಾಲವನ್ನು ಕಂಡುಹಿಡಿಯಲು ಪ್ರಯತ್ನಿಸಿದ್ದಾರೆ.

---

23 ಜೈನ ಸಾಹಿತ್ಯ ಔರ್ ಇತಿಹಾಸ್, ಪು. ೨೮.

24 *Brhatkathakosa*, Introduction, p. 53

25 ಆರು ಜನ ಸಮಂತಭದ್ರರು ಇದ್ದಂತೆ ಇದುವರೆಗೆ ತಿಳಿದುಬಂದಿದೆ; ರತ್ನಕರಂಡ ಶ್ರಾವಕಾಚಾರ (ಬೊಂಬಾಯಿ), ಪೀಠಿಕೆ, ೫೮.

26 *Catalogue of Sanskrit and Prakrit Manuscripts, C. P. and Berar*, p. v.

27 ಇದೇ ಗ್ರಂಥ, ೩೩೧-೩೩೩ ನೋಡಿ.

(೧೧೧–೧೨೨). ಅವರ ನಿರ್ಣಯ: "ನನಗಾದರೊ ಕನ್ನಡ ವೊಡ್ಡಾರಾಧಣವು ಕ್ರಿ.ಶ. ೬ನೆಯ ಶತಮಾನಕ್ಕಿಂತ ಈಚೆಯದಲ್ಲವೆಂದು ತೋರುತ್ತದೆ." ಇವರು ಅಂತರಿಕ ಪ್ರಮಾಣಗಳನ್ನೇ ವಿಶೇಷ ವಾಗಿ ಅವಲಂಬಿಸಿರುವುದು ಕಾಣುತ್ತದೆ: ಬಾಹ್ಯಪ್ರಮಾಣಗಳ ನೆರವು ಇದ್ದ ಹೊರತು ಇವಕ್ಕೆ ಬೆಲೆ ಬರಲಾರದು. ರೋಮೀಯ ದೀನಾರ, ಗ್ರೀಕಿನ ದ್ರಮ್ಮ ಎಂಬ ನಾಣ್ಯಗಳ ಹೆಸರುಗಳು, ಕಟ್ಟಿಪ್ಪ, ಕಳ್ಳದ, ಕಲ್ಪಿ, ಕಲ್ಪಿಸು, ಬಡ್ಡಿಸು, ಬದುಕು (ಬಾಳು ಎಂಬರ್ಥದಲ್ಲಿ), ಕೆಂದು, ಕೇಳ್ಪ, ಲುಂದು, ಪತನಾರ್ಥದ ಕಡು, ತೊಡು, ದಂಶನಾರ್ಥದ ಕೊಳ್, ಇಟ್ಟು, ಪೊಟ್ಟು, ಉಳ್ಳ ಎಂಬರ್ಥದ ಒಡೆಯ, ಕರ್ಮಣಾರ್ಥದ ಮುಚ್ಚಿಪಟ್ಟ—ಈ ಮುಂತಾದ ಅವರೇ ತೋರಿಸಿರುವ ಪ್ರಯೋಗಗಳು ಪ್ರಾಚೀನವಾಗಿದ್ದರೂ ಅಪೂರ್ವವಾಗಿದ್ದರೂ ಇವುಗಳ ಆಧಾರದಿಂದಲೇ ಕಾಲನಿರ್ಣಯ ಸಾಧ್ಯ ವಾಗಲಾರದು. ಇವುಗಳಲ್ಲಿ ಪ್ರತಿಯೊಂದರ ವಿಷಯದಲ್ಲೂ ಇವು ಸಾಹಿತ್ಯದಲ್ಲಿ ಯಾವಾಗ ತಲೆ ದೋರಿದುವು, ಯಾವಾಗ ಇಲ್ಲವಾದುವು ಎಂಬ ಕಾಲಾವಧಿಯನ್ನು ಕಂಡುಹಿಡಿಯಬೇಕಾಗುತ್ತದೆ. ಈ ಅವಧಿಯಲ್ಲಿ ಆ ಗ್ರಂಥ ಯಾವಾಗಲೋ ರಚಿತವಾಗಿರಬಹುದೆಂದು ಹೇಳಲು ಮಾತ್ರ ಸಾಧ್ಯ: ಅಲ್ಲದೆ ಹಳೆಯ ನುಡಿಗಟ್ಟಿನಲ್ಲಿ ಪ್ರವೀಣನಾಗಿದ್ದ ಅರ್ವಾಚೀನ ಕವಿಯೊಬ್ಬ ಇಂಥ ಪ್ರಯೋಗ ಗಳನ್ನು ಮಾಡುವ ಸಂಭವವೂ ಇರುತ್ತದೆ. ಆ ಅವಧಿ ಅನೇಕ ಶತಮಾನಗಳಷ್ಟು ಕಾಲವನ್ನು ಹೊಂದಿರಬಹುದು. ಉದಾಹರಣೆಗೆ ಒನ್, ಒಳ್, ಒರ್ ಮುಂತಾದ ಪ್ರತ್ಯಯಗಳು ಹಲ್ಮಿಡಿ ಶಾಸನದ ಕಾಲದಿಂದ (ಕ್ರಿ.ಶ. ೪೫೦) ಹಿಡಿದು ಕವಿರಾಜಮಾರ್ಗದ (೮೫೦) ಕಾಲದವರೆಗೂ ಇದ್ದದ್ದೂ, ಅವುಗಳ ಜೊತೆಯಲ್ಲಿಯೇ ಅನ್, ಅಳ್, ಅರ್ ಮುಂತಾದ ಪ್ರತ್ಯಯಗಳು ಪ್ರಯೋಗ ದಲ್ಲಿದ್ದದ್ದೂ, ಕ್ರಮೇಣ ಒಕಾರಾದಿ ಪ್ರತ್ಯಯಗಳು ಕಡಮೆಯಾಗುತ್ತ ಬಂದು ಅಕಾರಾದಿ ಪ್ರತ್ಯಯ ಗಳಿಗೆ ಎಡೆಕೊಟ್ಟು ಭಾಷೆಯಿಂದ ನಷ್ಟವಾದದ್ದೂ ಶಾಸನಗಳ ಅವಲೋಕನದಿಂದ ಖಚಿತಪಡು ತ್ತದೆ. ಮೈ ಅವರು ಕಾಣಿಸಿರುವ ಎಲ್ಲ ಅಪೂರ್ವ ಪ್ರಯೋಗಗಳೂ ಈಚಿನ ಕಾಲದ ಹಳಗನ್ನಡ ಗ್ರಂಥಗಳಲ್ಲೂ, ಶಾಸನಗಳಲ್ಲೂ ಕ್ವಚಿತ್ತಾಗಿಯಾದರೂ ದೊರೆಯುತ್ತವೆಂದು ತೋರಿಸುವುದು ಸಾಧ್ಯ. ಆದ್ದರಿಂದ ಅವರು ಹೇಳಿರುವ ಈ ಅಂತರಿಕ ಪ್ರಮಾಣಗಳಿಂದ ವಡ್ಡಾರಾಧನೆಯ ರಚನೆಯ ಕಾಲವನ್ನು ನಿರ್ಣಯಿಸುವುದಾಗಲಾರದು. "ವೊಡ್ಡಾರಾಧಣವು ಕ್ರಿ.ಶ. ೬ನೆಯ ಶತಮಾನಕ್ಕಿಂತ ಈಚೆಯದಲ್ಲವೆಂದು ತೋರುತ್ತದೆ"—ಎಂಬ ಅವರ ಮಾತು ಬರಿ ಅಭಿಪ್ರಾಯವಾಗಿಯೇ ಉಳಿದುಕೊಳ್ಳುತ್ತದೆ.

೨. ಶಿವಕೋಟಿಯ ವೊಡ್ಡಾರಾಧನೆಯು ಪ್ರಾಯಶಃ ಏಳನೆಯ ಶತಮಾನಕ್ಕೆ ಸೇರಿದ ರಚನೆ ಯೆಂದು ಡಾ. ಎಸ್. ಶ್ರೀಕಂಠಶಾಸ್ತ್ರಿ ಅವರು ಹೇಳಿದ್ದಾರೆ.[28] ಇದಕ್ಕೆ ಅವರು ಯಾವ ಆಧಾರ ವನ್ನೂ ತೋರಿಸಿಲ್ಲ.

೩. ವಡ್ಡಾರಾಧನೆಯ ರಚನಾಕಾಲವನ್ನು ಕಂಡುಹಿಡಿಯುವುದರಲ್ಲಿ ಡಾ. ಆ. ನೇ. ಉಪಾಧ್ಯೆ ಅವರು ಮಾಡಿರುವ ಸಂಶೋಧನೆಗಳು ಬಹು ಸಾರವತ್ತಾಗಿವೆ. ಅವರು ಮೊದಲು ಬಾಹ್ಯಪ್ರಮಾಣ ಗಳನ್ನು ನಿರೂಪಿಸಿ, ಆಮೇಲೆ ಅಂತರಿಕ ಪ್ರಮಾಣಗಳ ನೆರವನ್ನು ಪಡೆದು ತಮ್ಮ ತೀರ್ಮಾನವನ್ನು ಮಾಡಿದ್ದಾರೆ. ವಡ್ಡಾರಾಧನೆಯಲ್ಲಿ ಅನೇಕ ಪ್ರಾಕೃತ, ಸಂಸ್ಕೃತ, ಕನ್ನಡ ಪದಗಳು ಅನುವಾದಿತ ವಾಗಿರುವುದು ವಿದಿತವಾಗಿರುವ ಅಂಶವಷ್ಟೆ. ಕೆಲವು ಪ್ರಾಕೃತ, ಸಂಸ್ಕೃತ ಪದ್ಯಗಳಿಗೆ ಡಾ. ಉಪಾಧ್ಯೆಯವರು ಆಕರಗಳನ್ನು ಕಂಡುಹಿಡಿದಿದ್ದಾರೆ. ಕನ್ನಡದ ಪದ್ಯಗಳು ಅನುವಾದಿತವೋ, ಆ ಗ್ರಂಥದ ಕವಿಕೃತವೋ ಎಂಬುದನ್ನು ನಿರ್ಣಯಿಸುವುದಾಗದಿರುವುದರಿಂದ ಅವುಗಳ ವಿಷಯವನ್ನು ಪ್ರಕೃತ ನೋಡಬೇಕಾಗಿಲ್ಲ. ಕೆಲವು ಪ್ರಾಕೃತ, ಸಂಸ್ಕೃತ ಪದ್ಯಗಳ ಆಕರಗಳು ಹೀಗಿವೆ:

೧. ಹತ್ತೊಂಬತ್ತು ಕಥೆಗಳ ಆದಿಯಲ್ಲಿ ಕಾಣುವ ಗಾಹೆಗಳು, (ಘ.ಜ) ಪ್ರತಿಗಳ ಅಂತ್ಯ ದಲ್ಲಿರುವ ೩ ಗಾಹೆಗಳು, ಜಹಜಹ ಥುಂಜಣ...ಎಂಬ ಗಾಹೆ (ವಡ್ಡಾ. ೧೪೩)—ಇವು ಶಿವಕೋಟಿಯ 'ಭಗವತೀ ಆರಾಧನಾ'ದಲ್ಲಿವೆ; ಕಾಲ ಕ್ರಿ.ಶ. ೧ನೆಯ ಶತಮಾನ.

---

28 *Sources of Karnataka History*, p. xx.

೨. ಕೊಲ್ಲಾಪುರ ಪ್ರತಿಯ ಆದಿಯಲ್ಲಿರುವ ಮೂರು ಗಾಹೆಗಳಲ್ಲಿ ಮೊದಲನೆಯದು 'ಪಂಚಾಸ್ತಿಕಾಯ'ದಿಂದಲೂ, ಎರಡನೆಯದು 'ಪ್ರವಚನಸಾರ'ದಿಂದಲೂ ಉದ್ಧೃತವಾಗಿವೆ. ಈ ಗ್ರಂಥಗಳ ಕರ್ತೃ ಕುಂಡಕುಂದಾಚಾರ್ಯ. ಕಾಲ ಸು. ೧ನೆಯ ಶತಮಾನ.
೩. "ಖಮ್ಮಾಮಿ ಸಬ್ಬ ಜೀವಾಣಂ..." ಎಂಬ ಗಾಹೆ—'ವಟ್ಟಕೇರಸ್ವಾಮಿಯ ಮೂಲಾಚಾರ'ದಲ್ಲೂ ಮತ್ತು 'ಪ್ರತಿಕ್ರಮಣ'ದಲ್ಲೂ ಇದೆ. (ಪು. ೯ ಭಾವನಗರದ ಮುದ್ರಣ. ಸಂವತ್ ೧೯೦೪) ಕಾಲ ಸು. ೧ನೆಯ ಶತಮಾನ.
೪. "ಯದ್ಯಪಿ ನಿಷೇವ್ಯಮಾಣಾ..." (ಪು. ೧೦೭) ಉಮಾಸ್ವಾತಿಯ 'ಪ್ರಶಮರತಿ ಪ್ರಕರಣ'ದಲ್ಲಿದೆ. ಕಾಲ ೧ನೆಯ ಶತಮಾನ.
೫. "ನಮಶ್ರೀ ವರ್ಧಮಾನಾಯ ." ಎಂಬ ಗ್ರಂಥಾದಿಯ ಪದ್ಯ—ಸಮಂತಭದ್ರನ ರತ್ನ ಕರಂಡಕ ಶ್ರಾವಕಾಚಾರದಲ್ಲಿದೆ, ಕಾಲ ೨ನೆಯ ಶತಮಾನ.
೬. "ಯೇಷಾಂ ನ ವಿದ್ಯಾ......" "ಯಾವತ್ ಸ್ವಸ್ಥಮಿದಂ..." "ತೃಷ್ಣಾಂ ಛಿಂದಿ........." } ಭರ್ತೃಹರಿಯ ನೀತಿವೈರಾಗ್ಯ ಶತಕಗಳು ಕಾಲ ಅನಿರ್ದಿಷ್ಟ
೭. "ಛಿಜ್ಜಉ ಭಿಜ್ಜಉ .." ಎಂಬ ಗಾಹೆ (ವಡ್ಡಾ. ೪೮) ಜೋಇಂದುವಿನ 'ಪರಮಾತ್ಮ ಪ್ರಕಾಶ'ದಲ್ಲಿದೆ. ಕ್ರಿ.ಶ. ೬ನೆಯ ಶತಮಾನ.
೮. "ಕಸ್ಯ ಮಾತಾ ಪಿತಾ ಕಸ್ಯ..." ಎಂಬ ಶ್ಲೋಕ (ವಡ್ಡಾ. ೧೪೨) ಜಟಾಸಿಂಹನಂದಿಯ ವರಾಂಗಚರಿತದಲ್ಲಿದೆ (೧೫-೭೮). ಕಾಲ: ಕ್ರಿ.ಶ. ೭ನೆಯ ಶತಮಾನದ ಅಂತ್ಯ.
೯. "ಆದೌ ಜನ್ಮಜರಾರೋಗ..." ಎಂಬ ಶ್ಲೋಕ (ವಡ್ಡಾ. ೬೮) ಗುಣಭದ್ರಾಚಾರ್ಯರು ಪೂರೈಸಿದ ಮಹಾಪುರಾಣ ಭಾಗದಲ್ಲಿದೆ (೪೬-೧೯೬); ಗುಣಭದ್ರನ ಉತ್ತರಪುರಾಣ ಮುಗಿದದ್ದು ಕ್ರಿ.ಶ. ೮೯೮ಕ್ಕಿಂತ ಸ್ವಲ್ಪ ಹಿಂದೆ.

ಮೇಲ್ಕಂಡ ಪದ್ಯವೇಷ್ಟನಗಳು ಇನ್ನೂ ಪ್ರಾಚೀನತರ ಗ್ರಂಥಗಳಿಗೆ ಸೇರಿದುವೆಂದೂ ಕನ್ನಡ ಗ್ರಂಥದಲ್ಲಿ ಅವುಗಳ ಅಸ್ತಿತ್ವವೇ ಸಂದೇಹಾಸ್ಪದವೆಂದೂ ಬಲವಾದ ಪ್ರಮಾಣಗಳಿಂದ ಸ್ಥಾಪಿಸುವ ವರೆಗೆ ಕನ್ನಡ ವಡ್ಡಾರಾಧನೆ ಕ್ರಿ.ಶ. ೮೯೮ಕ್ಕಿಂತ ಹಿಂದಿನದಲ್ಲವೆಂದು ಒಪ್ಪಬೇಕಾಗುತ್ತದೆ. ಗುಣಭದ್ರಾಚಾರ್ಯ ಕೃತ "ಆದೌ ಜನ್ಮಜರಾರೋಗ..." ಎಂಬ ಪದ್ಯ ಬಹು ಮುಖ್ಯವಾದ ಆಧಾರವಾಗಿದೆ. ಇದನ್ನು ಕದಲಿಸುವುದು ಕಷ್ಟ.

ವಡ್ಡಾರಾಧನೆಯ ಅತಿ ಪ್ರಾಚೀನ ಹಸ್ತಪ್ರತಿ (ಖ) ಕ್ರಿ.ಶ. ೧೪೦೩ರಲ್ಲಿ ಲಿಖಿತವಾಗಿದೆ. ಆದ್ದರಿಂದ ವಡ್ಡಾರಾಧನೆ '೮೯೮-೧೪೦೩'ರ ಅವಧಿಯಲ್ಲಿ ರಚಿತವಾಗಿರಬೇಕು. ಈ ಅವಧಿಯನ್ನು ಕುಗ್ಗಿಸಲು ಆಂತರಿಕ ಪ್ರಮಾಣಗಳು ನೆರವಾಗುತ್ತವೆ:

೧. ಈ ಗ್ರಂಥದಲ್ಲಿ ಪದಾದಿಯ ಪಕಾರಕ್ಕೆ ಸಾಧಾರಣವಾಗಿ 'ಹ' ಬರುವುದಿಲ್ಲ. ಈ ಮಾರ್ಪಾಟು ನಡೆದದ್ದು ಕ್ರಿ.ಶ. ೧೧ನೆಯ ಶತಮಾನದ ಮೇಲೆ ಎಂದು ಶಾಸನಗಳಿಂದ ತಿಳಿದುಬರುತ್ತದೆ.
೨. ರೇಫಸಂಯುಕ್ತ ಈ ಗ್ರಂಥದಲ್ಲಿ ದೊರಕುತ್ತದೆಯೇ ಹೊರತು ಅದಕ್ಕೆ ಸಜಾತೀಯತ್ವ ಪ್ರಾಪ್ತವಾಗಿಲ್ಲ. ಹೀಗಾಗುವುದು ೧೨ನೆಯ ಶತಮಾನದ ಮಧ್ಯಭಾಗದ ಜನರ ಬಾಯಿ ಮಾತಿನಲ್ಲಿ ತಲೆದೋರಿತಾದರೂ ೧೩ನೆಯ ಶತಮಾನ ಮುಗಿಯುವ ಹೊತ್ತಿಗೆ ಸಾರ್ವತ್ರಿಕವಾದ ಭಾಷಾವ್ಯಾಪಾರವಾಗಿ ಪರಿಣಮಿಸಿತು.
೩. ಕಳ್ವೊಂ. ಕೂಡಿದೊಂ ಇತ್ಯಾದಿ ಕೆಲ ಕ್ರಿಯಾರೂಪಗಳು ನಿಸ್ಸಂದೇಹವಾಗಿ ಪ್ರಾಚೀನ, ೧೧ನೆಯ ಶತಮಾನದ ಮೇಲೆ ಇವುಗಳ ಪ್ರಯೋಗ ವಿರಲವಾಗುತ್ತದೆ.

ಈ ಕಾರಣಗಳು ಕನ್ನಡ ವಡ್ಡಾರಾಧನೆಯ ಕಾಲ ಕ್ರಿ.ಶ. ೮೯೮–೧೪೦೩ರ ವರೆಗೆ ವಿಶಾಲವಾದ, ಆದರೆ ನಿಷ್ಕೃಷ್ಟವಾದ ಅಂತರಕ್ಕೆ ಸೇರಿದೆಯೆಂಬುದನ್ನೂ, ಬಹುಶಃ ಅದು ೧೧ನೆಯ ಶತಮಾನದಲ್ಲಿ ರಚಿತವಾಗಿರಬಹುದೆಂಬುದನ್ನೂ ಸೂಚಿಸುತ್ತವೆ.

ಡಾ. ಉಪಾಧ್ಯೆಯವರು ಮಾಡಿರುವ ಆಕರನಿರ್ದೇಶನಪಟ್ಟಿಗೆ ಮತ್ತೆ ಕೆಲವನ್ನು ಸೇರಿಸಬಹುದು. ವಿದ್ಯಾಚಿನ್ತಾಮಣಿ ಗುರುದತ್ತಭಟ್ಟಾರರ ಕಥೆಗಳಲ್ಲಿ ಉದ್ಧೃತವಾಗಿ ಕೊಟ್ಟಿರುವ ಹಲವು ಪ್ರಾಕೃತ ಗಾಹೆಗಳು ವಟ್ಟಕೇರಸ್ವಾಮಿಯ 'ಮೂಲಾಚಾರ'ಕ್ಕೆ ಸೇರಿದುವಾಗಿವೆ. ಈ ಕೆಳಗಿನ

ಸಮ್ಮದ್ದರಿಸ್ಸಣ ಸುದ್ಧೋ ಕದವದ ಕಮ್ಮೋ ಸುಸೇಲ ಸಂಪಣ್ಣೋ।
ಅಣವರದಾಣ ಸೀಲೋ ಜಿಣಸಾಸಣ ವಚ್ಛಲೋ ವೀರೋ॥

ಎಂಬ ಗಾಹೆ ಪದ್ಮನಂದಿಯ 'ಜಂಬೂದ್ವೀಪ ಪಣ್ಣತ್ತಿ' ಎಂಬ ಗ್ರಂಥದ ಅಂತ್ಯಭಾಗಕ್ಕೆ (೧೬೫) ಸೇರಿದ್ದಾಗಿದೆ; ಇದು ಕನ್ನಡ ವಡ್ಡಾರಾಧನೆಯ ಸುಕೌಶಳ ಸ್ವಾಮಿಯ ಕಥೆಯ ಆದಿಯಲ್ಲಿ ಅನುವಾದಿತವಾಗಿದೆ; ಆದರೆ ಎರಡನೆಯ ಪಂಕ್ತಿಯ ಪಾಠ ಇಲ್ಲಿ ತೀರ ಬೇರೆಯದಾಗಿದೆ. ಪದ್ಮನಂದಿಯ ಕಾಲವೇ ಅನಿರ್ದಿಷ್ಟವಾಗಿರುವುದರಿಂದ[29] ವಡ್ಡಾರಾಧನೆಯ ಕಾಲನಿರ್ದೇಶಕ್ಕೆ ಸಹಾಯವಾಗುವಂತಿಲ್ಲ. ಡಾ. ಉಪಾಧ್ಯೆಯವರು ಹೇಳಿರುವ ಆಂತರಿಕ ಆಧಾರಗಳಲ್ಲಿ ಒಂದನ್ನು ಪರಿಶೀಲಿಸಬಹುದು. ಉಳಿದ ಎರಡು ವಿಷಯವಿಚಾರಕ್ಕೆ ಸಹಾಯವಾಗಲಾರವು.

೧. ಪಕಾರ ಹಕಾರವಾಗುವ ವಿಷಯ; ಈ ಗ್ರಂಥದಲ್ಲಿ ಪದಾದಿಯ ಮತ್ತು ಮಧ್ಯಾಂತಗಳ ಪಕಾರಕ್ಕೆ ಸಾಧಾರಣವಾಗಿ 'ಹ' ಬರುವುದಿಲ್ಲ. ಪಕಾರ ಕ್ರಮೇಣ ಹಕಾರಕ್ಕೆ ಮಾರ್ಪಾಡಾದದ್ದು ಕ್ರಿ.ಶ. ೧೧ನೆಯ ಶತಮಾನವಾದ ಮೇಲೆ ಎಂದು ಶಾಸನಗಳಿಂದ ತಿಳಿದುಬರುತ್ತದೆ. ಇದಕ್ಕೆ ಆಧಾರವಾಗಿ ಡಾ. ಉಪಾಧ್ಯೆಯವರು ನಿರ್ದೇಶಿಸಿರುವ ಗ್ರಂಥದಲ್ಲೇ "೧೦ನೆಯ ಶತಮಾನದಲ್ಲಿ ಪಕಾರಯುಕ್ತರೂಪಗಳೆಡೆಯಲ್ಲಿ ಹಕಾರವು ತಲೆದೋರಲಾರಂಭಿಸುತ್ತದೆಯೆಂಬುದು ಕನ್ನಡ ನುಡಿಯ ಎಲ್ಲ ಪ್ರದೇಶಗಳಲ್ಲೂ ಕಾಣುತ್ತದೆ"[30] ಎಂದು ವಾಕ್ಯವಿದೆ. ಇದು ಹೆಚ್ಚು ಗಮನಕ್ಕೆ ಅರ್ಹವಾದದ್ದು. ಕನ್ನಡ ಪ>ಹ ಆಗಿರುವುದಕ್ಕೆ ಇನ್ನೂ ಹಳೆಯ ಪ್ರಯೋಗಗಳಿವೆ.

೧. ಹಡಗಿಲೆ ನಾಮಗ್ರಾಮಂ (SII, XX, 4-12; 683)
೨. ಜೋತಿಷ ಶಕುನ ನಿಮಿತ್ತಂಗಳ ಬಲ್ಲಹಗೆ (SII, XI-i, 123 A.D. 862)
೩. ಸಿಸುಳಹಾಟಿಯ್ವದಿಂಬರು (BKI. No. 14, ಪಂಕ್ತಿ ೧೦, A.D. 872)
ಮೊದಲೊಳುಸಿಸೂಳಹಾಟಿಂ
ವಿದಿತ ಶ್ರೀ ಚಳುಕಿ ರಾಜ್ಯದೊಳ್ (ಅದೇ. ಪಂಕ್ತಿ ೧೫)
೪. ಸಂದ ಲೋಕಕ್ಕೆ ಹೋಹಾನ್ (ಶ್ರೀರಂಗಪಟ್ಟಣ, 134, ಕ್ರಿ.ಶ. 910)
೫. ಪನ್ನೊಮ್ಮತ್ತರ್ಹಾಡುವೂಜ಼ಿ (SII, XI, part I, No, 60. 1.13. 931-A.D.)
೬ ಊರಟ್ವಿನೊಳೆ ಹೋಗೆನೆಂದು (ಅದೇ. No. 61, 1. 13, A.D. 931-32)
೭. ಹನ್ನಿರ್ವಱು ಗದ್ಯಾಣಂ (*IA*, XII. p. 25 f 1. 15, A-D. 971)

ಇವುಗಳನ್ನು ನೋಡಿದರೆ ಪ>ಹ ಮಾರ್ಪಾಡು ೯-೧೦ನೆಯ ಶತಮಾನಗಳಲ್ಲಿಯೇ ಅಲ್ಲಲ್ಲಿ ಇದ್ದಿತೆಂದು ಹೇಳಬೇಕಾಗಿದೆ. ಇದು ಜನರ ಬಾಯಿಮಾತಿನಲ್ಲಿ ತಲೆದೋರಿ ಅಲ್ಲಿಂದ ಈ ಶಾಸನಗಳೊಳಕ್ಕೆ ಪ್ರವೇಶಿಸಿರಬಹುದು. ಪ್ರಕೃತ ಪ>ಹ ಮಾರ್ಪಾಡಿಗೆ ಒಂದು ನಿದರ್ಶನವಾದರೂ ವಡ್ಡಾರಾಧನೆಯಲ್ಲಿ ದೊರೆಯುತ್ತಿಲ್ಲ. ಹತ್ತನೆಯ ಶತಮಾನದ ಯಾವ ಕನ್ನಡ ಗ್ರಂಥದಲ್ಲೂ ಇರುವಂತೆ ತಿಳಿದಿಲ್ಲ.

---

[29] ಕ್ರಿ.ಶ. ೫೦೦ ಎಂದು ಹೀರಾಲಾಲ್ (*Catalogue. C. P. & Berar*, xix i) ವಿಕ್ರಮಶಕೆ ೧೨ನೆಯ ಶತಮಾನ ಎಂದು ಪಂಡಿತ ನಾಥೂರಾಮ ಪ್ರೇಮಿ (ಜೈನ ಸಾಹಿತ್ಯ ಔರ್ ಇತಿಹಾಸ್. ೫೭೧); ಕ್ರಿ.ಶ. ಸು. ೭೦೦ ಎಂದು ಜ್ಯೋತಿ ಪ್ರಸಾದ್ ಜೈನ್ (*Jaina Sources of the History of Ancient India*, p. 113).

[30] In the 10th century forms with h. in place of p. begin to appear in all parts of the Kanarese area (*Grammar of the Oldest Kanarese Inscriptions*, p. 2).

ಹಳೆಯ ನುಡಿಗಟ್ಟಿನಲ್ಲಿ ಪರಿಣತನಾಗಿದ್ದ ಒಬ್ಬ ಈಚಿನ ಕವಿ ಪಟ್ಟು ಹಿಡಿದು ಪಕಾರ ಪ್ರಯೋಗವನ್ನೇ ಮಾಡಿ ಬರೆದಿದ್ದಾನೆ ಎಂಬ ಸಂಭವತೆಯನ್ನು ಬಿಟ್ಟರೆ 'ವಡ್ಡಾರಾಧನೆ' ೧೦ನೆಯ ಶತಮಾನಕ್ಕಿಂತ ಈಚಿನದಾದ ರಚನೆಯಲ್ಲವೆಂದು ನಿರ್ಣಯಿಸಬೇಕಾಗಿದೆ. ಕ್ರಿ.ಶ. ೧೦೬೮ರಲ್ಲಿ ಇದ್ದ ಶಾಂತಿನಾಥನ 'ಸುಕುಮಾರಚರಿತಂ' ಎಂಬ ಕಾವ್ಯದಲ್ಲಿ ವಡ್ಡಾರಾಧನೆಯ ಪ್ರಭಾವ ಪದಪ್ರಯೋಗಗಳಲ್ಲಿಯೂ ಸಮಾನ ಪದ್ಯವೇಷ್ಟನದಲ್ಲಿಯೂ ವರ್ಣನೆಗಳಲ್ಲಿಯೂ ಕಂಡುಬರುವುದು ಇದಕ್ಕೆ ಪರಿಪೋಷಕವಾಗಿದೆ.[31]

"ಈ ಗ್ರಂಥದ ಗದ್ಯಶೈಲಿ 'ಚಾವುಂಡರಾಯಪುರಾಣ'ದ ಶೈಲಿಗಿಂತ ಈಚಿನದೆಂದೂ. ನೋಂಪಿ ಕಥೆಗಳ ಗದ್ಯಶೈಲಿಗಿಂತ ಹಳೆಯದೆಂದೂ ನನಗೆ ತೋರುತ್ತದೆ; ಹೀಗೆ ಹೇಳುವಾಗ ಈ ಕಥೆಗಳಲ್ಲಿ ಸಂಸ್ಕೃತಪ್ರಯೋಗ ಅಲ್ಪತರವಾಗಿರುವುದನ್ನೂ. ಇವುಗಳ ದೇಶೀಯವಾದ ನುಡಿಗಟ್ಟನ್ನೂ ಗಮನಿಸಿದೆ. ಆದ್ದರಿಂದ ಈ ಗ್ರಂಥದ ಕಾಲವನ್ನು ನಾನು 'ಚಾವುಂಡರಾಯಪುರಾಣದ' ಕಾಲಕ್ಕಿಂತ (ಕ್ರಿ.ಶ. ೯೭೮) ಈಚೆಗೆ ಹಾಕುತ್ತೇನೆ" ಎಂದು ಡಾ. ಉಪಾಧ್ಯೆಯವರು ಹೇಳುತ್ತಾರೆ. ಈ ನೋಂಪಿ ಕಥೆಗಳನ್ನು ಯಾರು ಯಾವ ಕಾಲದಲ್ಲಿ ರಚಿಸಿದರೆಂಬುದು ತಿಳಿದಿಲ್ಲ. ಇವುಗಳಲ್ಲಿ ಪ>ಹ ಮಾರ್ಪಾಟು ಹೇರಳವಾಗಿ ಕಾಣುತ್ತದೆ—ಹಜಿದಲೆ, ಹೊಟ್ಟೆ, ಹೊಜಿಹಲ್ಲು ಇತ್ಯಾದಿ ಉದಾಹರಣೆಗಳು ಸಿಕ್ಕುತ್ತವೆ.[32] ಈ ವ್ಯತ್ಯಾಸವಿಲ್ಲದೆ ೧೦ನೆಯ ಶತಮಾನದ ಕನ್ನಡ ಗ್ರಂಥಗಳಿಗಿಂತಲೂ. ವಡ್ಡಾರಾಧನೆಗಿಂತಲೂ ಇವು ಈಚಿನವೆಂದು ಹೇಳಬಹುದು. ಸಂಸ್ಕೃತ ಶಬ್ದಗಳ ಪ್ರಯೋಗ ಕಡಿಮೆಯಾಗಿರುವುದು, ದೇಶೀಯ ನುಡಿಗಟ್ಟಿನ ಪ್ರಾಚುರ್ಯ—ಇವು ನೋಂಪಿಯ ಕಥೆಗಳಲ್ಲಿ ಇರಬಹುದಾದರೂ ೧೦ನೆಯ ಶತಮಾನದ ಗ್ರಂಥಗಳಲ್ಲಿ ಇವು ಇಲ್ಲವೆಂದು ಹೇಳಲಾಗದು. ಪಂಪಭಾರತದಲ್ಲಿ ಒಂದಾದರೂ ಸಂಸ್ಕೃತ ಶಬ್ದವಿಲ್ಲದ ಅನೇಕ ಪದ್ಯಗಳಿರುವುದೂ, ದೇಶೀ ನುಡಿಗಟ್ಟಿನ ಗದ್ಯಖಂಡಗಳು ಬಹುವಾಗಿ ದೊರೆಯುತ್ತಿರುವುದೂ ಸುವಿದಿತವಾಗಿರುವ ವಿಷಯ. ಆದ್ದರಿಂದ ಶೈಲಿಯ ಈ ಲಕ್ಷಣಗಳು ನೋಂಪಿಯ ಕಥೆಗಳಿಗೇ ಮೀಸಲಿಲ್ಲ. ಅವು ಹೇರಳವಾಗಿ ದೊರೆಯುವ ವಡ್ಡಾರಾಧನೆ ೧೦ನೆಯ ಶತಮಾನದ ರಚನೆಯಲ್ಲವೆಂದು ಇವುಗಳಿಂದ ಸ್ಥಾಪಿಸುವುದು ಸಾಧುವಾಗಲಾರದು. 'ವಡ್ಡಾರಾಧನೆ' ಚಾವುಂಡರಾಯಪುರಾಣದ ಕಾಲಕ್ಕಿಂತ (ಕ್ರಿ.ಶ. ೯೭೮) ಈಚಿನದೆಂಬ ಅಭಿಪ್ರಾಯಕ್ಕೆ ಇನ್ನೂ ಬಲವಾದ ಆಧಾರಗಳು ಬೇಕಾಗಿವೆ. ಈ ಲಕ್ಷಣಗಳೇ ಅದು ಚಾವುಂಡರಾಯಪುರಾಣಕ್ಕಿಂತ ಹಳೆಯದೆಂದು ಹೇಳಲು ನೆರವಾಗಲೂಬಹುದು.

ಹಳಗನ್ನಡಕ್ಕಿಂತಲೂ ಹಳೆಯದಾದ ಎಂದರೆ ಪೂರ್ವದ ಹಳಗನ್ನಡದ ಪ್ರಯೋಗಗಳು ಕೆಲವು ವಡ್ಡಾರಾಧನೆಯಲ್ಲಿಲ್ಲವೆಂಬ ವಿಷಯದಲ್ಲಿ ಯಾರದೂ ಭಿನ್ನಾಭಿಪ್ರಾಯವಿಲ್ಲ. ಒಕಾರಯುಕ್ತ ಆಖ್ಯಾತ ವಿಭಕ್ತಿ ಪ್ರತ್ಯಯಗಳ ವಿಚಾರವಾಗಿ ಹಿಂದೆ ಹೇಳಿದೆ. ಬೇರೆ ಕೆಲವು ಪೂರ್ವದ ಹಳಗನ್ನಡ ಅವಶೇಷಗಳನ್ನು ಇಲ್ಲಿ ಕಾಣಿಸಬಹುದು :

೧ ೧.—ಅನ್ ಎಂಬ ದ್ವಿತೀಯಾ ವಿಭಕ್ತಿಗೆ: ವಾಯುಭೂತಿಯೆಂಬೊನಾನಾಮೋದಿಸಿದೆಂ (ಪು. ೨೪–೪)

೨.—ಆ ಎಂಬ ಷಷ್ಠೀ ದೀರ್ಘಕ್ಕೆ :

(i) ಅಧಮ[ರಾ]ಪುಲ್ಲಮಾನಸ[ರಾ]ದುರ್ಜನ[ರಾ]ಜಾರಜಾತ[ರಾ]ವಿಜಾತಿಗಳ್ಗೆ (೮–೧೪)

(ii) ದಾಷ್ಟಿಕನಾ ಪಕ್ಕದೆ ಕಾಪಿರ್ದನ್ (೧೫–೨)

(iii) ವರ್ಣೆಯೆಂಬ ತೋಱಿಯಾ ತಡಿಯೊಳ್ (೧೨೮–೧೩)

(vi) ತನ್ನ ಮಗಳಾ ಚೋಳಂಗಿಯೊಳ್ (೧೮೪–೧೮)

---

31 ಹೆಚ್ಚಿನ ವಿವರಗಳಿಗೆ 'ಸುಕುಮಾರಚರಿತಂ' ಎಂಬ ಗ್ರಂಥದ ಮುನ್ನುಡಿ (xxxviii-xlii) ನೋಡಿ ಅಥವಾ ಇದೇ ಗ್ರಂಥದ (೧೭೪–೧೭೭) ಪುಟಗಳನ್ನು ನೋಡಿ.

32 ಕ. ವೆಂ. ರಾಘವಾಚಾರ್ (ಸಂ.), ಜನ್ನನ ಯಶೋಧರ ಚರಿತೆ, ಪುಟ ೧೩೩.

'—ಉಳ್' ಎಂಬ ಸಪ್ತಮೀವಿಭಕ್ತಿ ಪ್ರತ್ಯಯ 'ವಡ್ಡಾರಾಧನೆ'ಯಲ್ಲಿ ಈಗ ಒಂದಾದರೂ ಇಲ್ಲ: ಇದನ್ನು ಎಲ್ಲೆಡೆಗಳಲ್ಲೂ—ಒಳ್ ಎಂದು ಹಳಗನ್ನಡಕ್ಕೆ ಲಿಪಿಕಾರರೂ ಇತರರೂ ತಿದ್ದಿರಬಹುದು. ಸೋಜಿಗದ ಅಂಶವೇನೆಂದರೆ ದ್ವಿತೀಯಾ ಷಷ್ಠೀ ವಿಭಕ್ತಿ ದೀರ್ಘರೂಪಗಳು ಕ್ರಿ.ಶ. ೧೪೦೩ರಲ್ಲಿ ಲಿಖಿತವಾದ ಹಸ್ತಪ್ರತಿಯಲ್ಲಿ ಇನ್ನೂ ಸಿಕ್ಕುತ್ತಿರುವುದು. ಇದು ಕವಿಯ ಸ್ವಹಸ್ತಪ್ರತಿಯಲ್ಲಿ ಇಂಥ ರೂಪಗಳು ಇನ್ನೂ ಹಲವು ಇದ್ದಿರಬೇಕೆಂಬ ಊಹೆಗೆ ಅವಕಾಶ ಕೊಡುತ್ತದೆ. ಇವು ಚಾವುಂಡರಾಯಪುರಾಣದಲ್ಲಾಗಲಿ, ಅದಕ್ಕೆ ಹಿಂದಿನ ಗ್ರಂಥಗಳಲ್ಲಾಗಲಿ ಇಲ್ಲ.

೨. ಉಳ್ಳ ಎಂಬರ್ಥದ 'ಒಡೆಯ' ಎಂಬ ತದ್ಧಿತ ಪ್ರತ್ಯಯವನ್ನು ನಾಗವರ್ಮನೇ ಹೇಳಿರುವನು.[32] ಇದರ ಪ್ರಯೋಗ 'ವಡ್ಡಾರಾಧನೆ'ಯಲ್ಲಿರುವಷ್ಟು ಬೇರಾವ ಗ್ರಂಥದಲ್ಲೂ ಇಲ್ಲ. ಒಡೆಯನ್, ಒಡೆಯಳ್, ಒಡೆಯರ್, ಒಡೆಯದು, ಒಡೆಯವು—ಈ ಎಲ್ಲ ರೂಪಗಳೂ ಈ ಗ್ರಂಥದಲ್ಲಿವೆ. ಪಂಪನ (ಕ್ರಿ.ಶ ೯೪೧) ಗ್ರಂಥಗಳಲ್ಲಿ ಈ ಪ್ರತ್ಯಯದ ಪ್ರಯೋಗ ಕೆಲವು ಮಾತ್ರ ಇವೆ; ಬುದ್ಧಿಯೊಡೆಯರ್—ಇತ್ಯಾದಿ.[33] ಅವನಿಗಿಂತ ಹಿಂದಿನ ಕಾಲದ ಗ್ರಂಥಗಳಲ್ಲಾಗಲಿ ಶಾಸನಗಳಲ್ಲಾಗಲಿ ಈ ಪ್ರತ್ಯಯವಿದ್ದಂತೆ ಕಾಣುವುದಿಲ್ಲ. ಇವೆಲ್ಲ ಖಚಿತವಾಗಿರುವ ಅಂಶಗಳು. ಆದರೆ ಇವುಗಳಿಂದ ಕಾಲನಿರ್ಣಯಕ್ಕೆ ಹೇಗೆ ಸಹಾಯ? ಈ ಪ್ರತ್ಯಯದ ಪ್ರಯೋಗಬಾಹುಳ್ಯ ಪ್ರಾಚೀನತೆಗೆ ಸಾಕ್ಷಿ ಎಂದಾದರೆ 'ವಡ್ಡಾರಾಧನೆ' ಪಂಪಪೂರ್ವ ಗ್ರಂಥವೆಂದು ಹೇಳಬೇಕಾಗುತ್ತದೆ. ಇಲ್ಲವೆ ಪಂಪಾದಿಗಳ ಕ್ವಚಿತ್ ಪ್ರಯೋಗವನ್ನು ಕಂಡಿದ್ದ ಈಚಿನ ಕವಿಯೊಬ್ಬ ಈ ಪ್ರಯೋಗದ ಮೇಲೆ ಪ್ರೀತಿಯುಳ್ಳವನಾಗಿ ಅದನ್ನೇ ಅಧಿಕವಾಗಿ ಬಳಸಿದನು ಎಂದು ಹೇಳಬೇಕಾಗುತ್ತದೆ. ಪಂಪಪೂರ್ವಯುಗದ ಲಭ್ಯಸಾಹಿತ್ಯ ಶಾಸನಗಳಲ್ಲಿ ಇಲ್ಲದಿದ್ದ ಈ ಪ್ರಯೋಗ ವಡ್ಡಾರಾಧನೆಯಲ್ಲಿ ಹೇಗೆ ಬಂತು? ಜನರ ಮಾತಿನಲ್ಲಿ ಬಳಕೆಯಲ್ಲಿದ್ದಿರಬಹುದಾದ ಈ ಪ್ರತ್ಯಯವನ್ನು ಶಿವಕೋಟಿ ಎತ್ತಿಕೊಂಡು ಅದಕ್ಕೆ ಪ್ರಥಮತಃ ತನ್ನ ಗ್ರಂಥದಲ್ಲಿ ಸ್ಥಾನವನ್ನು ಕೊಟ್ಟಿರಬಹುದು. ಹೀಗೆ ಅನೇಕ ಊಹೆ ಪ್ರತ್ಯೂಹೆಗಳಿಗೆ ಆಸ್ಪದವಾಗುತ್ತದೆ. ಇಂಥ ಪ್ರಯೋಗಗಳನ್ನು ಹಿಡಿದು ಹೊರಟರೆ. ಹೀಗೆಯೇ ದೀನಾರ, ದ್ರಮ್ಮ ಶಬ್ದಗಳ ಪ್ರಯೋಗದಿಂದ ಆಗುವ ಸಹಾಯವೂ ಇದೆ.

೩. ದೀನಾರವೆಂಬುದು ರೋಮಿಯ ನಾಣ್ಯ; ಇದು ಚಿನ್ನದ್ದಾಗಿರಬಹುದು, ಬೆಳ್ಳಿಯದಾಗಿರಬಹುದು. ಇದು ಬಹು ಹಿಂದೆಯೇ ತನ್ನ ಹೆಸರಿನೊಡನೆ ಕರ್ನಾಟಕಕ್ಕೆ ಬಂದಿತ್ತು; ಬೆಂಗಳೂರಿನ ಬಳಿ ಈ ನಾಣ್ಯಗಳು ಸಿಕ್ಕಿವೆ. ಇವಕ್ಕೆ **Denarius** ಎಂದು ಲ್ಯಾಟಿನ್ ಭಾಷೆಯ ಹೆಸರು. ಇಕ್ಷ್ವಾಕು ವಂಶದ ವೀರಪುರುಷದತ್ತ ನಾಗಾರ್ಜುನಕೊಂಡದ ಶಾಸನದಲ್ಲಿ 'ದೀನಾರಿಮಾಸಕ' ಎಂಬ ಪ್ರಯೋಗವಿದೆ:[34] ಶಾಸನದ ಕಾಲ ಕ್ರಿ.ಶ. ೩ನೆಯ ಶತಮಾನ. ಈ ನಾಣ್ಯದ ಹೆಸರು ಈ ಕಾಲದಿಂದ ಹಿಡಿದು ಇತರ ಶಾಸನಗಳಲ್ಲೂ ಪ್ರಯೋಗದಲ್ಲಿತ್ತು. ಕನ್ನಡ 'ವಡ್ಡಾರಾಧನೆ'ಯಲ್ಲಿ ಅಲ್ಲದೆ ಈ ಶಬ್ದ ಒಂದೆರಡೆಡೆ ಇತರ ಗ್ರಂಥಗಳಲ್ಲಿ ಪ್ರಯುಕ್ತವಾಗಿದೆ:

೧. ಶಾಂತಿನಾಥನ 'ಸುಕುಮಾರಚರಿತಂ' (೧೦. ೧೧೬೮) ಸು. ೧೦೬೮! ''ಕೋಟಿದೀನಾರಮನಾ ಮೃಗನಯನೆ ಕೊಟ್ಟು ಕೊಂಡಳ್''
೨. ಕರ್ಣಪಾರ್ಯನ 'ನೇಮಿನಾಥಪುರಾಣ' (೪–೫೫) ಕಾಲ ೧೧೪೦: ''ದೀನಾರಮಂ ದಿನಂಪ್ರತಿ ಸಾಸಿರಮಾಪರ್ವದಿನದೊಳ್ ಪತ್ತುಸಾಸಿರಂ ಎಂಬೀ ಗಣನೆಯಿಂ''

ದ್ರಮ್ಮ>ದಮ್ಮ ಎಂಬ ನಾಣ್ಯದ ಹೆಸರು ಮೂಲ ಗ್ರೀಕ್ ಭಾಷೆಯ **Drachma** ಎಂಬ ಶಬ್ದ. ಕನ್ನಡದಲ್ಲಿ ಇದಕ್ಕೆ ಪ್ರಯೋಗಗಳು:

೧. ಕ್ರಿ.ಶ. ೮೭೨ರಲ್ಲಿ ಲಿಖಿತವಾದ ೧ನೆಯ ಅಮೋಘವರ್ಷ ನೃಪತುಂಗನ ಬಾಚಿಪೇಟೆಯ

---

[32] ಕಾವ್ಯಾವಲೋಕನ, ಸೂ. ೭೪.

[33] ಪಂಪಭಾರತ, ೩–೩೪ ವ.

[34] **D. C. Sarkar,** ***Select Inscriptions*****, 1, p. 222.**

ಶಾಸನದಲ್ಲಿ 'ಎರಡು ದ್ರಮ್ಮ', 'ಇಪ್ಪತ್ತನಾಲ್ಕು ದ್ರಮ್ಮ', 'ಮದುವೆಯೊಳೋರೊಂದು ದ್ರಮ್ಮ'...ಹೀಗೆ ಮೂರು ಸಲ ಪ್ರಯೋಗವಿದೆ.[35]

೨. ರವಿನಾಗಭಟ್ಟನೆಂಬ ಕವಿ ಕ್ರಿ.ಶ. ೯೨೯ರಲ್ಲಿ ಹೇಳಿದ ಶಾಸನ (ಕ.ಕ.ಚ. i-೨೮)

ವಿಪ್ರರ ವಿವಾಹಮೂರೊಳ
ಗಪ್ಪನಿತಱೊಳೆಲ್ಲಮೊಸಗೆ ದ್ರಮ್ಮಂ ಮೂಱಂ ।
ತಪ್ಪದೆ ಮಾಣಿಯೊಳೆರಡಂ
ಕೆಪ್ಪಿದರೀ ಶೂದ್ರಗಣದ ಮದುವೆಯೊಳೊಂದಂ ॥

೩. ಬರಿಸಕ್ಕೆ ಆಱು ಕರಿಯ ದ್ರಮ್ಮಮಂ ತೀಱುವರ್ (ಕಾಲ ಕ್ರಿ.ಶ. ೯೫೧)[36]

೪. ಕ್ರಿ.ಶ. ೧೦೬೨ರಲ್ಲಿ ಲಿಖಿತವಾದ ಬಂಕಾಪುರದ ಶಾಸನ,[37] "ಪಾಯದ್ರಮ್ಮಂ"

೪. —ಉಂ ಎಂಬ ಸಮುಚ್ಚಯವನ್ನು ಒಳಕೊಂಡಿರುವ ಕೆಲವು ಪ್ರಯೋಗಗಳು ವಡ್ಡಾರಾಧನೆಯಲ್ಲಿರುವುವು, ಗಮನಾರ್ಹವಾಗಿವೆ. ಈ ಸಮುಚ್ಚಯ ಪ್ರಯೋಗವನ್ನು ಕುರಿತಿರುವ ಮೂರು ಪದ್ಯಗಳು, ಕವಿರಾಜಮಾರ್ಗದಲ್ಲಿರುವುವು. (i-೧೩೧, ೧೩೨, ೧೩೩) ಪರಿಶೀಲನೆಗೆ ತಕ್ಕುವು. ಸಮುಚ್ಚಯ ಸಂಬಂಧದಲ್ಲಿ ಹಲವು ಶಬ್ದಗಳಿದ್ದಾಗ ಕೆಲವಕ್ಕೆ ಉಂ ಪ್ರತ್ಯಯವನ್ನು ಸೇರಿಸಿ ಕೆಲವಕ್ಕೆ ಬಿಟ್ಟರೆ ಅದು ದೋಷ. ಉದಾಹರಣೆ—

ದೇವರುಂ ಗೊರವರುಂ ಗುಣವೃದ್ಧರನಾರತಂ
ಕಾವ ರಕ್ಕಸನಂ ಪ್ರಜೆಯುಂ ಪರಿವಾರಮುಂ ।

ಈ ದೋಷವನ್ನು ಕಳೆಯುವ ಕ್ರಮ ಹೀಗೆ :

ನೃಪನುಮಂ ಪ್ರಜ್ಞೆಯುಮಂ ಪರಿವಾರಮುಮಂ
ಕೃಪೆಯಿನಾ ಗೊರವರುಂ ಸುರರುಂ ಗುಣವೃದ್ಧರುಂ
ವಿಪುಳರಾಗಪರರಾಗಿಸುಗೆ...

ಇಲ್ಲಿ ಗುಣವೃದ್ಧರ್ ಎಂಬುದಕ್ಕೆ ಪ್ರತಿಯಾಗಿ 'ಗುಣವೃದ್ಧರುಂ' ಎಂದಿದ್ದರೆ ಸರಿ. ನೃಪತುಂಗನ ಈ ವಿಧಿಯನ್ನು ನೋಡಿದರೆ ಅವನ ಕಾಲದಲ್ಲಿ ವಿಕಲ್ಪಸಮುಚ್ಚಯಪ್ರಯೋಗಶೀಲರಾದ ಲೇಖಕರು ಹಲವರಿದ್ದಿರಬೇಕೆಂದು ತೋರುತ್ತದೆ. 'ವಡ್ಡಾರಾಧನೆ'ಯಲ್ಲಿ ಈ ಕೆಳಗಿನ ಕೆಲವು ಪ್ರಯೋಗಗಳು ದೊರೆಯುತ್ತವೆ :

೧. ಸೂರ್ಯಮಿತ್ರಾಚಾರ್ಯರುಮಗ್ನಿಭೂತಿರುಷಿಯುರಂ ಕಂಡು (೧೨–೨೩)
೨. ಲಡ್ಡುಗೆಗಳ್ ಮಂಡಗೆಗಳುಂ ಮೊದಲಾಗೊಡೆಯ (೧೮–೧೫)
೩. ಇಂದ್ರಜಾಲಿಗರ ಪಾವೆಗಳುಂ ಸೀರೆಗಳುಂ ರಝಣಂಬಮಂ ಕೊಂಡು (೧೯–೧೨)
೪. ಮೂವತ್ತಿರ್ವರ್ ದಿವ್ಯಸ್ತ್ರೀಯರ್ಕಳ್ ಮೂವತ್ತೆರಡು ನಾಟಕಂಗಳ್ ಮೂವತ್ತೆರಡು ಕೋಟಿ ಕಸವರಮುಂ ಪಂಚರತ್ನಂಗಳೆಂಬಿನಿತಱೊಳ್ (೨೫–೧೨)
೫. ಸಾಮಂತ ಮಹಾಸಾಮಂತರ್ ಮೂವತ್ತಿರ್ಛಾಸಿರ್ವರ್ ಮಕುಟಬದ್ಧರ್ಕಳುಂ ವಿದ್ಯಾಧರರ್ಕಳುಂ (೬೭–೧೮)
೬. ಜನ್ನ ದೇಹಮಂ ಪೂಜಿಸಲು ನಿಮಗೆನ್ನ ವಿಭವಮುಂ ತೋಱಲ್ ಬಂದನೆಂದು (೮೬–೨೦)
೭. ದಯೆಯುಪಶಮ ಪರಿಗ್ರಹಪರಿತ್ಯಾಗಮುಂ (೮೨–೩)

[35] *Annual Report of Archaeology*, Hyderabad, 1936.
[36] Dr. G. S. Gai: *Historical Grammar of Old Kannada*, p. 135.
[37] *Bambay Karnatak Inscriptions*. 1934, No. 3.

೮. ಸಂತಾಪಮಂ ವಧೆಯುಮಂ (೧೨೬–೧೩)
೯. ದಾದಿಯುಂ ಸಖೀಜನಂಗಳ್‌ವೆರಸು (೧೪೮–೧೨)
೧೦. ಪಲ್ಲಣವಮಂ ಚದುರಸಿಕೆಯುಮಮಂ ಕೀಲುವಮಂ (೧೬೨–೨೦)

ಇವುಗಳೆಲ್ಲ ವಿಕಲ್ಪಸಮುಚ್ಚಯಕ್ಕೆ ಉದಾಹರಣೆಗಳಾಗಿವೆ. ೧೦ನೆಯ ಶತಮಾನದ ಗ್ರಂಥಗಳಲ್ಲಿ ಇಂಥ ಪ್ರಯೋಗಗಳು ಕೆಲವು ದೊರೆಯುತ್ತವೆ. 'ಪಂಪಭಾರತ'ದಲ್ಲಿ ಈ ಕೆಳಗಿನ ಪ್ರಯೋಗಗಳಿವೆ:

೧. ಮಲೆಪರ್ ಮಂಡಳಿಕರ್ ಕಱುಂಬರದಟರ್ ವೀರರ್ಕಳುಂ ತಮ್ಮ ಬಾೞ್ದಲೆಯುಂ (೯–೧೦)
೨. ಅದಟಿನಳುರ್ಕೆಯುಂ ಬಲದಳುರ್ಕೆಯುಮಂ ಪೆಡೆಗೊಂಡು (೧೧–೫೦)
೩. ಅಡಿ ತೊಡೆ ಪೊರ್ಕುೞುಂ ತೆಗಲೆ ಕೈಕಣಕಾಲ್ ಕೊರಲೆಂಬಿವುಂ (೧೧–೧೩೭).
೪. ಕಪ್ಪುರದ ಕಂಪುಮಂ ಸೂಡಿದ ಬಾಸಿಗದ ಪೊಸಗಂಪನಿಂಬಾಗಿದೆ (೧೪–೨೫)
೫. ಮಣಿಕುಂಡಲಮುಂ ಕವಚಂ ಮಣಿಯದ ಚಾರಿತ್ರಮುಗ್ರತೇಜಮುಮಿಾ (೧೨–೯೮)

ರನ್ನನ ಗದಾಯುದ್ಧದಲ್ಲಿ:

೧. ಅರೆ ಮುಗಿದಿರ್ದ ಕಣ್ಗಳುಮಲರ್ದ ಮೊಗಂ ಕಡಿವೋದಕೆಯ್ಯುಮಾಸುರತರಮಾಗೆ ಕರ್ಚಿದವುಡುಂ ಬೆರಸು (ಗದಾ. ೪–೫೩)

ಇಲ್ಲಿ ಮೊಗಂ ಎಂಬುದು ಸಮುಚ್ಚಯವನ್ನು ಹೊಂದಿ 'ಮೊಗಮುಂ' ಎಂದಾಗಿರಬೇಕು; 'ಅರೆ ಮುಗಿದಿರ್ದ ಕಣ್ಮ[ಲರ]ಲರ್ದ ಮೊಗಂ' (ಗದಾ. ಸಂಗ್ರಹ, ೫–೧೪) ಎಂಬ ಪಾಠವನ್ನು ಅಂಗೀಕರಿಸಿದರೆ ಆಗ 'ಕಣ್ಮಲರ್' ಎಂಬುದಕ್ಕೂ ಸಮುಚ್ಚಯ ಸಮಾವೇಶವಾಗಬೇಕು.

೨. ಮನೆ ಪೆಣ್ಣುಂ ಮಕ್ಕಳೆಂಬೀ ನುಡಿ ಪುಸಿ (ಗದಾ. ೧೦–೧೧)

ಎಂಬ ಪ್ರಯೋಗಗಳುಂಟು. ಈ ವಿಷಯವಾಗಿ ಕೇಶಿರಾಜ 'ಸಾರಮುದಧ್ಯಾರೋಪಂ...ಪೇೞ್ವುದಾ ಸಮುಚ್ಚಯದುಮುಗಂ'' (ಸೂ. ಶಮದ ೧೫೬) ಎಂದು ಹೇಳಿ ''ಅಯುಂ ಸಿರಿತಾಯುಂ ತಂದೆ ಕಣ್ಣುಂ ಗತಿಯೆನಿಸಿದಪಂ ಸಿಂಹಸೇನಕ್ಷಿತೀಶಂ'' ಎಂಬ ಉದಾಹರಣೆಯನ್ನು ಕಾಣಿಸಿ, ''ಎಂಬಲ್ಲಿ ಕಡೆಯ ಸಮುಚ್ಚಯದುಮ್ ಅಧ್ಯಾಹಾರ್ಯಂ'' ಎಂದು ವಿಧಿಸಿದ್ದಾನೆ. 'ಕವಿರಾಜಮಾರ್ಗ'ಕಾರನು ದೋಷವೆಂದು ಭಾವಿಸಿರುವ (''ದೋಷಮಿದಗ್ಗಳಂ'' ಈ ಸಮುಚ್ಚಯ ಪ್ರಯೋಗವನ್ನು ಕೇಶಿರಾಜನು ದೋಷವೆಂದು ಭಾವಿಸದೆ ಆ ಸಮುಚ್ಚಯ ಪ್ರತ್ಯಯ ಅದಿಲ್ಲದಿರುವ ಎಡೆಯಲ್ಲಿ ಅಧ್ಯಾಹಾರ್ಯವೆಂದು ವಣಿಸಿದ್ದಾನೆ.

ಇದೇ ಸಮುಚ್ಚಯದ ಪ್ರತ್ಯಯವನ್ನು ಬೇರೊಂದು ರೀತಿಯಲ್ಲಿ ಪ್ರಯೋಗಿಸಿರುವುದು 'ವಡ್ಡಾರಾಧನೆ'ಯಲ್ಲಿ ಕಾಣುತ್ತದೆ. ಅದು ಆ ಗ್ರಂಥದ ವೈಶಿಷ್ಟ್ಯವೆಂದು ಹೇಳಲೂಬಹುದು. ಆಖ್ಯಾತ ವಿಭಕ್ತಿ ಪ್ರತ್ಯಯಗಳು ನಾಮ, ಸಂಖ್ಯಾ, ಗುಣವಚನ, ಸರ್ವನಾಮ—ಈ ಶಬ್ದಗಳಿಗೆ ಸೇರಿ ನಾಮಕ್ರಿಯೆಗಳಾಗುವ ವಿಷಯ ಶಬ್ದಮಣಿದರ್ಪಣದಲ್ಲಿ (೨೩೦) ಹೇಳಿದೆಯಷ್ಟೆ. (i) ಇಂಥ ಕ್ರಿಯೆಗಳು ಸಮುಚ್ಚಯವಾಗಿ ಬಂದಾಗ ಅವುಗಳ ಅಂತ್ಯಕ್ಕೆ—ಉಂ ಪ್ರತ್ಯಯ ಸೇರುತ್ತದೆ. ಈ ಕೆಳಗಿನ ಉದಾಹರಣೆಗಳನ್ನು 'ವಡ್ಡಾರಾಧನೆ'ಯಲ್ಲಿ ನೋಡಬಹುದು:

(i) ೧. ನಾಮುಂ ಪಾರ್ವರೆಮುಂ ಲೋಕಕ್ಕೆಲ್ಲಮುಗ್ಗಳಂ ಲೋಕಪೂಜಿತ[ರೆ]ಮುಮೆಮ್ಮಿಂ ಪೆಱರಿಲ್ಲ (೧೩–೧೯, ೨೦)
೨. ವೈದ್ಯಶಾಸ್ತ್ರದೊಳಾದಮಾನುಂ ಕುಶಲರೆಮುಂ ಗ್ರಂಥಾರ್ಥಸ್ವರೂಪದಿಂದೆಲ್ಲಾ ಕುಶಲರೆಮುಂ ಕರ್ಮಜ್ಞರೆಮುಂ (೬೯–೨೧, ೨೨)
೩. ಆಮೆಲ್ಲಂ ಕೂಸುಗಳೆಮುಂ ನವಯೌವನರೆಮುಂ (೧೦೦–೧)
೪. ಮತ್ತಮಿರ್ವೆಮುಂ ಸಮಾನವಯಸರೆಂ (೧೨೮–೧೯), ಇತ್ಯಾದಿ

ಮೇಲಿನ ನಾಲ್ಕು ಪ್ರಯೋಗಗಳಲ್ಲಿ ನಾಮಪದ. ಆಖ್ಯಾತಪ್ರತ್ಯಯ ಸಮುಚ್ಚಯ ಉಂ—ಈ ವಿನ್ಯಾಸವಿರುವುದು ವ್ಯಕ್ತವಾಗಿದೆ. ಮೂರನೆಯ ಪ್ರಯೋಗವನ್ನು ಹೊಸಗನ್ನಡಕ್ಕೆ 'ನಾವೆಲ್ಲ ಕೂಸು

ಗಳಾಗಿದ್ದೇವೆ ಮತ್ತು ನವಯೌವನರಾಗಿದ್ದೇವೆ ಮತ್ತು' ಎಂದು ತಿರುಗಿಸಬಹುದು. ಹೀಗೆಯೇ ಉಳಿದ ಪ್ರಯೋಗಗಳನ್ನೂ ಮಾಡಬಹುದು.

**(ii)** ಕ್ರಿಯಾಪದಗಳು ಸಮುಚ್ಚಾಯಕವಾಗಿ ಬಂದಾಗ ಅವುಗಳ ಅಂತ್ಯಕ್ಕೆ—ಉಂ ಸೇರುತ್ತದೆ:

೧. ನೋಳ್ಪೆನುಂ ಬರೆವೆನುಂ ಭಾವಿಸುತ್ತಿರ್ಪೆನಪ್ಪುದಱಿಂ (೫೯–೧೬)
೨. ಆಂ ಸೋಲ್ತೆನುಂ. ಸತ್ತೆನುಂ (೧೨೫–೯)

**(i)** ಮತ್ತು **(ii)** ಸಮ್ಮಿಶ್ರವಾಗಿಯೂ ಬರಬಹುದು.

೧. ಕುಲಕ್ರಮಾಗತರೆಮ್ಮುಂ ನಿಮ್ಮ ಪ್ರಸಾದದಿಂ ಬಾಳ್ವೆಮುಂ (೧೮೫–೨೧)
೨. ಪಂಚಮಹಾಪಾತಕರೆಮ್ಮುಂ ಪೊಲ್ಲಕೆಯ್ದೆಮುಂ ಭಟ್ಟಾರರಂ ಕೊಂದೆಮುಮವರ್ ತಪದ ಮಾಹಾತ್ಮ್ಯದಿಂದಂ ಬರ್ದುಂಕಿದರ್ (೯೯–೧೪)

ಈ ತೆರನಾಗಿ ಸಮುಚ್ಚಯವನ್ನು ಬಳಸಿರುವುದಕ್ಕೆ ನಿದರ್ಶನಗಳು ೧೦ನೆಯ ಶತಮಾನದ ಕನ್ನಡ ಗ್ರಂಥಗಳಲ್ಲಿ ಹೆಚ್ಚಾಗಿ ದೊರೆಯುತ್ತಿಲ್ಲ. 'ಕಾವ್ಯಾವಲೋಕನ'ದಲ್ಲಿ ಉದ್ಧೃತವಾಗಿರುವ ಪಂಪ ಭಾರತದ ಪದ್ಯದಲ್ಲಿ (೧೨–೩೬) "ತಂದೆಯ ಶೋಕೆಮನಿರ್ವೆಮುಂ ಮುನಿದರಂ ತವೆ ಕೊಂದೊಡ ನೀಗುವಂ" ಎಂಬ ಪಾಠವಿದೆ. ಇದರಂತೆ ಇರ್ವೆಂ+ಉಂ ಎಂದು 'ನಾವು ಇಬ್ಬರಾಗಿದ್ದೇವೆ, ಮತ್ತು', ಎಂದರೆ ಒಟ್ಟಿನಲ್ಲಿ ನಾವಿಬ್ಬರೂ ಎಂದು ಅರ್ಥಮಾಡಬೇಕಾಗಿದೆ. 'ಇರ್ವರುಂ' ಎಂಬ ಪಾಠಾಂತರದಲ್ಲಿ ವಿಶೇಷವೇನೂ ಇಲ್ಲ. 'ಇರ್ವೆಮುಂ' ಎಂಬುದು ಕವಿಪಾಠವೆಂದು ಹೇಳಬೇಕಾಗಿದೆ. ಚಾವುಂಡರಾಯಪುರಾಣದಲ್ಲಿ ಇರ್ವೆಮುಂ ಎಂಬುದಕ್ಕೆ ಎರಡು ಪ್ರಯೋಗಗಳು ನನ್ನ ದೃಷ್ಟಿಗೆ ಬಿದ್ದಿವೆ:

೧. ಬಾಲಿಗಧಿರಾಜಪಟ್ಟಮುಂ ಎನಗೆ ಯುವರಾಜಪಟ್ಟಮುಮಂ
ಕೊಟ್ಟೊಡಂತಿರ್ವೆಮುಮಿರ್ಪಿನಮೆಮ್ಮಣ್ಣನೆನ್ನಂ ನಾಡಿಂದಟ್ಟಿ ಕಳೆಯೆ

—(ಸೀತೆಯ ಕಥೆಯಲ್ಲಿ)

೨. ಧಾತಕೀಷಂಡದೊಳಾಮಿರ್ವೆಮುಂ ತಪಂಗೆಯ್ದು

—(ನೇಮಿಜಿನನ ಕಥೆಯಲ್ಲಿ)

ಈ ನಾಲ್ಕು ಆಂತರಿಕ ಆಧಾರಗಳನ್ನು ಸಮಷ್ಟಿದೃಷ್ಟಿಯಿಂದ ನೋಡಿದರೆ 'ವಡ್ಡಾರಾಧನೆ' ಪಂಪಭಾರತಕ್ಕಿಂತ (ಕ್ರಿ.ಶ. ೯೪೧) ಹಿಂದಿನ ರಚನೆಯಾಗಿರಬೇಕೆಂಬ ಭಾವನೆಯುಂಟಾಗುತ್ತದೆ. ಇದು ರಚನೆಯಾದ ಕಾಲದ ಅವಧಿ ೮೯೦ ರಿಂದ ೯೪೧ ಎಂದಾಗುತ್ತದೆ; ಸುಮಾರು ಕ್ರಿ.ಶ. ೯೨೦ ಎಂಬ ಕಾಲವನ್ನು ಈ ಗ್ರಂಥಕ್ಕೆ ಕೊಡಬಹುದಾಗಿದೆ. "ಆದೌ ಜನ್ಮಜರಾರೋಗ" ಎಂದು ಆರಂಭವಾಗುವ ಪದ್ಯ ಗುಣಭದ್ರನದಲ್ಲವೆಂದೂ, ಅವನಿಗಿಂತ ಹಿಂದಿನ ಕಾಲದ್ದೆಂದೂ ಸ್ಥಾಪಿಸಬಹುದಾದರೆ 'ವಡ್ಡಾರಾಧನೆ' ಕವಿರಾಜಮಾರ್ಗಕ್ಕೆ ಸಮಕಾಲಿಕವಾದ (ಕ್ರಿ.ಶ. ಸು. ೮೫೦) ಕೃತಿಯೆಂದು ಹೇಳುವುದು ಸಂಗತವಾಗುತ್ತದೆ.

## ದೇಶ

'ವಡ್ಡಾರಾಧನೆ'ಯನ್ನು ಹೇಳಿದ ಕನ್ನಡದ ಶಿವಕೋಟಿ ಕನ್ನಡನಾಡಿನ ಯಾವ ಪ್ರದೇಶಕ್ಕೆ ಸೇರಿದ್ದಿರಬಹುದು ? ಈ ಪ್ರಶ್ನೆಗೆ ಉತ್ತರವನ್ನು ಹೇಳುವುದು ಸಾಧ್ಯವಿಲ್ಲವಾದರೂ ಒಂದು ಊಹೆಗೆ ಅವಕಾಶವಿರುವಂತೆ ತೋರುತ್ತದೆ. ಈ ಗ್ರಂಥದಲ್ಲಿ ಬರುವ ಕಾರ್ತಿಕ ಋಷಿಯ ಕಥೆಯಲ್ಲಿ ಇದಕ್ಕೆ ಆಕಾರವಿರುವಂತಿದೆ:

೧. ಕೋಗಳಿಯನಾಳ್ವ ಕ್ರೌಂಚನೆಂಬರಸಂಗೆ ಕೊಟ್ಟರ್.
೨. ತೆಂಕನಾಡ ಕಿಷ್ಕಿಂಧಮೆಂಬ ಪರ್ವತಮನೆಯ್ದಿಯದಱ ಮೇಗೆ ರಾತ್ರಿ ಪ್ರತಿಮಾಯೋಗಂ ಗೆಯ್ದಿರ್...ಅಲ್ಲಿಂ ತೊಡಗಿ ದಕ್ಷಿಣಾಪಥದೊಳದು ತೀರ್ಥಮಾಯ್ತು.
೩. ಕೋಗಳಿಯನೆಯ್ದಿಯಲ್ಲಿಯ ಬಸದಿಯೊಳ್ ಪಂಥಾತಿಚಾರನಿಯಮಮಂ ಗೆಯ್ದು.
೪. ದೇವತೆ ನವಿಲ ರೂಪಿನಿಂದೆತ್ತಿಕೊಂಡು ಬೆನ್ನೊಳಿಟ್ಟು ಕೋಗಳಿಯ ಮೂಡಣದೆಸೆಯ ಪರ್ವತದ ಕೊಳದ ತಡಿಯೊಳ್ ಇರಿಸಿ ಪೋದೊಡೆ ಮುಡಿಪಿ.
೫. ಅಂದಿಂದಿತ್ತ ಬಾದುಬ್ಬೆಯ ಪರ್ವಮುಂ ಪಗರಣದಾಟಪಾಟಮುಮಾದುವು.
೬. ಸ್ವಾಮಿ ಕಾರ್ತಿಕ ಋಷಿಯರ್ ಮುಡಿಪಿದಲ್ಲಿಯವರ ತಂಗೆಯಪ್ಪ ವೀರಶ್ರೀ ಬಸದಿಯಂ ಮಾಡಿದೊಡೆ...

ಮೇಲಿನ ಉದ್ಧೃತವಾಕ್ಯಗಳಿಂದ ತೆಂಕನಾಡಿನ ಕಿಷ್ಕಿಂಧವೆಂಬ ಬೆಟ್ಟದ ಬಳಿ ಕೋಗಳಿ ಎಂಬ ಊರು ಇದ್ದಿತು; ಅಲ್ಲಿ ಬಸದಿಗಳು ಎಂದರೆ ಜಿನಮಂದಿಗಳು ಇದ್ದುವು; ಅದಕ್ಕೆ ರಾಜ ಕ್ರೌಂಚ; ಆ ಊರಿನ ಪೂರ್ವದ ಪರ್ವತದಲ್ಲಿ ಕಾರ್ತಿಕೇಯ ಋಷಿ ಮುಡಿಪಿದನು ಎಂದರೆ ಸತ್ತನು; ಆ ಎಡೆಯಲ್ಲಿ ಅವನ ತಂಗಿ ವೀರಶ್ರೀ ಒಂದು ಬಸದಿಯನ್ನು ಕಟ್ಟಿಸಿದಳು; ಬಾದುಬ್ಬೆಯ ಹಬ್ಬ ಅಂದಿನಿಂದ ಆರಂಭವಾಯಿತು—ಎಂಬ ಅಂಶಗಳು ತಿಳಿದುಬರುತ್ತವೆ. ಇವುಗಳಲ್ಲಿ ಕ್ರೌಂಚರಾಜನೂ ಅವನ ಹೆಂಡತಿ ವೀರಶ್ರೀಯೂ ಕಥೆಯ ಪಾತ್ರಗಳಾಗಿರುವುದರಿಂದ ಅವರ ವಿಚಾರ ಮಾಡಬೇಕಾಗಿಲ್ಲ. ಉಳಿದ ಅಂಶಗಳಲ್ಲಿ ಕೋಗಳಿ ಎಂಬ ಊರು ಪ್ರಮುಖವಾಗಿದೆ. ಈ ಹೆಸರು ಹರಿಷೇಣನ ಬೃಹತ್ಕಥಾಕೋಶದಲ್ಲಿ ಬರುವುದಿಲ್ಲ; 'ವಡ್ಡಾರಾಧನೆ'ಯಲ್ಲಿರುವ ಈ ಕಥೆಯ ಆರಂಭದ ಗಾಹೆಯಲ್ಲಿ 'ರೋಹೇದಯಮ್ಮಿ' (ರೋಹೇದಕ) ಎಂದು ಊರಿನ ಹೆಸರಿದೆ. ಹರಿಷೇಣನ ಕೃತಿಯಲ್ಲಿ 'ರೋಹೇಡಕ' ಎಂದಿದೆ. ವಡ್ಡಾರಾಧನೆಯಲ್ಲಿ ಈ ಹೆಸರು ಕಥಾಭಾಗದಲ್ಲಿ ಎಲ್ಲಿಯೂ ಇಲ್ಲ; ಅಲ್ಲೆಲ್ಲ ಕೋಗಳಿ ಎಂದೇ ಇದೆ. ಇದಕ್ಕೆ ಏನೋ ವಿಶಿಷ್ಟವಾದ ಕಾರಣವಿರಬಹುದು.

ಈಗಿನ ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ, ಹೂವಿನ ಹಡಗಲಿ—ಎಂಬ ತಾಲ್ಲೂಕುಗಳನ್ನು ಒಳಕೊಂಡಿದ್ದ ಪ್ರದೇಶಕ್ಕೆ ಹಿಂದಿನ ಕಾಲದಲ್ಲಿ ಕೋಗಳಿ ೫೦೦ ಎಂಬ ಹೆಸರಿದ್ದಿತು; ಇದಕ್ಕೆ ಎಂದರೆ ಕೋಗಳಿನಾಡಿಗೆ ಮುಖ್ಯ ನಗರ ಕೋಗಳಿ. ಈ ನಾಡಿನ ವರ್ಣನೆ ಹಲವು ಶಾಸನಗಳಲ್ಲಿ ಕಂಡುಬರುತ್ತದೆ. ಉದಾಹರಣೆಗೆ ಒಂದು ಶಾಸನದಲ್ಲಿ:[38]

ನಾಡುಗಳೊಳಗೆಲ್ಲ ಗಾಡಿವೆತ್ತಸಮದ
ನಾಡುಗರಸವತಿಚೆಲ್ವ ಕೋಗಳಿ
ನಾಡು ನೋಡಲ್ಕೆ ಸೊಗಯಿಕ್ಕುಂ ॥
ಆ ನಾಡೊಳೆಸೆವುದು ನಾನಾವಿದ್ವಜ್ಜನ
ಸ್ಥಾನಂ ನಿಗ್ಗುಂದಮೆನಿಪಗ್ರಹಾರವ
ತ್ಯಾನಂದಕಾರಿ ಜಗಕೆಲ್ಲಂ ॥

ಎಂಬೆರಡು ತ್ರಿಪದಿಗಳಿವೆ. ಇದರಿಂದ ಕೋಗಳಿನಾಡು ಇತರ ನಾಡುಗಳಿಗಿಂತ ಅಧಿಕ ರಮಣೀಯವಾಗಿದ್ದಿತೆಂದೂ, ಅದರಲ್ಲಿ ನಿಗ್ಗುಂದವೇ ಮುಂತಾದ ಅಗ್ರಹಾರಗಳಿದ್ದುವೆಂದೂ ತಿಳಿದುಬರುತ್ತದೆ. ಈ ನಾಡು ಚಳುಕ್ಯ ರಾಷ್ಟ್ರಕೂಟರ ಕಾಲಗಳಲ್ಲಿ ತುಂಬ ಪ್ರಸಿದ್ಧವಾಗಿತ್ತು. ಇದನ್ನು ಕೋಗಳಿ ೫೦೦ ಎಂದೇ ಕರೆಯುವ ವಾಡಿಕೆ ಇದ್ದಿತು.[39] ಇದಕ್ಕೆ ಮುಖ್ಯ ನಗರವಾಗಿದ್ದ ಕೋಗಳಿ ಈಗ ಒಂದು ಹಳ್ಳಿಯಾಗಿದೆ. ಇಲ್ಲಿ ಅನೇಕ ಪ್ರಾಚೀನ ಅವಶೇಷಗಳಿವೆ: ಖಿಲವಾಗಿರುವ ಜೈನಬಸದಿ

[38] *SII.* ix, part I, No. 141.; A.D. 1079.

[39] *Inscriptions of the Madras Presidency*. Vol. 1, *Bellary Inscriptions*, Rangacharya, Nos. 195, 215, 234, 245, 265, 267, 273, etc.

ಗಳೂ ಅಲ್ಲಲ್ಲಿ ಮುರಿದುಬಿದ್ದಿರುವ ದೇವತಾಮೂರ್ತಿಗಳೂ ಇಲ್ಲಿ ಇಂದಿಗೂ ಹೇರಳವಾಗಿವೆ: ಈ ಹಳ್ಳಿಯಲ್ಲಿ ಅನೇಕ ಶಿಲಾಶಾಸನಗಳೂ ದೊರೆತಿವೆ.[40] ಶಕ ೯೭೭ರಲ್ಲಿ ಲಿಖಿತವಾದ ಒಂದು ಶಾಸನದಲ್ಲಿ[41] ಇಂದ್ರಕೀರ್ತಿ ಮುನೀಂದ್ರನು ಜೈನಬಸದಿಯ ಮಾಣಿಗಳ ವಿದ್ಯಾಭ್ಯಾಸಕ್ಕಾಗಿ ಒಂದು ದತ್ತಿಯನ್ನು ಬಿಟ್ಟಂತೆ ಹೇಳಿದೆ; ಈ ಜೈನಬಸದಿಯನ್ನು ಮೊದಲು ಕಟ್ಟಿಸಿದವನು ಗಂಗರಾಜನಾದ ದುರ್ವಿನೀತನೆಂದು ಆ ಶಾಸನದ ಈ ಕೆಳಗಿನ ಪದ್ಯ ಹೇಳುತ್ತದೆ: (ಪಂಕ್ತಿ ೧೫–೧೬)

ಇದು ದುರ್ವಿನೀತನಿಂದಂ
ಮೊದಲೊಳ್ ಬಸದಿಯಿದ ನಾಡ ಮತ್ತರಘುಳಿಯಂ।
ವಿದಿತಯಶರಿನ್ದ್ರಕೀರ್ತಿಗ
ಳುದಿತೋದಿತಮಾಗೆ ಮಾಡಿದರ್ ಕೋಗಳಿಯೊಳ್॥

ಗಂಗರಾಜ ದುರ್ವಿನೀತನ ಕಾಲದಿಂದ ಹಿಡಿದು ಕ್ರಿ.ಶ. (೫೫೫-೬೦೫)[42] ಹಲವು ಶತಮಾನಗಳ ವರೆಗೆ, ಬಹುಶಃ ಹೊಯ್ಸಳ ವಂಶದ ಅಂತ್ಯದವರೆಗೆ, ಉಚ್ಛ್ರಾಯಸ್ಥಿತಿಯಲ್ಲಿದ್ದ ಈ ಊರು ಪುಣ್ಯಕ್ಷೇತ್ರವಾಗಿತ್ತು; ಜೈನಧರ್ಮಕ್ಕೆ ಕೇಂದ್ರವಾಗಿತ್ತು. ಒಂದು ಶಾಸನದಲ್ಲಿ[43] ಇದನ್ನು ಕೋಗಳಿಯ ತೀರ್ಥವೆಂದು ಕರೆದಿದೆ. ಕ್ರಿ.ಶ. ೯೯೨ರ ಇನ್ನೊಂದು ಶಾಸನದಲ್ಲಿ[44] ಕೋಗಳಿಯ ಸ್ಥಾನಾಧಿಪತಿಗಳಾದ ಗಣಧರದೇವಭಟ್ಟಾರಕನ ಹೆಸರನ್ನು ಹೇಳಿದೆ. 'ಕ್ರಿ.ಶ. ೮೯೭ರ ಇನ್ನೊಂದು ಶಾಸನದಲ್ಲಿ[45] ಕೋಗಳಿಯಯ್ನೂಱು ನಾಡಿನ ಉಲ್ಲೇಖವಿದೆ. ರಾಷ್ಟ್ರಕೂಟ ನಿತ್ಯವರ್ಷದೇವನ ಕ್ರಿ.ಶ· ೯೨೨ರ ಒಂದು ಶಾಸನದಲ್ಲಿ[46] ಮಾಸಿಯವಾಡ ನಾಲ್ವತ್ತರೊಡನೆ ಕೋಗಳಿಯಯ್ನೂರನ್ನು ಹೇಳಿದೆ. ಕೋಗಳಿ 'ನಾಲ್ಕುಂ ಯುಗದ ಪೊಟಿಲ್' ಎಂದು ಹಿಂದೆಯೇ ಹೇಳಿದ ಕ್ರಿ.ಶ. ೯೯೭ರ ಶಾಸನದಲ್ಲಿ ಹೊಗಳಿದೆ. ಈ ಪಟ್ಟಣ ಮುಳುಗುಂದ, ಕೊಪಣ, ಶ್ರವಣಬೆಳಗೊಳ ಮುಂತಾದುವುಗಳಂತೆ ಪ್ರಸಿದ್ಧವೂ, ಪವಿತ್ರವೂ ಆದ ಕ್ಷೇತ್ರವಾಗಿತ್ತು. ಇದರ ಹೆಸರನ್ನು 'ವಡ್ಡಾರಾಧನೆ'ಯಲ್ಲಿ ಹೇಳುವುದಕ್ಕೆ ಕಾರಣವೇನು? ಹರಿಷೇಣನು (೯೩೧ ಶಾ.ಶ.) ಇದನ್ನು ಹೇಳಿಲ್ಲ. ಆದ್ದರಿಂದ ಕೋಗಳಿಯ ಹೆಸರನ್ನು ಇಲ್ಲಿ ತರುವುದಕ್ಕೆ ವಿಶೇಷವಾದ ಏನೋ ಕಾರಣವಿರಬೇಕು. ಬಹುಶಃ 'ವಡ್ಡಾರಾಧನೆ'ಯ ಶಿವಕೋಟಿ ಈ ಊರಿಗೆ ಅಥವಾ ಈ ಪ್ರದೇಶಕ್ಕೆ ಸೇರಿದವನಾಗಿರಬೇಕೆಂದೂ, ತನ್ನ ಊರ ಹೆಸರನ್ನು ಕಥೆಯಲ್ಲಿ ಹೀಗೆ ಸೇರಿಸಿದ್ದಾನೆಂದೂ ಹೇಳಬಹುದಾಗಿದೆ.

ಈ ಕಥೆಯಲ್ಲಿ ಬರುವ ಸ್ವಾಮಿ ಕಾರ್ತಿಕ ಋಷಿಗೂ ಬಳ್ಳಾರಿ ಜಿಲ್ಲೆಗೂ ಸಂಬಂಧವಿರಬಹುದು. ಈ ಋಷಿ ರಾತ್ರಿ ಪ್ರತಿಮಾಯೋಗದಲ್ಲಿ ನಿಂತದ್ದು ಕಿಷ್ಕಿಂಧವೆಂಬ ಪರ್ವತದ ಮೇಲೆ; ಅವನ ಮೇಲೆ ರಾತ್ರಿಯೆಲ್ಲ ಸುರಿದ ಮಳೆಯ ನೀರು. ಮಡುವಾಗಿ 'ಸರ್ವೌಷಧ'ವೆಂಬ ತೀರ್ಥವಾದದ್ದು ಆ ಪರ್ವತದಲ್ಲಿ. ಶಕ್ತಿಯೆಂಬ ಆಯುಧದಿಂದ ಈ ಋಷಿ ಹತನಾದದ್ದು ಕೋಗಳಿಯಲ್ಲಿ; ಅಲ್ಲಿಂದ ನವಿಲ ರೂಪಿನ ದೇವತೆ ಅವನನ್ನು ಎತ್ತಿಕೊಂಡು ಬರುತ್ತದೆ; ಕೋಗಳಿಯ ಪೂರ್ವಕ್ಕಿರುವ ಬೆಟ್ಟದಲ್ಲಿನ ಕೊಳದ ಬಳಿ ಇವನನ್ನು ಆ ದೇವತೆ ಇರಿಸುತ್ತದೆ. ಋಷಿ ಮಡಿದದ್ದು ಅಲ್ಲಿ; ಅವನಿಗೆ

40 See Ibid, Nos. 189-193, 195-196.

41 *SII*, IX—i. No. 117.

42 ದುರ್ವಿನೀತನ ಕಾಲದ ವಿಚಾರವಾಗಿ ಭಿನ್ನಾಭಿಪ್ರಾಯಗಳಿವೆ. ರೈಸ್ ೪೮೨-೫೧೭ ಎನ್ನುತ್ತಾರೆ. ಬ್ರಾಯಿಲ್, ೬೦೫–೬೫೦; ರಾ. ನರಸಿಂಹಾಚಾರ್ಯ, ೬೦೫–೬೫೦.

43 *SII*, IX—1. No. 368 A.D. 1173-1220.

44 Ibid. No. 77; *Jainism in Karnataka*. p. 149.

45 *Bombay Karnatak Inscriptions*, No. 22.

46 *SII*, IX—1, 57.

ಒಂದು ಬಸದಿಯನ್ನು ಮಾಡಿದ್ದ ಅಲ್ಲಿ; ಅದಕ್ಕೆ ಸ್ವಾಮಿ ಎಂಬ ತೀರ್ಥನಾಮವಾಯಿತು. ಬಳ್ಳಾರಿ ಜಿಲ್ಲೆಯ ಸೊಂಡೂರಿನ ಬಳಿ ಬೆಟ್ಟಗಳಲ್ಲಿ ಈಗ ಕುಮಾರಸ್ವಾಮಿ ದೇವಾಲಯವಿರುವುದು ಪ್ರಸಿದ್ಧವಾಗಿದೆ. ಚಂಗಗಾವುಂಡನೆಂಬಾತ ಸೂಜಿಂಗಲ್ಲು ಎಂಬ ಪ್ರದೇಶವನ್ನು ಸತ್ಯರಾಶಿ ಭಟ್ಟಾರನಿಗೆ ಮಠದ ಅನ್ನಸತ್ರಕ್ಕಾಗಿ ದಾನಮಾಡಿದಂತೆಯೂ, ಆ ದಾನವನ್ನು ಕೋಳಗಲ್ಲಿನಲ್ಲಿ ಪ್ರಭುವಾಗಿದ್ದ ಗಜಧರಯ್ಯನು, ಸ್ವಾಮಿ ಕಾರ್ತಿಕೇಯ ತಪೋವನದ ಅಧಿಕಾರಿಯು. ಸ್ವೀಕರಿಸಿದಂತೆಯೂ, ರಾಷ್ಟ್ರಕೂಟ IIIನೆಯ ಕೃಷ್ಣನ ಕಾಲದ ಒಂದು ಶಾಸನದಲ್ಲಿ (ಕಾಲ ಕ್ರಿ.ಶ. ೯೬೪) ಉಕ್ತವಾಗಿವೆ.[47] ಇನ್ನೊಂದು ಶಾಸನದಿಂದ[48] ಕುಮಾರಸ್ವಾಮಿ ದೇವಾಲಯವು ಶಕ ೬೪೧ (ಕ್ರಿ.ಶ. ೭೧೯) ಸ್ಥಾಪಿತವಾದಂತೆ ತಿಳಿದುಬರುತ್ತದೆ. ಆದ್ದರಿಂದ ಆ ದೇವಾಲಯ ಸಾಕಷ್ಟು ಹಳೆಯದಾದ ರಚನೆಯೆಂದು ನಿರ್ಧರಿತವಾಗಿದೆ. ಕಥೆಯಲ್ಲಿನ ಸ್ವಾಮಿ ಕಾರ್ತಿಕೇಯ ಯತಿ ಕುಮಾರಸ್ವಾಮಿಯೆಂಬ ದೇವರಾಗಿಯೂ, ಆ ಬಸದಿಯೇ ಅನ್ಯದೇವಾಲಯವಾಗಿಯೂ ಪರಿವರ್ತನೆಗೊಂಡಿರಬಹುದು.[49] ಈ ಭೂಸನ್ನಿವೇಶವೆಲ್ಲ ಕೋಗಳಿಯ ಪೂರ್ವಕ್ಕೆ ಇರುವ ಪರ್ವತಪ್ರಾಂತವಾಗಿದೆ. ಈ ಎಲ್ಲ ಕಾರಣಗಳಿಂದ ವಡ್ಡಾರಾಧನೆಯ ಕರ್ತೃವಾದ ಶಿವಕೋಟಿ ಕೋಗಳಿ ನಾಡಿಗೆ ಎಂದರೆ ಈಗಿನ ಬಳ್ಳಾರಿ ಜಿಲ್ಲೆಯ ಪಶ್ಚಿಮಭಾಗಕ್ಕೆ ಸೇರಿದವನೆಂದು ಹೇಳಬಹುದು. ಕಾರ್ತಿಕೇಯ ಋಷಿಯ ಮರಣವಾದ ಸ್ವಲ್ಪ ಕಾಲಕ್ಕೆ ಬಾದುಬ್ಬೆಯೆಂಬ ಹಬ್ಬ ರೂಢಿಗೆ ಬಂದಿತೆಂದು ಕಥೆಯಿಂದ ತಿಳಿದುಬರುವ ಅಂಶವಾಗಿದೆಯಷ್ಟೆ. ಈ ಹಬ್ಬ ಉಕ್ತವಾಗಿರುವ ಅತ್ಯಂತ ಪ್ರಾಚೀನ ಉಲ್ಲೇಖ ನಮಗೆ ಕಂಡಮಟ್ಟಿಗೆ ಖಾಜಿಪೇಟೆಯ ಶಿಲಾಲಿಪಿ.[50] ಇದರ ಕಾಲ ಕ್ರಿ.ಶ. ೮೭೨; ಇದರ ೨೪ನೆಯ ಪಂಕ್ತಿಯಲ್ಲಿ "ಬಾದುಬ್ಬೆಯ ಪರ್ವದಂದು" ಎಂಬ ಮಾತುಗಳಿವೆ. ಈ ಎಲ್ಲ ನೆನಪುಗಳು ಜನತೆಯ ಸ್ಮೃತಿಪಥದಲ್ಲಿ ಇನ್ನೂ ಜೀವಂತವಾಗಿದ್ದ ಕಾಲದಲ್ಲಿ 'ವಡ್ಡಾರಾಧನೆ' ರಚಿತವಾಗಿರಬಹುದು.

ಈ ಪೀಠಿಕೆ ಅಚ್ಚಾಗುತ್ತಿರುವಾಗ ಅದರ ಕೊನೆಯ ಕರಡುಪ್ರತಿಯೊಂದನ್ನು ಡಾ. ಆ. ನೇ. ಉಪಾಧ್ಯೆ ಅವರಿಗೆ ಕಳಿಸಲಾಯಿತು. ಅದನ್ನೆಲ್ಲ ಸಾವಧಾನವಾಗಿ ಪರೀಶಿಲಿಸಿ ಅವರು ನನಗೆ ಒಂದೆರಡು ಪತ್ರಗಳನ್ನು ಬರೆದರು. ಅವುಗಳಲ್ಲಿ ಸೆಪ್ಟೆಂಬರ್ ೧೫, ೧೯೬೪ನೆಯ ದಿನಾಂಕದ ಪತ್ರ ಬಹಳ ಮುಖ್ಯವಾದುದಾಗಿದೆ. ಅದರಲ್ಲಿ ಅವರು ವಡ್ಡಾರಾಧನೆಯ ಕರ್ತೃತ್ವ ಕಾಲವಿಚಾರಗಳ ಬಗ್ಗೆ ತಮ್ಮ ನಿಲವೇನೆಂಬುದನ್ನು ವಿಶದಗೊಳಿಸಿದ್ದಾರೆ. ಅದನ್ನು ಇಲ್ಲಿ ನಿರೂಪಿಸಿ ಆ ಬಗ್ಗೆ ನನ್ನ ನಿಲವೇನೆಂಬುದನ್ನು ಸ್ಪಷ್ಟಪಡಿಸಬೇಕಾಗಿದೆ.

'ವಡ್ಡಾರಾಧನೆ'ಯ ಕರ್ತೃ ಯಾರೆಂ ಗೊತ್ತಿಲ್ಲ; ಅದರ ಅಂತ್ಯದಲ್ಲಿ ಬರುವ 'ಈ ಪೇಳ್ದ ಪತ್ತೊಂಬತ್ತು ಕತೆಗಳಂ ಶಿವಕೋಟ್ಯಾಚಾರ್ಯರ್ ಪೇಳ್ದ [ರ್]' ಎಂಬ ವಾಕ್ಯದಲ್ಲಿ ಕಾಣುವ ಶಿವಕೋಟಿ 'ಭಗವತೀ ಆರಾಧನಾ ಅಥವಾ ಮೂಲಾರಾಧನಾ' ಎಂಬ ಪ್ರಾಕೃತ ಗ್ರಂಥದ ಕರ್ತೃವಿಗೆ ಅನ್ವಯಿಸುತ್ತದೆ. ಆ ಪ್ರಾಕೃತ ಗ್ರಂಥಕ್ಕೆ 'ವಡ್ಡಾರಾಧನಾ' ಎಂಬ ಹೆಸರೂ ಇದ್ದಿರಬಹುದು. 'ವಡ್ಡಾರಾಧನೆ' ಹನ್ನೊಂದನೆಯ ಶತಮಾನದಲ್ಲಿ ರಚಿತವಾಗಿರಬಹುದು. ಇದು ಅವರ ನಿಲವು. ಅವರು ಕೊಟ್ಟಿರುವ ಕಾರಣಗಳನ್ನು ಕೆಳಗೆ ಕಾಣಿಸಿದೆ:

(೧) 'ವಡ್ಡಾರಾಧನೆ'ಯಲ್ಲಿರುವ ಕಥೆಗಳಿಗೆ ಮೂಲವಾದ ಗಾಹೆಗಳು 'ಭಗವತೀ ಆರಾಧನಾ'ದಲ್ಲಿರುವುವೇ ಆಗಿವೆ; ಅಲ್ಲಿರುವ ಗಾಹೆಗಳ ಕ್ರಮದಂತೆಯೇ ಇಲ್ಲಿನ ಗಾಹೆಗಳೂ ಇವೆ.

(೨) ಈ ಗಾಹೆಗಳು ಹೇಗೆ ಆ ಪ್ರಾಕೃತ ಮೂಲದಿಂದ ಕನ್ನಡ ಗ್ರಂಥಕ್ಕೆ ಬಂದಿವೆಯೋ ಹಾಗೆಯೇ ಆ ಪ್ರಾಕೃತ ಗ್ರಂಥಕಾರನ ಹೆಸರೂ ಕನ್ನಡಕ್ಕೆ ಬಳುವಳಿಯಾಗಿ ಬಂದಿದೆ.

---

[47] *Inscriptions of the Madras Presidency*. Vol. I. 47; (*History of the Dekkan*, Bhandarkar) p. 54-55.

[48] ಅದೇ. 480, 481 ; Sewell's *Antiquities* I. 108.

[49] ಈ ವಿಷಯವಾಗಿ ಇನ್ನೂ ಹೆಚ್ಚಿನ ಸಂಶೋಧನೆಯ ಆವಶ್ಯಕತೆ ಇದೆ.

[50] *Annual Report of Archaeology*, Hyderabad, 1936.

(೩) ''ವಡ್ಡಾರಾಧನೆಯ ಕವಚವು (ಖ), ವಡ್ಡಾರಾಧನೆಯ ಕವಚವೆಂಬಧಿಕಾರಉ'' (ಘ) ಎಂಬ ಮಾತು ತುಂಬ ಮುಖ್ಯವಾದದ್ದು. ಈ ಗ್ರಂಥ 'ಕವಚ'ವೆಂಬ ಗ್ರಂಥ ಸಮುದಾಯಕ್ಕೆ ಸೇರಿದ್ದೆಂಬುದನ್ನು ತಿಳಿಸುತ್ತದೆ. ಈ ಮಾತಿಗೆ ಮೂಲ ''ಭಗವತೀ ಆರಾಧನಾ'' ಎಂಬುದರಲ್ಲಿದೆ.

(೪) ಕನ್ನಡದ ಕಥೆಗಳಲ್ಲಿ 'ಆರಾಧನಾ' ಎಂಬ ಪ್ರತಿಕ್ರಿಯೆಯ ವಿವರಗಳೇನೂ ಉಕ್ತವಾಗಿಲ್ಲ ದಿರುವುದರಿಂದ, 'ವಡ್ಡಾರಾಧನಾ' ಎಂಬ ಹೆಸರಿಗೆ ಸಾರ್ಥಕತೆ ಏನೂ ಇಲ್ಲ. ಆದರೆ ಶಿವ ಕೋಟಿಯ ಭಗವತೀ ಆರಾಧನಾ ಗ್ರಂಥಕ್ಕೆ ಈ ಹೆಸರು ಚೆನ್ನಾಗಿ ಅನ್ವಯಿಸುತ್ತದೆ.

(೫) ಈ ಕನ್ನಡ ಗ್ರಂಥಕ್ಕೆ 'ವಡ್ಡಾರಾಧನೆ' ಎಂಬ ಅನುಚಿತವಾದ ಹೆಸರನ್ನು ಗ್ರಂಥ ಕರ್ತನು ಯಾರೇ ಇರಲಿ, ಅವನು ಕೊಟ್ಟಿರುವನೆಂದು ಒತ್ತಾಯಪೂರ್ವಕವಾಗಿ ಹೇಳಲಾಗದು. 'ಉಪಸರ್ಗ ಕೇವಲಿಗಳ ಕಥೆ' ಎಂಬ ಹೆಸರು ಇದಕ್ಕಿಂತ ಎಷ್ಟೋ ಉಚಿತವಾದುದಾಗಿದೆ.

ಮೇಲೆ ಹೇಳಿರುವ ಅಂಶಗಳು ಡಾ. ಆ. ನೇ. ಉಪಾಧ್ಯೆಯವರ ನಿಲವಿಗೆ ಸಮರ್ಥನೆಯನ್ನು ಉಂಟುಮಾಡುತ್ತದೆಂದು ಆಪಾತತಃ ತೋರಬಹುದು. ಆದರೆ ಇವು ಯಾವುವೂ ನಿಷ್ಕೃಷ್ಟತೆ ಯನ್ನು ಪಡೆಯಲಾರವು. 'ವಡ್ಡಾರಾಧನೆ'ಯ ಕರ್ತೃತ್ವ ಕಾಲಗಳ ಬಗ್ಗೆ ನನ್ನ ನಿಲವು ಕೆಳಗೆ ಕಾಣಿಸಿ ದಂತಿವೆ :

(೧) ಗ್ರಂಥಾಂತ್ಯದಲ್ಲಿ ಕಾಣುವ ''ಈ ಪೇೞ್ದ ಪತ್ತೊಂಬತ್ತು ಕಥೆಗಳಂ ಶಿವಕೋಟ್ಯಾ ಚಾರ್ಯರ್ ಪೇೞ್ದಾ[ರ್]'' ಎಂಬ ವಾಕ್ಯ ಈಗ, ಇಗೋ, ಹೇಳಿರುವ ಹತ್ತೊಂಬತ್ತು ಕಥೆಗಳನ್ನು ಶಿವಕೋಟ್ಯಾಚಾರ್ಯರು ಹೇಳಿದರು ಎಂಬರ್ಥವನ್ನು ಕೊಡುತ್ತದೆ. ಇಲ್ಲಿ ಬರುವ ಶಿವಕೋಟಿ 'ಭಗವತೀ ಆರಾಧನಾ' ಕರ್ತೃವಿನಿಂದ ಭಿನ್ನನು, ಇವನೇ ಬೇರೆ ಶಿವಕೋಟಿ. ಶಿವಕೋಟಿ ನಾಮಕರಾದ ಹಲವಾರು ಜೈನಯತಿ ಲೇಖಕರಿದ್ದರು. ಈ ವಿಷಯವನ್ನು ನನ್ನ ಪೀಠಿಕೆಯಲ್ಲಿ ಸಾಧಾರವಾಗಿ ತೋರಿಸಿದೆ.

(೨) ಶಿವಕೋಟಿಯ ಪ್ರಾಕೃತ ಗ್ರಂಥಕ್ಕೆ 'ಭಗವತೀ ಆರಾಧನಾ' 'ಮೂಲಾರಾಧನಾ' ಎಂಬ ಹೆಸರುಗಳಿದ್ದುವೇ ಹೊರತು 'ವಡ್ಡಾರಾಧನಾ' ಎಂದು ಅದನ್ನು ಕರೆಯುತ್ತಿದ್ದರೆಂದು ಹೇಳು ವುದಕ್ಕೆ ಆಧಾರ ಕಾಣುವುದಿಲ್ಲ. ಕನ್ನಡ ಗ್ರಂಥಕರ್ತನು ಇಟ್ಟಿರುವ ಹೆಸರು 'ವಡ್ಡಾರಾಧನೆ' ಎಂದು. ಇದು ಉಚಿತವೋ ಅನುಚಿತವೋ ಎಂಬ ವಿಷಯ ಅವರವರ ಅಭಿಪ್ರಾಯಕ್ಕೆ ಒಳಪಟ್ಟದ್ದು. ಅಲ್ಲದೆ 'ವೃದ್ಧಾರಾಧನಾ' ಎಂಬ ಹೆಸರನ್ನು ವೃದ್ಧರ ಎಂದರೆ ಹಿರಿಯ ಜೈನಯತಿಗಳ ಆರಾಧನಾ ಎಂದರೆ ಸಾಧನೆ, ಸಿದ್ಧಿ ಎಂದು ಅರ್ಥೈಸಬಹುದಾಗಿದೆ. ಆ ಹಿರಿಯ ಜೈನಋಷಿಗಳು ಪಡೆದ ಸಿದ್ಧಿಗಳನ್ನು ಇಲ್ಲಿರುವ ಕಥೆಗಳು ವರ್ಣಿಸುತ್ತವೆ. ಆದ್ದರಿಂದ ಈ ಹೆಸರು ಈ ಕನ್ನಡ ಗ್ರಂಥಕ್ಕೆ ತಕ್ಕುದಲ್ಲವೆಂದು ಹೇಳುವ ಹಾಗಿಲ್ಲ.

(೩) 'ಈ ಪೇೞ್ದ', 'ಪೇೞ್ದಾ[ರ್]'—ಎಂಬ ಶಬ್ದಗಳು ಗಮನಾರ್ಹ. ಇದು ಒಂದು ನುಡಿಗಟ್ಟು ಕನ್ನಡದಲ್ಲಿ; ಕಾವ್ಯರಚನೆ ಮಾಡು ಎಂಬರ್ಥದಲ್ಲಿ ''ಕಾವ್ಯಮಂ ಪೇೞ್'' ಎಂದು ಹಳಗನ್ನಡದಲ್ಲಿ ಹೇಳುವುದು ವಾಡಿಕೆ. ಇದರಂತೆ 'ಶಿವಕೋಟ್ಯಾಚಾರ್ಯರ್ ಪೇೞ್ದಾ[ರ್]' ಎಂದರೆ ಶಿವಕೋಟ್ಯಾಚಾರ್ಯರು ರಚಿಸಿದರು ಎಂದರ್ಥ. ಒಟ್ಟಿನಲ್ಲಿ 'ಇಗೋ ಹೇಳಿದ, ಈಗ ಹೇಳಿದ, ಹತ್ತೊಂಬತ್ತು ಕಥೆಗಳನ್ನು ಶಿವಕೋಟ್ಯಾಚಾರ್ಯರು ರಚಿಸಿದರು' ಎಂದು ಆ ವಾಕ್ಯದ ಅರ್ಥ ವಾಗಿರುವುದರಿಂದ ಕನ್ನಡ ಗ್ರಂಥಕರ್ತನ ಹೆಸರು ಶಿವಕೋಟಿ'ಎಂದು ನಿಷ್ಪನ್ನವಾಗುತ್ತದೆ. ಇವನು ಯಾವ ಶಿವಕೋಟಿಯೋ ತಿಳಿಯದು.

(೪) ಇನ್ನು 'ಕವಚ' ಶಬ್ದದ ವಿಚಾರ. ಕನ್ನಡ ಗ್ರಂಥಕರ್ತನ ಆ ಹತ್ತೊಂಬತ್ತು ಕಥಾ ಸೂಚಕ ಗಾಥೆಗಳನ್ನು ಪ್ರಾಕೃತ 'ಭಗವತೀ ಆರಾಧನಾ' ಗ್ರಂಥದಿಂದ ಸ್ವೀಕರಿಸಿರುವಂತೆಯೇ ಅಲ್ಲಿನ 'ಕವಚ'ವೆಂಬ ಹೆಸರನ್ನೂ ತೆಗೆದುಕೊಂಡಿರಬಹುದು.

(೫) ಗ್ರಂಥಾಂತ್ಯದಲ್ಲಿ ಕವಿ ತನ್ನ ಹೆಸರನ್ನು ಹೇಳಿಕೊಳ್ಳದೆ ಶತಮಾನಗಳ ಹಿಂದೆ ಆಗಿಹೋದ ಇನ್ನೊಬ್ಬನ ಹೆಸರನ್ನು ಹೇಳುವುದು ಸಹಜವಾಗಿ ತೋರುವುದಿಲ್ಲ.

(೬) 'ವಡ್ಡಾರಾಧನೆ'ಯ ಶಿವಕೋಟಿ ಬಳ್ಳಾರಿ ಜಿಲ್ಲೆಯ ಕೋಗಳಿ ನಾಡಿಗೆ ಸೇರಿರಬಹುದೆಂಬ ಅಂಶವನ್ನು ಗಮನಿಸಿದರೆ ಇವನಿಗೂ 'ಮೂಲಾರಾಧನಾ' ರಚಕನಿಗೂ ಯಾವ ಸಂಬಂಧವೂ ಇರುವಂತೆ ತೋರುವುದಿಲ್ಲ. ಈ ಕನ್ನಡದ ಶಿವಕೋಟಿಯನ್ನು ಕೋಗಳಿಯ ಶಿವಕೋಟಿ ಎಂದೂ ಕರೆಯಬಹುದು.

'ವಡ್ಡಾರಾಧನೆ' ರಚಿತವಾದ ಕಾಲದ ವಿಚಾರವಾಗಿ ಡಾ. ಆ. ನೇ. ಉಪಾಧ್ಯೆಯವರು ಒಂದು ಹೊಸ ಅಂಶವನ್ನು ನನಗೆ ತಮ್ಮ ಆಗಸ್ಟ ೧೩. ೧೯೭೦ನೆಯ ತಾರೀಖಿನ ಪತ್ರದಲ್ಲಿ ತಿಳಿಯ ಪಡಿಸಿದ್ದಾರೆ. ಅದಕ್ಕಾಗಿ ಅವರಿಗೆ ನನ್ನ ಹಾರ್ದಿಕ ವಂದನೆಗಳು. 'ವಡ್ಡಾರಾಧನೆ'ಯ ೪೮ನೆಯ ಪುಟದಲ್ಲಿ "ವಜ್ಜ್ಹು ಸಹಾವಂ ಣಾಣಂ" ಎಂದು ಆರಂಭಿಸುವ ಗಾಹೆ ಉದ್ಧೃತವಾಗಿದೆಯಷ್ಟೆ. ಈ ಗಾಹೆಯು ದೇವಸೇನನಿಂದ ಪ್ರಾಕೃತದಲ್ಲಿ ರಚಿತವಾಗಿರುವ 'ನಯಚಕ್ರ' ಅಥವಾ 'ನಯ ಲಕ್ಷಣ' ಎಂಬ ಗ್ರಂಥದಲ್ಲಿ ೮೩ನೆಯ ಪದ್ಯವಾಗಿ ದೊರೆಯುತ್ತದೆ. ಇದೇ ಗಾಹೆ ಮಾಯಿಲ್ಲಧವಳ ಎಂಬ ದೇವಸೇನನ ಶಿಷ್ಯನಿಂದ ರಚಿತವಾದ 'ದ್ರವ್ಯಸ್ವಭಾವಪ್ರಕಾಶ' ಎಂಬ ಗ್ರಂಥದಲ್ಲಿಯೂ ಇದೆ (೪೦೩ನೆಯ ಪದ್ಯ). 'ನಯಚಕ್ರ'ದ ರಚಕನಾದ ದೇವಸೇನನೂ 'ದರ್ಶನಸಾರ' ಎಂಬ ಪ್ರಾಕೃತ ಗ್ರಂಥವನ್ನು ಬರೆದ ದೇವಸೇನನೂ ಒಬ್ಬನೇ ಆಗಿರುವುದನ್ನು ಎರಡು ಗ್ರಂಥಗಳಲ್ಲೂ ಕಾಣುವ ಒಂದು ಸಮಾನಾರ್ಥಕ ಶಬ್ದಘಟಿತ ಗಾಹೆಯಿಂದ ನಿರ್ಣಯಿಸಬಹುದು. ಈ ದೇವ ಸೇನನು ಕ್ರಿ.ಶ. ೯೩೩ರಲ್ಲಿದ್ದನೆಂದು ಖಚಿತವಾಗಿ ಗೊತ್ತಾಗಿದೆ. ಇವನ ಗ್ರಂಥದಿಂದ ಎಂದರೆ 'ನಯಚಕ್ರ'ದಿಂದ ಪದ್ಯವನ್ನು ಎತ್ತಿಕೊಂಡಿರುವ 'ವಡ್ಡಾರಾಧನೆ' ಕ್ರಿ.ಶ. ೯೩೩ರಿಂದ ಈಚೆಗೆ ರಚಿತವಾಗಿರಬೇಕು ಎಂಬ ಅಂಶ ಸ್ಥಾಪಿತವಾಗುತ್ತದೆ.

ಅಂದರೆ ಈ ಆಧಾರ ದುರ್ಬಲವಾಗಿರುವಂತೆ ತೋರುತ್ತದೆ. 'ವಡ್ಡಾರಾಧನೆ'ಯ ೪೮ನೆಯ ಪುಟದಲ್ಲಿ ದೊರೆಯುವ 'ವಜ್ಜ್ಹು ಸಹಾವಂ ಣಾಣಂ' ಎಂಬ ಗಾಹೆಯೂ, ಅದರ ಮುಂದಿನ 'ಭಿಜ್ಜಉ ಭಿಜ್ಜಉ' ಎಂಬುದೂ 'ವಡ್ಡಾರಾಧನೆ'ಯ (ಖಘಚಛ) ಪ್ರತಿಗಳಲ್ಲಿ ದೊರೆಯು ವುದಿಲ್ಲ; (ಕ) ಪ್ರತಿಯಲ್ಲೂ ಅದರ ನೇರ ನಕಲಾದ ಗ.ದಲ್ಲೂ ಇವು ದೊರೆಯುತ್ತವೆ. ಖ. ಪ್ರತಿಯೂ (ಘಚಛ) ಪ್ರತಿಗಳೂ ಭಿನ್ನ ಸಂಪ್ರದಾಯಗಳಿಗೆ ಸೇರಿದ್ದರೂ ಅವುಗಳಲ್ಲಿ ಈ ಪದ್ಯಗಳ ವಿಷಯದಲ್ಲಿ ಐಕ್ಯತೆಯಿರುವುದರಿಂದ ಮೂಲದ 'ವಡ್ಡಾರಾಧನೆ'ಯಲ್ಲಿ ಈ ಗಾಹೆಗಳು ಇರಲಿಲ್ಲವೆಂದೂ. (ಕ) ಪ್ರತಿಕಾರನೋ ಅವನಿಗೆ ಮಾತೃಕೆಯಾಗಿದ್ದ ಪ್ರತಿಯಲ್ಲೋ ಈ ಗಾಹೆಗಳು ಬಂದು ಸೇರಿಕೊಂಡಿವೆಯೆಂದು ತೀರ್ಮಾನಿಸಬಹುದು. ಆದ್ದರಿಂದ ಈ ಗಾಹೆಗಳನ್ನು ಕಾಲನಿರ್ಣಯಕ್ಕೆ ಉಪಯೋಗಿಸಿಕೊಳ್ಳುವುದು ಸಾಧುವಾಗಲಾರದು. ಡಾ. ಆ. ನೇ. ಉಪಾಧ್ಯೆ ಯವರು 'ವಡ್ಡಾರಾಧನೆ' ಕ್ರಿ.ಶ. ೯೩೩ಕ್ಕಿಂತ ಈಚಿನ ರಚನೆ ಎಂದು ಮಾಡಿರುವ ನಿರ್ಣಯಕ್ಕೆ ಪ್ರತಿಕೂಲವಾಗಿ ತಾವೇ ಈ ಪರಿಹಾರವನ್ನು ಸೂಚಿಸುವುದು ಅವರ ನಿಷ್ಪಕ್ಷಪಾತ ದೃಷ್ಟಿಗೆ ಸಾಕ್ಷಿಯಾಗಿದೆ. ಒಟ್ಟಿನಲ್ಲಿ 'ವಡ್ಡಾರಾಧನೆ'ಯ ರಚನೆಯ ಕಾಲ ಅನಿರ್ದಿಷ್ಟವಾಗಿಯೇ ಉಳಿದು ಕೊಂಡಿದೆ.

## ಹಿನ್ನೆಲೆ

'ವಡ್ಡಾರಾಧನೆ' ಪತ್ತೊಂಬತ್ತು "ಮಹಾಪುರುಷರುಗಳ ಕಥೆಗಳಂ" ಹೇಳುವುದಾಗಿದೆ. ಈ ಕಥೆಗಳೆಲ್ಲ ಧರ್ಮಕಥೆಗಳು. ಅವುಗಳ ನಾಯಕರೆಲ್ಲ ಧರ್ಮವೀರರು; ಕೆಲವರು ಮೋಕ್ಷವನ್ನು ಸಂಪಾದಿಸಿಕೊಳ್ಳುತ್ತಾರೆ; ಕೆಲವರು ಮೋಕ್ಷಕ್ಕೆ ನೆರೆಮನೆಯಾದ ಸರ್ವಾರ್ಥಸಿದ್ಧಿಯೆಂಬ ಸ್ವರ್ಗಕ್ಕೆ ಹೋಗುತ್ತಾರೆ; ಅವರು ಪಡೆದ ಸಿದ್ಧಿಗಳು ಇವು. ಅವರಿಗೆ ಇವು ಉಂಟಾದದ್ದು ಪುಣ್ಯಪಾಪ ರೂಪವಾದ ಕರ್ಮಕ್ಷಯದಿಂದ ಅಥವಾ ಅದರ ಉಪಶಮನದಿಂದ. ಕರ್ಮಕ್ಷಯವು ತಪಸ್ಸಿನಿಂದ ಮಾತ್ರ ಸಾಧ್ಯ. ತಪಸ್ಸಿಗೆ ವಿರಕ್ತಿ, ಇಂದ್ರಿಯನಿಗ್ರಹ, ಕಾಯಕ್ಲೇಶ ಸಹನೆ ಮುಂತಾದುವು ಅವಶ್ಯಕ. ತಪಸ್ಸಿನಲ್ಲಿ ತೊಡಗಿರುವ ಯತಿಗೆ ದೇವತೆ, ಮನುಷ್ಯ, ಪ್ರಾಣಿ, ಜಡವಸ್ತು—ಇವುಗಳಿಂದ ನಾನಾ ಬಗೆಯಾದ ತೊಂದರೆಗಳು ಬರುತ್ತವೆ. ಇವುಗಳಿಗೆ ಉಪಸರ್ಗ

ಪೀಡೆಯ ಹೆಸರು. ಉಪಸರ್ಗವನ್ನು ಜಯಿಸುವುದು ತಪಸ್ಸಿಗೆ ಸಹಕಾರಿ; ಅಲ್ಲದೆ ಹಸಿವು, ನೀರಡಿಕೆ, ಶೀತ, ವಾತ ಮುಂತಾದ ಬಾಧೆಗಳನ್ನು ಯತಿ ಸೈರಿಸಿಕೊಳ್ಳಬೇಕು. ಇವುಗಳಿಗೆ ಪರೀಷಹವೆಂದು ಹೆಸರು. ಇವುಗಳ ಸಂಖ್ಯೆ ೨೨. ಪರೀಷಹೋಪಸರ್ಗಗಳ ಜಯವೇ ಜಯ, ಇದೇ ಉಪಾಸನೆ ಅಥವಾ ಆರಾಧನೆ. ಇದರ ಸ್ವರೂಪವನ್ನು ವಿವರಿಸುವ ಗ್ರಂಥಗಳಿಗೆ ಆರಾಧನಾ ಶಾಸ್ತ್ರವೆಂದು ಹೆಸರು: ಇವುಗಳಲ್ಲಿ ದೃಷ್ಟಾಂತಕ್ಕಾಗಿ ಸೂಚಿತವಾಗಿರುವ ಕಥೆಗಳ ವಿವರಣೆ ಆರಾಧನಾಕಥಾಕೋಶಗಳಲ್ಲಿ ಕಂಡುಬರುತ್ತವೆ. ವಡ್ಡಾರಾಧನೆ ಇಂಥ ಕಥಾಕೋಶಗಳಲ್ಲಿ ಒಂದು. ಇದಕ್ಕೆ ಸುದೀರ್ಘವಾದ ಪರಂಪರೆ ಇದೆ.[51] ಈ ಕಥಾನಾಯಕರನ್ನು ವಡ್ಡಾರಾಧನೆ ಮಹಾಪುರುಷರೆಂದು ಕರೆದಿರುವ ಹಾಗೆ ಇತರ ಗ್ರಂಥಗಳಲ್ಲಿ 'ಪುರುಷಸಿಂಹ'ರೆಂದು ಕರೆದಿರುವುದು ಕಾಣುತ್ತದೆ.[52] ಪುರುಷಪ್ರಧಾನರು ಅಥವಾ ಪುರುಷಶ್ರೇಷ್ಠರು ಎಂದು ಇದರ ಅರ್ಥ. ಪರೀಷಹ ಸುಭಟರನ್ನು ಜಯಿಸಿದ್ದರಿಂದ ಇವರು ಪುರುಷಸಿಂಹರಾದರು. ಈ ಗ್ರಂಥಕ್ಕೆ ಯಾರೋ ಇಟ್ಟಿರುವ 'ಉಪಸರ್ಗಕೇವಲಿಗಳ ಕಥೆ' ಎಂಬ ಇನ್ನೊಂದು ಹೆಸರೂ ಗಮನಾರ್ಹ. ಉಪಸರ್ಗ ಗಳನ್ನು ಜಯಿಸಿ ಕೇವಲಜ್ಞಾನವನ್ನು ಪಡೆದುಕೊಂಡ ಜೈನಯತಿಗಳ ಕಥೆಗಳೇ ಇಲ್ಲಿ ಹೇಳಿವೆ. ಇವುಗಳಿಗೆ ಹಿನ್ನೆಲೆಯಾಗಿ ಪ್ರಾಕೃತ–ಸಂಸ್ಕೃತ ಜೈನ ಸಾಹಿತ್ಯದಲ್ಲಿ ಆರಾಧನಾ ಗ್ರಂಥಗಳೂ, ಆರಾಧನಾ ಕಥಾಕೋಶಗಳೂ ಹೇರಳವಾಗಿವೆ.

ಮೋಕ್ಷಾಕಾಂಕ್ಷಿಗಳಾದ ಜೈನಮುನಿಗಳು ಕೈಗೊಳ್ಳುವ ಉಪಾಸನೆ ಅಥವಾ ಮಾಡುವ ಉದ್ಯಮ ಆರಾಧನೆಯಾಗುತ್ತದೆ. ಇದು ನಾಲ್ಕು ವಿಧವಾಗಿದೆ. ತಪಸ್ಸು, ದರ್ಶನ, ಜ್ಞಾನ, ಚರಣ ಎಂದು. ತಪಸ್ಸಿನಲ್ಲಿ ಬಾಹ್ಯ, ಆಭ್ಯಂತರ ಎಂದು ಎರಡು ವಿಭಾಗಗಳಿವೆ. ಅನಶನ, ಅವಮೋದರ್ಯ, ವೃತ್ತಿಪರಿಸಂಖ್ಯಾನ, ರಸಪರಿತ್ಯಾಗ, ವಿವಿಕ್ತ ಶಯನಾಸನ, ಕಾಯಕ್ಲೇಶ—ಈ ಆರು ಬಾಹ್ಯತಪಗಳು. ಪ್ರಾಯಶ್ಚಿತ್ತ, ವಿನಯ, ವೈಯಾಕೃತ್ಯ, ಸ್ವಾಧ್ಯಾಯ, ಉತ್ಸರ್ಗ, ಧ್ಯಾನ—ಈ ಆರು ಅಭ್ಯಂತರ ತಪಗಳು ಈ ೧೨ ಬಗೆಯಾಗಿರುವ ತಪಗಳನ್ನು ಸ್ವಶಕ್ತಿಯಿಂದ ಆಚರಣೆಮಾಡುವುದು ತಪದ ಆರಾಧಯಾಗುತ್ತದೆ. ದರ್ಶನವೆಂದರೆ ಜೈನತತ್ತ್ವಶಾಸ್ತ್ರಕ್ಕೆ ಸೇರಿದ ಸಪ್ತತತ್ತ್ವಗಳಲ್ಲೂ, ನವಪದಾರ್ಥಗಳಲ್ಲೂ ಇರುವ ಅಚಲವಾದ ನಂಬಿಕೆ, ಶ್ರದ್ಧೆ, ವಿಶ್ವಾಸ, ಅಭಿರುಚಿ, ಇದನ್ನು ವೃದ್ಧಿಗೊಳಿಸಿಕೊಳ್ಳುವುದು ಸಮ್ಯಕ್ತ್ವ, ಇದಕ್ಕೆ ದರ್ಶನಾ ರಾಧನೆ ಎಂಬ ಹೆಸರಿದೆ. ಜ್ಞಾನವೆಂದರೆ ಪರಮಾಗಮೋಕ್ತವಾದ ಸೂತ್ರಾರ್ಥಗಳನ್ನು ಭಾವಿಸಿ ತಿಳಿಯುವುದು ಮತ್ತು ಜೀವಾದಿ ನವಪದಾರ್ಥಗಳ ತತ್ತ್ವವನ್ನು ಅರಿಯುವುದು. ಇದೇ ಸಮ್ಯಕ್ ಜ್ಞಾನ. ಇದನ್ನು ಪಡೆಯುವುದಕ್ಕೆ ಮಾಡುವ ಉದ್ಯಮ ಜ್ಞಾನಾರಾಧನೆಯಾಗುತ್ತದೆ. ಚರಣ ವೆಂದರೆ ಚಾರಿತ್ರ: ಪಂಚಮಹಾವ್ರತಗಳು, ಪಂಚಸಮಿತಿಗಳು, ತ್ರಿಗುಪ್ತಿಗಳು ಎಂದು ಇದರಲ್ಲಿ ೩ ವಿಧಗಳಿವೆ; ಭಾವಶುದ್ಧಿಯಿಂದ ಇವುಗಳನ್ನು ಪರಿಪಾಲಿಸುವುದು ಚಾರಿತ್ರಾರಾಧನೆ. ಇವುಗಳ ಆಚರಣೆಯಿಂದ ಜೈನಮುನಿಗೆ ಮರಣ ಸಮಯದಲ್ಲಿ ಕ್ಷಮೆ, ಸಮತ್ವ, ಶಾಂತಿ, ವೈರಾಗ್ಯ, ಸಂಯಮ, ಧೈರ್ಯ, ಸ್ಥೈರ್ಯಗಳು ಉದ್ಭವವಾಗುತ್ತವೆ. ಈ ಆರಾಧನಾಚತುಷ್ಟಯಗಳ ಸವಿಸ್ತರ ಪ್ರತಿಪಾದನೆ ಆ ಶಾಸ್ತ್ರಗ್ರಂಥಗಳಲ್ಲಿ ದೊರೆಯುತ್ತವೆ; ಇವುಗಳ ಸಿದ್ಧಿಗಾಗಿ ಪ್ರಯತ್ನಿಸಿದ ಧರ್ಮವೀರರ ನಾಮಸ್ಮರಣೆಯೂ ಅವರ ಕಥಾಸೂಚನೆಯೂ ಇಲ್ಲಿ ಕಂಡುಬರುತ್ತವೆ.

ಶ್ವೇತಾಂಬರ ಸಂಪ್ರದಾಯದಲ್ಲಿ ಜೈನಸಿದ್ಧಾಂತದ ಅಥವಾ ಆಗಮದ ಗ್ರಂಥಗಳು ಒಟ್ಟು ಸುಮಾರು ೪೫ ಇವೆ.[53] ಇವುಗಳನ್ನು ಆರು ಗುಂಪುಗಳಾಗಿ ವಿಂಗಡಿಸಿದೆ. ದ್ವಾದಶಾಂಗಗಳು

---

[51] ಹರಿಷೇಣನ ಬೃಹತ್ಕಥಾಕೋಶ. (ಸಂ), ಡಾ. ಆ. ನೇ. ಉಪಾಧ್ಯೆ. ವಿವರಗಳಿಗಾಗಿ ಈ ಗ್ರಂಥದ **Introduction**, ಪುಟ ೪೭–೬೩ ನೋಡಿರಿ.

[52] ದೇವಸೇನಾಚಾರ್ಯವಿರಚಿತ ಆರಾಧನಾಸಾರ, ಗಾಹೆ ೪೮, "ಪುರುಷಸಿಂಹೈಃ ಸೋಢಾ ಮಹೋಪಸರ್ಗಾ" (ಛಾಯೆ).

[53] ಇವುಗಳ ಸಂಖ್ಯೆಯಲ್ಲಿ ವ್ಯತ್ಯಾಸಗಳಿವೆ: ೫೦ ಗ್ರಂಥಗಳಿರುವಂತೆ ಕೆಲವೆಡೆ ಹೇಳಿದೆ. *History of Indian Literature*, p. 430.

ದ್ವಾದಶ ಉಪಾಂಗಗಳು. ಆಮೇಲೆ ೧೦ ಪ್ರಕೀರ್ಣಕ ಗ್ರಂಥಗಳಿವೆ.[54] ಇವುಗಳೆಲ್ಲ ಆರ್ಷ ಅಥವಾ ಅರ್ಧಮಾಗಧಿ ಭಾಷೆಯಲ್ಲಿ ರಚಿತವಾಗಿವೆ. ಪ್ರಕೀರ್ಣಕಗಳ ಬಹುಭಾಗ ಛಂದೋನಿಬದ್ಧವಾಗಿವೆ. ಇವುಗಳಲ್ಲಿ ಮೊದಲನೆಯದಾದ ಚಉಸರಣದಲ್ಲಿ (=ಚತುಃಶರಣ) ಅರ್ಹತ್ ಸಿದ್ಧ ಸಾಧುಗಳ ಸ್ತುತಿಯೂ ಧರ್ಮಪ್ರಶಂಸೆಯೂ ಇವೆ. ಆರಂಭದ ಪದ್ಯಗಳಲ್ಲಿ ಷಡಾವಶ್ಯಕಗಳ ನಿರೂಪಣೆ ಇದೆ. ಒಟ್ಟು ೬೩ ಪದ್ಯಗಳು. ಇದನ್ನು ರಚಿಸಿದಾತನು ವೀರಭದ್ರ. ಕನ್ನಡ ವಡ್ಡಾರಾಧನೆಯ ದೃಷ್ಟಿಯಿಂದ ೧೭೨ ಪದ್ಯಗಳನ್ನೊಳಗೊಂಡ ಭತ್ತಪರಿಣ್ಣಾ (=ಭಕ್ತಪರಿಜ್ಞಾನ) ೧೨೩ ಪದ್ಯಗಳಿರುವ ಸಂಥಾರಪರಿಣ್ಣಾ (=ಸಂಸ್ತಾರ ಪರಿಜ್ಞಾನ), ಮರಣಸಮಾಹಿ (=ಮರಣಸಮಾಧಿ)—ಎಂಬಿವು ಮುಖ್ಯವಾದುವು. ಇವುಗಳಲ್ಲಿ ಸೂಚಿತವಾಗಿರುವ ಕಥೆಗಳನ್ನು ಡಾ. ಆ. ನೇ. ಉಪಾಧ್ಯೆಯವರು ನಿರೂಪಿಸಿದ್ದಾರೆ.[55] ವಡ್ಡಾರಾಧನೆಯ ಹತ್ತೊಂಬತ್ತು ಕಥೆಗಳಿಗೆ ಸಂಬಂಧಿಸಿರುವುದನ್ನು ಮಾತ್ರ ಇಲ್ಲಿ ನೋಡಬಹುದು :

೧. ಪೋಯಣ (ಪೋದನ) ಪುರದಲ್ಲಿ ಪುಷ್ಪಚೂಲಾ ಎಂಬ ಕಂತಿಯಿದ್ದಳು. ಅವಳ ಗುರು ಅಣ್ಣಿಯಾ ಉತ್ತ; ಇವನು ಗಂಗಾನದಿಯನ್ನು ದಾಟುತ್ತಿರುವಾಗ ದೋಣಿ ಮಗುಚಿಕೊಂಡು ನದಿಯಲ್ಲಿ ಮುಳುಗಿ ಸತ್ತುಹೋದನು[56] (ಸಂ. ೫೬–೬೭, ವ. ೫).

೨. ಕಾಯಂದಿಯ (ಕಾಕಂದಿ) ಅಭಯಘೋಷನು ಮಗನಿಗೆ ರಾಜ್ಯವನ್ನು ಒಪ್ಪಿಸಿ ಆಗಮಗಳನ್ನು ಕಲಿತು ಜೈನಸಂನ್ಯಾಸಿಯಾಗಿ ಧರ್ಮವಿಹಾರವನ್ನು ಕೈಕೊಂಡು ಅನೇಕ ಪ್ರದೇಶಗಳಲ್ಲಿ ಸಂಚಾರಮಾಡಿ ತನ್ನ ಮುನ್ನಿನ ನಗರಕ್ಕೆ ಮರಳಿ ಬಂದಾಗ ಚಂಡವೇಗನು ಅವನ ದೇಹವನ್ನು ಕತ್ತರಿಸಿ ಹಾಕುತ್ತಾನೆ; ಆ ವೇದನೆಯನ್ನು ಸಹಿಸಿಕೊಂಡು ಆ ಮುನಿ ಸದ್ಗತಿಗೆ ಹೋದನು (ಸಂ. ೭೬–೭೮; ವ. ೧೨).

೩. ಉಜ್ಜಯಿನಿಯ ಅವಂತಿ ಸುಕುಮಾರನು ನಳಿನೀ ವಿಮಾನವೆಂಬ ಸ್ವರ್ಗದ ವ್ಯಾವರ್ಣನೆಯನ್ನು ಕೇಳಿ ಜಾತಿಸ್ಮರನಾಗಿ ಸಂನ್ಯಾಸಗ್ರಹಣಮಾಡಿ ಶ್ಮಶಾನದ ಏಕಾಂತ ಪ್ರದೇಶದಲ್ಲಿದ್ದ ಬಿದಿರುಮೆಳೆಯ ಕೆಳಗೆ ತಪಸ್ಸಿನಲ್ಲಿ ಕುಳಿತುಕೊಂಡನು. ನರಿಯೊಂದು ಬಂದು ಅವನ ದೇಹವನ್ನು ಮೂರು ದಿವಸಗಳವರೆಗೆ ಅತ್ತ ಇತ್ತ ಎಳೆದಾಡಿ ಅವನನ್ನು ತಿಂದುಬಿಟ್ಟಿತು. ಈ ನೋವನ್ನೆಲ್ಲ ಅವನು ಸೈರಿಸಿ ಸದ್ಗತಿಗೆ ಸಂದನು. ಅವನು ಸತ್ತ ಎಡೆಯಲ್ಲಿ ದೇವತೆಗಳು ಸುರಿದ ಹೂಮಳೆಯಿಂದ ಸುವಾಸನಾಯುಕ್ತವಾದ ಗಂಧವತಿಯೆಂಬ ಕೊಳವುಂಟಾಯಿತು (ಭ. ೧೬೦, ಮ. ೪೩೫–೩೬, ಸಂ. ೭೫–೬೯, ವ. ೧).

೪. ಕುಣಾಳನಗರಕ್ಕೆ ರಾಜನಾದ ವೇಶಮಣದಾಸನ ಬಳಿ ರಿಟ್ಠ ಎಂಬ ಮಂತ್ರಿ ಇದ್ದನು. ಅವನು ಪಂಡಿತನಾಗಿದ್ದನು. ವೃಷಭಸೇನರೆಂಬ ಋಷಿಯರೊಡನೆ ಅವನು ವಾದಮಾಡಿ ಸೋತನು. ಈ ಅಪಮಾನವನ್ನು ತಾಳಲಾರದೆ ಅವನು ಆ ಋಷಿಯನ್ನು ಕಿಚ್ಚಿನಿಂದ ಸುಟ್ಟುಬಿಟ್ಟನು. ಆ ಮುನಿ ಈ ಬಾಧೆಯನ್ನು ಕ್ಷಮೆಯಿಂದ ಸೈರಿಸಿ ಸತ್ತು ಸದ್ಗತಿಗೆ ಸಂದನು (ಸಂ. ೮೧–೮೪, ವ. ೧೯).

೫. ಅಗ್ಗಿ (ಅಗ್ನಿ) ರಾಜನ ಮಗನಾದ ಕತ್ತಿಯ (ಕಾರ್ತಿಕ) ಎಂಬ ಋಷಿ ಚರಿಗೆಗಾಗಿ ಸಂಚಾರ ಮಾಡುತ್ತ ರೋಹೇಡಯವೆಂಬ ನಗರಕ್ಕೆ ಬರಲು ಅಲ್ಲಿಗೆ ರಾಜನಾಗಿದ್ದ ಕುಂಚನು (ಕೌಂಚನು) ಅವನನ್ನು ಈಟಿಯಿಂದ ತಿವಿದನು. ಋಷಿ ಸಮಚಿತ್ತನಾಗಿ ವೇದನೆಯನ್ನು ಸೈರಿಸಿ ಉತ್ತಮ ಗತಿಯನ್ನು ಸಂಪಾದಿಸಿದನು (ಸಂ. ೬೭–೬೯, ಭ. ೧೬೦A, ವ. ೧೧).

೬. ಕುಂಭಾರ ಕಡವೆಂಬ (ಕುಂಭಕಾರ ಘಟ) ನಗರದಲ್ಲಿ ೫೦೦ ಜನ ಜೈನಯತಿಗಳಿದ್ದರು. ಅವರೆಲ್ಲರನ್ನೂ ಯಂತ್ರಕ್ಕೆ (ಗಾಣಕ್ಕೆ) ಹಾಕಿ ಅರೆದು ಹಿಂಡಿದ್ದರಿಂದ ಅವರು ಸತ್ತುಹೋದರು :

---

[54] ಪ್ರಕೀರ್ಣಕಗಳ ಸಂಖ್ಯೆ ಇಷ್ಟೇ ಎಂದು ನಿರ್ದಿಷ್ಟವಾಗಿಲ್ಲ. *History of Indian Literature*, p. 461.

[55] ಬೃಹತ್ಕಥಾಕೋಶ, ಮುನ್ನುಡಿ, ಪು. ೨೭–೨೯.

[56] ಸಂ=ಸಂಥಾರಪರಿಣ್ಣಾ, ಭ=ಭತ್ತಪರಿಣ್ಣಾ, ಮ=ಮರಣಸಮಾಹಿ, ವ=ವಡ್ಡಾರಾಧನೆ.

ಅನೇಕ ಸ್ವರ್ಗಗಳಲ್ಲಿ ಅವರು ಜನ್ಮತಾಳಿದರು (ಮ. ೪೪೩, ೪೯೫. ಸಂ. ೫೮-೬೦, ವ ೧೭).

೭. ಒದ್ದೆಯಾದ ತೊಗಲನ್ನು ನೆಲದ ಮೇಲೆ ಹರವಿ ಅದಕ್ಕೆ ಮೊಳೆಗಳನ್ನು ಹೊಡೆಯುವ ಹಾಗೆ ಗಜಕುಮಾರನೆಂಬ ಯತಿ[87] ಕೀಲುಗಳಿಂದ ಇರಿಯಲ್ಪಟ್ಟವನಾಗಿ ಸತ್ತು ಉತ್ತಮ ಗತಿಯನ್ನು ಪಡೆದುಕೊಂಡನು (ಸಂ. ೮೭, ವ. ೩).

೮. ಪಾಟಲೀಪುತ್ರದಲ್ಲಿ ಚಾಣಕ್ಯನೆಂಬವನಿದ್ದನು. ಅವನು ಇಂಗಿಣೀ ಮರಣದಿಂದ ಸತ್ತನು. ಅವನು ಶತ್ರುಗಳನ್ನು ಜಯಿಸಿ ಗೌರವಕ್ಕೆ ಆಸ್ಪದನಾಗಿದ್ದನು. ಅವನು ಆಕಳಹಟ್ಟಿಯಲ್ಲಿ ಪ್ರಾಯೋಪಗಮನದಲ್ಲಿದ್ದಾಗ ಕ್ರೂರನಾದ ಸುಬಂಧು (ಅಥವಾ ಸುಬುದ್ಧಿಯು) ಬೆರಣಿಯನ್ನು ಅವನ ಮೇಲೆ ಒಟ್ಟಿ ಕಿಚ್ಚಿಟ್ಟು ಕೊಂದನು. ಚಾಣಕ್ಯ ಸಮಚಿತ್ತನಾಗಿ ಸತ್ತು ಉತ್ತಮ ಗತಿಗೆ ಏರಿದನು (ಭ. ೧೬೩. ಮ: ೪೭೮, ಸಂ. ೭೩–೭೫ ವ. ೧೮).

೯. ಚಿಲಾಇ ಪುತ್ತನು (ಚಿಲಾತಪುತ್ರ) ವೈರಾಗ್ಯಾದಿ ಗುಣಗಳಿಂದ ಕೂಡಿದ್ದ ಯತಿಪ್ರವರನು: ಅವನಿಗಾದ ಗಾಯಗಳಿಂದ ಸುರಿಯುತ್ತಿದ್ದ ರಕ್ತದ ವಾಸನೆಗೆ ಕಟ್ಟಿರುವೆಗಳು ಬಂದು ಮುತ್ತಿಕೊಂಡು ಅವನ ತಲೆಯನ್ನು ತೋಡಿ ತಿಂದುವು. ಅವನ ದೇಹ ಜಾಲರಿಯ ಹಾಗೆ ರಂಧ್ರಮಯವಾಯಿತು: ಈ ಯಾತನೆಯನ್ನೆಲ್ಲ ಅವನು ಸೈರಿಸಿಕೊಂಡು ಸತ್ತು ಸುಗತಿಗೆ ಹೋದನು (ಭ. ೮೮, ಮ ೪೨೭–೩೦. ಸಂ. ೮೬, ವ. ೧೮)

೧೦. ಕನಕಪುರದ ರಾಜ ಹರಿವಾಹನ: ಅವನು ಪರಿವ್ರಾಜಕರಿಗೆ ಮಹಾಭಕ್ತ. ಅವನ ರಾಜಶ್ರೇಷ್ಠಿ ಜಿಣಧಮ್ಮ. ಆ ಊರಿಗೆ ಬಂದ ಒಬ್ಬ ಜೈನ ಯತಿ ಜಿಣಧರ್ಮನನ್ನು ನೋಡಿದಾಗ ಪೂರ್ವವೈರ ಸ್ಮರಣೆಗೆ ಬಂತು. ಜಿಣಧರ್ಮನ ಬೆನ್ನಿನ ಮೇಲೆ ತಟ್ಟೆಯನ್ನಿಟ್ಟು ಬಿಸಿಬಿಸಿ ಪಾಯಸವನ್ನು ಬಡಿಸಿದರೆ ತಿನ್ನಲು ತನಗೆ ತುಂಬ ಇಷ್ಟವೆಂದು ಯತಿ ರಾಜನಿಗೆ ಹೇಳಿದನು. ರಾಜನು ಜಿಣಧಮ್ಮನ ಸಮ್ಮತಿಯಿಂದ ಹಾಗೆಯೇ ಮಾಡಿದನು. ತಟ್ಟೆಯನ್ನು ಎತ್ತಿದಾಗ ಜಿಣಧಮ್ಮನ ಬೆಂದುಹೋದ ಬೆನ್ನ ತೊವಲೆಲ್ಲ ಕಿತ್ತುಬಂದಂತಾಯಿತು. ಈ ಗಾಯವನ್ನು ಹಕ್ಕಿಗಳು ಕುಕ್ಕಿದುವು. ಹುಳು ತುಂಬಿಕೊಂಡಿತು. ಎರಡು ತಿಂಗಳ ಕಾಲ ಈ ನೋವನ್ನು ಜಿಣಧಮ್ಮ ಸೈರಿಸಿ ಮುಡಿದನು (ಮ. ೪೧೩–೪೨೩, ವ. ೨. ಸನತ್ಕುಮಾರ ಚಕ್ರವರ್ತಿಯ ಕಥೆ, ಪುಟ ೬೪–೬೫).

೧೧. ದಂಡನೆಂಬ (ದಂಡಕ) ಋಷಿ ಪ್ರತಿಮಾಯೋಗಸ್ಥಿತನಾಗಿದ್ದಾಗ ಬಾಣಗಳು ಬಂದು ಅವನ ಮೈಯಲ್ಲೆಲ್ಲ ನಾಟಿಕೊಳ್ಳುತ್ತವೆ. ಈ ವೇದನೆಯನ್ನು ಸೈರಿಸಿ ಅವನು ಉತ್ತಮ ಗತಿಗೆ ಸಂದನು (ಮ. ೪೬೫, ಸಂ. ೬೧-೯೨, ವ. ೧೬).

೧೨. ಕೌಶಂಬಿಯ ಲಲಿಯಘಡಾ (ಲಲಿತಘಟೆ) ಎಂಬ ಸಂಘದ ಮೂವತ್ತೆರಡು ರಾಜಕುಮಾರರು ನದಿಯ ಪ್ರವಾಹದ ಸೆಳೆತಕ್ಕೆ ಸಿಕ್ಕಿ ಪ್ರಾಯೋಪಗಮನದಿಂದ ಸತ್ತು ಸಂಗತಿಯ ನೈದಿದರು (ಸಂ. ೭೯–೮೦, ಮ. ೪೮೦ ?, ವ. ೭).

೧೩. ಸಣಂಕುಮಾರನೆಂಬ (ಸನತ್ಕುಮಾರ) ನಾಲ್ಕನೆಯ ಚಕ್ರವರ್ತಿ ೧೬ ಪ್ರಬಲ ರೋಗ

---

[87] ಇಬ್ಬರೋ ಮೂವರೋ ಗಜಕುಮಾರರಿದ್ದಂತೆ ಕಾಣುತ್ತದೆ. ಒಬ್ಬನು ಈ ಕಥೆಯಲ್ಲಿ ಕಾಣುವವನು. ಇನ್ನೊಬ್ಬ ಗಜಕುಮಾರನು ಸಂನ್ಯಾಸವನ್ನು ಗ್ರಹಿಸಿ ಕಳಿಂಗನಾಡಿನ ದಂತಪುರಕ್ಕೆ ಬಂದು ಆ ಊರಿನ ಪಶ್ಚಿಮದ ಬೆಟ್ಟದಲ್ಲಿ ಪ್ರತಿಮಾಯೋಗದಲ್ಲಿ ನಿಂತುಕೊಂಡನು. ಬುದ್ಧದಾಸನೆಂಬವನು ಅವನು ನಿಂತ ಶಿಲೆಯನ್ನು ಕಿಚ್ಚಿನಿಂದ ಕೆಂಪಗೆ ಕಾಸಿದನು. ಋಷಿ ಆ ಯೋಗಪೀಠವನ್ನು ಹತ್ತಿ ಸುಟ್ಟುಹೋಗಿ ಸತ್ತು ಮೋಕ್ಷಕ್ಕೆ ಹೋದನು (ವಡ್ಡಾರಾಧನೆ, ಗುರುದತ್ತ ಭಟಾರರ ಕಥೆ. ಪುಟ ೧೫೯-೧೬೧). ಡಾ. ಆ. ನೇ. ಉಪಾಧ್ಯೆ ಅವರು ಕೊಟ್ಟಿರುವ ಕಥೆ ಹೀಗೆ: ಗಜಕುಮಾರನ ಮಾವನು ಅಳಿಯನನ್ನು ಸಜೀವವಾಗಿ ಶ್ಮಶಾನದಲ್ಲಿ ಸುಟ್ಟನು: ಅವನು ಆ ಹಿಂಸೆಯನ್ನು ಸೈರಿಸಿ ಸಮತೆಯಿಂದ ಸತ್ತನು (ಮ. ೪೩೧–೩೨, ೪೯೨).

ಗಳಿಂದ ಪೀಡಿತನಾಗಿ ೬೦೦೦ ವರ್ಷಗಳವರೆಗೆ ನರಳಿ ಸೈರಣೆಯಿಂದ ಸಮಾಧಿಗೆ ಸಂದನು (ಮ. ೪೦೦–೧೧, ವ. ೪).

೧೪. ಸುಕುಶೋಲ ಋಷಿ ಮುಗ್ಗಿಲ್ಲಗಿರಿಯ ಚಿತ್ರಕೂಡದಲ್ಲಿ (ಚಿತ್ರಕೂಟ) ತಪಸ್ಸು ಮಾಡುತ್ತಿದ್ದನು. ನಾಲ್ಕು ತಿಂಗಳು ಉಪವಾಸವಿದ್ದು ಪಾರಣೆಗಾಗಿ ಬೆಟ್ಟದಿಂದ ಇಳಿದುಬರುತ್ತಿದ್ದ ಅವನನ್ನು ಒಂದು ಹುಲಿ, ಹಿಂದಿನ ಜನ್ಮದಲ್ಲಿ ಅವನ ತಾಯಿಯಾಗಿದ್ದದ್ದು, ಕಂಡು ಅವನ ಮೇಲೆ ಹಾರಿ ಅವನನ್ನು ಹರಿದು ತಿನ್ನುತ್ತದೆ. ಈ ಯಾತನೆಯನ್ನು ಅವನು ಸೈರಿಸಿ ಸತ್ತು ಸ್ವರ್ಗಕ್ಕೆ ಹೋದನು (ಭ. ೧೬೧, ಮ. ೪೬೬–೬೭, ಸಂ. ೬೩–೬೪, ವ. ೩).

ಪ್ರಕೀರ್ಣಕ ಗ್ರಂಥಗಳಲ್ಲಿ ದೊರೆಯುವ ದೃಷ್ಟಾಂತಕಥೆಗಳ ಸ್ವರೂಪ ಮೇಲಿನ ಕಥಾಸಂಗ್ರಹದಿಂದ ಸ್ವಲ್ಪಮಟ್ಟಿಗೆ ವಿಶದವಾಗಿದೆ. ಹೆಚ್ಚು ವಿವರಗಳಿಗೆ ಹೋಗದೆ ಅವು ಅತಿಸಂಕ್ಷಿಪ್ತವಾಗಿವೆ. ಇವುಗಳನ್ನು ಕೇಳಿದವರು ಪೂರ್ಣವಾಗಿ ಕಥೆಗಳನ್ನು ನೆನಪಿಗೆ ತಂದುಕೊಳ್ಳಬಹುದಾಗಿತ್ತೆಂದು ಊಹಿಸಬಹುದು. ಜನರಲ್ಲಿ ಈ ಕಥೆಗಳು ಪ್ರಚಾರದಲ್ಲಿದ್ದುವೇನೋ ? ಅವುಗಳ ಸಂಕ್ಷಿಪ್ತ ಸೂಚನೆಯಷ್ಟೇ ಸಾಕಾಗಿತ್ತೇನೋ ? ಈ ಗ್ರಂಥಗಳ ಟೀಕಾಕಾರರು ಜನಪ್ರಿಯವಾಗಿದ್ದ ಕಥೆಗಳಿಗೆ ಶಾಶ್ವತ ರೂಪವನ್ನು ಕೊಟ್ಟಿರಬಹುದು. ಈ ಕಾರಣದಿಂದ ಈ ಕಥೆಗಳನ್ನು ಒಬ್ಬೊಬ್ಬ ಟೀಕಾಕಾರ ಒಂದೊಂದು ರೀತಿ ಹೇಳಿರುವುದು ಕಾಣುತ್ತದೆ.

ದಿಗಂಬರ ಸಂಪ್ರದಾಯವು ಜೈನಾಗಮದ ಸುಮಾರು ೪೫ ಗ್ರಂಥಸಮೂಹವನ್ನು ತನಗೆ ಪ್ರಮಾಣಭೂತವೆಂದು ಅಂಗೀಕರಿಸಿಲ್ಲ. ಈ ಸಂಪ್ರದಾಯಕ್ಕೆ ಆಧಾರಭೂತವಾದ ಗ್ರಂಥಸಮುಚ್ಚಯವನ್ನು ಶ್ರುತಸ್ಕಂಧವೆಂದು ಕರೆದಿದೆ : ಅನುಯೋಗಚತುಷ್ಟಯವೆಂದೂ ಇದರ ಹೆಸರು. ಪ್ರಥಮಾನುಯೋಗದಲ್ಲಿ ಪದ್ಮಪುರಾಣ, ಹರಿವಂಶಪುರಾಣ, ತ್ರಿಷಷ್ಟಿಲಕ್ಷಣಮಹಾಪುರಾಣ, ಉತ್ತರಪುರಾಣ—ಮುಂತಾದ ಜೈನ ಪೌರಾಣಿಕ ಗ್ರಂಥಗಳು ಸೇರಿವೆ. ಕರಣಾನುಯೋಗದಲ್ಲಿ ಸೂರ್ಯಪ್ರಜ್ಞಪ್ತಿ, ಚಂದ್ರಪ್ರಜ್ಞಪ್ತಿ, ಜಂಬೂದ್ವೀಪಪ್ರಜ್ಞಪ್ತಿ ಎಂಬ ಲೋಕಾಕಾರ ಕಥನಗ್ರಂಥಗಳೂ, ಜ್ಯೋತಿಷಗ್ರಂಥಗಳೂ ಸಮಾವೇಶವಾಗಿವೆ. ದ್ರವ್ಯಾನುಯೋಗದಲ್ಲಿ ಕುಂಡಕುಂದಾಚಾರ್ಯರ ಕೃತಿಗಳು, ಉಮಾಸ್ವಾತಿಯ ತತ್ತ್ವಾಧಿಗಮಸೂತ್ರ ಮತ್ತು ಅದರ ವ್ಯಾಖ್ಯಾನಗಳು ; ಸಮಂತಭದ್ರಾಚಾರ್ಯರ ಆಪ್ತಮೀಮಾಂಸಾ ಮತ್ತು ಅದರ ಮೇಲಿನ ವ್ಯಾಖ್ಯಾನಗಳು—ಈ ತತ್ತ್ವಗ್ರಂಥಗಳೆಲ್ಲ ಅಂತರ್ಗತವಾಗಿವೆ. ನಾಲ್ಕನೆಯದಾದ ಚರಣಾನುಯೋಗದಲ್ಲಿ ಜೈನಾಚಾರಕ್ಕೆ ಸಂಬಂಧಿಸಿದ ಗ್ರಂಥಗಳು ಸೇರಿವೆ ; ಇವುಗಳಲ್ಲಿ ಪ್ರಮುಖವಾದವು ವಟ್ಟಕೇರಸ್ವಾಮಿಯ ಮೂಲಾಚಾರ, ತ್ರಿವರ್ಣಾಚಾರಗಳು ಮತ್ತು ಸಮಂತಭದ್ರಸ್ವಾಮಿಯ ರತ್ನಕರಂಡಕ ಶ್ರಾವಕಾಚಾರ. ಇಲ್ಲಿರುವ ಗ್ರಂಥಗಳಲ್ಲಿ ಕೆಲವು ಎಂದರೆ ಪ್ರಥಮಾನುಯೋಗಕ್ಕೆ ಸೇರಿದುವು. ಅರ್ವಾಚೀನಕಾಲದ ರಚನೆಗಳೆಂಬುದನ್ನು ಗಮನಿಸಬಹುದು.

ಶ್ವೇತಾಂಬರಾಗಮಕ್ಕೆ ಈಗಿರುವ ಸ್ವರೂಪ ಉಂಟಾದದ್ದು ಕ್ರಿ.ಶ. ಸು. ೪೫೪ರಲ್ಲಿ ಗುಜರಾತಿನ ವಲಭಿ ನಗರದಲ್ಲಿ ; ದೇವರ್ಧಿಕ್ಷಮಾ ಶ್ರಮಣನೆಂಬ ಆಚಾರ್ಯನ ಅಧ್ಯಕ್ಷತೆಯಲ್ಲಿ ಈ ಆಗಮಸಂಕಲನ ವ್ಯವಸ್ಥೆ ಆಯಿತು. ಈ ಕಾಲಕ್ಕೆ ಹಿಂದೆಯೇ ಎಂದರೆ ಕ್ರಿ.ಶ. ಆದಿ ಶತಮಾನಗಳಲ್ಲಿ ದಿಗಂಬರಾಚಾರ್ಯರಿದ್ದರು ; ಅವರಿಂದ ರಚಿತವಾದ ಗ್ರಂಥಸಮುದಾಯವೂ ಇದ್ದಿತು. ಶ್ರೀಧರಸೇನ, ಗುಣಧರ, ಭೂತಬಲಿ, ಪುಷ್ಪದಂತ, ಯತಿವೃಷಭ, ಕುಂಡಕುಂದ, ಉಮಾಸ್ವಾತಿ, ವಟ್ಟಕೇರ, ಶಿವಾರ್ಯ—ಈ ದಿಗಂಬರಾಚಾರ್ಯರುಗಳಿಗೆ ದೊರೆತಿದ್ದ ಶ್ವೇತಾಂಬರಾಗಮದ ಸ್ವರೂಪವನ್ನು ಈಗ ಹೇಳುವುದಾಗದಿದ್ದರೂ ಅದು ಕ್ರಿ.ಶ. ೪೫೪ಕ್ಕಿಂತ ಪ್ರಾಚೀನವೆಂದು ಹೇಳಬಹುದಾಗಿದೆ. ಅದರ ಪ್ರಭಾವ ಈ ಆಚಾರ್ಯರುಗಳ ಕೃತಿಗಳ ಮೇಲೆ ಆಗಿರುವುದು ಸ್ವಾಭಾವಿಕ. ಹಿಂದೆ ಹೇಳಿರುವ ಕೆಲವು ಪ್ರಕೀರ್ಣಕಗಳಲ್ಲೂ ಶಿವಾರ್ಯನ ಮೂಲಾರಾಧನೆಯಲ್ಲೂ ದೊರೆಯುವ ಕೆಲವು ದೃಷ್ಟಾಂತಕಥೆಗಳಲ್ಲಿ ಸಮಾನವಾದ ಹೆಸರುಗಳಿವೆಯಲ್ಲದೆ ಆ ಗಾಥೆಗಳು ಕೂಡ ಅಲ್ಪಸಾಠಭೇದಗಳಿದ್ದರೂ ಸಮನಾಗಿವೆ.[58] ವಟ್ಟಕೇರನ ಮೂಲಾಚಾರವು ಸ್ವಶಿಷ್ಯಬೋಧನಾರ್ಥಕವಾಗಿ ರಚಿತವಾದುದೆಂದೂ ಅದು ದ್ವಾದಶಾಂಗಗಳಲ್ಲಿ

[58] ಬೃಹತ್ಕಥಾಕೋಶ, ಪೀಠಿಕೆ, ಪು. ೩೪.

ಮೊದಲನೆಯದಾದ ಆಚಾರಾಂಗದ ಸಂಕ್ಷಿಪ್ತ ರೂಪವುಳ್ಳುದೆಂದೂ ತಿಳಿದುಬರುತ್ತದೆ.[59] ಕುಂಡಕುಂದಾಚಾರ್ಯರ ಗ್ರಂಥಗಳಲ್ಲೂ ಜೈನಾಗಮಿಕ ಪ್ರಭಾವ ಪ್ರವೇಶಿಸಿರಬಹುದು. ಯತಿವೃಷಭನ 'ತ್ರೈಲೋಕ ಪ್ರಜ್ಞಪ್ತಿ' ಎಂಬ ಗ್ರಂಥಕ್ಕೆ ೫, ೬ ಮತ್ತು ೭ನೆಯ ಉಪಾಂಗಗಳಿಂದ ಸಹಾಯಕವಾಗಿರಬಹುದು. ಶ್ವೇತಾಂಬರ ದೃಷ್ಟಿಯಲ್ಲಿ ನಷ್ಟವಾಗಿರುವ ದಿಟ್ಟಿ ವಾಯಾಂಗವೆಂಬ ಹನ್ನೆರಡನೆಯ ಅಂಗ ಗ್ರಂಥದ ಕೆಲವು ಭಾಗಗಳು ಭೂತಬಿಲಿ, ಪುಷ್ಪದಂತರ ಕೃತಿಗಳಲ್ಲಿ ಸೇರಿಕೊಂಡಿವೆ.[60] ಉಮಾಸ್ವಾತಿಯ ತತ್ತ್ವಾರ್ಥಸೂತ್ರವಂತೂ ಉಭಯವರ್ಗದವರಿಂದಲೂ ಆದೃತವಾಗಿದೆ. ಆದ್ದರಿಂದ ಈ ಗ್ರಂಥ ಸಮೂಹ ೧ನೆಯ ಶತಮಾನದ ಜೈನಾಗಮಕ್ಕೂ, ಈಚಿನ ಶ್ರುತಸ್ಕಂಧಕ್ಕೂ ಮಧ್ಯವರ್ತಿಯಾಗಿದ್ದು ಅಧಿಕ ವಿಶ್ವಸನೀಯವಾದುದೆಂದು ಹೇಳಬಹುದು ; ಅಥವಾ ಉಭಯ ಸಂಪ್ರದಾಯಗಳಿಗೂ ಒಂದೇ ಮೂಲವಿದ್ದಿರಬಹುದು. ಭಗವತೀ ಆರಾಧನಾ—ಮೂಲಾಚಾರ—ಇವೇ ಮುಂತಾದ ಈ ಗುಂಪಿನ ಗ್ರಂಥಗಳಲ್ಲಿರುವ ದೃಷ್ಟಾಂತ ಕಥಾಗಾಹೆಗಳು ಪರಮಪ್ರಾಚೀನವಾಗಿರುವವಲ್ಲದೆ ಈಚಿನ ಎಲ್ಲ ಆರಾಧನಾ ಕಥಾಕೋಶಗಳಿಗೂ ಬೀಜರೂಪವಾಗಿವೆ. ವಡ್ಡಾರಾಧನೆಯ ಕಥೆಗಳ ಆರಂಭದಲ್ಲಿರುವ ೧೯ ಗಾಹೆಗಳು ಭಗವತೀ ಆರಾಧನಾ ಗ್ರಂಥದಲ್ಲಿ ಇರುವುದೇ ಆಗಿವೆ.[61] ಒಂದೇ ಕ್ರಮದಲ್ಲಿ ಕಥೆಗಳು ಬರುತ್ತವೆ.

ಈ ಮೂಲದಲ್ಲಿರುವ ಕಥೆಗಳು ಒಂದೊಂದೇ ಗಾಹೆಯಲ್ಲಿ ನಿರೂಪಿತವಾಗಿವೆ. ಅವು ಅತಿಸಂಕ್ಷಿಪ್ತವಾಗಿವೆ ; ಕಥೆಗಳ ಯಾವ ವಿವರಗಳೂ ಅಲ್ಲಿ ದೊರೆಯುವುದಿಲ್ಲ. ಹರಿಷೇಣನೂ, ಕೋಗಳಿಯ ಶಿವಕೋಟಿಯೂ ಈ ಕಥೆಗಳನ್ನು ಸವಿಸ್ತಾರವಾಗಿಯೂ ಸಾಲಂಕಾರವಾಗಿಯೂ ನಿರೂಪಿಸಿದ್ದಾರೆ. ಹರಿಷೇಣನಿಗಿಂತ ಶಿವಕೋಟಿಯು ಹೆಚ್ಚು ವಿವರಗಳನ್ನು ಕೊಡುತ್ತಾನೆ. ಹರಿಷೇಣನು 'ಅಭಿನಂದನ ಮುನಿ ಕಥಾನಕ'ವನ್ನು ಅತಿಸಂಗ್ರಹವಾಗಿ ೮ ಶ್ಲೋಕಗಳಲ್ಲಿ ಯಾವ ವರ್ಣನೆಗೂ ಹೋಗದೆ ಸುದ್ದಿಯನ್ನು ತಿಳಿಸುವ ವರದಿಗಾರನಂತೆ ಹೇಳಿದ್ದಾನೆ. ಇದೇ ಕಥೆ 'ವಡ್ಡಾರಾಧನೆ'ಯಲ್ಲಿ ''ಮಹೇಂದ್ರದತ್ತಾಚಾರ್ಯರ್ ಮೊದಲಾದ ಅಯ್ನೂರ್ವರ್ ರಿಷಿಯರ್ಕಳ ಕಥೆ'' ಎಂಬ ಹೆಸರಿನಿಂದ ಸಪರಿಕರವಾಗಿ, ಸರಸವಾಗಿ, ಕುತೂಹಲಕಾರಕವಾಗಿ ಹೃದ್ಯವಾದ ಗದ್ಯದಲ್ಲಿ ಐದು ಪುಟಗಳಲ್ಲಿ ನಿರೂಪಿತವಾಗಿದೆ. ಆದ್ದರಿಂದ ಈ ಇಬ್ಬರು ಕವಿಗಳು ತಮಗೆ ಸಿಕ್ಕ ಮೂಲ ಸಾಮಗ್ರಿಯನ್ನು ತಮಗೆ ಇಷ್ಟಬಂದ ಹಾಗೆ ಬಳಸಿಕೊಂಡಿದ್ದಾರೆಂದು ಭಾವಿಸಬಹುದು. ಇವರಿಬ್ಬರಿಗೆ ಸಮಾನ ಮೂಲವೊಂದು ಇದ್ದಿತೆಂದೂ ಅದು 'ಭಗವತೀ ಆರಾಧನಾ' ಗ್ರಂಥಕ್ಕೆ ಇದ್ದಿರಬಹುದಾದ ಯಾವುದೋ ಪ್ರಾಕೃತ ವ್ಯಾಖ್ಯಾನವೆಂದೂ ಡಾ. ಆ. ನೇ. ಉಪಾಧ್ಯೆಯವರು ಕೆಲವು ಆಧಾರಗಳ ಮೇಲೆ ಊಹಿಸಿದ್ದಾರೆ. ಇದು ಅತ್ಯಂತ ಸಂಭವನೀಯವೆಂದೂ ಪರಿಗ್ರಾಹ್ಯಯೋಗ್ಯವೆಂದೂ ತೋರುತ್ತದೆ. ಈ ಮೂಲದಲ್ಲಿ ಒಂದೊಂದು ಗಾಹೆಯಲ್ಲೇ ಸೂಚಿತವಾಗಿದ್ದ ಕಥೆಗಳನ್ನು ವ್ಯಾಖ್ಯಾನದಲ್ಲಿ ವಿಸ್ತರಿಸಿ ನಿರೂಪಣೆ ಮಾಡಿದ್ದಿತೆಂದು ಹೇಳಬಹುದು. ಈ ವಿಸ್ತೃತ ಕಥೆಗಳನ್ನು ಕವಿಯ ದೃಷ್ಟಿಯಿಂದ ಹರಿಷೇಣನೂ ಶಿವಕೋಟಿಯೂ ನೋಡಿ ಅವುಗಳ ನಿರೂಪಣೆಯಲ್ಲಿ ತಮ್ಮ ಕೌಶಲ್ಯವನ್ನೂ ಪ್ರತಿಭೆಯನ್ನೂ ಪ್ರಕಾಶಪಡಿಸಿರುವರೆಂದು ತಿಳಿಯಬಹುದು. 'ವಡ್ಡಾರಾಧನೆ'ಯನ್ನು ಸಾಹಿತ್ಯದೃಷ್ಟಿಯಿಂದ ವಿಮರ್ಶೆಮಾಡುವಾಗ ಆದರ ಕವಿಗೆ ದೊರೆತಿದ್ದ ಮೂಲಸಾಮಗ್ರಿಯ ಸ್ವರೂಪವೆಂಥದೆಂಬುದು ಖಚಿತವಾಗಿ ತಿಳಿದುಬಂದಿದ್ದರೆ ವಿಮರ್ಶಕನಿಗೆ ತುಂಬ ಸಹಾಯವಾಗುತ್ತಿತ್ತು. ಅವನು ಸ್ವೀಕರಿಸಿದ್ದೇನು, ಬಿಟ್ಟಿದ್ದೇನು, ಹೊಸದಾಗಿ ಸೇರಿಸಿದ್ದೇನು, ಮಾಡಿಕೊಂಡ ಮಾರ್ಪಾಟುಗಳೇನು—ಇವನ್ನೆಲ್ಲಾ ವಿಶ್ಲೇಷಣ ಮಾಡಿ ಸಾಹಿತ್ಯದೃಷ್ಟಿಯಿಂದ ಕೃತಿಯ ಮೌಲ್ಯವನ್ನು ಒರೆಯಿಟ್ಟು ನಿರ್ಣಯಿಸಬಹುದಾಗಿತ್ತು. ಆ ಅವಕಾಶ ಈಗ ಇಲ್ಲ. ಆದರೂ ಹರಿಷೇಣನ ಕಥೆಗಳನ್ನೂ ವಡ್ಡಾರಾಧನೆಯ ಕಥೆಗಳನ್ನೂ ತೋಲನಾತ್ಮಕವಾಗಿ ವಿಮರ್ಶಿಸುವುದು

59 *History of Indian Literature*, II. p. 557.

60 *The Jaina Sources of the History of Ancient India*, p. 109.

61 ಈ ವಿಷಯವನ್ನು ಮೊದಲು ಕಂಡುಹಿಡಿದವರು ಡಾ. ಆ. ನೇ. ಉಪಾಧ್ಯೆಯವರು.

ಈ ದೃಷ್ಟಿಯಿಂದ ಲಾಭದಾಯಕವಾದದ್ದು. 'ವಡ್ಡಾರಾಧನೆ'ಯ ನಿರೂಪಣೆ, ಸಂನಿವೇಶನಿರ್ಮಾಣ, ಪಾತ್ರರಚನೆ, ರಸಾವಿಷ್ಕರಣ, ಗದ್ಯದ ರಮಣೀಯತೆ, ವಾಕ್ಯಗಳ ವೈವಿಧ್ಯ, ಧ್ವನಿ—ಇವೆಲ್ಲ ಹರಿಷೇಣನ ಕೃತಿಯಲ್ಲಿರುವುದಕ್ಕಿಂತ ಅಧಿಕ ಪ್ರಮಾಣದಲ್ಲೂ ಗುಣದಲ್ಲೂ 'ವಡ್ಡಾರಾಧನೆ'ಯಲ್ಲಿ ಇವೆಯೆಂದು ಸ್ಥಾಪಿಸಲು ಸಾಧ್ಯವಾಗುತ್ತದೆ. ಈ ತೌಲನಾತ್ಮಕ ದೃಷ್ಟಿಯಿಂದಲೇ ಈ ಕೃತಿಯ ಮೌಲ್ಯವಿಚಾರ ನಡೆಯಬೇಕಾಗಿದೆ.

# ವಡ್ಡಾರಾಧನೆ

## ಪೀಠಿಕೆ

ನಮಃ ಶ್ರೀ ವರ್ಧಮಾನಾಯ ನಿರ್ಧೂತಕಲಿಲಾತ್ಮನೇ ।
ಸಾಲೋಕಾನಾಂ ತ್ರಿಲೋಕಾನಾಂ ಯದ್ವಿದ್ಯಾ ದರ್ಪಣಾಯತೇ ॥*

[1]ಶ್ರೀ ವೀರವರ್ಧಮಾನ ಭಟ್ಟಾರಕರ್ಗೆ[1] ನಮಸ್ಕಾರಂ ಗೆಯ್ದು ದೇವೋಪಸರ್ಗ ಮನುಷ್ಯೋಪಸರ್ಗ ತಿರಿಕೋಪಸರ್ಗ[2]ಮ[2]ಚೇತನೋಪಸರ್ಗಮೆಂದಿಂತು ಚತುರ್ವಿಧ ಮಪ್ಪುಪಸರ್ಗಮುಮಂ ಪಸಿವುಂ ನೀರಟ್ಕೆ ಮೊದಲಾಗೊಡೆಯ ಇಪ್ಪತ್ತೆರಡು ಪರೀಷಹಂಗಳು[3]ಮಂ[3] ಸೈರಿಸಿ ಅಯ್ದುಮಿಂದ್ರಿಯಂಗಳಂ ಗೆಲ್ದು ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ದ್ವಾದಶವಿಧಮಪ್ಪ ತಪದೊಳ್ ನೆಗಟ್ದು ಪ್ರಾಯೋಪಗಮ[4]ನದಿಂ[4] ಸಂನ್ಯಸನಂ ಗೆಯ್ದು ಕರ್ಮಕ್ಷಯಂ ಗೆಯ್ದು ಮೋಕ್ಷಕ್ಕೆ ಪೋದ[5] ಮತ್ತಂ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದ ಮಹಾಪುರುಷರ್ಕಳ ಕಥೆಗಳಂ ಪೇೞ್ವಲ್ಲಿ ಮು[6]ನ್ನಂ[6] ಸುಕುಮಾರಸ್ವಾಮಿಯ ಕಥೆಯುಂ ಪೇೞ್ವೆಂ.

## (೧) ಸುಕುಮಾರಸ್ವಾಮಿಯ ಕಥೆ

ಗಾಹೆ ॥ ಭಲ್ಲುಕ್ಕಿಯೇಣ ಣಿಚ್ಚಂ ಖಜ್ಜಂತೋ ಘೋರವೇದಣತ್ತೋಪಿ ।
ಆರಾಧಣಂ ಪ[7]ವಣ್ಣೋ ಝಾಣೇಣ ಅವಂತಿ ಸುಕುಮಾರೋ ॥

---

*(ಘಚಛ) ಪ್ರತಿಗಳಲ್ಲಿ ಕೆಳಗೆ ಕಾಣಿಸಿರುವ ಗಾಹೆಯೊಂದು ಆರಂಭದಲ್ಲಿದೆ :

ತಿಳೋಯ ಸಬ್ಬಜೀವಾಣಂ ಹಿಯಂ ಧಮ್ಮೋವದೇಸಿಣಂ ।
ವಡ್ಢಮಾಣಂ ಮಹಾವೀರಂ ವಂದಿತ್ತಾ ಸಬ್ಬವೇಇಣಂ ॥

ಇದಕ್ಕಿಂತ ಹಿಂದೆ ಚ. ಪ್ರತಿಯಲ್ಲಿ ಇನ್ನೂ ಎರಡು ಗಾಹೆಗಳಿರುವಂತಿವೆ ; ಆದರೆ ಆ ಭಾಗ ತ್ರುಟಿತ. ಕೊಲ್ಹಾಪುರದ ಪ್ರತಿಯಲ್ಲಿ (ಜ) ಈ ಗಾಹೆಯ ಹಿಂದೆ ಕೆಳಗಿನ ಎರಡು ಗಾಹೆಗಳಿವೆ :

ಇಂದ ಸಯ ವಂದಿಯಾಣಂ ತಿಹುವಣಹಿಯ ಮಹುರ ವಿಸದ ವಕ್ಕಾಣಂ ।
ಅಂತಾತಿಧ ಗುಣಾಣಂ ಣಮೋ ಜಿಣಾಣಂ ಜಿದ ಭವಾಣಂ ॥
ಏಸ ಸುರಾಸುರ ಮಣುಸಿಂದವಂದಿಯಂ ಧೋದ ಘಾಯಿ ಕಂಮಮಳಂ ।
ಪಣಮಾಮಿ ವಡ್ಢಮಾಣಂ ತಿಚ್ಛಂದಯಸ್ಸ ಕತ್ತಾರಂ ॥

1. ಎಂದಿಂತು ಶ್ರೀವರ್ಧಮಾನ ಭಟ್ಟಾರಕರ್ಗೆ (–ಸ್ವಾಮಿಗಳ್ಗೆ–ಛ) ತ್ರಿಕರಣಶುದ್ಧಿಯಿಂದಂ (ಘಚಛಜ). 2. (ಕಖಗ)ಗಳಲ್ಲಿಲ್ಲ. 3. ಗಳಂ (ಕಖಗ). 4. ಗಮನಂ (ಘಚಛ). ನಂಗೆಯ್ದು (ಜ). 5. +ರ್ (ಕಖಗ. ಚಛಘ). 6. ನ್ನ (ಕಖಗ). 7. +ಡಿ (ಘಚಛಜ).

[ಭಲ್ಲುಂಕಿಯೇಣ—ಮುನ್ನಿನ [1]ಜನ್ಮಾಂತರ[1]ದತ್ತಿಗೆಯಪ್ಪ ಪೆಣ್ಣರಿಯಿಂದಂ, ಣಿಚ್ಚಂ ಖಜ್ಜಂತೋ—ಮೂಱುದಿವ[2]ಸಂ ನಿರಂತರ[3]ಮಿರುಳುಂ ಪಗಲುಂ ತಿನೆಪಡುತಿ[3]ರ್ದೊ[3]ನಾಗಿ[4]ಯುಂ,[4] ಘೋರವೇದಣತ್ತೋೞಿ—ಕಡಿದಪ್ಪ ವೇದನೆಯಿಂದಂ ಬ[5]ಟ್ದಿ[5]ದೊನಾಗಿಯುಂ, [6]ಆರಾಧಣಂ—ಸಮ್ಯಗ್ದರ್ಶನ ಚಾರಿತ್ರಾತ್ಮಕಮಪ್ಪಾರಾಧನೆಯುಂ,[6] ಝಾಣೇಣ—ಉತ್ತಮಧ್ಯಾನದಿಂದಂ, ಅವಂತಿಸುಕುಮಾರೋ—ಅವಂತಿಯೆಂಬ ಸುಕುಮಾರಸ್ವಾಮಿ, ಪವಣ್ಣೋ—[7]ಪೊರ್ದ್ದಿದೊಂ[7]]

ಅದೆಂತೆಂದೊಡೆ—

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ವತ್ಸೆಯೆಂಬುದು ನಾಡಲ್ಲಿ ಕೌಸಂಬಿಯೆಂಬುದು ಪೊೞಲದನಾಳ್ವೊನತಿಬಳನೆಂ[8]ಬರಸನಾ[8]ತನ ಮಹಾದೇವಿ ಮನೋಹರಿಯೆಂಬೊಳ್ [9]ಪೆಸರ್ಗೆ ತಕ್ಕಂತೆ ನೋಡಿದರೆಲ್ಲರ್ಗಳ ಕಣ್ಣಾಲಿಗೆ ಸೊಗಯಿಸುವಳ್ ಸತ್ಯ ಶೌಚಾಚಾರಂಗಳಿಂ ಕೂಡಿದೊಳ್ ಅತ್ಯಂತ ರೂಪ[9] ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯಳಂತವರ್ಗಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಿರೆ [10]ಮತ್ತಾ ಅರಸನ ಮಂತ್ರಿ ಸೋಮಶರ್ಮನೆಂಬೊನಾ[10]ತನ ಭಾರ್ಯೆ ಕಾಶ್ಯಪಿಯೆಂಬೊಳ್ ಇವರ್ಗ್ಗಂ ಮಕ್ಕಳಗ್ನಿಭೂತಿ ವಾಯುಭೂತಿ[11]ಯೆಂಬ[11]ವರ್ಗಳ್ ತಾಯ್ತಂದೆವಿರ [12]ಕೇಳ್ಪಿ[12]ಯುಂ ಗೆಯ್ಯದಾ ವೇದಂ ಮೊದಲಾಗೊಡೆಯ [13]ಶಾಸ್ತ್ರಂಗಳನೋದದೆ ತಂದೆ[13] ಪಡೆದ ಕ[14]ಸ[14]ವರಮುಂ [15]ಬಿಯಂ[15]ಗೆಯ್ಯುತ್ತುಂ ಸಪ್ತವ್ಯಸನಾಭಿಭೂತರಾಗಿ ನೆಗೞುತ್ತಿರ್ಪ[16]ಯಿರೆ[16] ಪಲಕಾಲದಿಂ ತಂದೆ ಕೞಿದೊಡೆ ಸೋಮಶರ್ಮ್ಮಂಗೆ ಮಕ್ಕ[17]ಳೊಳರಿಲ್ಲೆಂ[17]ದರಸಂ ಬೆಸಗೊಂಡೊಡೊಳರೆಂದು ಪೇೞ್ದೊಡವರ್ಗ್ಗೆ ಬೞಿಯ[18]ಟ್ಟಿ[19]ವರಿಸಿಮಜ್ಜ[19]ನದೊಳ್ ಮಿಸಿಸಿ[19] ಉಡಿಸಿ ತುಡಿಸಿ [20]ಯುಂಡಿ[20] ತಂಬುಲಂಗೊಟ್ಟುಬ್ಬೆಗಂಬಡದಿರಿಮೆಂದು ನುಡಿದವರ್ಗ್ಗಳ [21]ದುಃಖಮನಾಱಿಸಿ ಬೀಡಿಂಗೆ ಪೋಗಲ್ವೇೞ್ದು ಕೆಲ[21]ವು ದಿವಸದಿಂ ಬೞಿಯ[22]ಟ್ಟಿ ಪರಿಸಿ ನೀ[23]ವಾ[23] ಪೋದುಗಳಂ ಬಲ್ಲಿರೆಂದಿರ್ವರುಮಂ ಬೆಸಗೊಂಡೊಡವರ್ಗ್ಗಳ್ ತಲೆಯುಂ ಬಾಗಿ ಮಱುಮಾತು[24]ಗುಡದೆ ಕಣ್ಣನೀರಂ ತೀವಿ[24] ನೆಲನಂ ಬರೆಯುತ್ತಿರೆ ಸಭೆಯೊಳಿರ್ದ್ದವರ್ಗ್ಗಳೆಲ್ಲಂ—ಇವರ್ ಮೂರ್ಖರೇನುಮೋದಂಗಳನಱಿಯರ್ ಸಪ್ತವ್ಯಸನಾಭಿಭೂತರೆಂದರಸಂಗೆ ಪೇೞ್ದೊಡರಸನ[25]ವರ್ಗಳನಟ್ಟಿ ಕಳೆದವರ ದಾಯಿಗಂ ಶಾಸ್ತ್ರಂಗಳಂ ಬಲ್ಲೊಂಗಂ ಮಂತ್ರಿ[25] ಪದವಿಯುಂ ಬಾೞುಮಂ ಪ್ರತಿಪತ್ತಿಯುಮಂ ಕೊಟ್ಟುದಂ ಕೇಳ್ದಿರ್ವರುಮುಬ್ಬೆಗಂಬಟ್ಟು ವೈರಾಗ್ಯಪ[26]ರಾಯಣ[26]ರಾಗಿ

---

1. ಭವ (ಘಚಭಜ). 2. ಸ (ಘಚಭಜ). 3. ರ್ದ (ಘಚಭಜ). 4. (ಘಚಭಜ)ಗಳಲ್ಲಿಲ್ಲ. 5. ರ್ದ್ದಿ (ಘಚಭಜ). 6. (ಕಖಗ)ಗಳಲ್ಲಿಲ್ಲ. 7. ೞ್ದಿದೊಂ (ಕಖಗ), ದ್ದಿದನಾದೊಂ (ಘಚಭಜ). 8. ಬೊನಾ (ಘಭಜ). 9. (ಕಗ)ಗಳಲ್ಲಿ ತ್ರುಟಿತ. 10. (ಕಗ)ಗಳಲ್ಲಿ ತ್ರುಟಿತ. 11. ಯುಮೆಂಬೊರ (ಘಭಜ). 12. ಕಲ್ಪಿ (ಘಭಜ). 13. (ಕಗ)ಗಳಲ್ಲಿ ತ್ರುಟಿತ. 14. ಡ (ಸಗಘ). 15. (ಕಗ) ಗಳಲ್ಲಿ ತ್ರುಟಿತ. 16. (ಘಭಜ)ಗಳಲ್ಲಿಲ್ಲ. 17. ಳಿಲ್ಲೆಂ (ಗ), (ಕಖ)ಗಳಲ್ಲಿ ತ್ರುಟಿತ. 18. + ನ (ಘಭಜ). 19. ನಂ ಮಾಡಿಸಿ (ಕಗ). 20. ಭೋಜನಾನಂತರ (ಚ). 21. (ಕಗ)ಗಳಲ್ಲಿ ತ್ರುಟಿತ. 22. + ನ (ಘಚಜ). 23. ಯಾ (ಜ). 24. ಗಾಣದೆ ನೀಡುಂ ನೋಡಿ (ಘಭಜ). ಗುಡದೆ ಕಣ್ಣೊಳ್ ನೀರದುಂಬಿ (ಗ), (ಕ)ದಲ್ಲಿ ತ್ರುಟಿತ. 25. (ಕಗ)ಗಳಲ್ಲಿ ತ್ರುಟಿತ. 26. ರ (ಘಚಜ).

ಕಪ್ಪಡಮುಟ್ಟು [1]ಬೈಕಂದಿರಿದಿನ್ನುಪ್ಪೊಡಮೋದುವಮೆಂದು ತಾಯ್ಗೆ ನುಡಿದೊಡಂ ತಪ್ಪೊಡೆ ಮಕ್ಕಳಿರಾ ಮಗಧೆಯೆಂಬುದು ನಾಡಲ್ಲಿ ರಾಜಗೃಹಮೆಂಬುದು ಪೊೞಲದ ನಾಳ್ವೊಂ ಸುಬಲನೆಂಬರಸನಾತನ ಮಹಾದೇವಿ ಸುಪ್ರಭೆಯೆಂಬೊಳವರ್ಗ್ಗೆ[1] ಮಂತ್ರಿಯೆಮ್ಮಣ್ಣಂ ಸೂರ್ಯಮಿತ್ರನೆಂಬೊಂ ಎಲ್ಲಾ ಓದುಗಳುಮಂ ಬಲ್ಲೊನಾತಂ ನಿಮ್ಮನೋದಿಸಿ ಯೋಗ್ಯರಂ ಮಾಡುವಂತಿರೆ [2]ನಿರೂಪಿಸಿ[2] ಕಲ್ಪಿಸಿಯೋಲೆಯಂ ಬರೆಯಿಸಿ ನಿಮ್ಮ ಕೈಯ್ಯೊಳ[3]ಟ್ಟಿದಪೆಂ[3] ನೀಮುಂ ಪೋಗಿ ನಿಮ್ಮ ಮಾವನ ಪಕ್ಕದೊಳೋದಿಮೆಂದೋಲೆಯಂ ಬರೆಯಿಸಿ ಕೊಟ್ಟೊಡವರ್ಗ್ಗಳುಂ ತಾಯಂ ಬೀಳ್ಕೊಂಡು ಕತಿಪಯ ದಿವಸಂಗಳಿಂ ರಾಜಗೃಹಮನೆಯ್ದಿ ಸೂರ್ಯಮಿತ್ರ[4]ನ ಮನೆಯಂ ಬೆಸಗೊಂಡು[4] ಪೋಗಿ ಕಂಡೋಲೆಯನಿಕ್ಕಿದೊಡೆ ಸೂರ್ಯಮಿತ್ರನೆಲ್ಲಿಂ ಬಂದಿರಾರೋಲೆಯೆಂದು ಬೆಸಗೊಂಡೊಡೆ—ಕೌಸಂಬಿಯಿಂ ಬಂದೆವು ನಿಮ್ಮ ತಂಗೆಯಪ್ಪ ಕಾಶ್ಯಪಿಯಟ್ಟಿ[5]ದೋಲೆಯೆಂದೊಡೋ[5]ಲೆಯಂ ಬಾ[6]ಜಿ[6]ಸಿ ನೋಡಿ ಸೋಮಶರ್ಮಂ ಕೞಿದುದುಮಂ ಮಂತ್ರಿಪದವಿ ಪೆಱ[7]ರ್ಗ್ಗಾ[7]ದುದುಮಂ ಮಕ್ಕಳ್ ಸಪ್ತವ್ಯಸನಾಭಿಭೂತರಾಗಿ ಬಾೞಿಂ ಕೆಟ್ಟುದುಮಂ ಶಾಸ್ತ್ರಜ್ಞರುಂ ಬುದ್ಧಿಯೊಡೆಯರುಂ ಯೋಗ್ಯರುಮಪ್ಪಂತು ಮಾಡಿಮೆಂದು ಮಕ್ಕಳಂ ತನ[8]ಗಿನಿತೊಪ್ಪಿಸಿ[8]ಯಟ್ಟಿದುದುಮನಿಂತೆಲ್ಲಮಂ ಬಾ[9]ಜಿ[9]ಸಿ ನೋಡಿ—[10]ಇವಂದಿರ್ಗ್ಗೆ[10] ಪಸರಂಗೊಟ್ಟೆನಪ್ಪೊಡೆ ಮುನ್ನಿನಂತೆರ್ಕೆ ಕಿಡುವರೆಂದು ಮನದೆ ಬಗೆದಗ್ನಿಭೂತಿ ವಾಯುಭೂತಿಗಳ್ಗಿಂತೆಂದಂ—ಕಾಶ್ಯಪಿಯೆಂಬೊಳೆನಗೆ ತಂಗೆಯಿಲ್ಲ ಸೋಮಶರ್ಮನೆಂಬೊಂ ಮೈದುನನುಮಿಲ್ಲ ಸೂರ್ಯಮಿತ್ರನೆಂಬ ಪೆಸರೆನಗುಂಟು ನಿಮ್ಮ ಮಾವನಪ್ಪ ಸೂರ್ಯಮಿತ್ರನಲ್ಲೆನೆಂದವರ್ಗ್ಗೆ ನುಡಿದುಂ [11]ಮತ್ತಮಿಂತೆಂದಂ ನೀಮಾರ್ಗ್ಗರಾದೊಡಮೇಂ ವಿದ್ಯಾರ್ಥಿಗಳಾಗಿಯೋದಂ ಕಲ್ವೆಮೆಂಬಬುದ್ಧಿಯೊಳ್ ಬಂದಿರಪ್ಪೊಡೆ ಬೈಕಂದಿರಿದು ಕಪ್ಪಡಮುಟ್ಟಿರುಳುಂ ಪಗಲುಮಲಸದೆ ನಿರ್ಬಂಧದಿಂದೋದಲಾರ್ಪೊಡೆ ನಿಮ್ಮನೋದಿಸಲಕ್ಕುಮೆಂದೊಡವ[12]ರ್ಗ್ಗಳುಮಿಂ ದಯೆಗೆಯ್ಯಿಂ[12] ಮಹಾಪ್ರಸಾದಮೆಂದು ಪೊಡೆಮಟ್ಟು ಹರ್ಷಚಿತ್ತರಾಗಿ ಒಳ್ಳಿತಪ್ಪ ದಿವಸ ವಾರ ವಿದ್ಯಾ ನಕ್ಷತ್ರದಂದು[11] ತಮ್ಮನುಕೂಲದೊಳೋಜರ್ಗ್ಗೆಱಗಿ ಪೊಡೆವಟ್ಟು ವಿದ್ಯಾಪ್ರಾರಂಭಂಗೆಯ್ದರ್ ಸೂರ್ಯಮಿತ್ರನುಮವರನಿರುಳುಂ ಪಗಲುಂ ನಿರಂತರಂ ನಿರ್ಬಂಧದಿಂದೋದಿಸಿ [13]ಏೞೆಂಟು[13] ವರುಷದಿಂದೊಳಗೆ ನಾಲ್ಕುವೇ[14]ದಮುಮಾ[14]ಱುಂಗಮುಂ ಪದಿನೆಂಟು ಧರ್ಮಶಾಸ್ತ್ರಂಗಳುಂ ಮೀಮಾಂಸಾ ನ್ಯಾ[15]ಯ[15]ವಿಸ್ತರಂ ವ್ಯಾಕರಣಂ ಪ್ರಮಾಣಂ ಛಂದಮಲಂಕಾರಂ ನಿಘಂಟು ಕಾವ್ಯ ನಾಟಕಂಗಳುಂ ಚಾ[16]ಣ[16]ಕ್ಯಂ ಸಾಮುದ್ರಿಕಂ

---

1. (ಕಖ)ದಲ್ಲಿ ತ್ರುಟಿತ. 2. ನೀವೋದಿಸಿ (ಕಖಗ). ನಿವೇದಿಸಿ ? 3. ಟ್ಟುವೆಂ (ಜ). 4. (ಕಖ)ದಲ್ಲಿ ತ್ರುಟಿತ. 5. ದಳೊಂದೋ (ಘಚ), ದಳೋ (ಛ), ದಳೆಂದೋ (ಜ). 6. ವಿ (ಘ), ರಿ (ಜ). 7. ರ್ಗ್ಗೆವೋ (ಘಛಜ). (ಚ)ದಲ್ಲಿ ತ್ರುಟಿತ. 8. ಗೆನಿರೂಪಿಸಿ (ಘಚಛಜ). 9. ವಿ (ಘ), ರಿ (ಜ). 10. ಯುೞಿದವರ್ಗ್ಗೆ (ಘಚಛಜ). 11. (ಕಗ)ಗಳಲ್ಲಿ ತ್ರುಟಿತ. 12. ರಿರ್ಪ್ಪರುಂ (ಘಚಛಜ). 13. ಎಂ (ಘಚಛಜ). 14. ಮುಂ ಮೂ (ಕಖ), ಮುಂ ಮಾ (ಗ), ದಂಗಳುಮನಾ (ಘಚಛಜ). 15. ಸ (ಘಚಛಜ). 16. ಣಾ (ಗ).

ಶಾಲಿಹೋತ್ರಂ ಪಾಳಕಾಪ್ಯಂ ಹಾನಿತಂ ಚರ[1]ಕಮ[1]ಶ್ವಿನೀಮತಂ [2]ಬಾಪಲಂ[2] ಸುಸ್ರುತಂ ಕ್ಷಾರಪಾನೀಯಂ ಮೊದಲಾಗೊಡೆಯ ನರವೈದ್ಯಂಗಳುಂ ಜ್ಯೋತಿಷಂ ಮಂತ್ರವಾ[3]ದಂ[3] ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮಂ ನೆಱೆಯೆ ಕಲ್ಪಿಸಿ ಯೋಗ್ಯರ್ ಮಾಡಿದ್ದೊಡವರ್—ನಿಮ್ಮ ಪ್ರಸಾದದಿಂದೆಲ್ಲಾ ಶಾಸ್ತ್ರಮಂ ಕಲ್ತು ಪಂಡಿತರೆಮಾದೆಮೆಂದಾದಮಾನುಮೊಸೆದುಮಿನ್ನೆಮ್ಮ ನಾಡ್ಗೆ ಪೋದಪೆಮೆಂದೋಜರ್ಗ್ಗೆಱಗಿ ಪೊಡೆವಟ್ಟು ಬೀೞ್ಕೊಂಡಾಗಳೋಜರೆಂದರ್–ನೀಮೆಮ್ಮ ತಂಗೆಯ ಮಕ್ಕಳಿರ್ ಸೋದರಳಿಯಂದಿರಪ್ಪಿರ್ ನಿಮಗಾಂ ಪಸರಂಗೊಟ್ಟೆನಿಲ್ಲೇಕೆಂದೊಡೆ ಮುನ್ನಿನಂತೆ ತಂದೆಯಲ್ಲಿಯುರ್ಕ್ಕೆ ಕೆಟ್ಟಂತಿರಿಲ್ಲಿಯುಮೆತ್ತಾನುಮುರ್ಕ್ಕೆ ಕಿಡುವಿರೆಂದಾಂ ನಿಮ್ಮಂ ಯೋಗ್ಯರಂ ಮಾಡುವ ಕಾರಣಮಾಗಿ ನಿಮಗೆ ಪಸರಂಗೊಟ್ಟೆನಿಲ್ಲಿದರ್ಕ್ಕೆ ಮುಳಿಯದಿರಿಂ ಕ್ಷಮಿಯಿಸಿಮೆಂದುಡಲುಂ ತುಡಲುಂ ಸಂಬಳಮುಮಂ ಕೊಟ್ಟು ಕಱಪಿದಾಗಳ್ ಪಿರಿಯಾತನಗ್ನಿಭೂತಿಯೆಂ[4]ಬೊಂ[4]ಮಾವನೆಮಗೆ ಪಸರಂಗುಡದಿರ್ದ್ದರುಮಂ ಯೋಗ್ಯರಂ ಮಾಡಿದರೆಂದುಪಕಾರಮಂ ಮನದೆ ಬಗೆದಾದಮಾನುಂ ಸಂತೋಷಂ ಬಟ್ಟಂ ಕಿಱಿಯಾತಂ ವಾಯುಭೂತಿ ಸೂರ್ಯಮಿತ್ರಂಗೆಯ್ದುದೆಲ್ಲಮಪಕಾರಮೆಂದು ಬಗೆದೆಂದಪ್ಪೊಡಮೆಮ್ಮ ಮಾವಂ ಬೈಕಂದಿರಿದು ತಂದ ಕೂೞ್ಗೆ [5]ನೆರ[5]ಮೆಣ್ಣೆಯನಕ್ಕುಪ್ಪನಕ್ಕೆ ಕೞಿಯನಕ್ಕೆಂದಪ್ಪೊಡಮಕ್ಕಿಯುಮೆಱೆಯಿಸಿಯುಮೆಱಿಯಂ [6]ಕೆಱೆಗೆ[6] ಪೋಗಿ ಮೀವಾಗಳ್ ತಲೆಯುಂ ಪೂಸಲೆಣ್ಣೆಯನಪ್ಪೊಡಮೆಱೆಯಿಸಿಯಱಿಯಂ ತಾಂ ದಿವ್ಯಮಪ್ಪಾಹಾರಂಗಳಂ ದೆವಸದೆವಸಕ್ಕಂ ಪಲಂಬರ್ ನಂಟ[7]ರ್ಕ್ಕಳುಂ[7] ಆಳ್ಗಳುಂ ಬೆರಸುಣ್ಬಂ ಪರ್ವದಿವಸದೊಳಪ್ಪೊಡಮೆಂದಾನುಮೆಮಗುಣ್ಣಲಿಕ್ಕಿಮೆಂದಱಿಯಂ ಪಂಚಮಹಾಪಾತಕನೆಮ್ಮನೇೞೆಂಟು ವರುಷಂಬರಂ ಪಗೆವರಂ [8]ಬಗೆ[8]ವಂತೆ ದಂಡಿಸಿದನೆಂದು ಮನದೊಳ್ ಮುಳಿಸಂ ಭಾವಿಸಿ ಪೊಱಮಟ್ಟು ಪೋದನ್

ಅಂತಿರ್ವ್ವರುಂ ಪೋಗಿ ಕತಿಪಯ ದಿವಸಂಗಳಿಂ ಕೌಶಂಬಿಯನೆಯ್ದಿ ತಮ್ಮ ಮನೆಯಂ ಪೊಕ್ಕು ತಾಯಂ ಕಂಡು ತುೞಿಲ್ಗೆಯ್ದು ಪಂಡಿತರಾಗಿ ಬಂದುದಂ ಪೇೞ್ದು ಮಿಂದುಂಡು [9]ವಿ[9]ಶ್ರಮಿಸಿಯೊಳ್ಳಿತಪ್ಪ ದಿವಸ ವಾರ ನಕ್ಷತ್ರ ಮುಹೂರ್ತದೊಳತಿಬಲ ಮಹಾರಾಜನಂ ಕಂಡಿರ್ವ್ವರುಂ ಬೇಱೆಬೇಱುಪಶ್ಲೋಕಿಸಿ ಕ್ರಿಯಾಕಾರಕ ಸಂಬಂಧದಿಂದಂ ವಖ್ಯಾಣಿಸಿ ತಮ್ಮ ಪಂಡಿತಿ[10]ಕ್ಕೆ[10]ಯನಱಿಪಿದೊಡೆ ಸಭೆಯೊಳಿರ್ದ್ದ ಪಂಡಿತಜ[11]ನಮೆಲ್ಲಂ[11] ಮೆಚ್ಚಿ [12]ಬಿಚ್ಚಳಿಸಿ[12] ಪೊಗೞ್ದೊಡರಸಂ ಸಂತುಷ್ಟಚಿತ್ತನಾಗಿ ಒಸೆದು ನಿಮ್ಮ ತಂದೆಯ ಮಂತ್ರಿಪದಮಂ ಬಾೞುಮಂ ಕೈಕೊಳ್ಳಿಮೆಂದು ಕೊಟ್ಟೊಡೆ [12]ಮಹಾ[12]ಪ್ರಸಾದಮೆಂದೆಱಗಿ ಪೊಡೆವಟ್ಟು ಕೈಕೊಂಡು ಸುಖದೊಳ್ ಬಾೞುತ್ತಂ ಪಲಂಬರ್ ಪಂಡಿತರ್ಕ್ಕಳ್ಗೋದುಗಳಂ ವಖ್ಯಾಣಿಸುತ್ತಂ ಲೋಕದೊಳರಮನೆಯೊಳಂ ಪೂಜ್ಯರಾಗಿ ಸುಖ[13]ಸಂಕಥಾವಿನೋದದಿಂ[13] ಕಾಲಂ ಸಲೆ

---

1. ಕಾ (ಕಖ). 2. (ಘಚಭಜ)ಗಳಲ್ಲಿಲ್ಲ. ಬಾಹಟಂ ? 3. ದಮೆಂಬವು (ಘಚಭಜ). 4. ಬೊನೆಂದನೆಂಮ (ಘಚಭಜ). 5. ನೆರೆ (ಕಖಗ). ನೀರ (ಜ). (ಘ)ದಲ್ಲಿಲ್ಲ. (ಚ)ದಲ್ಲಿ ತ್ರುಟಿತ. 6. ಱೆ (ಕಗ). 7. ರ್ ಮಕ್ಕಳುಂ (ಚಜ). 8. ದಂಡಿಸು (ಘಜ). 9. ಪ (ಕ). 10. ಕ್ಕೆ (ಕಗ). 11. ನಂಗಳೆಲ್ಲರುಂ (ಚಜ). 12. (ಖ)ದಲ್ಲಿಲ್ಲ. 13. ದೊಳು (ಖಚಜ).

ಮತ್ತಿತ್ತ ರಾಜಗೃಹ[1]ದೊಳ್ ಸೂರ್ಯಮಿತ್ರಂ ಸಬಲ ಮಹಾರಾಜನ ತೊಟ್ಟಿರ್ದ್ದಮಪ್ಪ[2] ಮಾಣಿಕ್ಯದುಂಗುರಮಂ ಕಳೆದು ತ[3]ನಗೆ ತುಡಲ್ಕೆಂದು[3] ಕೊಟ್ಟೊಡೊಂದು ದಿವಸಂ ಸಂಜೆವಾರಿಸಲೆಂದು ಪೋದಲ್ಲಿ ಆದಿತ್ಯಂ[4]ಗಿದಿರೆ ನೀರಂ ಸೂಸು[4]ವಾಗಳ್ ಬೆರಲಿಂದ[5]ಮುಚ್ಚಿರ್[5] ನೀರ್ವೆರಸಂ ಸೂಸಿ ತಾವರೆ[6]ಯೊಳುಂಗುರಂ ಬಿ[7]ಟ್ಟಿ[7]ತ್ತು [8]ತಾನುಂ[8] ನೋಡದೆ [9]ಬಗೆಯದೆ[9] ಕೆಮ್ಮನೆ ಕಿಱಿದಂತರಮಂ ಪೋಗಿ ಕೈಯಂ ನೋಡಿ ಬೆರ[10]ಲುಂ[10]ಗುರಮಂ ಕಾಣದೆಲ್ಲಿ ಕೆ[11]ಟ್ಟಿ[11]ತ್ತೆಂದು ಪ್ರಮಾಣಮಱಿಯದೆ ಮಲ್ಮಲಂ ಮಱು[12]ಗುತ್ತಂಜಿ[12] ದೆಸೆಗಳಂ ನೋಟ್ಟು[13]ನ್ನೆಗಂ ದೂರಾಂತರದೊಳಿರ್ದ್ದ ಸುಧರ್ಮರೆಂಬಾಚಾರ್ಯರಂ ದಿವ್ಯ ಜ್ಞಾನಿಗಳಂ ಕಂಡಿವರೇನಾನುಮಂ ಬ[14]ಲ್ಲೊ[14]ರಪ್ಪೊಡೆ ಬೆಸಗೊಂಡು ನೋಟ್ಪೆನೆಂದು ಪೋಗಿ ಭಟ್ಟಾರರಂ ಕಂಡು ಪಕ್ಕದೊಳಿರ್ದ್ದಾಗಳ್ ಈತಂ ಭವ್ಯನೆಂದಱಿದು—ಏನೆಯ್ಯ ಅರಸರ ವಾರಕ[15]ದ[15] ಮಾಣಿಕದುಂಗುರಮಂ ಕಿಡಿಸಿ ಬಂದಿರೆ ಎಂದಾಗಳೆಱಗಿ ಪೊಡೆವ[16]ಟ್ಟೆಂತಱಿವರೊ[16]ಳರೆ ಎಂದು ಪೊಗೞ್ದಿರ್ದ್ದಿಂತು ಬೆಸಗೊಂಡಂ–ಭಟ್ಟಾರಾ ಬೆಸಸಿಮಾವುಂಗುರಮಂ ಕಾಣಲಕ್ಕು[17]ಮೊ[17] ಎಂದಂಗೆ ಭಟಾರರ್ ಕಾಣಲಕ್ಕುಮೆಂ[18]ದರ್[18] ನಿನ್ನೆ ನೀನಾದಿತ್ಯಂಗೆ ನೀರಂ ಸೂಸಿ ಪೊಡವಡುವಾಗಳಾ ನೀರ್ವೆರಸಂ ಸೂಸಿ ತಾವರೆ[19]ಗೆಱೆ[19]ಯೊಳಗೆ ಮುಂಬುಗಿರ್ದ ಮುಗುಳಮೇಗೆ ತಗುಳ್ದಿರ್ದುದು ನಾಳೆ ನೇಸಱ್ ಮೂಡುವಾಗಳ್ ನೀರಿಂದಂ ಮೇಗೆ ನೆಗೆದಿದ್ದುಂಗುರಮಂ ಕಾಣಲಕ್ಕುಮೆಂದೊಡೆ ಸಂತೋಷಂ ಬಟ್ಟು ಪೊಡೆಮಟ್ಟು ಪೋಗಿ ಕೊಳಕ್ಕೆ ಮಾನಸರಂ ಕಾಪಿಟ್ಟು ಮಱುದಿವಸಂ ಸಂಜೆ[20]ಯೊಳ್[20] ಬಂದು ನೋಟ್ಪನನ್ನೆಗಂ ತಾವರೆಯ ಮುಗುಳಮೇಲೆ [21]ತಗುಳ್ದಿ[21]ರ್ದ್ದುಂಗುರಮಂ ಕಂಡು ಕೊಂಡರಸಂಗೊಪ್ಪಿಸಿ ತುರಿಪದಿಂದರಮನೆಯುಂ ಪೊಱಮಟ್ಟು ಪೋಗಿ ಮನದೊಳಿಂತೆಂದು ಬಗೆದನೀ ಲೋಕದೊಳಿರ್ದ ಸೂಕ್ಷ್ಮಾಂತರಿತ ದೂರ ಪದಾರ್ಥ ವಸ್ತುಗಳೆಲ್ಲಮನಱಿವಂತಪ್ಪೀ ಸವಣ[22]ನ[22] ಜೋಯಿಸಮನೆಂತಪ್ಪೊಡಂ ಕ್ಷಪಣಕನಂ ಮಿಥ್ಯಾವಿನಯದಿಂ[23]ದೆಳೆ[23]ಸಿ ಕಲ್ವೆನೆಂಬುದೊಂದು ಬುದ್ಧಿಯಿಂದಂ ಮನೆಗೆ ಬಂದು ಸುದೇವಿಯೆಂಬ ತನ್ನ ಪಾರ್ವಂತಿಗೆ [24]ಸ್ವಾ[24]ಭಿಪ್ರಾಯಮೆಲ್ಲಮಂ ಪೇೞ್ದು ಜ್ಯೋತಿಷ ನಿಮಿತ್ತಂ ಮನೆಯುಂ ಪೊಱಮಟ್ಟು ಸುಧರ್ಮಾಚಾರ್ಯರಲ್ಲಿಗೆ ಪೋಗಿ ಪೊಡೆವಟ್ಟು ಭಟ್ಟರಾ ನಿಮ್ಮ ಪಕ್ಕದೆ ಜ್ಯೋತಿಷಮಂ ಕಲ್ವೆನೆಂಬುದೊಂದ[25]ಟ್ತೆ[25]ಯಿಂ ಬಂದೆನೆನ್ನಂ ಜ್ಯೋತಿಷಮಂ ಕಲ್ಪಿಪ್ಪುದೆಂದೊಡೆ ಭಟಾರರೆಂದರ್-ತಮ್ಮಾ ಎಮ್ಮ ಜೋಯಿಸಮೆಮ್ಮಂತಪ್ಪ ರೂಪಿನ

1. + ನಗರ (ಠ). 2. + ಮಣಿ (ಫಚಛ). (ಜ)ದಲ್ಲಿಲ್ಲ. 3. ತನ್ನ ಕಂಯ್ಯೊಳು (ಫಚಛ). 4. ಗರ್ಘ್ಯ ಮಂಗುಡು (ಕಗ). ಗಿದಿರಂ ನೀರಂ ಸೂಸು (ಜ). 5. ಮಳ್ದು (ಖ). (ಕ)ದಲ್ಲಿಲ್ಲ. ದುಂ. ಗುರಂ (ಗ). 6. + ಗೆಱೆ (ಫಚಛಜ). 7. ರ್ದ್ದ (ಕಖಗ). 8. ತಾಂ (ಫಜ). 9. (ಫಜ) ಗಳಲ್ಲಿಲ್ಲ. 10. ಲಿಂದುಂ (ಫಜ). 11. ಟ್ಟ (ಜ). 12. ಗಿ ಭಯಂಗೊಂಡು (ಕಗ). 13. + ನ (ಫಜ). 14. ಲ್ಲ (ಕಖಗ). 15. ರ (ಕ). 16. ಟ್ಟಂ ತಲೆವರು (ಖ). ಟ್ಟೆಂತಱಿರು (ಕಗ). 17. ಮೊ (ಫಫಜ). 18. ದೊರೆಂತು ಕಾಣಲಕ್ಕುಮೆಂದೊಡೆ (ಫಜಛ). 19. (ಕಖಗ)ಗಳಲ್ಲಿಲ್ಲ. 20. ವಾರಿಸಲೆಂದು (ಫಫಜ). 21. ತೊಳಗುತ್ತಿ (ಸ-ಗ). 22. ರ (ಖಗಛ). 23. ಛೇದಿಸಿ (ಫಛಜ). 24. ಸಾ (ಕಖ). 25. ತಿ೯ (ಜ).

ಉಱುಯುಗ್ಗ್ರಲ್ಲದೆ ಪೇೞಲುಂ ಕ[1]ಲಲು[1]ಮಾಗದೆಂದೊಡೆ ಅಂತಪ್ಪ ದೀಕ್ಷೆಯುಮಂ ದಯೆಗೆಯ್ವುದೆಂದು ಬೇಡಿದೊಡೊಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು ಪಂಚಮಹಾವ್ರತಂಗಳನೇಱಿಸಿ [2]ಪಡಿಕಮಣಂ[2] ಪೇೞ್ದು ತದನಂತರಮಿನ್ ಕಲ್ಪಿಸಿಮೆಂದೊಡೆ ನಮಸ್ಕಾರಂಗಳುಮಾಳೋಚನೆಗಳಂ ನಿಯಮಮುಮನೋದಿದೊಡಲ್ಲದೆ ಪೇೞಲಾಗದೆಂದೊಡೆಲ್ಲಮಂ ಬೇಗಬೇಗಂ ಪಾಠಂಗೊಂಡು ಭಟ್ಟಾರಾ ಇನ್ ಪೇೞಿಮೆನೆ ಭಟ್ಟಾರರೆಂದರ್ ತ್ರಿಷಷ್ಟಿಶಲಾಕಾಪುರುಷರ್ಕಳ ಚರಿತಂಗಳುಮನಾಚಾರಮಾರಾಧನಾ ಮೊದಲಾಗೊಡೆಯ [3]ಚರಣ[3] ಗ್ರಂಥಂಗಳುಮಂ [4]ಲೋಗಾಣಿ ಸಂಗಾಣಿ[4] ಮೊದಲಾಗೊಡೆಯ ಕರಣಗ್ರಂಥಂಗಳುಮನಿವೆಲ್ಲಮಂ ಕಲ್ತೊಡಲ್ಲದೆ ಪೇೞಲಾಗದೆಂದೊಡೆ ಸೂರ್ಯಮಿತ್ರಂ ಪಂಡಿತನಪ್ಪುದಱಿಂದವೆಲ್ಲಮಂ ಕಿಱಿದೆ ಕಾಲದಿಂದೋದಿ ಕಲ್ತು ಭಟ್ಟಾರಾ ನಿಮ್ಮ ಪೇೞ್ದೋದುಗಳೆಲ್ಲಮಂ ಗ್ರಂಥಾರ್ಥಸ್ವರೂಪದಿಂದೋದಿ ಕಲ್ತೆಂ. ಇನ್ ಜ್ಯೋತಿಷಮಂ ವಖ್ಖಾಣಿಸಿಮೆಂದೊಂಗೆ ಭಟ್ಟಾರರೆಂದರ್ ಇನ್ನೊಂದಧಿಕಾರಮುಂಟು ದ್ರವ್ಯಾನುಯೋಗಮೆಂಬುದಂ ಕೇಳ್ದ ಬೞಿಕ್ಕೆ ಜ್ಯೋತಿಷಶಾಸ್ತ್ರಮಂ ವಖ್ಖಾಣಿಸುವೆನೆಂದೊಡೆ ಮನದೊಳಾದಮಾನುಮೊಸೆದೊಂದಧಿಕಾರಮೆಂಬು[5]ದೆನಗೇಮುಟ್ಟೇಗಳೆ[5] ಕಲ್ವೆನೆಂದು ಬಗೆದು ಒಳ್ಳಿತಪ್ಪ ದಿವಸ ವಾರ ನಕ್ಷತ್ರ ಮುಹೂರ್ತದೊಳ್ ಸಿದ್ಧಾಂತಮಂ ತೊಡಗಿಸೆ ಎಂತೆಂತೆ ಕೇಳ್ಗುಮಂತಂತೆ ಮಿಥ್ಯಾತ್ವಮಿಸಿ[6]ಸಿನಿಸು[6] ಪಿಂಗೆ [7]ಬಂಧಂ ಬಂಧಕಾರಣಂ ಮೋಕ್ಷಂ ಮೋಕ್ಷಕಾರಣಮಾ[7] ಎರಡಱ ಫಲಮುಮೆಂದಿಂತು ಸಿದ್ಧಾಂತದೊಳ್ ಪೇೞ್ದ ವಸ್ತುಗಳೆಲ್ಲಮಂ ಕೇಳ್ದು ಜೀವಾಜೀವ ಪುಣ್ಯಪಾಪಾಸ್ರವ ಸಂವರ ನಿರ್ಜರಬಂಧಮೋಕ್ಷಮೆಂದಿಂತು ನವಪದಾರ್ಥಂಗಳುಂ ಪಂಚಾಸ್ತಿಕಾಯ ಷಡ್ದ್ರವ್ಯಂಗಳುಮೆಂಬಿವಱೊಳಾದಮಾನುಮಱಿತಮುಂ ಕುಶಲಿಕೆಯುಂ ನಂಬುಗೆಯುಮಾಗಿ ಅರ್ಹದ್ಭಟ್ಟಾರಕರ ಸಿದ್ಧಸ್ವರೂಪಮಂ ಗುಣಂಗಳುಮನಱಿದು ಶಂಕಾದ್ಯಷ್ಟಮಲಂಗಳುಮೆಂಟು ಮದಂಗಳುಂ ಮೂಱು ಮೂಢಮುಮಾಱನಾಯತನ ಸೇವೆಗಳುಮೆಂದಿಂತು ಇಪ್ಪತ್ತೈದುಂ ದೋಷಂ[8]ಗಳಿಂದಗಲ್ದು[8] ಸಮ್ಯಕ್ತ್ವ[9]ಮನೊಡೆಯನಾಗಿ[9] ಸಂಸಾರ [10]ಭೋಗವೈರಾಗ್ಯ[10] [11]ಪರಾಯಣನುಮಾಗಿ[11] , [12]ಎಮ್ಮು[ಕ್ಕೆವ][12] ತಪದಿಂದಮನಂತಸುಖಕ್ಕೆ ಕಾರಣಮಪ್ಪ ಸನ್ಮಾರ್ಗ್ಗಮಂ ಪೆತ್ತೆನೆಂದತ್ಯಂತ ಹರ್ಷಚಿತ್ತನಾಗಿ ಗುರುಗಳ್ಗೆ ತಮ್ಮುಕ್ಕೆವದಿಂ ತಪಂಬಟ್ಟುದನಾಳೋಚಿಸಿ ಪ್ರಾಯಶ್ಚಿತ್ತಂಗೊಂಡು ಪಡಿಕಮಣಂ[13]ಗೆಯ್ದು[13] ಪರಮಾರ್ಥಯತಿ[14]ವರರಾಗಿ[14] ಪನ್ನೆರಡು ವರ್ಷಂಬರಂ ಗುರುಗಳನಗಲದೆ ತಪಂಗೆಯ್ದಾಚಾರ್ಯರಾಗಿ ಗುರುಗಳನುಮತದಿಂದೇಕವಿಹಾರಿಯಾಗಿ

---

1. ಲಿಸ (ಗ), ಲಿಯ (ಜ). 2. ಪ್ರತಿಕ್ರಮಣಂ (ಘಭಜ). 3. ಶ್ರವಣ (ಕಖಗ). 4. ಲೋಕಾಣಿ ಸಂಗ್ರಾಣಿ (ಕಖಗ). 5. ದೇನೆನಗೆ ಮುಟ್ಟಿದಾಗಳೆ (ಕಖಗ). 6. ಸಾನುಂ (ಘಭಜ). 7. ಬಂಧಮೋಕ್ಷಕಾರಣಮುಮನಾ (ಘಜ), ಬಂಧಮೋಕ್ಷಕ್ಕೆ ಕಾರಣಮುಮನಾ (ಜ). 8. ಗಳಂ ಗೆಲ್ದು (ಕಖಗ). 9. ಮಂ ನಂಬಿ (ಘಭಜ). 10. + ಶರೀರ (ಘಭಜ). 11. ಮಾದನಾನುಂ ಪೆರ್ಚಿ (ಘಭಜ). 12. ಯೆಂ ಮುಕ್ಕೆಯ್ದು (ಕಖಗಜ), ಎಮ್ಮುಕಿವ (ಘ). 13. ಕೇಳ್ದು (ಕಖಗ). 14. ಧರನಾಗಿ (ಘಭಜ).

ಗ್ರಾಮೇಽಕರಾತ್ರಂ ನಗರೇ ಪಂಚರಾತ್ರ[1]ಮಟವ್ಯಾಂ[1] ದಶರಾತ್ರಮೆಂಬೀ ತೆಜದಿಂದಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ [2]ದ್ರೋಣಾಮುಖಂಗಳಂ[2] ವಿಹಾರಿಸುತ್ತಂ

ಕೌಶಂಬಿಗೆ ವಂದುದಂಪೊವತ ಪರ್ವತದೊಳ್ ಸಿದ್ಧಕ್ಷೇತ್ರಂಗಳೆಲ್ಲಮಂ ಬಂದಿಸಿ ತೀರ್ಥೋಪವಾಸಂಗೆಯ್ದು ಭೈಕ್ಷಕ್ಕೆಂದು ಕೌಶಂಬಿನಗರಮಂ ಪೊಕ್ಕು ಕಿಱುಮನೆ ಪೆರ್ಮನೆಯೆನ್ನದುಣಲ್ತಕ್ಕ ಮನೆಗಳಂ ಚರಿಗೆದೊಳಲುತ್ತ[3]ಮ[3]ಗ್ನಿಭೂತಿ ಬ್ರಾಹ್ಮಣನ ಮನೆಯಂ ಪೊಕ್ಕೊಡಾತನುಂ ಕಂಡಿದಿರಂ ಪರಿತಂದಾದವಾನುಂ ಭಕ್ತಿಯಿಂದಂ ನಿಱಿಸಿ ಕಾಲಂ ಕರ್ಚಿ [4]ಪಡಿಗಹಮುಚ್ಚಂ ಠಾಣಮಂ[4]ದೀವೊಂಬತ್ತು [5]ತೆಜದಿಂದಂ[5] ಪುಣ್ಯಮಂ ಕೈಕೊಂಡು ಶ್ರದ್ಧೆ ಮೊದಲಾಗೊಡೆಯ ಏೞುಂ ಗುಣಂಗಳಿಂ ಕೂಡಿ ಪ್ರಾಸುಕಮಪ್ಪಾಹಾರಮನಾದಮಾನುಂ ಭಕ್ತಿಯಿಂದಂ ಬಡ್ಡಿ[6]ಸೆಯ್ಯುಂಡಿನ್[6] ಬಟಿಕ್ಕ [7]ಕ್ಷಯದಾನಮೆಂದು ಪರಸಿ[7] ಪೋಪಾಗಳ್ ಭಟ್ಟಾರಾ ನಿಮ್ಮ ಕಿಱಿಯ ಗುಡ್ಡನಂ ಪರಸಿ ಪೋಗಲ್ವೇೞ್ಕುಮೆಂದು ವಾಯುಭೂತಿಯ ಮನೆಗೊಡಗೊಂಡು ಪೋದೊಡಾತನುಂ ಪಿರಿಯ ಲೋಹಾಸನಮೇಱಿ ಪಲಂಬರ್ ಪಾರ್ವರ್ಗ್ಗೆ ವಖ್ಖಾಣಿಸುತ್ತಿರ್ದ [8]ಮಾನ[8] ಗರ್ವದಿಂದಿದಿರಂ ಬಂದು ಬಂದಿಸದಿ[9]ರ್ದೊಡನಂ[9] ಅಗ್ನಿಭೂತಿ ಪೋಗಿ ವಾಯುಭೂತಿಯ ಕೈಯಂ ಪಿಡಿದೆನ್ಗುಂ ಭಟ್ಟಾರರ್ ನಮಗೆ ಸ್ವಾಮಿಗಳ್ ಭಟ್ಟಾರರ ಪ್ರಸಾದದಿಂದಂ ನಮಗಿನಿವಿರಿದು ಶ್ರೀಯುಂ ಸಂಪತ್ತುಂ ವಿಭವಮುಮಾದುದಱಿಂದಮೆೞ್ದು ಪೋಗಿ ಭಟ್ಟಾರರಂ ವಂದಿಸೆಂದೊಡವನಿಂತೆಂದಂ—ಇದೇನೊಳ್ಳಿದರ್ಗ್ಗೆನ್ನಂ ಪೊಡೆವಡಿಸಿದಪ್ಪೈ ಪೇ[10]ೞೆಂದುಮ[10]ಶುಚಿಗಳ್ ಮಲಗ್ರಸ್ತರೆಂದಪ್ಪೊಡಂ ಮಿಂದಱಿಯದ[11]ಪರಿವರ[11] ಕಾಲ್ಗೆಱಗುವೆಂ ಗಡಮೆಂದು ಪಾರ್ವರ ಸಭೆಯ ನಡುವಿರ್ದ್ದು [12]ಕನಿಷ್ಠ[12] ನಿಷ್ಠುರ ವಚನಂಗಳಿಂ ನಾನಾ ಪ್ರಕಾರದಿಂ [13]ನಿರಾಕರಿಸಿ[13] ನುಡಿದು ಪೊಲ್ಲದಂ ಪೇೞ್ದಿಟ್ಟೆ ಕಳೆಯೆ ಅಗ್ನಿಭೂತಿಯೆಂದಂ—[14]ಕೊಯರ್ತಲೆ[14]ಯಧಮಾ ನೀಚಾ ಸ್ವಾಮಿಯನಿಂತೆಂಬಾ ಎಂದವನಂ ಬಯ್ದೊಡೆ ಭಟ್ಟಾರರೆನ್ಗುಂ

ಗಾಹೆ ॥ ಣಿಂದಂತಂ ಸಿಳಹಂತಂ ಸತ್ತುಂ ಮಿತ್ತುಂ ತಹೇವ ಸುಖ ದುಕ್ಖಂ ।
ಜೋ ಸಮಭಾವಇ ಪೆಚ್ಛಇ ಸೋ ಸಮಣೋ ಸೋಯ ಪವ್ವಯಿಓ ॥

ವೃತ್ತ ॥ ಆಕೃಷ್ಟಯೇವ ವಚಸಾ ನ ತು ತಾಡಿತೋಽಸ್ಮಿ
ಸಂತಾಡಿತೋಽಸ್ಮಿ ನ ತು ಮೇ ಹೃತಮುತ್ತಮಾಂಗಂ ।
ಪ್ರಾಣಾ ಹೃತಾಃ ಮಮ ಪರೈರ್ನತು ಮೇ ಸಮಾಧಿಃ
ಇತ್ಯಾತ್ಮಚಿಂತನಪರಂಪರಯಾ ಕ್ಷಮೇತ ॥

---

1. ಠಾಣಂ (ಕಖಗ). 2. + ಯಥಾಕ್ರಮದಿಂ (ಘಛಜ). 3. ಬರ್ಪೊರ (ಘಛಜ). 4. ಗಾಹೆ ॥ ಪಡಿಗಹಮುಚ್ಚಂ ಠಾಣಂ ಪಾದೋದಯಕ ಮುಚ್ಚಣಂ ಚ ಪಣಮಂ ಚ । ಮಣವಯಣ ಕಾಯಸುದ್ಧಿಂ ಏಸಣ ಸುದ್ಧಿಂ ಚ ಣವವಿದಂ ಪುಣ್ಣಂ ॥ (ಘಚಛಜ). 5. ತೆಱದ (ಘಚಛಜ). 6. ದ್ವಿಯೂದಿದ (ಘಚಛ). ಸಿಯೂಡಿದ (ಜ). 7. (ಘಚಛಜ)ಗಳಲ್ಲಿಲ್ಲ. 8. ಮನದ (ಕಗ), ಮನ (ಖ). 9 ದಿರ್ದ್ದಾಗಳ್ (ಘಚಛಜ). 10. ೞ (ಘಚಛಜ). 11. ವರ (ಕಖಗ). 12. ಕಷ್ಟ (ಘಚಛ). 13. ತಿರಸ್ಕರಿಸಿ (ಘಚಛಜ). 14. ಕಾಯ್ದಲೆ (ಕಖಗ), ಕೊಯಿತಲೆ (ಚಜ).

ಎಂದಿಂತು ಕ್ಷಮೆಯುಂ ಭಾವಿಸಿದರ್ ಅಗ್ನಿಭೂತಿಯುಂ ಭಟ್ಟಾರರೊಡನು[1]ದ[1]ಯಾವತ ಪರ್ವತಕ್ಕೆ ಪೋಗಿ ಇಂತೆಂದಂ—ಭಟ್ಟಾರಾ ನಿಮ್ಮಂ ಪಂಚಮಹಾಪಾತಕನ ಮನೆಗೊಡಗೊಂಡು ಪೋಗಿ ಬಯ್ಸಿದೆನದನಾತಂ ಬಯ್ದೊನಲ್ಲನಾಂ ಬಯ್ದೆನೀಯಪರಾಧಕ್ಕೆ [3]ನಗೆ ಕ್ಷಮಿಯಿಸುವುದೀ ಬಯ್ಸಿದ ಪಾಪಮಿಂತಲ್ಲದೆ ಪಿಂ[2]ಗದೆನಗೆ ದೀಕ್ಷೆಯುಂ ದಯೆಗೆಯ್ಯಿಮೆಂದು[3] ಕೀಱಿ ಬೇಡಿದೊಡೆ ಭಟ್ಟಾರರೊಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯುಂ ಕೊಟ್ಟೊಡಾತನುಂ ತಪಂಬಟ್ಟು ಕ್ರಿಯೆಗಳೆಲ್ಲ[4]ಮಂ ಕಲ್ತು ಆ[4]ಗಮಂಗಳ [5]ನೋದು[5]ತ್ತಂ ತಮ್ಮ ಗುರುಗಳೊಡನೆ ವಿಹಾರಿಸುತ್ತಿರ್ದ್ದಂ

ಇತ್ತಲಗ್ನಿಭೂತಿಯ ಪಾರ್ವಂತಿ ಸೋಮದತ್ತೆಯೆಂಬೊಳ್ ತನ್ನೊಂದು [6]ಸಲ್ಗೆ[6]ಯಿಂದಮಟಲಿಂದಂ ವಾಯುಭೂತಿಯನಿಂತೆಂದಳ್ — ಸೂರ್ಯಮಿತ್ರಭಟ್ಟಾರಕರ್ [7]ಮುನ್[7] ಬ್ರಾಹ್ಮಣರ್ ನಿಮ್ಮ ಸೋದರಮಾವಂಗಳೀಗಳ್ ಮಹಾತಪೋಧನರ್ ಗುಣವಂತರಪ್ಪರ್ ನಿಮ್ಮ ಮನೆಗೆ ವಂದೊಡೆ ಮಣೆಯಿಂದೆರ್ದ್ದಿದಿರಂ ಪೋಗಿ ಪೊಡೆವಟ್ಟು[8]ರಿ[8]ಲ್ಲೀ ಬಾೞುಂ ಸಂಪತ್ತುಂ ಶ್ರೀಯುಮೆಂಬುದವರ ಪ್ರಸಾದದಿಂದಮಾದುದಂತಪ್ಪ ಮಹಾಋಷಿಯರಂ ನಿಮಗೆ ಪೞಿಯಲುಂ ಬಯ್ಯಲುಂ ತಿರಸ್ಕರಿಸಿ ನುಡಿಯಲುಮಕ್ಕುಮೆ [9]ಅಧಮರ[9] ಪೊಲ್ಲಮಾನ[10]ಸ[10]ರ ದುರ್ಜ[11]ನರ[11] ಜಾರಜಾತ[12]ರ[12] ವಿಜಾತಿಗ[13]ಳ್ಗೆ ಯೋಗ್ಯಮಪ್ಪಯೋಗ್ಯಮಂ[13] ಗೆಯ್ದಿರೆಂದು ಪಾರ್ವರ ಸಭೆಯ ನಡುವೆ ನುಡಿದೊಡೆ ವಾಯುಭೂತಿಯುಂ ಮುಳಿದು [14]ಬಯ್ದು[14] ಜಡಿದು ಕಾಲಿಂದಂ ತಲೆಯನೊದೆದು ಮನೆಯೊಳುಳ್ಳುದೆಲ್ಲಮಂ ಕವರ್ದುಕೊಂಡು ನಿಮ್ಮ ಸವಣನಾಗಿರ್ದ್ದಾಣ್ಮನ ಪೋದಲ್ಲಿಗೆ ಪೋಗೆಂದಟ್ಟಿ ಕಳೆದೊಡಾಕೆಯುಂ ಮುಳಿದು ಕ್ರೋಧಾಗ್ನಿ [15]ಪೆರ್ಚಿ ದುರಾತ್ಮಾ ಎನ್ನನೊದೆದ ನಿನ್ನ ಕಾಲ್ಗ[16]ಳಂ[16] ಜನ್ಮಾಂತರದೊಳಂ ನಾಯುಂ ನರಿಯುಮಾಗಿಯುಪ್ಪೊಡಂ ಕೊಂದು ಮಕ್ಕಳ್ವೆರಸು ತಿಂಬೆನಕ್ಕೆಂದು ನಿದಾನಂಗೆಯ್ದು ಮನೆಯಿಂದಂ ಮಕ್ಕಳ್ವೆರಸು ಪೊಱಮಟ್ಟು ಪೋಗಿ ಕೆಲವು ಕಾಲದಿಂ [17]ಬೞಿಕ್ಕೆ[17] ಸತ್ತು ತಾನುಂ ಮಕ್ಕಳುಂ ಸಂಸಾರದೊಳ್ ತಿ[18]ರಿಯುತ್ತಿರ್ದ್ದರ್[18]

ಇತ್ತ ವಾಯುಭೂತಿಯುಮತಿಮಾನ ಗರ್ವದಿಂದಂ ಋಷಿಯರಂ ಪರಿಭವಿಸಿ ಬಯ್ದು [19]ನುಡಿದು[19] ಜಿನಧರ್ಮಮಂ ಪೞಿದ [20]ಪಾಪದ[20] ಫಲದಿಂದಮೇೞುಂ ದಿವಸದಿಂದೊಳ[21]ಗೌ[21]ದುಂಬರ ಕುಷ್ಠಮಾಗಿ ಪುೞಿತು ನಮೆದು ಸತ್ತು ಕೌಸಂಬಿಯೆಂಬ ಪೊೞಲೊಳ್ [22]ಮಳಿಯ ಬಿದಿರ ಮೇಗೇ[22]ಱಿಯಾಕಾಶದೊಳಾಡುವ ವಿದ್ಯಾಧರ ಲಂಗಿಗರ

---

1. ನೆದ (ಫಚಭಜ). 2. ಸ್ಯೆರಿಸುವುದು ಬೈ......ಪೋ (ಕಗ). 3. + ನೆಱಿ (ಕಗ). 4. ಮನೋದಿಯಾ (ಫಚಭಜ). 5. ಳಂ ಕೇಳು (ಫಚಭಜ). 6. ಸಲುಗೆ (ಕಖಗ). 7. ಸ (ಕಖಗ). ಮಂ (ಭ). 8. ತಿ (ಕಗ). 9. ಅಧಮರಂ (ಕಖಗ). ಇವರೆ (ಫ). ಆವರಂ (ಜ), ಇವರ್ಗೆ (ಭ). 10. ರಂ (ಕಖಗ). 11. ನರಂ (ಕಖಗ), ನಂಗಳ (ಫಚಭಜ). 12. ರಂ (ಕಖಗ). ಅಧಮರಾ ಪೊಲ್ಲಮಾನಸರಾ ದುರ್ಜನರಾ ಜಾರಜಾತರಾ ಎಂದು ಇರಬಹುದೆ? 13. ಳಗೆ ಯೋಗಮಂ (ಫಚಭಜ). 14. (ಫಚಜ)ಗಳಲ್ಲಿಲ್ಲ. 15. + ಯಿಂ (ಕ). 16. ಳನಾಂ (ಜ). 17. (ಖಚಜ)ಗಳಲ್ಲಿಲ್ಲ. 18. ರುಗುತ್ತಿರ್ದಳ್ (ಫಚಭ). 19. + ತಿರಸ್ಕರಿಸಿ (ಚ). 20. (ಚ)ದಲ್ಲಿಲ್ಲ. 21. ಗು (ಸ.ಗ). 22. ಬಿದಿರ ಮೆಳೆಯ ಮೇಲೇ (ಕಖಗ).

ಮನೆಯೊಳ್ ಪಣ್ಗತ್ತೆಯಾಗಿ ಪುಟ್ಟಿ ಪಿರಿಯವಪ್ಪ ಪೋಱಿಗಳಿಂ ಪೊತ್ತಿ ಪೋಗಿ ಬೆಸ್ನೊಳ್ [1]ನಾಳಿ ಬಿರ್ದು[1] ಕಱ[2]ಮೆ[2]ಯಾಗಿ ಪುೞಿತು ನವೆದು ಸತ್ತು ಮತ್ತಮಾ ಪೊೞಲೊಳ್ ಪೇಪಂದಿಯಾಗಿ ಪುಟ್ಟಿ ಸತ್ತು ಮತ್ತಾ ಮಗಧೆಯೆಂಬುದು ನಾಡಲ್ಲಿ ಚಂಪಾನಗರಮೆಂಬುದು ಪೊೞಲಲ್ಲಿ ಪೆಣ್ಣಾಯಾಗಿ [3]ಮಾದೆಗರ[3] ಮನೆಯೊಳ್ ಪುಟ್ಟಿ ಸತ್ತು ಮತ್ತಮಾ ಪೊೞಲೊಳ್ ಮಾದೆಗರ್ಗೆ ಪ್ರಧಾನನಪ್ಪ ನೀಳನೆಂಬ ಮಾದಗಂಗಂ ಕೇಶಿ[4]ಯೆಂಬ[4] [5]ಮಾದೆಗಿಗಂ[5] ಮಗಳ್ ದುರೂಪೆ ದು[6]ರ್ವರ್ಣೆ[6] ದುರ್ಗಂಧೆ ದುಸ್ಸ್ವರೆ ಪುಟ್ಟುಂಗುರುಡಿ ಪೊಲತಿಯಾಗಿ ಪುಟ್ಟಿ ವ್ಯಾಧಿಪೀಡಿತೆ ಕ್ಷುಧಾಗ್ನಿಯಿಂ [7]ಬೞ್ದೊಳೊಂದು ದಿವಸ[7]ಮುದ್ಯಾನವನಕ್ಕೆ ಪೋಗಿ ನೇಱಿಲ ಪಣ್ಗಳಂ ತಡವರಿಸಿಯಾಯ್ದಾಯ್ದು ತಿನ್ನುತ್ತಿರ್ಪಳ್

ಅನ್ನೆಗಮಿತ್ತ ಸೂರ್ಯಮಿತ್ರಾಚಾರ್ಯರುಮಗ್ನಿಭೂತಿಮುನಿಯುಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಚಂಪಾನಗರಮನೆಯ್ದಿ ವಾಸುಪೂಜ್ಯ ಭಟ್ಟಾ[8]ರರ ನಿಸಿದ್ಧಿಗೆ[8] ಸಂದ ತೀರ್ಥಸ್ಥಾನಮನಾದಮಾನುಂ ಶುದ್ಧ ಪರಿಣಾಮದಿಂದಂ ವಂದಿಸುತ್ತಿರ್ದ ಸೂರ್ಯಮಿತ್ರಾಚಾರ್ಯರ್ಗ್ಗವಧಿಜ್ಞಾನಂ ಪುಟ್ಟಿತ್ತು ಮತ್ತೆ ಬಹಿರುದ್ಯಾನದೊಳ್ [9]ಸಂಬರನಾಗತಾಣದೊಳ್[9] ಬಂದಿರ್ದರಂದಿನ ದಿವಸಂ ಸೂರ್ಯಮಿತ್ರಾಚಾರ್ಯರುಪವಾಸಂ ಗೆಯ್ದಿರ್ದರಗ್ನಿಭೂತಿಮುನಿಯುಂ ಭೈಕ್ಷಾನಿಮಿತ್ತಂ ಚರಿಗೆವೋಗುತ್ತವೆಡೆಯೊಳುದ್ಯಾನವನದೊಳ್ ನೇಱಿಲ ಮರದ ಕೆೞಗೆ ನೇಱಿಲ ಪಣ್ಗಳಂ ತಡವರಿಸಿ [10]ಆಯ್ದು[10] ತಿನ್ವ ಜಾತ್ಯಂಧೆಯಪ್ಪ ಪೊಲೆಯರ ಕೂಸಂ ಕಂಡತ್ಯಂತ ಸ್ನೇಹಮಾಗಿ ಪರವಸದಿಂದಂ ಕಣ್ಣೀರ್ಗಳಂ ಸೂಸಿ[11]ಯೆಯ್ದುಂದು[11] ಮನಮಿಕ್ಕು ಕರುಣದಿಂದೆ ಕುಂಚದ ಕೋಲೊಳ್ ಪರೆದಿರ್ದ ಪಣ್ಗಳಂ ಕೂಸಿನ ಮುಂದೆ ಸಾರ್ಚುತ್ತಂ ನೀಡುಂ ಬೇಗಮಿರ್ದ್ದದೇಂ ಪಾಪದ ಫಲಮೋ ಎಂದು ಸಂಸಾರನಿರ್ವೇಗ[12]ಮಾಗೆ[12]ಯಂದಿನ ದಿವ[13]ಸಮಲಾಭಂ[13] ಮಾಡಿ ತಮ್ಮಾವಾಸಕ್ಕೆ ಪೋದೊಡೆ ಭಟ್ಟಾರರೆಂದರ್—[14]ಏನ[14]ಲಾಭಮಾದುದೆ ಎಂದು ಬೆಸಗೊಂಡೊಡೆ ಭಟ್ಟಾರರ್ಗ್ಗಿಂತೆಂದು ಪೇೞ್ದರ್ ಚರಿಗೆವುಗುತ್ತವೊಂದೆಡೆಯೊಳುದ್ಯಾನದೊಳ್ ನೇಱಿಲ ಮರದ ಕೆೞಗೆ ತಡವರಿಸಿ ನೇಱಿಲ ಪಣ್ಗಳಂ ತಿನ್ವ ಜಾತ್ಯಂ[15]ಧೆ[15]ಯಪ್ಪ ಪೊಲೆಯರ ಕೂಸಂ ಕಂಡಾದಮಾನುಂ ಸ್ನೇಹ[16]ಮಾಗಿ ಕರುಣದಿಂದಂ[16] ಮನಮಿಕ್ಕು ಪರವಸದಿಂದಂ ಕಣ್ಣೀರ್ಗಳ್ ಬಂದು[17] ನೀಡುಂ ಬೇಗಮಿರ್ದ್ದ ನೋಡಿ ಅಹೋ [18]ವಿಧಾತ್ರಾ[18] ಸಂಸಾರಮೆಂ[19]ದಲಾಭಂ[19] ಮಾಡಿ

1. (ಫಚಭಜ)ಗಳಲ್ಲಿಲ್ಲ. 2. ವೆ (ಸ–ಕ). 3. ಮಾದರ (ಕ). ಮಾದಿಗರ (ಗ). ಮಾದೆಂಗರ (ಫಚಭಜ). 4 + ನಿ (ಜ). 5, ಮಾತಂಗಿಗಂ (ಫಭಚ). 6. ವ್ವ...ಣೆ (ಕಗ). 7. ಬರ್ದೊಳೊಂದಿನಂ (ಕಗ). 8. ರಕರು ಸಿದ್ಧಿಗೆ (ಕಖಗ)......ನಿಷಿದ್ಧಿಗೆ (ಭಚ)......ನಿಷಿಧಿಗೆ (ಛ). 9. ನಾಗವಟ್ಟದೊಳು (ಫ), ನಾಗವಟ್ಟಣದೊಳು (ಚಭಜ). 10. ಆಯ್ದಾಯ್ದು (ಕಗ), (ಫಚಜ) ಗಳಲಿಲ್ಲ. 11. ಪಾಯ್ವುದು (ಫಚಭ). 12. ಡಿ (ಕಖಗ). 13. ಸಂ ಮುಟ್ಟುಪದಂ (ಫಚಭ). 14. ಏನಗ (ಖ). 15. ಧಕಿ (ಚ). 16. ದಿಂಕರುಣಮಾಗಿ (ಫಚಭಜ). 17. + ನಾಡೆ (ಕಗ). 18. ಚಿತ್ರಂ (ಫಚಭ). 19. ದು ಮುಟ್ಟುಪದಂ (ಫಚಭ).

ಬಂದೆನೆನೆ ಭಟ್ಟಾರರೆಂದರ್—ಆ ಕೂಸಂ[1]ಬುದು[1] ನಿಮ್ಮ ತಮ್ಮನಪ್ಪ ವಾಯುಭೂತಿಯ ಜೀವಮೆನೆ ಅದೆಂತು ಭಟ್ಟಾರಾ ಎಂದು ಬೆಸಗೊಂಡೊಡೆ ಭಟ್ಟಾರರಿಂತೆಂದು ಪೇೞ್ದರ್ ವಾಯುಭೂತಿ ತನ್ನೊಂದು ಮಾನಗರ್ವದಿಂದೆಮ್ಮಂ ಪೞಿದು ಬಯ್ದು ನುಡಿದ ಪಾಪದ ಫಲದಿಂದೇೞು ದಿವಸದಿದೊಳ[2]ಗೌ[2]ದುಂಬರ ಕುಷ್ಠಮಾಗಿ ಪ್ರೞಿತು ಸಮೆದು ಸತ್ತಾ [3]ಪ್ರೊೞಲೊಳೆ ಲಂಗಿಗರ[3] ಮನೆಯೊಳ್ ಪೆಣ್ಗತ್ತೆಯಾಗಿ ಪುಟ್ಟಿ ಸಮೆದು ಸತ್ತು ಪೇಪಂದಿಯಾಗಿ ಪುಟ್ಟಿ ಸತ್ತು ಪೆಣ್ಣಾಯಾಗಿ ಪುಟ್ಟಿ ಸತ್ತೀಗಳ್ ಜಾತ್ಯಂಧೆ ಪ್ರೊಲೆಯರ ಮಗಳಾಗಿ ಪುಟ್ಟಿದಳದಱಿಂ ಮುನ್ನಿನ ಸ್ನೇಹಂ ಕಾರಣಮಾಗಿ ಕೂಸಿನ ಮೇಗೆ ನಿಮಗೆ ಕೂರ್ಮೆಯಾದುದೆನೆ—ಭಟ್ಟಾರಾ ಆದೇಂ ಭವ್ಯಜೀವನೊ ಅಭವ್ಯಜೀವನೊ ಎಂದು ಬೆಸಗೊಂಡೆಲ್ಲಡೆ ಭವ್ಯಜೀ[4]ವಂ[4] ನಿಮ್ಮ [5]ಪೇೞೆ[5] ವ್ರತಂಗಳಂ ಕೈಕೊಳ್ಗುಮೆಂದೊಡೆ ಭಟ್ಟಾರರನುಮತದಿಂದಗ್ನಿಭೂತಿ ಋಷಿಯರ್ ಪೋಗಿ ತಮ್ಮ ಮುನ್ನಿನ ಜನ್ಮಾಂತರ ಸಂಬಂಧಮುಮಂ ಋಷಿಯರಂ ಏಳಿದು ನುಡಿದ ಪಾಪದ ಫಲದಿಂದೆಯ್ದಿದ ಭವಂಗಳ ದುಃಖಂಗಳುಮನಾ ಕೂಸಿಂಗೞಿವಂತು ತಿಳಿಯೆ ಪೇೞ್ದು ಮತ್ತಮಿಂತೆಂದರ್ ಮುನ್ನೆ ನೀನೀ ಭವದಿಂ ತೊಟ್ಟೆಯ್ದನೆಯ ಭವದೊಳ್ ವಾಯುಭೂತಿಯಪ್ಪಂದು ಮಾನಗರ್ವದಿಂ ಋಷಿಯರಂ ಬಯ್ದು ಪಾಪದ ಫಲದಿಂದಿಂತಪ್ಪ ದುಃಖಂಗಳನೆಯ್ದಿದೆ ಇನ್ ಮತ್ತಂ ಮಧುಮದ್ಯಮಾಂಸಂಗಳಂ ಭಕ್ಷಿಸಿ ನರಕ ತಿರಿಕ [6]ಮನುಷ್ಯ[6]ಭವಂಗಳೊಳಪ್ಪ ದುಃಖಂಗಳ[7]ನಂತನಂತ[7] ಕಾಲಮನುಭವಿಸಿ ನೀಡಱಿಂ[8]ದೆ[8]ತ್ತಾನುಮಲ್ಲಭೆ ಮನುಷ್ಯಭವಮಂ ಪೆಱದು ಪೆತ್ತೊಡಮಿಂತಾಗಿ ಪುಟ್ಟುಗುಂ—

ವೃತ್ತ ॥ ವೈರೂಪ್ಯಂ ದುರ್ಭಗತ್ವಂ ಕುಮತಿ ಕುಜನತಾಂ ಕುತ್ಸಿತತ್ವಂ ಕುಜಾತಿಂ
ಕ್ಷುತ್ತೃಷ್ಣಾ ಪೀಡಿತತ್ವಂ ವಿರಸವಿಕಳತಾಂ ವ್ಯಾಧಿತಾಂ ಚಾಬಲತ್ವಂ ।
ಹೀನತ್ವಂ ಪ್ರೇಷಣತ್ವಂ ಲಘುತರಮರಣಂ ಶೋಕಕಾಂಕ್ಷಾಲಯತ್ವಂ
ಮಾಂಸಾಶೀ ಪ್ರಾಣಘಾತೀಹ್ಯನುಭವತಿ ಚಿರಂ ಪ್ರಾಪ್ಯ ಮಾನುಷ್ಯಜನ್ಮಂ ॥
ಪಾಪಾತ್ಮಿಲ ಜಾಯಂತೇ ವಾಮನ ಪಂಗ್ವಂಧ ಕುಬ್ಜ ಖಂಜ ಕರಾಳಾಃ ।
ಜಡ ಬಧಿರ ಮೂಕ ಕೃಶ ರೋಮಶ ವಕ್ರ ನಿಬಿಡಾಳಿಸ್ತೇ (?) ॥

ವಸಂತತಿಲಕಂ ॥ ಉದ್ಧಂತ ಕುಬ್ಜ ಕುಣಿಕುಂಡ ಕರಾಳ ಕಾಣಾಃ ॥
ಸಂಸ್ಥೂಲ ದೀರ್ಘ ಕೃಶರೋಮಶ ರೂಕ್ಷ ರೂಪಾಃ ।
ಕುಷ್ಠಾರ್ದಿತಾಃ ಕೃಪಣ ವಾಮನ ಪಾಮನಾಶ್ಚ
ಪಾಪೇನ ಪೂರ್ವಚರಿತೇನ ನರಾ ಭವನ್ತಿ ॥

*ವೃತ್ತ ॥ ಕುಲಹೀನಂ ದೀನಮಾನಂ ಪರಿಭವ ವಿಭವಂ ದುಷ್ಕೃತಂ ಪಾಪಕರ್ಮಂ
ಮಲಿನಂ ದುರ್ಗಂಧ ಗಂಧಂ ಜಡಮತಿ ಕಿವುಡಂ ಪಂಗುಮೂಕಂ...ತಂ ನಾ ।
ಣಿಲಿ ಪಾಣ್ಬಂ ಪಂದೆ ಲೋಭಂ ಖಳನಳಿಕ ಮನಂ ವಂಚಕಂ ನಿತ್ಯರೋಗಾ
ಕುಳನೆಂಬೀ ನಾಮ ನಾಮಾವಳಿಗೆ ನಿಳಿಯನಕ್ಕುಂ ವ್ರತವ್ರಾತ ಹೀನಂ ॥†

1. ಬಳ್ (ಕ). 2, ಗು (ಸಚಛ). 3. ಪೊೞಲೊಳಗಣ ವಿದ್ಯಾಧರ ಲಂಗಿಗರ (ಘಚಛ).
4. ವಮೆಂದರ್ (ಕಖಗ). 5. ಪೇೞ್ದ (ಸ-ಕ). 6. (ಚ)ದಲ್ಲಿಲ್ಲ. 7. ನನಂತಾನಂತ (ಜ).
8. ದೆಚ್ಚತ್ತುಮ: (ಕಗ). † ಈ ಪದ್ಯ (ಘಚಛ)ಗಳಲ್ಲಿಲ್ಲ; (ಖ)ದಲ್ಲಿ ನಷ್ಟ.

ಇಂತು ಪೂರ್ವಕೃತ ಪಾಪದ ಫಲದಿಂದಂ [1]ವ್ರತಂಗಳಂ[1] ಕೈಕೊಂಡೞಿದುದಱಿಂದಂ[1] ಮನುಷ್ಯಜನ್ಮದೊಳ್ ಪುಟ್ಟಿಯುಂ ದುಃಖಂಗಳ[2]ನೆಯ್ದುಗುಂ[2] ಜೀವಂ ಮತ್ತೆ ಧರ್ಮದ ಫಲದಿಂದಂ—

ವೃತ್ತ ॥ ಶ್ರೀ ವಕ್ಷಶ್ಚಾರು ರೂಪಂ ಕುಲ ಬಲ ವಿನಯಂ ಖ್ಯಾತಿ ದೀರ್ಘಾಯುಷತ್ವಂ
ಪೂಜಾಂ ದೇವಾಸುರೇಂದ್ರೈಃ ಸುರನರವನಿತಾ ಪ್ರೀತಿಮಷ್ಟಾಂಗಭೋಗಂ ।
ಸ್ವರ್ಗೇ ಮರ್ತ್ಯೇ ಲಭಂತೇ ದ್ಯುತಿಮತಿಪಟುತಾಂ ರಾಜರಾಜಶ್ರಿಯಂ ಚ
ಸೌಭಾಗ್ಯಂ ಪೂಜ್ಯವಾಕ್ಯಂ ಜಗತಿ ಮಧುಸುರಾ ಮಾಂಸಸೇವಾನಿವೃತ್ತಾ ॥

ಆರ್ಯೆ ॥ ಪುಣ್ಯಾದುತ್ಪಾದ್ಯಂತೇ ಜೀವಾ ವಿಖ್ಯಾತ ವಿಪುಲ ವಂಶೇಷ್ವೇಕೇ ।
ದ್ಯುತಿ ಮತಿ ಧೃತಿ ಕಾಂತಿ ಶ್ರೀ ಹ್ರೀ ರೂಪಾರೋಗ್ಯ ಸತ್ವಬಲ ಸಂಪನ್ನಾ ॥

ಆಜ್ಞಾ ಯಶೋ ಧೃತಿ ಮತಿ ದ್ಯುತಿ ಕಾನ್ತಿಲಕ್ಷ್ಮೀ
ಶೌರ್ಯ ಪ್ರತಾಪ ಪರಿವಾರ ಧನೋಪಭೋಗಾಃ ।
ತೇ ಲೋಕವೇದ ಸಮಯೇಷು ಸುನಿಶ್ಚಯೇನ
ಪುಣ್ಯೋದಯೇನ ಸುಲಭಾ ಇತಿ ವರ್ಣಯಂತಿ ॥

ವರಯುವತಿ ಭವನ ವಾಹನ ನಾಟಕ ಧನ ಕನಕ ರಜತಮಣಿ ಸುರಥಾಃ ।
ಅತಿ ಲಲಿತ ತುರಗ ಮದ ವಳಿತ ನಾಗ ಭೃತ್ಯಾ ಭವಂತಿ ಧರ್ಮೇಣ ॥

ಇಂತು ಧರ್ಮದ ಫಲದಿಂದಂ ದೇವಲೋಕದ ಮನುಷ್ಯಲೋಕದ ಸುಖಂಗಳನನುಭವಿಸಿ ಬೞಿಕ್ಕೆ ನಿರ್ವಾಣಸುಖಮನೆಯ್ದುಗುಂ ಜೀವಮಿನ್ನು ಧರ್ಮಮೆಂಬುದೆಂತೆಂದೊಡೆ—

ಗಾಹೆ ॥ ಸೋ ಧಮ್ಮೋ ಜತ್ಥ ದಯಾ ಸೋವಿ ತಓ ವಿಸಯಣಿಗ್ಗಹೋ ಜತ್ಥ ।
ದಸ ಅಟ್ಠದೋಸರಹಿಓ ಸೋ ದೇವೋ ಣತ್ಥಿ ಸಂದೇಹೋ ॥

ಎಂದಿಂತು [3]ಪದಿನೆಂಟು ದೋಷಂಗಳ[3] ನಿಲ್ಲದೊಂ ದೇವನಂತಪ್ಪದೇವನಪೇೞ್ದುದಾಗಮಮೆಂಬುದಕ್ಕುಮಾ ಆಗಮಂ ಪೇೞ್ದಿಂತು ಬಾಹ್ಯಾಭ್ಯಂತರ ಪರಿಗ್ರಹಂಗಳೆಲ್ಲಮಂ ತೊಱೆದು ದ್ವಾದಶವಿಧಮಪ್ಪ ತಪದೊಳ್ನೆಗೞ್ದು ಅಯ್ದುಮಿಂದ್ರಿಯಂಗಳಂ ಗೆಲ್ದು ಪಸಿವುಂ ನೀರೞ್ಕೆ ಮೊದಲಾ[4]ಗೊಡೆಯ ಇಪ್ಪ[4]ತ್ತೆರಡು ಪರೀಷಹಂಗಳಂ ಸೈರಿಸಿ ಯಮನಿಯಮ ಸ್ವಾಧ್ಯಾಯ ಧ್ಯಾನಾನುಷ್ಠಾನ ನಿರತರಾಗಿ ತಪಂಗೆಯ್ವ ಋಷಿಯರ್ಕಳ್ ತಪೋಧನರ್ ಕೊಲ್ಲದುದೆ ಧರ್ಮಮೆಂದಿಂತು ನಂಬಿ ವ್ರತಂಗಳಂ ಕೈಕೊಂಡು ನೆಗೞ್ದುದು ಧರ್ಮಮೆಂಬುದಕ್ಕುಮೆಂದಗ್ನಿಭೂತಿ ರಿಸಿಯರ್ ತಿಳಿಯೆ ಧರ್ಮಮಂ ಪೇೞ್ದುದೆರ್ದೆಯೊಳ್ ಮೆಲ್ಲಿದಳಾಗಿ ತನ್ನ ಭವಾಂತರಂಗಳಂ ಧರ್ಮಮುಮಂ ಕೇಳ್ದೞಿದು ಸಂಸಾರ ಶರೀರ ವೈರಾಗ್ಯ[5]ಮಾದಮಾನಂ ಪೆರ್ಚೆ[5] ತನ್ನಂ ತಾನೆ ಪೞಿದು ನಿಂದಿಸಿ ಪಾಪಕ್ಕಂಜಿ ಅಣುವ್ರತಂ ಮೊದಲಾಗೊಡೆಯ ಶ್ರಾವಕ ವ್ರತಂಗಳಂ ಕೈಕೊಂ*ಡಾಗಳ್ ಭಟ್ಟಾರರುಂ ದೃಢವ್ರತೆಯಾಗು ಕರ್ಮಕ್ಷಯಮಕ್ಕೆಂದು ಪರಸಿ

1. (ಚಜ)ಗಳಲ್ಲಿಲ್ಲ. 2. ನಗೆಯ್ದುಂ (ಕಗ). *–* (ಖ)ದಲ್ಲಿ ನಷ್ಟ. 3. ಮೊದಲಾಗಿ ಒಡೆಯ (ಕಗ). (ಖ)ದಲ್ಲಿ ನಷ್ಟ. 4. ಗಿಪ್ಪ (ಘಚಛ). 5. ಮಾಗಿ (ಘಚಛ).

ತಮ್ಮಾವಾಸಕ್ಕೆ ಪೋದರಿತ್ತ ಜಾತ್ಯಂಧೆಯಪ್ಪ [1]ಕೂಸುಮಹಿಂಸಾದಿ ವ್ರತಂಗಳಂ- ಮೇಲ್ಕೊಂಡು* ತನ್ನ ಮನೆಗೆ ಪೋಪಾಗಳ್

ಅನ್ನೆಗಂ ಎಡೆಯೊಳರಸನ ಪುರೋಹಿತಂ ಸೋಮಶರ್ಮನೆಂಬೊಂ ತನ್ನ ಪರಿವಾರಂ ಬೆರಸು ಮಹಾವಿಭೂತಿ ವಿಸ್ತಾರದಿಂದಂ ಪಿರಿದು ಪೂಜೆಯುಂ ಕೊಂಡು ಮಕ್ಕಳಂ ಬೇಡಿ [2]ಸಂ[2]ಬರನಾಗ[3]ತಾಣಕ್ಕೆ[3] ಪರಕೆಗುಡಲ್ ಪೋಪುದಂ ತನ್ನೊಡ [4]ವೋಪ[4] ಪೊಲೆಯರ ಕೂಸುಗಳ್ ಕಂಡು ತನಗೆ ವ್ಯಾವರ್ಣಿಸಿ [5]ಪೇಟ[5] ಕೇಳ್ದದ ಜೊಳ್ ಮನವಿಟ್ಟುಮವರ್ಗೆ ಸತ್ತು ಪುಟ್ಟುವೆನಕ್ಕೆಂದು ಭೋಗಾಸಕ್ತೆಯಾಗಿ ನಿದಾನಂಗೆಯ್ದು ಮನೆಗೆ ವೋಗಿ ಇರ್ಪನ್ನೆಗಮಾಯಿರುಳೊಳ್ [6]ಪಾ[6]ವು ಕೊಳೆ ಸತ್ತು ಚಂಪಾನಗರಮನಾಳ್ವೊಂ ಚಂದ್ರವಾಹನನೆಂಬೊನರಸನಾತನ ಮಹಾದೇವಿ ಚಂದ್ರಮತಿಯೆಂಬೊಳವರೆ ಪುರೋಹಿತಂ ಸೋಮಶರ್ಮನೆಂಬೊಂ ಭಟ್ಟನಾತನ ಪಾರ್ವಂತಿ ತ್ರಿವೇದಿಯೆಂಬೊಳಾಯಿರ್ವರ್ಗ್ಗಂ ನಾಗಶ್ರೀಯೆಂಬೊಳ್ ಮಗಳಾಗಿ ಪುಟ್ಟಿ[7]ದೊಳ[7]ತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿಯನೊಡೆಯಳ್ ಜನಂಗಳ್ಗೆಲ್ಲ ಮಾದಮಾನುಂ ಸೊಗಯಿಸುವಳ್ ನಾಗರ್ಗೆ ಪರಸಿ ಪೆತ್ತರಪ್ಪುದಱಿಂ ನಾಗಶ್ರೀ ಯೆಂದು ಪೆಸರನಿ[8]ಟ್ಟರ್ ಮತ್ತಿತ್ತ[8] ಸೂರ್ಯಮಿತ್ರಾಚಾರ್ಯರ್ ಅಗ್ನಿಭೂತಿ ರುಷಿಯುರು ಮಂತಿರ್ವರುಂ ಚಂಪಾನಗರ[9]ಮಂ[9] ಪೂಜಿಮಟ್ಟು [10]ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗ[11]ಳಂ ವಿಹಾರಿಸುತ್ತಂ ಪಲೆಂಟು ವರ್ಷದಿಂ[11] ಮಗುಳ್ದು ಚಂಪಾ ನಗರಕ್ಕೆ ವಂದು *ಪೂಜಿವೊಟಲೊಳುದ್ಯಾನವನದೊಳ್ ಕಂಬಳನಾಗಂ ಶಂ[12]ಬರ[12]ನಾಗಂ ಪಾಂಡುಕನಾಗಮೆಂದೀ [13]ನಾಗರ[13] ಪೆಸರನೊಡೆಯ ಮುನ್ನಿರ್ದ್ದ ನಾಗ[14]ತಾಣ[14]ದೊಳ್ ಬಂದಿರ್ದ್ದರ್

ಅನ್ನೆಗಂ ನಾಗಶ್ರೀಯುಂ ಪಂಚಮಿಯುಂದು* ಮಂತ್ರಿಯರ್ಕ್ಕಳ ಪೆರ್ಗಡೆಗಳ ರಾಜಶ್ರೇಷ್ಠಿಯರ ಪ್ರಧಾನರಪ್ಪ ನಿಯೋಗಿಗಳ ಪಲಂಬರುಂ ಪೆಣ್ಗೂಸುಗಳ್ವೆರಸು ಪಿರಿದುಮರ್ಚನೆಯುಂ ಕೊಂಡು ನಾಗತಾಣಕ್ಕೆ ಪೋಗಿ ನಾಗರನರ್ಚಿಸಿ ಪೊಡೆವಟ್ಟು ಸೂರ್ಯಮಿತ್ರಾಚಾರ್ಯರುಮಗ್ನಿಭೂತಿ ರುಷಿಯರಂ ಕಂಡು ಜಾತಿಸ್ಮ[15]ರೆ[15]ಯಾಗಿ ತನ್ನ ಮುನ್ನಿನ ಪೊಲತಿಯಾಗಿ ಪುಟ್ಟಿದ ಭವಮನಱಿದು ಭಟ್ಟಾರರ ಕಾಲ್ಗೆಱಗಿ ಪೊಡೆವಟ್ಟು ಕುಳ್ಳಿರ್ದಾಗಳಾ ಕೂಸಂ ಕಂಡು ಅಗ್ನಿಭೂತಿ ರುಷಿಯರ್ಗತಿಸ್ನೇಹ ಮಾಗಿ ತಮ್ಮ ಗುರುಗಳಂ ಸೂರ್ಯಮಿತ್ರಾಚಾರ್ಯರನಿಂತೆಂದು ಬೆಸಗೊಂಡರ್ ಭಟ್ಟಾರರಾ ಈ ಕೂಸಿನ ಮೇಗೆಮಗಾದಮಾನುಂ [16]ಮೋ[16]ಹಮಾದುದರ್ಕೆ ಕಾರಣ ಮೇನೆಂದು ಬೆಸಗೊಂಡೊಡೆ ಭಟ್ಟಾರರವಧಿ[17]ಜ್ಞಾನಮಂ[17] ಪ್ರಯೋಗಿಸಿ ಇಂತೆಂದು ಪೇಟ್ದರ್—ಈ ಕೂಸೆಂಬುದು ನಿಮ್ಮ ತಮ್ಮನಪ್ಪ ವಾಯುಭೂತಿಯ ಜೀವಂ

---

1. + ಪೊಲೆಯರ (ಘಚಭ). 2. ಶಂ (ಭ). 3. ಪಟ್ಟಣಕ್ಕೆ (ಘಭ). 4. ನೆಯ (ಘಚಭ). 5. ದೊಡೆ (ಘ). 6. ಹಾ (ಘ). 7. ದೊಡನ (ಕ). 8. ಟ್ಟು ಮತ್ತಂ (ಕಗ). 9. ದಿಂ (ಕಖಘ). 10. + ಪೋಗಿ (ಘಚಭಜ). 11. ಳನೆಂಟು ವರುಸಂಬರಂ ವಿಹಾರಿಸಿ (ಘಚಭಜ). 12. ಖ (ಘಚಭ). 13. (ಕಖ)ಗಳಲ್ಲಿ ತ್ರುಟಿತ. 14. ಪಟ್ಟಣ (ಘಚಭಜ). *—* (ಜ)ದಲ್ಲಿಲ್ಲ. 15. ರಣೆ (ಕಗ). 16. ಸ್ನೇ (ಘಚಭ). 17. ಯಂ (ಘಚಭಜ).

ಅಭಿಮಾನಂ ಕಾರಣಮಾಗೆವ್ವು[1]ನುಱದ[1]ಪರಿಭವಿಸಿ ಬಾಯ್ಗೆವಂದುದನೆ ಪೊಲ್ಲ[2]ದುಯು[2] ಬಯ್ಗುಳ್ಗಳಂ ಬಯ್ದು[3]ಮಾ ಪಾಪದ ಫಲದಿಂದ[4]ಮೂಱುದಿವಸದಿಂದೊಳ[4]ಗೌದುಂಬರ ಕುಷ್ಟಮಾಗಿ ಪೊ[5]ಱೆತ್ತು[5] ಸತ್ತು ಕೌಸಂಬಿಯೊಳ್ [6]ಲಂಗಿಗರ ಮನೆಯೊಳ್[6] ಪೆಣ್ಗತ್ತೆಯಾಗಿ[7] ಪಿರಿಯ ಪೊಱೆಗಳಂ ಪೊತ್ತು ಪೋಗಿ ಬೆಸ್ನೊಳ್ [8]ಕಱುಮ[8]ಯಾಗಿ ನಾಳಿ ಬಿದ್ದುಪೊ[9]ಱೆತ್ತು[9] ನಮೆದು ಸತ್ತು ಪೇಪಂದಿಯಾಗಿ ಪುಟ್ಟಿ ಸತ್ತು ಪೆಣ್ನಾಯಾಗಿ ಪುಟ್ಟಿ ಸತ್ತು ಮತ್ತೀ ಚಂಪಾನಗರದೊಳ್ ಮಾದೆಗರ್ಗೆ ಪ್ರಧಾನನಪ್ಪ ನೀಳನೆಂಬ ಮಾದೆಗಂಗಂ ಕೇಶಿಯೆಂಬ ಮಾದೆಗಿಗಂ ದುರೂಪೆ[9] ದುರ್ಗಂಧೆ ದುಸ್ವರೆ ಜಾತ್ಯಂಧೆ ಪೊಲೆಯರ್ಗೆ ಮಗಳಾಗಿ ಪುಟ್ಟಿ [10]ನೀವು ಪ್ರತಿಬೋಧಿಸೆ[10] ವ್ರತಂಗಳಂ ಕೈಕೊಂಡು ನಿದಾನಂಗೆಯ್ದು ಪಾವು ಕೊಳೆ ಸತ್ತು ಪುರೋಹಿತಂ ಸೋಮಶರ್ಮಂಗಂ ತ್ರಿವೇದಿಗಂ ಪುಟ್ಟಿದ ನಾಗಶ್ರೀಯೆಂಬೊಳ್ ಮಗಳಾದಳದಱಿಂ ನಿಮಗೀ ಕೂಸಿನ ಮೋಗತಿಸ್ನೇಹ ಮಾದುದೆಂದು ಪೇ[11]ೞ್ದುದ[12]ಲ್ಲಮಂ ನಾಗಶ್ರೀ ಕೇಳ್ದು ಕೞಿದಯ್ದು ಭವಂಗಳುಂ ಪ್ರತ್ಯಕ್ಷಮಾದಂತೞಿದು ಭಟ್ಟಾರರ ಕಾಲ್ಗೆಱಗಿ ಪೊಡೆವಟ್ಟು ಧರ್ಮಮಂ ಬೆಸಗೊಂಡು ಕೇಳ್ದಣುವ್ರತಂ ಮೊದಲಾಗೊಡೆಯ ಶ್ರಾವಕ ವ್ರತಂಗಳಂ ಸಮ್ಯಕ್ತ್ವಪೂರ್ವಕಂ ಕೈಕೊಂಡು ವಂದಿಸಿ ಮನೆಗೆ ಪೋಪಾಗಳ್ ಭಟ್ಟಾರರ್ ಮಗಳೆ ಎಮ್ಮ ಕೊಟ್ಟ ಬ್ರತಂಗಳಂ ನಿಮ್ಮಮ್ಮಂ ಬಿಸುಡಲ್ವೇೞ್ದನಪ್ಪೊಡೆ [12]ಪೆಱ[12]ಪೊಱಿವಿಸುಡದಿರೆಮ್ಮಲ್ಲಿಗೆ ವಂದೆಮ್ಮ ಕೊಟ್ಟ ಬ್ರತಂಗಳನೆಮಗೊಪ್ಪಿಸುವುದೆನೆ ಕೇಳ್ದಂತೆಗೆಯ್ವೆನೆಂದು ಮನೆಗೆ ಪೋದೊಡೊಡ[13]ನೆಯ[13] ಕೂಸುಗಳ್ ಸೋಮಶರ್ಮ [14]ಭಟ್ಟಂಗೆ—ನಿಮ್ಮ ಮಗಳ್ ರಿಸಿಯರ ಪಕ್ಕದೆ ಶ್ರಾವಕ ಬ್ರತಂಗಳಂ ಕೈಕೊಂಡು [15]ಬಂದಳೆನೆ[15] ಭಟ್ಟಂ ಕೇಳ್ದು ಮಗಳೆ ನಾಗಶ್ರೀ ನಾಮುಂ [16]ಪಾರ್ವರೆಮುಂ ಲೋಕಕ್ಕೆಲ್ಲಮಗ್ಗಳಂ ಲೋಕದಿಂದಂ ಪೂಜಿತ (ರ) ಮುಮೆಮ್ಮಿಂದಗ್ಗಳಂ[16] ಪೆಱರಿಲ್ಲದಱಿಂದಂ ಸವಣರ ಧರ್ಮಮಂ ನಮಗೆ ಕೊಳಲಾಗ ಬಿಸುಡು ಎನೆ ನಾಗಶ್ರೀಯೆಂದಳ್—ಆಮ್ಮಾ ವ್ರತಂಗಳಂ ಕೊಟ್ಟ ರಿಸಿಯರ್ಗೆ ಪೋಗಿಯೊಪ್ಪಿಸಿ ಬಿಸು[17]ಟಪ್ಪೆ[17]ನೆನೆಯಂತೆ ಗೆಯ್ಯೆಂದು ಮಗಳ ಕೈಯಂ ಪಿಡಿದಿರ್ವರುಂ ರಿಸಿಯರಲ್ಲಿಗೆ ವ್ರತಂಗಳನೊಪ್ಪಿಸ[18]ಲ್ಕೆ[18]ಂದು ಪೋಪನ್ನೆಗಮಾಪೆಡೆಯೊಳ್ ಬಟ್ಟೆಯೊಳೊರ್ವನಂ ಪೆಡಂಗಯ್ಯುಮಡಿಯುಂ ಕಟ್ಟಿ ಒಂದವಱಿಗುಟ್ಟಿ ಪೊಱಲ ಜನಂಗಳ್ ಮುಸುಱಿಕೊಂಡು ನೋಡುತ್ತಮೊಡ[19]ವರೆ ನೂಂಕುತ್ತುಂ ಕೊಲಲುಯ್ವ ಪುರುಷನಂ ಯುವ್ವನನಂ ತೇಜಸ್ವಿಯುಂ ಕಂಡು ನಾಗಶ್ರೀ ತಮ್ಮಮ್ಮನಂ ಬೆಸಗೊಳ್ಗುಮಾತನನೇಕೆ ಕೊಲಲುಯ್ದಪ್ಪರಮ್ಮಾ ಬೆಸಗೊಳ್ಳೆಮನೆ ಸೋಮಶರ್ಮನುಂ ಕೊಲಲುಯ್ವ[20]

---

1. ನುಱಿ (ಫ). 2. (ಫಚಭಜ)ಗಳಲ್ಲಿಲ್ಲ. 3. + ಪರಿಭವಿಸಿದ (ಚ). 4. ಏಳಿವಸದೊಳ (ಜ). 5. ಳಿತ್ತು (ಕಗ). 6. (ಫಚಭಜ)ಗಳಲ್ಲಿಲ್ಲ. 7. + ಪುಟ್ಟಿ (ಫ). 8. ಕಱವೆ (ಫಚಭಜ). 9. + ದುರ್ವರ್ಣೆ (ಫ). 10. ನಿಮ್ಮ ಬೋಧೆಯಿಂ (ಫಜ). 11. ಳ್ದುದೆ (ಫಜ), ಳದೆ (ಕಗ). 12. ಪೆಱೆ (ಫಚಭಜ). 13. ನೆ ಬಂದ (ಚ). 14. + ರಿಗೆ (ಕಗ). 15. ಳೆಂದು. ಪೇಳ್ದೊಡದಂ (ಫಚಜ) 16. ..ಪೂಜಿಸೆ ಪುಟ್ಟಿ... (ಗ). (ಬ)ದಲ್ಲಿ ನಷ್ಟ. ಸಾವಕ್ಕೆ ಮಾಲೆಲೋಕಕ್ಕೆ ಮಗ್ಗಳಂ ಲೋಕದಿಂದಂ ಪೂಜಿಸೆ (ಪೂಜ್ಯ) ಪುಟ್ಟಿದ ನಮ್ಮಿಂದಗ್ಗಳಂ (ಫಚಭಜ). 17. ಡುವೆ (ಗ). 18. ದೆಂ (ಕಬಭ). 19. + ನೆ (ಗ). 20. + ಪ್ರಧಾನನಪ್ಪ (ಫಚಭಜ).

ತಳಾಱನಂ ಬೆಸಗೊಂಡು ತದ್ವೃತ್ತಾಂತಮೆಲ್ಲಮನಱಿದು ನಾಗಶ್ರೀಗಿಂತೆಂದು ಪೇೞ್ಗುಂ

ಈ ಪೊೞಲ ಪ್ರಧಾನನಪ್ಪ ಶ್ರೇಷ್ಠಿ ಇಂದ್ರದತ್ತನೆಂಬೊಂ ಪದಿನಾಱುಂ ಕೋಟಿ ಕಸವರಮನೊಡೆಯೊ[1]ನಾತನ ಮಗನೀತಂ[1] ವರಸೇನನೆಂಬೊಂ ಜೂದಾಡಿಯು[2]ಕ್ಷ ಧೂರ್ತ[2]ನೆಂಬೊಂಗೆ ಸಾಸಿರ ದೀನಾರಮಂ ಸೋಲ್ತು ಸೋಲಮಂ ಕುಡಲಾಱದೆ ಅರಸ[3]ನಾಣೆಯುಂ ಮಿಕ್ಕು ಪೋಪ[ನ್][3] ಮುಂದಡ್ಡಮಾಗಿರ್ದೊರ್ವನನಪರಾಧಿಯನಕ್ಷ ಧೂರ್ತನಂ ಕೊಂದನದಱಿಂದರಸನೀತನಂ ಕೊಲಲ್ವೇೞ್ದನದಱಿಂ ಕೊಲಲುಯ್ದಪರ್ ಮಗಳೆ ಎಂದು ಪೇೞ್ದೊಡೆ ನಾಗಶ್ರೀಯೆಂದಳ್—ಅಂತಪ್ಪೊಡಮಾನುಂ ರಿಸಿಯರ ಪಕ್ಕದೆ ಬ್ರತಮುಂ ಸಾವಿಂಗಂಜಿ ಜೀವಂಗಳಂ ಕೊಲ್ಲೆನೆಂ[4]ಬ[4] ಬ್ರತಮಂ [5]ಕೊಂಡೆನಾ[5] ಬ್ರತಮನವರ್ಗೊಪ್ಪಿಸಿ[6]ದೊಡಾ[6]ನುಮಪೋಘಂ[6] ಜೀವಂಗಳಂ ಕೊಲಲ್ವೇೞ್ಕುಮಾ ಜೀವಂಗಳಂ ಕೊಂದೊಡೆನ್ನುಮನೀತನಂತೆ ಪೆಡಂಗಯ್ಯುಡಿಯೆ ಕಟ್ಟಿಯೊಂದೆವಱಿ ಗುಟ್ಟಿ ನೀಮೆಲ್ಲ[7]ನಂಟರ್[7] ನೋಡೆ ಶ್ಮಶಾನಕ್ಕುಯ್ದು ಸೂಲದೊಳಿಕ್ಕಿ ಕೊಲ್ವರೆನೆ ಅಂತಪ್ಪೊಡೆ ಈಯೊಂದು ಕೊಲ್ಲದ ವ್ರತಂ ನಿನಗಿರ್ಕೆ ಮಗಳೇ ಉೞಿದ ಬ್ರತಂಗಳೆಲ್ಲಮಂ ಪೋಗಿಯಾ ಕ್ಷಪಣಕಂಗೊಪ್ಪಿಸುವ[8]ಮೆಂದು[8] ಕಿಱಿದಂತರಮಂ ಪೋಪನ್ನೆಗಂ ಮತ್ತೊರ್ವನಂ ಮುನ್ನಿ[9]ನಂತೆ ಕೊಲಲ್ಕೊಂಡು ಪೋಪ ಪುರುಷನಂ ಕಂಡು ನಾಗಶ್ರೀ ತಮ್ಮಮ್ಮನಂ ಬೆಸಗೊಳಲ್ವೇೞ್ದೊಡಾತನುಂ ಬೆಸಗೊಂಡೆಲ್ಲಮನಱಿದು ಮಗಳ್ಗಿಂತೆಂದು ಪೇೞ್ಗುಂ ಕೇಳ್ ಮಗಳೆ [10]ವೈನಯಿಕನೆಂಬೊ[10]ನೋರ್ವಪುರುಷಂ ಕನ್ನೆಯ ಬ್ರಂಟನ ವೃದ್ಧಸ್ತ್ರೀಯ ಮೂವರ ಚಿತ್ರಕಥೆಗಳಂ ಪಟದೊಳ್ [11]ತೋಱಿ ಪೇೞ್ವ ಲೋ[12]ಗರಂ[12] ಡಂಬಿಸಿ [13]ಮಾಱುಗೊಳ್ವ[13]ಬತ್ತಮಂ [14]ಕ[14]ಳ್ದೊನಾ ಮೂಱುಂ ಕಥೆಗಳೊಳಗೆ ಕನ್ನೆಯ ಕಥೆಯುಂ ಪೇೞ್ವನದೆಂತೆಂದೊಡೆ—

ಕೌಶಂಬಿಯೆಂಬ ಪೊೞಲೊಳ್ ಸುಮಿತ್ರನೆಂಬೊಂ ಶ್ರೇಷ್ಠಿ [15]ಕೋಟಿ ಕಸವರಮನೊಡೆಯೊ[15]ನಾತನ ಮಗಂ ವಸುಮಿತ್ರನೆಂ[16]ಬೊಂಗೆ ಸರ್ಪದಷ್ಟಮಾದೊಡೆ ಸತ್ತನೆಂದು[16] ಶ್ಮಶಾನಕ್ಕೆ[17]ಕೊಂಡು ಪೋಗಿ ಇೞಿಪಿದೊಡಲ್ಲಿ ಗರುಡನಾಭಿಯೆಂಬ ಮಂತ್ರವಾದಿ ಪೋಗಿ ನೋಡಿ ಈತನನಾಂ ನಾಳೆಯುಂ ಭಿಮಂತ್ರಿಸಿ ಬಾೞಿಸುವೆನಂಜದಿರಿಮಿಲ್ಲಿಯೆ [18]ಇರುಳೀ ದಾಷ್ಟಿಕಂಗೆ[18] ಜಾವಮಿರಿ[19]ಮೆಂದು ಪೇೞ್ದು ಪೋದಂ ಸುಮಿತ್ರಸೆಟ್ಟಿಯುಂ ನಾಲ್ವರೊಳ್ಳಿದರಪ್ಪ ಸುಭಟರಂ ಜಾವಮಿರಿಸಿ ಪೋದನಾ ನಾಲ್ವರುಂ ಜಾವಮಿರ್ದ ಭಟ[20]ರೊಳಗೊ[20]ರ್ವನಿರುಳ್ ಕೂೞಿಯುಂ ಕಳ್ದು ತರಲ್ ಪೋದಂ

1. (ಕಗ)ಗಳಲ್ಲಿ ತ್ರುಟಿತ, (ಖ)ದಲ್ಲಿ ನಷ್ಟ. 2. ಕ್ಷದ್ಧೂರ್ತ (ಕಗಘಚಛ). 3. ರಾಣೆಯುಂ ಮಿಕ್ಕು (ಮಿಱಿ) ಪೋಪಂಗೆ (ಘಚಛಜ)...ನ (ಕಗ). 4. ಬೀ (ಘಚಛಜ). 5. +ಕ್ಕೆ (ಘಛಜ). 6. ನುಂ (ಘಚಛಜ). 7. ರುಂ ನೋಡೆ (ಚಜ). 8. ಮೆನೆ (ಘಛಜ). 9. +ನಾತ (ಘಛಜ). 10. ವೈನೈಕ್ಯ (ಕ), ವೈನೈಕ (ಗ), (ಖ)ದಲ್ಲಿ ನಷ್ಟ, ವೈನಯಿಕನೆಂಬಾತ (ಘಚಛಜ). 11. +ಬರೆದು (ಕ). 12. ಕಮಲ್ಲಮಂ (ಘಚಛಜ). 13. ಮಾಱುಕೊಳ್ವ (ಕಗ). 14. ಕೊ (ಘಚಛಜ). 15. ಕಸವರಮಂ ಪಡೆಯನಾ (ಘಚಛಜ). 16. ಬೊನಂ ಸರ್ಪದಷ್ಟನಾಗಿರ್ದೊನಂ (ಘಚಛಜ). 17. +ಸಂಸ್ಕರಿಸಲ್ಕೆ (ಗಘಛಜ). 18. ಇರುಳೆಕ್ಕನ್ನೆಗಂ (ಘಛಚಜ). 19. +ಸಿ (ಘಛಜ). 20. ಳೊ (ಕಗ).

ಮತ್ತೊರ್ವಂ ಪುಳ್ಳಿಯುಂ ತರಲ್ ಪೋದಂ ಮತ್ತೊರ್ವಂ ಕಿಚ್ಚುಂ ತರಲ್ ಪೋದಂ ಮತ್ತೊರ್ವಂ ದಾಷ್ಟಿಕನಾ ಪಕ್ಕದೆ ಕಾಪಿರ್ದನಂತಾ ನಾಲ್ವರುಂ ಕುಱಿಯುಂ ಕೊಂದು ಸುಟ್ಟು ತಿಂ[1]ದ[1]ರೆಂಬ ಕಥೆಯುಮಂ ಪೇೞ್ದುಱಿನೆ ನೇಸಱ್ಮೂಡೆ ಗರುಡನಾಭಿಯೆಂಬ ಮಂತ್ರವಾದಿ ಬಂದು ಪಱೆಗುಟ್ಟಿ ಮಂತ್ರಿಸಿ ದಾಷ್ಟಿಕನನೆತ್ತಿದಂ ಸುಮಿತ್ರಸೆಟ್ಟಿಯುಮಿರುಳ್ ಚಾವಮಿರ್ದ ನಾಲ್ವರ್ ಸುಭಟರ್ಗೊರೊರ್ವರ್ಗೆ ಸಾಸಿರ ದೀನಾರದ ಪೊಟ್ಟಳಿಗೆಗಳಂ ಪ್ರಾಸಾದದ ಮೇಗಿರ್ದ ಜನಸಂಕೀರ್ಣದ ನಡುವೆ ನಾಲ್ಕು ಪೊಟ್ಟಳಿಗೆಯನೀಡಾಡಿದೊಡಾ ಪೊಟ್ಟಳಿಗೆಯುಂ [2]ಕೊಂಡು ಕೊಳ್ಳೆನೆಂದು ಪುಸಿದೊಡಾ ಶ್ರೇಷ್ಠಿಯು[2]ಮರಸರ್ಗೆ ಪೋಗಿ ಬಿನ್ನಪಂಗೆಯ್ದನ್ ಎನ್ನ ಸಾಸಿರ ದೀನಾರದ ಪೊಟ್ಟ[3]ಳಿಗೆ[3]ಕಟ್ಟುವದಂ ದೇವರಾರ್ಕೈವುದೆಂದು ಪೇೞ್ದೊಡೆ ತಳಾಱನಂ ಕರೆದು ಬೇಗಂ ಕಳ್ಳನನಾರಯ್ಯಲ್ಲದಾಗಳ್ ಕಳ್ಳಂಗೆ ತಕ್ಕ ನಿಗ್ರಹಮಂ ನಿನಗೆ ಮಾೞ್ಪೆನೆಂದರಸನಾತನಂ ಬಗ್ಗಿಸಿ ನುಡಿದೊಡಾತನುಮಱಿಸಿ ಕಳ್ಳನನಾರಯ್ಯಲಾಱದೆ ನಾಲ್ವರ್ ಸುಭಟರುಮಂ ಮನೆಗೊಡಗೊಂಡು ಬಂದು ಭೀತನಾಗಿ ಬಿನ್ನನೆ ಪೊಗಂ[4]ಬಾಡಿ[4] ಚಿಂತಿಸುತಿರ್ದ್ದೊಡಾತನ ಮಗಳ್ ಸುಮತಿಯೆಂಬಳಿಂತೇಕೆ[5]ಬಿ[5]ನ್ನನಾಗಿ ಚಿಂತಿಸು[6]ತ್ತಿರ್ದ್ದೆ[6]ಯಮ್ಮಾ ಎಂದು ತಂದೆಯಂ ಬೆಸಗೊಂಡೊಡಾತನುಂ ತದ್ವೃತ್ತಾಂತಮೆಲ್ಲಮಂ ಮಗಳ್ಗೞಿಯೆ ಪೇೞ್ದೊಡಂಜಲ್ವೇಡಿದನೆಲ್ಲಮನಾನಾರಯ್ದು ಕಳ್ಳನುಮಂ ಕಸವರಮುಮಂ ನಾಳೆ ನಿಮಗೊಪ್ಪಿಸುವೆಂ ನೀಮುಂ ನಿಶ್ಚಿಂತಮಿರಿಮೆಂದು ತಂದೆಯನೇಕಾಂತದೊಳ್ ನುಡಿದು [7]ತಂದೆಯುಂ[7] ಸಂತ[8]ವಿಸಿದಾಗಳ್[8] ಸುಮತಿಯುಮಿರುಳ್ ಕಳ್ಳರಂ ಪರೀಕ್ಷಿಸಲ್ವೇಡಿಯಾ ನಾಲ್ವರುಂ ಸುಭಟರ ಪಕ್ಕದಿ[9]ರ್ದ್ದೆ[9]ನೆಂದವರ್ಗ್ಗೆ ಕಥೆಯಂ ಪೇೞ್ಗುಂ

ಪಾಟಳೀಪುತ್ರಮೆಂಬ ಪುರಮಲ್ಲಿ ಶ್ರೇಷ್ಠಿ ಸುದತ್ತನೆಂಬೊನಾತನ ಮಗಳ್ ಸುದಾಮೆಯೆಂಬ ಕನ್ನೆಯೊಂದು ದಿವಸಂ ಗಂಗೆಯಂ ಮೀಯಲ್ಪೋಗಿ ಮೀವಲ್ಲಿ ನೆಗಳ್ ಪಿಡಿದೊಡಾದಮಾನುಮಂಜಿ ತಡಿಯೊಳಿರ್ದ[10]ಧ[10]ನದತ್ತನೆಂಬೊಂ ಸೋವರ[11] ಮಯ್ದುನನಂ ಕಂಡೆನ್ನಂ ಬೇಗಂ ಬಿಡಿಸೆಂದೊಡಾತನಿಂತೆಂದನೆನ್ನ ಬೇಡಿದುದನೀವೊಡೆ ನಿನ್ನಂ ಕಾವೆನೆಂದೊಡಾಕೆಯು[12]ಮೀವೆ[12]ನೆಂದು ಪೂಣ್ದೊಡೆ ಬೇಗಂ ನೀರಂ ಪೊಕ್ಕು ನೆಗಳಿಂ [13]ಬಿಡಿಸಿದ[13] ಬೞಿಕ್ಕ ಪೇೞೆನಂ ಬೇಡುವಯ್ ನಿನ್ನ ಬೇಡಿದುದೆಲ್ಲಮನೀವೆನೆಂದು ಕನ್ನೆ ನುಡಿದೊಡಾತನಿಂತೆಂದಂ ನಿನ್ನ ಮದುವೆಯಂದು ಪ್ರಥಮ ದಿವಸದ ಪಸದನಮನೆನಗೆ ವಂದು ತೋಱಲ್ವೇೞ್ಕುಮೆಂದು ಬೇಡಿದೊಡಾಕೆಯುಮಂತೆ ಗೆಯ್ವೆನೆಂದು ಪೂಣ್ದಳಿಂತು ಕಾಲಂ ಸಲೆ ಮತ್ತಾ ಕನ್ನೆಗೆ ಯೌವನಂ ನೆಱೆದಂದು ಮದುವೆಯಾದೊಡೆ ತನ್ನ [14]ಪೂಣ್ಕೆಯುಂ ನೆನೆದು ಸರ್ವಾಲಂಕಾರ[14]ಭೂಷಿತೆಯಾಗಿಯಾದಮಾನುಂ ಕೈಗೆಯ್ದು ಚೆಲ್ವೆಯಾಗಿ ನಟ್ಟನಡುವಿರುಳ್ ಮನೆಯಿಂದಂ ಪೊಱಮಟ್ಟು

---

1. ಬ (ಕಗ). 2. ...ನೆಂದು ಕಳೆದೊಡಾ ಸೆಟ್ಟಿಯುಂ (ಕಗ). 3. ಳಿಂ (ಚಜ). 4. ಮಾಡಿ (ಫಜ). 5. ಖಿ (ಫಛ). 6. ತ್ತಿರ್ದ್ದಪ್ಪೆ (ಕಗ). 7. (ಚಜ)ಗಳಲ್ಲಿಲ್ಲ. 8. ವಿಸಿದಳ್ (ಚ), ಯಿಸಿದಳ್ (ಜ). 9. ರ್ದಂತೆಂ (ಫಚಜ). 10. ಜಿ. (ತ) 11. + ದ (ಜ). 12. ಮಂತೆಗೆಯ್ವೆ (ಫ). (ಚಜ)ದಲ್ಲಿಲ್ಲ. 13. ಕಾಚಿಸದ (ಫಚಛ). (ಜ)ದಲ್ಲಿಲ್ಲ. 14. ಪೂಣ್ದ ಪ್ರತಿಜ್ಞೆಯಂ ನೆನೆದು ಸರ್ವಾಭರಣ (ಫಚಛಜ).

ಮೈದುನನಿ[1]ರ್ದಾಪಣಕ್ಕೆ[1] ಪೋಪನ್ನೆಗಮೆಡೆಯೊಳ್ ಕಳ್ಳನೊರ್ವಂ ಕಂಡು ನಿನ್ನ ತೊಟ್ಟಾಭರಣಮೆಲ್ಲಮಂ ಕೊಟ್ಟು ಪೋಗಲ್ಲದಾಂ ಪೋಗಲೀಯೆನೆಂದೊಡೀಗಳೆ ಪೋಗಿ ಬಂದು ನಿನಗೆನ್ನ ತುಡುಗೆಯೆಲ್ಲಮಂ ಕುಡುವೆನನ್ನೆಗಮಿಲ್ಲಿ ಎನ್ನ ಬರ್ಪನ್ನೆಗಮೆತ್ತಂ ಪೋಗದಿರೆಂದು ನಂಬೆ ನುಡಿದು ಸಂತೈಸಿ ಕಿಱಿದಂತರಮಂ ಪೋದೊಡೆ ತಳಾಱಂ ಕಂಡೀ ಪೊೞ್ತಿತ್ತ ಪೋದಪ್ಪಯ್ ಪೊಲ್ಲಮಾನಸಿಯೆ ಎಂದಾತಂ ಪಿಡಿದು ಕಾಡೆ ಪಿರಿದೊಂದು ಮನೆವಾೞ್ತೆಯುಂಟೆನ್ನಂ ಕಾಡದೆ ಪೋಗಲೀಯಾನೀಗಳೆ ಪೋಗಿ ನಿನ್ನಲ್ಲಿಗೆ ಬಂದಪ್ಪೆಂ ಬಂದೊಡೆ ನಿನ್ನ ಮೆಚ್ಚುಗೆಯ್ವೆನೆಂದು ನಂಬೆ ನುಡಿದು ನನ್ನಿಗೊಟ್ಟು ಕಿಱಿದಂತರಮಂ ಪೋಪ[2]ನ್ನೆಗಮೆಡೆಯೊಳ್ ಬ್ರಹ್ಮರಾಕ್ಷಸಂ ಕಂಡು ತನ್ನಂ ತಿನ್ನಲ್ ಬಗೆದೊಡೆ ಬ್ರಹ್ಮರಾಕ್ಷಸಂಗೆಂದಳ್ ಪಿರಿಯದೊಂದು ಮನೆವಾೞ್ತೆಯುಂಟೀಗಳೆ ಪೋಗಿ ಬಂದಪ್ಪೆಂ ಬಂದ ಬೞಿಕ್ಕೆನ್ನಂ [3]ಮೆಚ್ಚಿದಂತೆ ಮಾಡೆಂದು[3] ನನ್ನಿಗೊಟ್ಟು ನಂಬಿಸಿ ಪೋದೊಡಾ ಕಳ್ಳನುಂ ತಳಾಱನುಂ ಬ್ರಹ್ಮರಾಕ್ಷಸನು[4]ಮಂತುಮಿವಾಕೆಯಿಾ[4] ಪೊೞ್ತು ತುರಿಪದಿಂದೆಲ್ಲಿಗೆತ್ತ ಪೋದಪ್ಪಳೆಂದು ಬೞಿವೞಿಯನೆ ನೋಡುತ್ತಂ ಪೋಪರನ್ನೆಗಂ ಮುಯ್ವು[5]ನಂ ಪಟ್ಟಿದ್ದಾರ್ಪಣಕ್ಕೆ[5] ಪೋಗಿ ಬಾಗಿಲಂ ತೆಱೆಯಿಮೆಂದಾಗಳವರಾರೆಂದು ಬೆಸಗೊಂಡಾಗಳಾನಲ್ತೆ ಸುದಾಮೆಯೆನೆಂದೊಡೆ ಬಾಗಿಲಂ ತೆಱೆ[6]ದಾಪಣ[6]ದೊಳಗಂ ಪೊಕ್ಕಳನೀ ಪೊೞ್ತೇಕೆ ಬಂದೆಯೆಂದು ಬೆಸಗೊಂಡೊಡೆ ನೀನಲ್ತೆ ಎನ್ನ ನನ್ನಿಗೊಂಡಯ್ ಎನ್ನ ಮದುವೆಯುಂದು ಪ್ರಥಮ ದಿವಸ ಪಸದನಮನೆನಗೆ ತೋಱಲ್ವೇೞ್ಕುಮೆಂದು ಬೇಡಿದೊಡಾಂ ಪ್ರತಿಜ್ಞೆಯಂ [7]ನೆಱಪಲ್[7] ಬಂದೆನೆಂದು ತನ್ನಂ ತೋಱಿದೊಡಾತನುಮಾಕೆಯ ರೂಪಂ ನೋಡಿ ಮೆಚ್ಚಿ ವಿದ್ಯಾಧರಿಯ ದೇವಗಣಿಕೆಯ ರೂಪನೆ ಪೋಲ್ವೆ ಎಂದು ಪೊಗೞ್ದು ಮತ್ತಮಿಂತೆಂದಂ ಪ್ರತಿಜ್ಞೆಯಂ ನೆಱಪಿದೆ ಒಳ್ಳಿತ್ತಾಯ್ತು ಪೊೞ್ತು [8]ಪೊಲ್ಲದು ಪಂದೆ[8] ನಟ್ಟನಡುವಿರುಳ್ ಕಳ್ಳರುಂ ತಳಾಱರುಂ ಕಾಡುವರ್ ಬೇಗಂ ಪೋಗೆಂದು ನುಡಿದು ಪೋಗಲ್ವೇೞ್ದೊಡದೆಲ್ಲಮನಾ ಮೂವರುಂ ಪೊಱಗೆ ಕೇಳ್ದು ಮತ್ತಂ ಬೇಗವೇಗಂ ಪೋಗಿ ತಮ್ಮಿರ್ದೆಡೆಗಳೊಳಿರ್ದರನ್ನೆಗಮಾ [9]ಮದೆವಳ್[9] ರಕ್ಕಸನಲ್ಲಿಗೆ ಬಂ[10]ದೇನೆನ್ನಂ ನೀಂ ಮೆಚ್ಚಿದಂತಂ ಮಾಡೆಂದು[10] ತ[11]ನ್ನಂ ತೋಱಿ[11]ದೊಡಾ ಬ್ರಹ್ಮರಾಕ್ಷಸನಿಂತೆಂದಂ ನೀಂ ಸತ್ಯವಾದಿಯುಯ್ ಅದಮಾನುಂ ರೂಪು ಲಾವಣ್ಯ ಸೌಭಾಗ್ಯ ಕಾಂತಿ[12]ಹಾವಭಾವ ವಿಲಾಸ ವಿಭ್ರಮಂಗಳ[12]ನೊಡೆಯುಯ್ ನಿನ್ನಂ ತಿಂದಾನಾವಗತಿಗೆ ಪೋಪೆಂ ನಿನ್ನ ರೂಪನೞಿಯಲಾಱೆನದಱಿನಂಜದೆ ಪೋಗೆಂದು ಪೋಗಲ್ವೇೞ್ದೊಡೆ ಬರ್ಪಳನ್ನೆಗಂ ತಳಾಱನ ಕಂಡಿನ್ನೆನ್ನಂ ನೀ ಮೆಚ್ಚುಗೆಯ್ಯೆಂದು ನುಡಿದೊಡಾತನಿಂತೆಂದಂ ನೀ ಪೊಲ್ಲಮಾನಸಿಯೆ ಎಂದು ಮನದೊಳೆ ಬಗೆದಂ ನಿನ್ನಂತೊಳ್ಳಿದರಾರುಮಿಲ್ಲ [13]ನುಡಿದ ನನ್ನಿಯಂ[13] ತಪ್ಪದೆ ಬಂದೆ

---

1. ದೊರ್ದಣವಣಕ್ಕೆ (ಕಗ). ನಿದ್ರ್ಯಾಯೆಡೆಗೆ (ಘಚಭಜ). 2. + ಳ (ಚಜ). 3. ತಿನ್ನೆಂದು (ಘಚಭಜ). 4. ವಿಂತೀ ಮೂವರಮಿಾ (ಚ), ಮೂವರು (ಜ). 5. ನನು × × × ಗೆಯ್ದಿರ್ದಾವಾಸಕ್ಕೆ (ಕಗ). (ಖ)ದಲ್ಲಿ ನಷ್ಟ. 6. ದೊಡಾಪಣ (ಘಜ). 7. ತೋಱಲ್ (ಘಚಜ). 8. ಪೊಡುಮಡೆ (ಚ) 9. ಮದೇವಳಪ್ಪ ಸುದಾಮೆಯುಂ (ಘಭಜ), (ಚ)ದಲ್ಲಿಲ್ಲ. 10. ದೆನ್ನಂತಿನ್ನೆಂದು (ಘಚಭಜ). 11. ನ್ನನೊಪ್ಪಿಸಿ (ಘಚಭಜ). 12. ಯ (ಘಚಭಜ). 13. ನಿನ್ನನನ್ನಿಗೆ (ಘಚಭ), ನಿನ್ನಂನನ್ನಿಗೆ(ಜ).

[1]ಸತ್ಯವಾದಿಯುಂಬರ್[1] ಪೋಗಬ್ಬಾ ಎಂದು ಪೋಗಲ್ವೇೞ್ದೊಡೆ ಬರ್ಪಳನ್ನೆಗಂ ಕಳ್ಳನಂ ಕಂಡು ತನ್ನ ತೊಟ್ಟಾಭರಣಮನೆಲ್ಲಮಂ ಕಳೆದೊಪ್ಪಿಸೆಯಾತನಿಂತೆಂದನೆನಗೇನೊಂದೆ ಭವಮೆ ನಿನ್ನ ಕೈಯ[2]ದಂ[2] ಕೊಂಡಾನೇನಾಚಂದ್ರಾರ್ಕತಾರಂಬರಂ ಬರ್ದ್ದಪ್ಪೆನೆ [3]ಎಣ್[3]ಕೊಂಡ ಕಸವರಂ ತವನಿಧಿಯಂತೆ ತಪದಿರ್ದಪ್ಪುದೆ ನಿನ್ನ ಕೈಯಿಂದಂ ಕೊಳ್ಳೆ ಪೋಗಬ್ಬಾ ಎಂದು ಪೋಗಲ್ವೇೞ್ದನಂತಾ ಮೂವರುಂ [4]ಮದೆವಳಂ[4] ಪೋಗಲ್ವೇೞ್ದು ಪೂಜಿಸಿ ಕೞಿಪಿದೊಡಾಕೆಯುಂ ತನ್ನ ಮನೆಗೆ ಪೋದಳಿಂತವರೊಳಗೊಳ್ಳಿದರಾರಣ್ಣಂಗಳಿರಾ ಪೇೞಿಮೆಂದು ಸುಮತಿಯೆಂಬ ಕನ್ನೆ ಬೆಸಗೊಂಡಾಗಳಾ ಸುಭಟರೊಳೊರ್ವನಿರುಳ್ ಕುಱಿಯುಂ ಕೊಂದವಂ ಬೊಮ್ಮರಾಕ್ಷಸನಾಕೆಯುಂ ತಿನ್ನದೆ ಕೞಿಪಿದೊಡಾತನೊಳ್ಳಿದನೆಂದಂ ಸರ್ಪದಷ್ಟನಂ ಕಾದಿರ್ದಾತಂ ತಳಾಱಂ ಕಾಡದೆ ಕೞಿಪಿದನಾತನೊಳ್ಳಿ[5]ದನೆಂದಂ[5] ಕಿಚ್ಚಂ ತರಲ್ ಪೋದಾತನಿಂತೆಂದಂ [6]ಮದೆವಳಂ ಸೋದರ[7]ಮಯ್ದುನನತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವಭಾವ ವಿಲಾಸವಿಭ್ರಮಂಗಳನೊಡೆಯೊಳಂ ಸೋದರ[7] ಮಾವನ ಮಗಳಂ ತನ್ನಲ್ಲಿಗೆ [8]ವಂದೊಳ[8]ನೇಕಾಂತಂ ಸಮನಿಸಿದೊಡಾಕೆಗಳಿಪದೆ ಪೋಗವೇೞ್ದ ಧನದತ್ತನೊಳ್ಳಿದನೆಂದಂ ಪುಳ್ಳಿಯುಂ ತರಲ್ ಪೋದಾತಂ ಸಾಸಿರ ದೀನಾರದ ಪೊಟ್ಟ[9]ಳಿಗೆಯುಂ[9] ಕ[10]ಳ್ದಾ[10]ತನಿಂತೆಂದಂ ಮದೆವಳ್ ತೊ[11]ಟ್ಟಾಭರಣಮೆಲ್ಲಮಂ ಕೊಳ್ಳದೆ ಕೞಿಪಿದ ಕಳ್ಳ[11]ನೊಳ್ಳಿದನೆಂದೊಡಾತನ್ ಕಳ್ಳನಪ್ಪುದನಱಿದು [12]ಕಿಱಿದು[12] ಬೇಗಮಿರ್ದಾ ನುಡಿಗಳೆಲ್ಲಮಂ ಮಱೆಯಿಸಿ ಎಲ್ಲ[13]ರುಮಂ ಮಱಲುಂದಿಸಿದ ಬೞಿಕ್ಕ[13]ಮಾ ಕಳ್ಳನನೆೞ್ಬಿ ಏಕಾಂತದೊಳಿಂತೆಂದು ನುಡಿಗುಂ ನಿನಗಾನಾಟಿಸಿದೆನೆನಗೆ [14]ನೆಱಿಯೆ[14] ತುಡುಗೆಯುಂ ಮಾಡಿಸಲ್ [15]ಭಾಗಸ[15]ಮುಳ್ಳೊಡೆ ನಿನಗಾಂ ಪೆಂಡತಿಯೆನಾಗಿ ನಿನ್ನೊಡವರ್ಪೆನೆಂದವನನುರ್ಕೆವದಿಂದಂ [16]ಮನಂಗೊಳೆ ನಂಬೆ ನುಡಿದೊಡಾತನುಂ ಮಯ್ಯಱಿಯದೆ ದೀನಾರದ ಸಹಸ್ರದ ಪೊಟ್ಟಳಿಗೆಯುಂ ತೆಗೆದು ಕೊ[17]ಟ್ಟಾನಿದಱೊಳಗೆ[17] ನಿನಗೆ ತುಡುಗೆಯುಂ ಮಾಡಿಸುವೆಂ ಬಾ ಪೋಪಮಿರ್ವರುಮೆಂದೊಡಂತೆಗೆಯ್ವೆನೆಂದು ಪೊನ್ನ ಪೊಟ್ಟಳಿಗೆಯುಂ ತಂದೆಯ[18]ಮಱಲುಂದಿದಲ್ಲಿಗೆ[18] ಪೋಗಿ [19]ಬರಂಟೆ[19] ಎೞ್ಬಿ ಪೊಟ್ಟಳಿಗೆಯುಂ ತಂದೆಗೆ ಕೊಟ್ಟಳ್ ಕೊಟ್ಟೊಡಾತನುಂ ಕಳ್ಳನುಮಂ ದೀನಾರದ ಸಹಸ್ರದ ಪೊಟ್ಟಳಿಗೆಯುಮಂ ಕೊಂಡು ಪೋಗಿಯರಸಂಗೊಪ್ಪಿಸಿದನೆಂಬೀಚಿತ್ರಕಥೆಗ[20]ಳುಮಂ[20] ಜನಂಗಳ್ಗೆ ಪೇೞ್ದು ಬತ್ತಮಂ ಕಳ್ದಂ ವೈನಯಿಕನೆಂಬೊಂ ಕಳ್ಳನಿನ್ನುಮಾತನ ಪೇೞ್ದ

---

1. (ಫಚಜ)ಗಳಲ್ಲಿಲ್ಲ. 2. ಯ್ಯ ಆಭರಣಮಂ (ಚ). 3. ಎಂಬುಮೆ (ಕಗ). 4. ಸುದಾಮೆಯುಂ (ಚಜ). 5. ದಂ (ಕಗ). 6. ಸುದಾಮೆಯುಂ (ಚ). 7. +ದ (ಚಜ). 8. (ಕಗ)ಗಳಲ್ಲಿ ತ್ರುಟಿತ, 9. ಣಮಂ (ಚ), ಳಮಂ (ಜ). ಳಮಂ (ಚ). 10. ದ್ದಾ (ಕಗ). 11. ಟ್ಟುದೆಲ್ಲಮಂ + + + ದಾತ (ಕಗ). (ಖ)ದಲ್ಲಿ ನಷ್ಟ. 12. (ಸ–ಚ) ಪ್ರತಿಗಳಲ್ಲಿಲ್ಲ. 13. ರುಂ ಪಟ್ಟಿರ್ದಿಂ ಬಳಿಯು (ಘಚಛಜ). 14. ತಕ್ಕ ವಸ್ತುವುಳ್ಳೊಡೆ (ಚಜ), (ಘಛ)ಗಳಲ್ಲಿಲ್ಲ. 15. ಭಾಗವಸ (ಘಜ). 16. +ನಾನಾ ಪ್ರಕಾರದಿಂ (ಘಚಜ). 17. ಟ್ಟನಿತಱೊಳೇ (ಘಛಜ), (ಚ)ದಲ್ಲಿ ತ್ರುಟಿತ. 18. ಪಟ್ಟಿರ್ದಲ್ಲಿಗೆ (ಘಚಛಜ). 19. ಬೆರಂಟೆ (ಕಗ), (ಖ)ದಲ್ಲಿ ನಷ್ಟ. 20. ಳ್ಳಂ (ಗ).

ಕಥೆಗ[1]ಳುಮಂ[1] ಪೇೞ್ವೆಂ ಕೇಳ್ ಮಗಳೆ ಎಂದು ಸೋಮಶರ್ಮಭಟ್ಟಂ ನಾಗಶ್ರೀಗಿಂತೆಂದು ಪೇೞ್ಗುಂ

ಧರ್ಮಪುರಮೆಂಬುದು ಪೊೞಲಲ್ಲಿ ಸಾಗರದತ್ತನೆಂಬೊಂ ಶ್ರೇಷ್ಠಿಯಾತನ ಬಂಟಂ [2]ವೈಸಾ[2]ಕನೆಂಬೊನಾತನೊಂದು ದಿವಸಂ ಕಬ್ಬಿನ ಕೆಯ್ಯ[3]ನುೞ್ವೊಂ[3] ನಿದಾನವಮಂ ಕಂಡ[4]ದಂ[4] ಮಱಸಲ್ವೇಡಿ ತನ್ನ ಪೆಂಡತಿಯ ಮನಮಂ ಪರೀಕ್ಷಿಸಲ್ವೇಡಿ ಕೃತಕ ಗರ್ಭಮಂ ತಾಳ್ದಿರೆ ಪೆಂಡತಿ ಕಂಡಿದೇನ್ [5]ಬಸಿಱೊೞ[5]ರ್ದುದೆಂದೊಡಾತನಾ ಮಾತಿನೊಳೇನೊ ಕೆಮ್ಮಗಿ[6]ರೆಂ[6]ದೊಡಾಕೆ ನಿರ್ಬಂಧದಿಂ ಕೇೞೆ ಬೆಸಗೊಳೆ[7]ಯನಾರ್ಗಂ[7] ಪೇೞೆಯಪ್ಪೊಡೆ ನಿನಗೆ ಪೇೞ್ವೆನೆಂದಿಂತೆಂದಂ ಪುರುಷ[8]ರ್ಕ್ಕಳ್ಗಾಗದುದೆನಗಾ[8]ದುದೆಂದು ಪೇೞ್ದೊಡದಂ ಕೇಳ್ದು ಸೈರಿಸಲಾಱದೆ ಪೊೞಲ ಜನಂಗಳೆಲ್ಲಮಱೆವಂತು ಪೇೞ್ದಳೆಂಬೆರಡನೆಯ ಕಥೆಯುಮಂ ಪೇೞ್ದು ಮೂಱನೆಯ ವೃದ್ಧಸ್ತ್ರೀಯ ಕಥೆಯನಿಂತೆಂದು ಪೇೞಲ್ ತೊಡಂಗಿದಂ

ಹರಿಪುರಿಯೆಂಬ [9]ಪೊೞಲೊಳ್[9] ಗಂಭೀರೆಯೆಂಬೊಳೊರ್ವಳ್ ಬಿ[10][ರ್ದ್ದಿ][10]ಯಾಕೆಯ ಮಗಳ್ ಹರಿಣಿಯೆಂಬೊಳಾಕೆಯಂ ಜ[11]ಯಂತ[11]ಮೆಂಬ ಪೊೞಲೊಳ್ ವಸುದತ್ತನೆಂಬ ಪರದಂಗೆ ಕೊಟ್ಟೊಡಾಕೆಗೆ ಗರ್ಭಮಾಗಿ [12]ಮೋದಗೆ[12]ಯಮೋ[13]ಗೆ[13] ಬಯಕೆಯಾದೊಡೆ ತಾಯ್ ಪಲವುಂ ತೆಱದ ಲಡ್ಡುಗೆಗಳ್ [14]ಮಂಡಗೆಗಳುಂ[14] ಮೊದಲಾಗೊಡೆಯ ಪಲವುಂ ಭಕ್ಷ್ಯ ರೂಪಂಗಳುಮಂ ಕೊಂಡು ಗಂಭೀರೆಯೆಂಬ [10]ಬಿ[ರ್ದ್ದಿ][10] ಹರಿಪುರದಿಂ ಪೊಱಮಟ್ಟು ಮಗಳಿ[15]ರ್ದ್ದೂ[15]ರ್ಗ್ಗೆ ಪೋಪಳನ್ನೆಗವೆಡೆಯೊಳೆಣ್ಬರ್ ಕಳ್ಳರಂ ಕಂಡವರೊಳಗೊರ್ವ[16]ನಂ ಪಿಡಿದೞ್ತಿನ್ನ ಮಗಂ ನಿನ್ನನೆ ಪೋಲ್ಕುಂ ಪನ್ನೆರ[17]ಟ್ಬ[17]ರಿಸಂ ಪೋದೊನೆತ್ತ ಪೋದನೆಂದಱಿಯೆನಾತನಂ ಕಾಣದಿರುಳುಂ ಪಗಲುಂ ನೆನೆದೞ್ತು ಕಣ್ಗಳ್ ಬಾತಿರ್ಪುವಿಂದೆನಗೆ ಆತಂ ಬಂದಂತಿರೆ ನಿನ್ನಂ ಕಂಡು ಸಂತಸಮಾಯ್ತು ಮಗನೆ ನೀಮೆಲ್ಲಂ ಬನ್ನಿಂ ಪೋಪಂ ಸಾರೆಯೂ[18]ರಂ ಮಿಂದುಂಡುಟ್ಟು[18] ವಿಶ್ರಮಿಸಿ ನಾಳೆ ಪೋಪಿರೆಂದೊಡಗೊಂಡು ಪೋಗಿ ಮಗಳ ಮನೆಯಂನೆಯ್ದಿ ಅವರ್ಗೆಲ್ಲಂ ನೀ[19]ರ[19] ನಿಡಿಸಿ ತಲೆಯಂ ಪೂಸಿಯೊಲ್ಲಣಿಗೆಯನುಡಿಸಿ ತಲೆಯೊ[20]ಳ್[20] ಕೞೆಯಂಪೊಯ್ದಾಗಳ್ ಬಿ* [ರ್ದ್ದಿ]*ಮನೆಯಮೇಗೇಱೆ ಕಳ್ಳರೆಂದು ಪೊಯ್ಯಲಿಟ್ಟಾಗಳನಿಬರುಂ ತ್ರಸ್ತಾ[21]ಭಿಭೂ[21]ತರಾಗಿ [22]ಪಟ್ಟನೆ ಪಾಱೆ[22]ಯೋಡಿ ಕೆಟ್ಟೊಳ್ಳಿತ್ತೆಮ್ಮ[23] [ಬಿರ್ದ್ದಿ][23]ಭಿದ್ರಿಸಿದಳೆಂದು ಪಗೆಸಾಱೆ[24]ರ್ದ್ದ[24]ರಿತ್ತ†ಬಿ*[ರ್ದ್ದಿ]*

1. ಳ್ಮಂ (ಗ), ವೈಸಾ (ಕಖ). ವೈನೆ (ಘಚ), ವೈನಯಿ (ಜ). 2. ನಾಳ್ವೊಂ (ಕಖಗ), ನುಳ್ವಲ್ಲಿ (ಘಚಛಜ). 4. ಡನದಂ (ಘಚಜ). 5. ಬಸಿಬ್ಬಾರ್ತಿ (ಘಚಛಜ). 6. ರಲೆಂ (ಕ). 7. ನೀನಾರ್ಗಂ (ಘಜ). 8. ಗ್ಗಾಗದ ಗರ್ಭಮೆನಗಾ (ಘಚಛಜ). 9. ಪುರದೊ (ಕಖಗ). 10. ಳ್ದಿ (ಕಖಗ). ದ್ದಿ (ಘಚಛಜ). 11. ಯಪುರ (ಘಚಛಜ). 12. ಮೊದಱಗೆ (ಖ), (ಕ). 13. ಲೆ (ಕಖಗ). 14. (ಘಚಛಜ)ಗಳಲ್ಲಿಲ್ಲ. 15. ಪ್ಪೂ (ಕಖಗ). 16. +ಕಳ್ಳಿ (ಘಚ). 17. ಡ್ಬ (ಖ). ಡುವ (ಘಚಜ). 18. ರುಂಟು (ಘಚಛಜ). 19 ಗ್ಗಳ (ಘಚಛಜ). 20. ಳಟ್ಟ (ಘಚಛಜ). * ಳ್ದಿ (ಕಖಗ), ದ್ದಿ (ಘಚಛಜ). 21. ಭೀ. 22. ಪಟ್ಟಂಪಱೆ (ಘಚಛಜ). 23. ಳ್ದಿಗಿತ್ತಿ (ಕಖಗ). 24. ಳ್ದ (ಕಖ). †ಮುಂ ನೆಟ್ಟನೊರ್ವನೊಂದಿರುಳೊಳ್ (ಕಖಗ).

ಯುಂ ನೆಟ್ಟನಿಂದಿರುಳ್ ಕಳ್ಳರ್ ಬರ್ಪರೆಂದಱಿದು ಕೂರಿತಪ್ಪ ಬಾಳಂ ಪಿಡಿದಿರ್ದಳನ್ನೆಗ ಮಿರುಳ್ *ಕಳ್ಳರ್ ವಂದಾಕೆಯ [1]ಉಂದಿದ[1] ಮನೆಯೊಳ್ ಕನ್ನಮಿಕ್ಕಿದೊಡೆ ಕನ್ನದ ಬಾಗಿಲೊಳಾ ಬಾಳನಡ್ಡಮಿಟ್ಟು ಪಿಡಿದಿ[2]ರ್ದು[2] ಪುಗುವ ಕಳ್ಳನ ಮೂಗನರಿದೊಡವಂ ಪೊಱಮಟ್ಟು ತನಗೆ ಪುಗಲ್ ಪಾಂಗಿಲ್ಲ ನೀ ಪುಗೆಂದು ಪೆಱನೊರ್ವ[3]ನಂ ಪುಗಿಸಿ ದೊಡಾ[4]ತನ ಮೂಗುಮಂ ಕೊಱೆದೊಡಾತನುಂ ಪೆಱನೊರ್ವನಂ ಪುಗಿಸೆ ಸೂಱು ಸೂಱೊಳೆ ಪೊಕ್ಕೊಡನಿಬರ ಮೂಗುಮಂ ಕೊಱೆದಿಕ್ಕಿದೊಡನಿಬರುಂ ಮೂಗರಿಯೆ ಪಟ್ಟು[4] ಪೊಱಮಟ್ಟು ಪೋಗಿಯೊರ್ವನಿಂದ್ರಜಾಲಿಗನ ಮನೆಯೊಳ್ ಕನ್ನಮಿಕ್ಕಿ [5]ಪ್ರಡುಕೆಯಂ ತೆಗೆದು ಪೊತ್ತುಪೋಗಿ ಪೊಱವೊಱಲೊಳ್ ಶ್ಮಶಾನದೊಳಿಱಿಪಿ ಕುಱಿಯುಂ ಕಳ್ದು ತಂದಱುವರ್ ಕಳ್ಳರುಂ [6]ಮಱಲುಂದಿದರೊರ್ವನಾ[6] ಕುಱಿಯುಂ ಕೊಂದು ಜಾವಮಿರ್ದು ಮಸಣದ ಕಿಚ್ಚಿನೊಳ್ ಪಿಶಿತಮಂ ಮಾಡುತ್ತಿ[7]ರ್ದ್ದು[7] ಪ್ರಡುಕೆಯುಂ ತೆಱೆದು ನೋಟ್ಪನನ್ನೆಗಮದಱೊಳಗಿರ್ದ [8]ಇಂದ್ರಜಾಲಿ[8]ಗರ ಪಾಪೆಗಳುಂ ಸೀರೆಗಳುಂ ಝು[9]ಣಂಬ[9]ಮಂ ಕೊಂಡೊಂದು ಪ್ರತಿಮುಖಮಂ ಕೊಂಡು ತನ್ನ ಮುಖದೊಳಿಟ್ಟು ಪುಲಿಯ ಝುಣಂಬಮುಮಂ ತೊಟ್ಟು ಶ್ಮಶಾನದೊಳುರಿವ ಕಿಚ್ಚಿನ ಪಕ್ಕದೆ ನಿಂದಿರ್ದನನ್ನೆಗಮೆಚ್ಚತ್ತು ಕಂಡಱುವರುಂ ಕಳ್ಳರುಂ ಬೇತಾಳನೆಂದಂಜಿ ಪ್ರಾಣಭಯದಿಂದೋಡಿ ಕೆಟ್ಟರಾತನುಮವರೋಡುವುದಂ ಕಂಡು [10]ಪಿಶಿತಮಂ ಕೊಂಡು[10] ಬಱಿಯುಂ ತಗುಳೆ [11]ಎನಿತೆನಿತಾ[11]ತನಂ ಕಾಣ್ಬರನಿತನಿತನೆ ಬೇತಾಳಂ ಬಱಿಯುಂ ತಗುಳ್ದನೆಂದೋಡೆ ಪ್ರತಿಮುಖಮುಂ ಝು[12]ಣಂಬಮುಮಂ ಕಳೆದೀಡಾಡಿ ತನ್ನ ಪೆಸರಂ ಪೇೞ್ದವರಂ ಮಾಣಿಸಿಯೊಡಗೂಡಿ ತನ್ನ ಮಾಡಿದ ಪಿಶಿತ ಮನವರ್ಗ್ಗೆಲ್ಲಂ [13]ಪಚ್ಚಿ[13] ಗೊಟ್ಟುಮನಿಬರುಮೊಂದಾಗಿ ಪೋಪನ್ನೆಗಂ

ಇತ್ತ ಗಂಭೀರೆಯೆಂಬ [14]ಬಿ[ದ್ದಿ][14] ಬೈಗಿರುಳಿನೊಂದು ಜಾವಮುಂಟೆನೆ ಎೞ್ದು ಪೊೞಲಂ ಪೊಱಮಟ್ಟು ತನ್ನೂರ್ಗೆವೋಪಳ್ ನೆರಂ [15]ಬೆಱದಂ[15]ಜಿ ವಂದಾಲದ ಮರನನೇಱಿರ್ದಳನ್ನೆಗಮಾ ಕಳ್ಳರಾಕೆಯೇಱಿರ್ದ್ದ ಮರಕ್ಕೆ ವಂದವರೊಳೊರ್ವಂ ಬಟ್ಟೆಯೊಳ್ ಬರ್ಪ ಜನಮಂ ನೋಡಲ್ವೇಡಿ ಮರದ [16]ತುತ್ತತುದಿಯನೇಱಿ ನೋಟ್ಪನ್ನೆಗಂ[16] ಮರದ ಮೇಗಿರ್ದ್ದ ವೃದ್ಧಸ್ತ್ರೀಯುಂ ಕಂಡು ನೀನಾರ್ಗ್ಗೆಂದಾತಂ ಬೆಸಗೊಂಡೊಡಾಕೆಯಾನೀ ಮರದೊಳಿರ್ಪೆ ಯಕ್ಷದೇವತೆಯೆನೆಂದೊಡಾತನೆನಗೆ ಪೆಂಡತಿಯಪ್ಪಾ ಎಂದು ಬೆಸಗೊಂಡೊಡೊಂದು ಪಾಂಗಿನೊಳಪ್ಪೆನೀ ಪಿಶಿತದ ಖಂಡಮಂ ನಾಲಗೆಯಿಂ ಪಿಡಿದೆನ್ನ ಬಾಯೊಳಿಡುವೊಡೆ ನಿನಗಾಂ ಪೆಂಡತಿಯಪ್ಪೆ

---

1. ನಿದ್ರೆಗೆಯ್ವ (ಫಚಭಜ). 2. ಳ್ದು (ಕಖಗ). 3. + ಕಳ್ಳ (ಫಚಭಜ). 4. ತನುಂಪೆಱನೊರ್ವಕಳ್ಳನಂ ಪುಗಿಸೆಯಿಂತಿಂತನಿಬರುಂ ಮೂಗರಿವಟ್ಟು (ಚ). 5. + ವಿಮಾನ (ಚ). 6. ಪಟ್ಟಿರ್ದವೊರ್ವಕಳ್ಳನಾ (ಚ). ಪಟ್ಟಿರ್ದರೊರ್ವನಾ (ಜ). 7. ಳ್ದು (ಕಖಗ). 8. (ಕ) (ಖಗ) ಗಳಲ್ಲಿ ತ್ರುಟಿತ. 9. ಣಂಕೃತ (ಕಗ), (ಫ)ದಲ್ಲಿ ಇಲ್ಲ. * (ಫ)ದಲ್ಲಿ ಇಲ್ಲ. 10. (ಫಜ) ಗಳಲ್ಲಿಲ್ಲ. 11. ಯೆನಿತೆನಿತಾ (ಜ). 12. ಳಂ. (ಕಖಗ). 13. ಬಿರ್ಚಿ (ಗ). ಪಚ್ಚುರ್ (ಫ), ಪಚ್ಚು (ಜ). 14. ಳ್ದ (ಕಖಗಫಭ), ದ್ದಿ (ಚಜ). 15. ಬತ (ಕಗ). 16. ತುದಿಯನೇಱಿ (ಫಚಭಜ).

ನೆಂದು ನುಡಿದೊಡಾತನುಂ ನಾಲಗೆಯಿಂದಂ ಪಿರಿತದ ಖಂಡಮಂ [1]ಬಾಯೊಳಿಡೆ[1] ನಾಲಗೆಯುಂ ಪಱಿಯೆ ಕಚ್ಚಿದೊಡವಂ ಪ್ರಂಙ್ಮಲಿಟ್ಟಂಜಿ *ಬೇಱು ಅನಿಬರುಂ* ಭಂಯದಿಂದೋಡೆ ವೃದ್ಧಸ್ತ್ರೀಯೆಂದಳ್ ಎನಗೆ ನಿಮ್ಮ ಕಳ್ವಲ್ಲಿಯೆಲ್ಲಮೆಂಟನೆಯ ಭಾಗಮಂ ತಂದೀ [2]ಪೊಟಿಲೊ[2]ಳಿಟ್ಟು ಪೋಪೊಡೆ [3]ಬಾೞ್ವಿ[3]ರಲ್ಲದಾಗಳ್ ಸತ್ತಿರ್ ನಿಮ್ಮೆಲ್ಲರುಮಂ ತಿಂದಪ್ಪೆನೆಂದೊಡಂಜಿ ಕಳ್ಳರಂತೆಗೆಯ್ವೆಮೆಂದೊಡಂಬಟ್ಟು ಕಳ್ವಲ್ಲಿಯೆಲ್ಲಮೆಂಟನೆಯ ಭಾಗಮಂ ಮರದ [4]ಪೊಟಿಲೊ[4]ಳಿಟ್ಟು ದಿವಸಕ್ಕಂ ಪೋಪರಾ ವೃದ್ಧಸ್ತ್ರೀಯುಂ ತನ್ನೂರಿಂದಂ ಬಂದು ಕಸವರಮಂ ಕೊಂಡು ಪೋಕುಮಿಂತಾ ಎಣ್ಬರ್ ಕಳ್ಳರನಾ ವೃದ್ಧಸ್ತ್ರೀ ಪಿಡಿದಾಳ್ದಳೆಂಬ ಕಥೆಗ[5]ಳುಮಂ[5] ಇಂತಿವು ಮೊದಲಾಗೊಡೆಯ ಚಿತ್ರ ಕಥೆಗಳ ಪಟದೊಳ್ ಬರೆದು ಜನಂಗಳ್ಗೆ ತೋಱಿ ಪೇೞ್ದು ಬತ್ತಮಂ [6]ಕಳ್ದೊ[6]ನೀತನೊರ್ವಂ ವೈನಯಿಕನೆಂಬೊಂ ಕಳ್ಳಂ ಮತ್ತೊ[7]ರ್ವಂ ವೈನಯಿಕನೆಂಬೊಂಗಾಸಕ್ತರಾಗಿ[7] ಕೇಳ್ವ ಜನಂಗಳ ಧ್ಯಾನಮನಱುವತ್ತು ಬಳ್ಳಮನಿ[8] [ಪ್ಪ][8] ತ್ತು ಬಳ್ಳಮೆಂದಳೆ[9]ಗು[9]ಮಿಾತನೊರ್ವ [10]ವೈಕ[10]ನೆಂಬೊಂ ಕಳ್ಳಂ ಮತ್ತೊರ್ವಂ [11]ವ್ಯೋಮಕ[11]ನೆಂಬೊಂ ವೈನೈಕನ [12]ಕಳ್ದ[12] ಧಾನ್ಯಮನೆಲ್ಲಮನಲ್ಲಿಯೆ ನೆಲಮನೆಯೊಳಗಿರ್ದು ಕಿಱಿ[13]ದಾನುಮೊಂದು ಛಿದ್ರದ್ವಾರದೊ[13]ಳಗಣ್ಗೆ ಬತ್ತಮಂ ಬರೆ[14]ಕೊಳ್ವಂ[14] ಪೊಱಗಣಿಳೆದ ಬತ್ತಮಂ ನೋಟಕ್ಕೆ ಕಿಱಿದಪ್ಪಂತಿರೆ ಇಂತು ಮೂವರುಮೊಂದಾಗಿ ಬತ್ತಮಂ ಮಾಱುವರಾ ಬತ್ತಂಗಳಂ [15]ಕಳ್ದುಕೊಳ್ವ[15]ರೀ [16]ಪ್ರಕಾರದಿಂ[16] ಮೂವರ್ಗಂ ಕಾಲಂ ಸಲೆ ಮತ್ತೊಂದು ದಿವಸಂ ಕೌಶಳ[17]ಪುಂಬೂರ [18]ಗಾಮುಂಡಂ[18] ಜಗದ್ಗೃಹನೆಂಬೊಂ ತನ್ನ ಬತ್ತಮಂ ಚಂಪಾನಗರಕ್ಕೆ ಮಾಱಲೆಂದು ಕೊಂಡು ಪೋಗಿ ಬತ್ತಮನಳೆವಲ್ಲಿ[19]ಯಾ ಮೂ[19]ವರ ದೋಷಂಗಳುಂ ಪ್ರಕಟಮಾಗರಸುವರೆಗಮಾದೊಡೆ ಅರಸನಿವರ ಕಳವಿನ ಪುಸಿಯ ದೋಷಂ ಕಾರಣಮಾಗಿ ಮೂವರುಮಂ [20]ಕೊಲಲ್ ಪೇೞ್ದೊಡೆ[20] ಕೊಲಲುಯ್ದಪ್ಪರ್ ಮಗಳೆ ಎಂದು ಪೇೞ್ದೊಡೆ ನಾಗಶ್ರೀಯುಮಿಾ ತೆಱದಪ್ಪ ದುಃಖಕ್ಕಂಜಿ ಪುಸಿಯುಂ ಕಳವುಮಂ ನಿವೃತ್ತಿಗೆಯ್ದನಮ್ಮಾ ಎಂದೊಡಂ ತಪ್ಪೊಡಾ ಎರಡುಂ ಬ್ರತಂಗಳ್ ನಿನಗಿರ್ಕೆ [21]ಮಗಳೆ ಎಂದೊಡಂತೆಗೆಯ್ವೆನೆ[21] ಮತ್ತಂ ಕಿಱಿದಂತರಮಂ ಪೋಪನ್ನೆಗಂ ಗಂಡನುಮಂ ಪೆಂಡತಿಯನೊಡಗೂಡಿ ಇರ್ವರುಮಂ ಪೆಡಂಗಯ್ಯುಡಿಯೆ ಕಟ್ಟಿಕೊಂಡು ಪೋ[22]ಪರಂ ಕಂಡೇ[22] ದೋಷಂಗೆಯ್ದರವರಂ

---

1. ನಾಲಗೆಯೊಳಿಡೆ (ಘಚಭಜ). * ಜಿದೊಡೆಳ್ವರುಂ (ಘಚಭಜ). 2. ಪೊಳೊ (ಕಗ). 3. ಬರ್ದ್ದ (ಘಚಭಜ). 4. ಪೊಳೊ (ಕಗ). 5. ಳ್ಳಂ (ಗ). 6. ಕಳಿವೊ (ಕಖಗ). ಕೊಳ್ದೊ (ಘ). 7. ರ್ವಂ ವೈನೈಕ್ಯನೆಂಬೊವಾನೈಕನಂತೆಯಾಸಕ್ತರಾಗಿ (ಕಗ). ರ್ವಂ ವೈನೈಕನೆಂಬೊವಾ ವೈನೈಕನಂತೆಯಾಸಕ್ತರಾಗಿ (ಖ), ರ್ವಕಳ್ಳಂ ವೈನೈಕನೆಂಬ ಕಳ್ಳಂಗಾಶಕ್ತನಾಗಿ (ಚ). ರ್ವಂ ವೈನೈಕನೆಂಬ ಕಳ್ಳಂಗಾಶಕ್ತರಾಗಿ (ಘಭಜ), 8. ಪ್ಪ (ಸ). 9. ದು (ಕಖಘ), 10. ವೈನೈಕ (ಕಖಗಘಚ). 11. ದಾರುಕ (ಘಚಭಜ). 12. ಳಿದ (ಘ). ಪಡೆದ (ಜ). 13. ದಾನುಮೊಳಗಗೆ-(ಣ್ಗೆ), (ಘಚಜ), ದಾನುಮನೊ (ಜ). 14. ಕಳ್ವೊಂ (ಘಜ). 15. ಕಳ್ವ (ಘಚಜ). 16. ಸ್ವರೂಪದಿಂ (ಚಜ). 17. + ಗ್ರಾಮ (ಜ). 18. ಗೌಡಂ (ಘ). ಗಉಂಡಂ (ಚ), ಗವುಂಡಂ (ಜ). 19. ಯ (ಘಚಭಜ). 20. (ಕಖಗ)ಗಳಲ್ಲಿಲ್ಲ. 21. ಎಂದು (ಘಜ). 22. ಪುದಂ ಇದಾವ (ಕಖಗ).

ಬೆಸಗೊಳ್ಳೆಂದು ತಂದೆಗೆ ಪೇೞ್ದೊಡಾತನುಮದೆಲ್ಲಮಂ ಬೆಸಗೊಂಡು ಮಗಳ್ಗಿಂತೆಂದು ಪೇೞ್ಗುಂ

ಚಂಪಾನಗರದ ಸಾರೆ ಶ್ವೇತಪುರಮೆಂಬ ಪೊೞಲಲ್ಲಿ ಮತ್ಸ್ಯನೆಂಬಪರದನಾತನ ಪೆಂಡತಿ [1]ಜೈಸೆ[1]ಯೆಂಬೊಳ್ ಇರ್ವರ್ಗ್ಗಂ ಮಕ್ಕಳ್ ನಂದ[2]ನುಂ ಬೋದ[2]ನೆಂಬ ವರ್ಗಳ್ ಮತ್ತಮಾ ಪೊೞಲೊಳ್ ಸೂರದತ್ತನೆಂಬ ಪರದಂಗಂ ವಸುದತ್ತೆಯೆಂಬ ಪರದಿಗಂ ಮಗಳ್ [3]ಮೋದಾ[3]ಳಿಯೆಂಬೊಳಾಕೆಯುಂ [4]ಬಾಱೞೊಳಿರ್ದಂತೆ[4] ಸೋದರ ಮಾವನ ಮಗಂ ನಂ[5]ದನೆಂಬೊಂ[5]ಗೆ ಕುಡುವಮೆಂದು ನುಡಿದರಿಂತು ಕಾಲಂ ಸಲೆ ನಂದನೊಂದು ದಿವಸಂ ದ್ರವ್ಯಂಬಡೆವುದು ಕಾರಣಮಾಗಿ ಸುವರ್ಣ ದ್ವೀಪಕ್ಕೆ ಪೋಗುತ್ತಂ ಮಾಮಂ[6]ಗೆಂ[6]ದಂ ಪನ್ನೆರಡು ವರುಷಕ್ಕಂ ಬಾರದಾಗಳ್ ಎಮ್ಮ ಕೂಸಿಯ [7]ತಮ್ಮಂ ಬೋದಂಗೆ[7] ಕೂಸಂ ಕುಡಿಮೆಂದು ಪೇೞ್ದು ಪೋದಂ ಇಂತು ಕಾಲಂ ಸಲೆ ಪನ್ನೆರಡುವರುಷಂ ನೆಱೆದಂದು ನಂದಂ ಬಂದನಿಲ್ಲೆಂದು ಕೂಸಂ [8]ಬೋದಂ[8]ಗೆ ಕೈನೀರೆಱೆದು ಕುಡುವ ಪ್ರಸ್ತಾವಕ್ಕಾಗಳ್ ನಂದಂ ಬಂದೊಡಾ ತಂಗೆ [9]ಕುಡಲ್[9] ತಗುಳ್ದೊಡೆ ತಮ್ಮನ ಪೆಂಡತಿಯನೆಮಗೆ [10]ಕೊಳ[10]ಲಕ್ಕುಮೆ ಎಂದು ಕೊಂಡನಿಲ್ಲ [11]ಬೋದನು[11]ಮಣ್ಣನ ಪೆಂಡತಿಯನೆಂತು ಕೊಳ್ವೆನೆಂದಾತನುಂ ಕೊಂಡನಿಲ್ಲಿಂತಿರ್ವರುಂ ಬಿಸುಟ್ಟೊಡೆ [12]ಮೋ[12]ದಾಳಿ ತನ್ನ ತವರ್ಮನೆಯೊಳಿರ್ದಳ್ ಮತ್ತಮಾ ಪೊೞಲೊಳ್ ನಾಗದತ್ತನೆಂಬೊಂ ಪರದನಾತನ ಭಾರ್ಯೆ ಗಂಗೆಯೆಂಬೊಳಾ ಇರ್ವರ್ಗಂ ಮಗಂ ನಾಗಸೂರನೆಂಬೊನಾ[13]ತಂಗೆಣ್ಬರ್ ಪೆಂಡಿರ್[13] ತನ್ನ [14]ಪೆಂಡಿರೊಳ್[14] ಸಂತೋಸಂಬಡೆಯದೆ ಮೋದಾಳಿಯೊಳ್ ಮಱುವಾಟುತ್ತಿರ್ಕ್ಕುಂ ಇಂತು ಕಾಲಂ ಸಲೆ ಮತ್ತೊಂದು ದಿವಸಂ ನಾಗಸೂರಂ [15]ಮೋ[15]ದಾಳಿಯನೊಡಗೊಂಡು ಚಂಪಾನಗರಕ್ಕೆ ವಂದೊಡೆ ತಳಾಱಂ ಕಂಡಾಯಿರ್ವರುಮಂ ಪಿಡಿದು ಕೊಂಡುಪೋಗಿ ಅರಸಂಗೆ ತೋಱಿದೊಡರಸನುಮಿರ್ವರುಮನೆರಡು ಕಾಯ್ದು ಕಬ್ಬೊನ್ನ ಪ್ರತಿಮೆಗಳನಪ್ಪವೇೞ್ಮೆಂದು ತಳಾಱಂಗೆ ಬೆಸವೇೞ್ದೊಡವರಿರ್ವರುಮಂ ಕೊಲಲ್ಕೊಂಡು ಪೋಪರ್ ಮಗಳೆ ಎಂದು ಪೇೞ್ದೊಡಾನುಮಿಂತಪ್ಪ ಭಯಕ್ಕಂಜಿ ಪರಪುರುಷ ಪ್ರಸಂಗಮಂ ತೊಱೆದೆನೆಂದೊಡಂತಪ್ಪೊಡಾ ವ್ರತಮುಂ ನಿನಗಿರ್ಕ್ಕೆ ಮಗಳೆ ಎಂದೊಡುೞಿದ ವ್ರತಂಗಳಂ ಬಿಸುಟ್ಟುದೆಂದು ಪೇೞ್ದು ಕೆಱೆದಂತರಮಿರ್ವರ್ ಪೋಪರನ್ನೆಗಂ ಮತ್ತೊರ್ವನಂ ಕೊಲಲ್ಕೊಂಡು ಪೋಪ ಪುರುಷನಂ ಕಂಡೀತನೇದೋಷಂಗೆಯ್ದನಾಗಿ [16]ಕೊಲಲ್ ಕೊಂಡುಪೋದಪ್ಪರೆಂದು[16] ಬೆಸಗೊ[17]ಳ್ಳಿಯಮ್ಮಾ ಎಂದು[17] ತಂದೆಗೆ ಪೇೞ್ದೊಡಾತನುಮದೆಲ್ಲಮಂ ಬೆಸಗೊಂಡು ಮಗಳ್ಗಿಂತೆಂದು ಪೇೞ್ಗುಂ

1. ಜೈನೆ (ಘಜ). ಜೈನಿ (ಘ). ಜೈ (ಜ). 2. ನೆಂಬ ಬೋದ (ಕಗ), ನು ಬೋಧ (ಖ). ನುಂ ಬೊದ್ದ (ಘಚಛಜ). 3. ಮದಾ (ಗಘಚಛಜ). 4. (ಘಚಜಛ)ಗಳಲ್ಲಿಲ್ಲ. 5. ದನನೆಂಬೊಂ (ಖಗ), ದಂ (ಘಚಛಜ). 6. ನನೆಂ (ಘಚಛಜ). 7. ತಮ್ಮಂಗೆ ಬೊದ್ದಂಗೆ (ಘಚಛಜ). 9. ಬೊದ್ದಂ (ಘಚಛಜ). 9. + ಕೂಸಂ (ಜ). 10. ಕುಡ (ಘಚಛಜ). 11. ಬೊದ್ದನು (ಘಚಛಜ). 12. ಮು (ಕಗ). 13. (ಘಚಛಜ)ಗಳಲ್ಲಿಲ್ಲ. 14. ಪೆಂಡತಿಯೊಳ್ (ಚಜ). 15. ಮು (ಕಗ). 16. ಕೊಲಲುಯ್ವಪರ್ (ಘಜ). 17. ಳ್ಳಿಮೆಂದು (ಘಚಛಜ)

ಈ ಕೊಲೆಪಡುವಾತನರಸರ ಗೋಮಂಡಳಮಂ ಕಾವೊಂ ವೀರಪೂರ್ಣನೆಂಬೊ [1]ನರಸನೊಂದು ದಿವಸಮಾತಂಗೊಸೆದು[1] ತನ್ನ ಗೋಮಂಡಳದೊಳಗೊಳ್ಳಿದುವಪ್ಪ ಪತ್ತು ಪಯನುಮಂ ಮೂಸಾಸಿರಗಂಡುಗ ಬತ್ತಮುಮಂ [2]ಪ್ರಮಾಣಂ ಮಾಡಿ ಕೊಟ್ಟೊಡಾ ಪಸರದೊಳರಸಂ ದಾಯಂಗೊಟ್ಟನೆಂದು ಸಾಮಂತರ ನಿಯೋಗಿಗಳ ಅರಸಿಯರ ಗೋವುಗಳೊಳ್ಳಿದುವಪ್ಪ ಎಪ್ಪ್ರಯುಂ ಪಸುಗಳುಮನಾಯ್ದು ಕೊಂಡರಸರ ಮಂಡಲದೊಳಗೆ ಪುಗಿಸಿಯುಣುತ್ತಮಿರ್ಕುಂ ಮತ್ತಂ ಲೋಭಾಭಿಭೂತಂ ಪೊೞಲ ಪಸುಗಳನರಸರ ಗೋಮಂಡಳಮಂ[2] ಪೊಕ್ಕವೆಲ್ಲಮಂ ಬಂಡಾರಂ ಪೊಕ್ಕವೆಂದುಂ ಪೊಱಮಡವೆಂದುಂ ಜಡಿದು ಬಗ್ಗಿಸಿಕೊಂಡುಣೆ ಮತ್ತೊಂದು ದಿವಸಂ ಮಹಾದೇವಿಯ ಗೋಮಂಡಳದೊಳಗಗ್ಗಳಮಪ್ಪ ಕಾಮಧೇನುವನಾ [3]ಯ್ದೊಂದು[3] ದಿವಸಂ ವೀರಪೂರ್ಣಂ ಮೂದಲಿಸೆ ಮಹಾದೇವಿಯರಸಂಗೆನ್ನ ಕಾಮಧೇನುವಂ ವೀರಪೂರ್ಣಂ ಕೊಂಡೊಯ್ದನೆಂದೊಡರಸಂ ಸಾಮಂತರುಮರಸಿಯರುಂ ನಿಯೋಗಿಗಳುಂ ಪೊೞಲ ಜನಂಗಳುಮೆಲ್ಲಮೆಮ್ಮಮ್ಮ ಪಶುಗಳೆಲ್ಲಮಂ ಕೊಂಡನೆಂದನಿಬರುಂ ಪೇೞೆಯರಸಂ ಮುಳಿದವನೆನ್ನ ಕೊಟ್ಟುದಱೊಳ್ ಸಂತೋಷಂ ಬಟ್ಟನಿಲ್ಲ ಲೋಗರ ಪಶುಗಳಂ ಕೊಳಲ್ತಗುಳ್ದೊನ್ ಮಹಾಲೋಭಾಭಿಭೂತನ ಸಂತುಷ್ಟಚಿತ್ತನಿವನಂ ಕೊಲ್ಲಿಮೆಂದು ತಳಾಱಂಗೆ ಬೆಸಪೇೞ್ದೊಡೆ ಸೂಲದೊಳಿಕ್ಕಲೊಯ್ದಪ್ಪರ್ ಮಗಳೆ ಎಂದು ಪೇೞ್ದೊಡೆ ನಾಗಶ್ರೀಯೆಂದಳ್ ಕೊಲ್ಲದ ಪುಸಿಯದ [4]ಕಳ್ಳದ[4] [5]ಸ್ವದಾರಸಂತೋಷಂ[5] ಪರಿಮಿತ ಪರಿಗ್ರಹಮೆಂತಯ್ದುಮಣುವ್ರತಂಗಳಂ ಕೊಂಡೆನೀ ಬ್ರತಂಗಳಂ ರಿಸಿಯರ್ಗೊಪ್ಪಿಸಿದೊಡಾನುಮಿವಾಯ[6]ಯ್ದುಂ ಪಾಪಂಗಳೊ[6]ಳಪ್ಪ ಸೇದೆಯುಂ ಕಟ್ಟುಪಡುವುದುಂ ಕೊಲೆಯುಮನಿವರಂತೆಯ್ದಲ್ ವೇೞ್ಕುಮೆಂದೊಡೆ ಸೋಮಶರ್ಮನೆಂದನೀಯಯ್ದುಮ*ಣುಬ್ರತಮಂ ಕೈಕೊಂಡು ದೃಢಬ್ರತೆಯಾಗು ಸುವ್ರತೆಯಾಗು ಮಗಳೆ ಆವರ್ಗೊಪ್ಪಿಸಲ್ವೇಡೆಂ[7]ತುಮಾ ನಿರ್ಲಜ್ಜಂ[7] ಬತ್ತಲಿಗನಪ್ಪ ಸವಣನಲ್ಲಿಗೆವೋಗಿ ಕಂಡು [8]ನುಡಿದು ಕಾಡಿ ಬರ್ಪಂ ಬಾ ಮಗಳೆ ಎಂದು ಮಗಳನೊಡಗೊಂಡು ರಿಸಿಯರಲ್ಲಿಗೆ ಪೋಗಿ ಕಂಡು ಗಂಟಱೊಳಿರ್ದಿಂತೆಂದಂ ಎಲೆ [9]ತಪಸ್ವಿ[9] ಎನ್ನ ಮಗಳ್ಗೆ ನಿಮ್ಮ ಬ್ರತಂಗಳನೇಕೆ ಕೊಟ್ಟಿರೆನೆ ಸೂರ್ಯಮಿತ್ರಭಟಾರರೆಂದರ್ ನಿಮ್ಮ ಮಗಳ್ಗೇಕಕ್ಕುಮೆಮ್ಮ ಮಗಳಿಂಗೆಮ್ಮ ಬ್ರತಂಗಳನಾವುಂ ಕೊಟ್ಟೊಡೆ ನಿನ[10]ಗೆ[10] ಬೇನೆ ಮೂಡಿತ್ತೆ ಎಂದು ನುಡಿದು ಇತ್ತ ಬಾ ನಾಗಶ್ರೀ ಎಂದು ಕರೆದೊಡಾಕೆಯುಂ ಪೋಗಿ ಇರ್ವರ್ ಭಟ್ಟಾರಕರ ಕಾಲ್ಗಳಂ ಪಿಡಿದೆಱಗಿ ಪೊಡೆವಟ್ಟವರ ಕೆಲದೊಳಿರ್ದೊಡೆ ಸೋಮಶರ್ಮಭಟ್ಟಂ ಬೆಱಗಾ[11]ಗಿ ಕೀಲಿಸಿ[11]ದಂತಿರ್ದೊನಂ ಭಟ್ಟಾರರೆಂದರ್ ಈ ಎಡೆಯಿಂದಂ [12]ಬೇಗಂ ಪೋಗು[12] ದುಷ್ಟ ಬ್ರಾಹ್ಮಣಾ ಅರಸರ್ಗೆ

1. ನೊಂದು ದಿವಸಮಾತಂಗರಸನೊಸೆದು (ಭಜ). 2. ಕೊಟ್ಟು ಕಾರುಣ್ಯಂಗೆಯ್ದೊಡೆ ಸೋರ್ಕಿ ಪೊೞಲೊಳಗಣ ಪಸುಗಳನರಸರ ಗೋಮಂಡಳದೊಳು (ಫಚಭಜ). 3. ಯ್ದುಕೊಂಡಿರ್ದೊಂದು (ಫಚಭಜ). 4. ಕಳದ (ಫಛ). 5. ಪರವಧುವಿಂಗಳಿಪದ (ಛ). 6. ಯ್ದುಂದೋಷಂಗಳೊ (ಫ), ಯ್ದುಂದದೊಳ (ಚಫ). *–* (ಖ)ದಲ್ಲಿ ನಷ್ಟ. 7. ತುನಿಚ್ಛಂ (ಕಖಗ). 8. + ಜಡಿದು (ಫಚಛಜ). 9. ದಿಗಂಬರಾ (ಛ). 10. ಗೇಂ (ಫಜ). 11. ಗಿರೆ ಇರಿಸಿ (ಕಗ). 12. (ಕಗ)ಗಳಲ್ಲಿ ತ್ರುಟಿತ.

ಪೇಟ್ವು [1]ಸೀನಟ್ಟು[1]ಡದನ್ನೆಗಮೆಂದೊಡಲ್ಲಿಂದಮೆಟ್ಟು ಪೋಗಿ ಸೋಮಶರ್ಮ ಭಟ್ಟಂ [2]ಪಿರಿದೊಂದು ತೊವಲಂ ಪಿಡಿದಬ್ರಹ್ಮಣ್ಯಂ ಭೋ ಅಬ್ರಹ್ಮಣ್ಯಂ ಭೋ ಎಂದಟುತ್ತ[2] ಮುಂಗಡಿಯ ಜನಂಗಳ್ಗೆ ಪುಯ್ಯಲಿಡುತುಮರಮನೆಗೆ ಪೋಗಿ ಚಂದ್ರವಾಹನ ನೆಂಬರಸನಂ ಕಂಡಿಂತೆಂದು ಬಿನ್ನಪಂಗೆಯ್ಗುಂ ಮಹಾರಾಜಾ ಆಂ ಬತ್ತಲೆ ಸವಣ ರಿಂದಂ ಕೋಳ್ಪಟ್ಟೆನೆನ್ನ ಮಗಳ್ ನಾಗಶ್ರೀಯುಂ ತನ್ನ ಮಗಳೆಂದು ಕೈಕೊಂಡಿರ್ದರ್ ಮತ್ತಮಾ ಕೂಸಂ ಕೊಂಡೋಡದನ್ನೆಗಂ ಪೋಪಂ ಬನ್ನಿಮೆಂದರಸನನೊಡಗೊಂಡು ಪೋಗೆ ಸಾಮಂತ ಮಹಾಸಾಮಂತ ಶ್ರೇಷ್ಠಿ ಸೇನಾಪತಿ ತಳಾಱ ದಂಡನಾಯಕ ಪ್ರಭೃತಿ ಚಂಪಾನಗರದ [3]ಸಬಾಳ[3]ವೃದ್ಧ ಜನಮೆಲ್ಲರುಮರಸನೊಡನೆ ನಾಗರ [4]ತಾ[4]ಣಕ್ಕೆ ಪೋಗಿ ಸೂರ್ಯಮಿತ್ರಾಚಾರ್ಯರಗ್ನಿ†ಭೂತಿರಿಸಿಯುರನರಸಂ ಕಂಡವರ ಪಕ್ಕದೆ ಕುಳ್ಳಿರ್ದಿರ್ದೇನ್ ಸಂಬಂಧಂ ಪೇಟಿಮೆಂದಂ [5]ಮುನೀಂದ್ರನಂ[5] ಬೆಸಗೊಂಡೊಡೆ ಸೂರ್ಯಮಿತ್ರ ಭಟ್ಟಾರಕರೀ ಕೂ[6]ಸೆಂಬುದು ನ[6]ಮ್ಮ ಮಗಳೆಂದೊಡೆ ಸೋಮಶರ್ಮ ಭಟ್ಟನ್ ನಾಗಶ್ರೀ ಎನ್ನ ಮಗಳ್ ನಾಗರಿತ್ತರೆಂದೊಡೆ ಭಟ್ಟಾರರಿಂತೆಂದರ್ ನಿನ್ನ ಮಗಳಪ್ಪೊಡೆ ನಾಲ್ಕುವೇದಮುಮಾಱಂಗಮುಂ ಪದಿನೆಂಟು ಧರ್ಮಶಾಸ್ತ್ರಂಗಳುಂ ಮೀಮಾಂಸಾ ನ್ಯಾಯಶಾಸ್ತ್ರಂ ವ್ಯಾಕರಣಂ ಪ್ರಮಾಣಂ ಕಾವ್ಯಂ ನಾಟಕಂ ಛಂದಮಲಂಕಾರಂ [7]ಅಭಿಧಾನಂ[7] ಸಾಮುದ್ರಿಕಂ ಶಾಳಿಹೋತ್ರಂ ಪಾಳಕಾಪ್ಯಂ ಹಾನಿತಂ ಚರಕಮಶ್ವಿನೀಮತಂ [8]ಬಾಹಟಂ[8] ಶುಶ್ರುತಮುಮೆಂದಿವು ಮೊದಲಾದ ನರವೈದ್ಯಮುಮಂ ಚಾಣಕ್ಯಂ ಜ್ಯೋತಿಷಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮನೇನೀ ಕೂಸನೋದಿಸಿದಾ ಎಂದೊಡಾತನಿಲ್ಲೋದಿಸಿದೆನೆಂದಂ ಮತ್ತಿನಿತುಮನಾ ಕೂಸನಾವೋದಿಸಿದೆಮದಱಿಂದೆಮ್ಮ ಕೂಸೆಂದೊಡೆ ಅರಸನೋದಿಸಿ ತೋಱಿಮೆಂದೊಡೆ ವಾಯುಭೂತಿ [9]ಎಮ್ಮೋ[9]ದಿಸಿದ ವೇದಮನೀ ಪೊಟಿಲ ನೆರೆದ ನೆರವಿಯ ನಡುವೆ ಓದಿ ತೋಱು ಮಗಳೆ ಎಂದೊಡಾ ನಾಗಶ್ರೀಯುಮಂತೆ ಗೆಯ್ವೆನೆಂದು ಪ್ರಣವಮನುಚ್ಚರಿಸಿ ಸ್ವರ ವರ್ಣ ಭೇದದಿಂದಂ ಪ್ರಥಮಂ ಚತುಃಷಷ್ಟಿ [10]ಸಂಹಿತೆ[10]ಗಳಂ [11]ಪದ[11] ಕ್ರಮಭೇದದಿಂ ಬ್ರಾಹ್ಮಣ [12]ಆರಣ[12] ಸೂತ್ರಂ ಮೊದಲಾ ಗೊಡೆಯವನೋದಿ [13]ಋಗ್ಯಜುಸ್ಸಾಮಾಥರ್ವಣವೇದಂಗಳಂ[13] ಸ್ವರವರ್ಣಭೇದದಿಂದಂ ಮಂತ್ರ ಸಹಿತ ಪಾಳಿಪದ ಕ್ರಮ ಜಟೆ ಭೇದದಿಂದಂ ಸತಸೂತ್ರಂ ಮೊದಲಾ [14]ಗೆ[14]ಲ್ಲಮಂ ಯಥಾಕ್ರಮದಿಂದುಚ್ಚರಿಸಿ ಪದಿನೆಂಟು ಪುರಾಣಂಗಳುಂ ಪದಿನೆಂಟು ಧರ್ಮ[15]ಸಂಹಿತೆಗಳುಂ[15] ಮೀಮಾಂಸಾ ನ್ಯಾಯಸೂತ್ರಮಿವೆಲ್ಲಮನೋದಿ ಕ್ರಿಯಾ ಕಾರಕ ಸಂಬಂಧದಿಂದೆಲ್ಲಮಂ ವಕ್ಕಾಣಿಸಿ ತೋಱಿದೊಡರಸಂ ಮೊದಲಾಗಿ ನೆರೆದ

---

1. ನಿನ್ನಂಕಾಡ (ಘಚಛಜ). 2. + + + + ಯೊಳಗಣಿಂದಮನ್ಯಾಯಂಭೋ ಅನ್ಯಾಯಂಭೋ ಅಬ್ರಾಹ್ಮಣ್ಯಂಭೋ ಅಬ್ರಾಹ್ಮಣ್ಯಂಭೋ ಎಂದಳುತ್ತ (ಕಗ). (ಖ)ದಲ್ಲಿ ನಷ್ಟ .. ದೂದಱುತ್ತಂ (ಘಚಛಜ) † (ಜ)ದಲ್ಲಿಲ್ಲ. 3. ಶತ (ಘಚಛ). 4. ತಾ (ಘಚಛ). 5. ಮುನಿಪತಿಯುಂ (ಘಚಛಜ). 6. ಸೆ (ಘಚಛಜ). 7. ನಿಘಂಟು (ಘಚಛಜ). 8. ವಾಭಟು (ಘಚಛಜ). 9. ಯನೋ (ಸಛಜ). 10. ಸಂಹಿತೆ (ಘಚಛಜ). 11. ಸ್ವರ (ಘಚಛಜ). 12. (ಘಚಛಜ)ಗಳಲ್ಲಿಲ್ಲ. 13. ಋಗ್ವೇದಮನೋದಿ ಮತ್ತಂ (ಘಚಛಜ). 14. ಗ ಯಜುರ್ವೇದಮ ನುಚ್ಚರಿಸಿ ಸಾಮವೇದಮುಮಥರ್ವಣವೇದಮುಮನೆ (ಘಚಛಜ). 15. ಶಾಸ್ತ್ರಂಗಳುಂ (ಘಚಛ).

ನೆರವಿಯುಂ ಪಂಡಿತರ್ಕಳೆಲ್ಲಂ ವಿಸ್ಮಯಂಬಟ್ಟು ಪೊಗೞ್ದು ಮತ್ತಮರಸನಿಂತೆಂದನೀ ಕೂಸಿನಿತು ಶಾಸ್ತ್ರಂಗಳನೆಂತು ಕಲ್ತಳೆಂತು ಭಟಾರಾ [1]ಇದನಱಿಯೆ[1] ಬೆಸಸಿಮೆನೆ ಸೂರ್ಯಮಿತ್ರ ಭಟ್ಟಾರರಿಂತೆಂದರ್ ಈಯಿರ್ದ್ದರಿಸಿಯರ ಸಹೋದರಂ ವಾಯುಭೂತಿ[2]ಯೆಂಬೊನಾನಾಮೋದಿ[2]ಸಿದೆಮೆಂಬೊಳಪ್ಪ ಮಾನಕಷಾಯಂ ಕಾರಣಮಾಗಿ ಸತ್ತು [3]ಬೆಳ್ಗ[3]ತ್ತೆಯುಂ ಪೇಪಂದಿಯುಂ ನಾಯುಂ ಪೊಲೆಯರ ಕೂಸುಮಾಗಿ[4] ರಿಸಿಯರ ಪ್ರಬೋಧನೆಯಿಂದಂ ಬ್ರತಂಗಳಂ ಕೈಕೊಂಡೀಗಳ್ ನಾಗಶ್ರೀಯಾದಳೆಂದು ಮುನ್ನಿನ ಭವದ ಸಂಬಂಧಮೆಲ್ಲಮಂ ಸವಿಸ್ತರಂ ಪೇೞ್ದು ಮತ್ತಮಿಂತೆಂದರ್ ಮಿಥ್ಯಾ[5]ತ್ವ[5] ಸಂಯಮ ಕಷಾಯಯೋಗಂ ಕಾರಣಮಾಗಿ [6]ಜೀವಂಗಳ್[6] ಸಂಸಾರ ಸಮುದ್ರದೊಳ್ ತೊೞಲ್ಗುಮೆಂದು ಸವಿಸ್ತರಂ ಧರ್ಮಮಂ ಪೇೞೆ ಕೇಳ್ದು ಚಂದ್ರವಾಹನನೆಂಬರಸಂಗೆ ವೈರಾಗ್ಯಂ ಪುಟ್ಟಿ ಮಗಂಗರಸು[7]ಗೊಟ್ಟು[7] ಪಲಂಬರಸುಮಕ್ಕಳ್ವೆರಸು ಭಟ್ಟಾರರ ಪಕ್ಕದೆ ತಪಂಬಟ್ಟಂ ಕೆಲರ್ ಶ್ರಾವಕ ವ್ರತಂಗಳಂ ಕೆಲಂಬರ್ ಸಮ್ಯಕ್ತ್ವಮಂ ಕೈಕೊಂಡರಾಗಳಾ ಸೋಮಶರ್ಮಭಟ್ಟಂ ರಿಸಿಯರೊಳಾದ ಮಾನಗರ್ವದ ದೋಷದಿಂದೆಯ್ದಿದ ದುಃಖಂಗಳಂ ಕೇಳ್ದಱಿದಾ ಭಟ್ಟಾರರ ಪಕ್ಕದೆ ತಪಂಬಟ್ಟಂ ನಾಗಶ್ರೀಯುಂ ನಾಗಶ್ರೀಯ ತಾಯ್ [8]ತ್ರಿವೇದಿಯುಂ[8] ಬ್ರಹ್ಮಿಲೆಯೆಂಬ ಕಂತಿಯರ ಪಕ್ಕದೆ ತಪಂಬಟ್ಟರ್ ಮತ್ತೆ ಸೂರ್ಯಮಿತ್ರಭಟ್ಟಾರರಗ್ನಿಭೂತಿಭಟ್ಟಾರರುಮಿರ್ವರುಂ ಪಲಕಾಲಂ ತಪಂಗೆಯ್ದು[9] ಅಗ್ರಮಂದಿರಮೆಂಬ ಪರ್ವತದೊಳ್ ಮೋಕ್ಷಮನೆಯ್ದಿದರ್ ಮತ್ತಂ ಸೋಮಶರ್ಮರಿಸಿಯುಮುಗ್ರೋಗ್ರ ತಪಶ್ಚರಣಂಗೆಯ್ದು ಸಂನ್ಯಸನ ವಿಧಿಯಿಂದಂ ಮುಡಿಪಿ ಅಚ್ಯುತಕಲ್ಪದೊಳಿರ್ಪತ್ತೆರಡು ಸಾಗರೋಪಮಾಯುಷ್ಯಮನೊಡೆಯೊಂ ಸಾಮಾನಿಕ ದೇವನಾಗಿ ಪುಟ್ಟಿದೊಂ ಮತ್ತೆ ನಾಗಶ್ರೀಯುಂ [10]ಭುಕ್ತ[10] ಪ್ರತ್ಯಾಖ್ಯಾನವಿಧಿಯಿಂ ರತ್ನತ್ರಯಮಂ ಸಾಧಿಸಿ [11]ಅಚ್ಯುತ[11]ಕಲ್ಪದೊಳ್ ದೇವನಾಗಿ ಪುಟ್ಟಿದೊಳ್ ಮತ್ತಾ ಸ್ವರ್ಗದೊಳ್ ತ್ರಿವೇದಿಯುಂ ನಾಗಶ್ರೀ ಎನಗೆ ಜನ್ಮಾಂತರದೊಳಪ್ಪೊಡಂ ಮಗನಕ್ಕೆಂದು [12]ನಿದಾನಂಗೆಯ್ದು[12] ಮುಡಿಪಿ ದೇವನಾದೊಳಿಂತಾಯಿರ್ವರುಂ ಇಪ್ಪತ್ತೆರಡು ಸಾಗರೋಪಮಾಯುಷ್ಯಮನೊಡೆಯೊರಾಗಿ ದೇವರಾಗಿ ಪುಟ್ಟಿದರ್

ಮತ್ತಂ ಸೋಮಶರ್ಮರಪ್ಪ ದೇವಂ ಪಲಕಾಲಂ ದೇವಲೋಕದ ಭೋಗಮನನುಭವಿಸಿ ಬಂದಿಲ್ಲಿ ಈ ಜಂಬೂದ್ವೀಪದ ದಕ್ಷಿಣ ಭರತದೊಳವಂತಿಯೆಂಬುದು ನಾಡುಜ್ಜೇನಿಯೆಂಬುದು ಪೊೞಲಲ್ಲಿ [13]ಇಂದ್ರದತ್ತನೆಂಬೊಂ [14]ಪರದನಾತನ[14] ಭಾರ್ಯೆ

---

1. ಇನ್ನೆಮಗಱಿಯೆ (ಘಚಛ), ಇದನೆಮಗಱಿಯೆ (ಜ). †-† (ಚ)ದಲ್ಲಿ ನಷ್ಟ.
2. ಯೆಂಬನುಂ ಅವನೋದಿ (ಕಗ), (ಖ)ದಲ್ಲಿ ನಷ್ಟ, ಬೊನನಾವೋದಿ (ಘಛ), (ಚ)ದಲ್ಲಿ ನಷ್ಟ.
3. ಪೆಣ್ಗ (ಘಛಜ), (ಚ)ದಲ್ಲಿ ನಷ್ಟ. 4. + ಯಿರೆ (ಕಗ). 5. (ಘಚಛ)ಗಳಲ್ಲಿಲ್ಲ.
6. (ಕಗ)ಗಳಲ್ಲಿಲ್ಲ. 7. ಪಟ್ಟಂಗಟ್ಟಿ (ಛ), ಪಟ್ಟಂಗೊಟ್ಟು (ಜ). 8. (ಘಚಛ)ಗಳಲ್ಲಿಲ್ಲ.
9. + ಸಮ್ಯಗ್ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ (ಘಛಜ). 10. ಭಕ್ತ (ಘ), ಭುಕ್ತಿ (ಜ).
11. ಆರಣ (ಕಗ). 12. (ಘಛಜ)ಗಳಲ್ಲಿಲ್ಲ. 13. + ವೃಷಭಾಂಗನೆಂಬರಸ ಜ್ಯೋತಿರ್ಮಾಲೆ ಸ್ತ್ರೀ (ಜ). 14. ಪ್ರಧಾನ ಶ್ರೇಷ್ಠಿಯಾತನ (ಘಚಜ).

ಗುಣವತಿಯೆಂಬೊಳಾಯಿರ್ವರ್ಗ್ಗಂ* ಸೂರದತ್ತನೆಂಬೊಂ ಮಗನಾಗಿ ಪುಟ್ಟಿದೋಂ ಮತ್ತಮಾ ಪೊಟಲೊಳ್ ಮೂವತ್ತೆರಡು ಕೋಟಿ ಕಸವರಮನೊಡೆಯೊಂ ಸುಭದ್ರನೆಂಬೊಂ ಸೆಟ್ಟಿಯಾತನ ಭಾರ್ಯೆ ಸರ್ವಯಶಿಯೆಂಬೊಳಾ ಯಿರ್ವರ್ಗ್ಗಂ ತ್ರಿವೇದಿಯುಪ್ಪ ದೇವಂ ಬಂದು ಯಶೋಭದ್ರೆಯೆಂಬೊಳ್ ಮಗಳಾಗಿ ಪುಟ್ಟಿದೊಳಾ ತ್ರಿವೇದಿ ತಪಶ್ಚರಣದ ಫಲದಿಂದಂ ದೇವತ್ವಮನೆಯ್ದಿಯುಂ[1] ನಿದಾನಂ ಕಾರಣಮಾಗಿ ಮಿಥ್ಯಾತ್ವಕ್ಕೆ ಸಂದು ಸ್ತ್ರೀತ್ವಮನೆಯ್ದಿಳಾ ಯಶೋಭದ್ರೆಯುಂ ಸೂರದತ್ತಂಗೆ ಕೊಟ್ಟೊರಾಯಿರ್ವರ್ಗ್ಗಂ ನಾಗಶ್ರೀಯುಪ್ಪ ದೇವಂ ಬಂದು ಸುಕುಮಾರಸ್ವಾಮಿಯೆಂಬೊಂ ಮಗನಾಗಿ ಪುಟ್ಟಿದನಾತನ ಪುಟ್ಟಿದಂದೆ ವೈರಾಗ್ಯಂ ಕಾರಣಮಾಗಿ ಸೂರದತ್ತಸೆಟ್ಟಿ ಸುಕುಮಾರಸ್ವಾಮಿಗೆ ಸೆಟ್ಟಿವಟ್ಟಂಗಟ್ಟಿ ತಪಂಬಟ್ಟಂ ಸುಕುಮಾರಸ್ವಾಮಿಯುಂ ಯೌವನನಾಗಿ ಅತ್ಯಂತ ರೂಪಲಾವಣ್ಯ ಸೌಭಾಗ್ಯ ಕಾಂತಿಯಿಂದಂ ಕೂಡಿದೊನಾತಂಗೆ ಮೂವತ್ತೆರಡು ಬಳ್ಳಿ ಮಾಡಂಗಳತ್ಯಂತರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯ ದೇವಗಣಿಕೆಯರೆನೆ ಪೋಲ್ವ ಮೂವತ್ತಿರ್ವರ್ ದಿವ್ಯಸ್ತ್ರೀಯರ್ಕಳ್ ಮೂವತ್ತೆರಡು ನಾಟಕಂಗಳ್, ಮೂವತ್ತೆರಡು ಕೋಟಿ ಕಸವರಮುಂ ಪಂಚರತ್ನಂಗಳೆಂಬಿನಿತಱೊಳಂ ಕೂಡಿ ಭೋಗೋಪಭೋಗ ಸುಖಂಗಳನನುಭವಿಸುತ್ತುಮಿರೆ

ಮತ್ತೊಂದು ದಿವಸಮೊರ್ವ ನೈಮಿತ್ತಿಕನಿಂತೆಂದಾದೇಶಂಗೆಯ್ದನಿ: ಸುಕುಮಾರಸ್ವಾಮಿ ಆವುದೊಂದು ಕಾಲದೊಳ್ ರಿಸಿಯರ ರೂಪಂ ಕಾಣ್ಗುಮಂದೀತನುಂ ತಪಂಬಡುಗುಮೆಂದೊಡಾ ಮಾತಂ ತಾಯ್ ಕೇಳ್ದು ತನ್ನ ಮನೆಯಂ ರಿಸಿಯರಂ ಪುಗಲೀಯದಂತು [2]ಬಾಗಿಲ[2] ಕಾಪಿನವರಂ ಕಲ್ಪಿಸದೊಳಂತು ಕಾಲಂ ಸಲೆ ಮತ್ತೊಂದು ದಿವಸಂ ರತ್ನದ್ವೀಪದಿಂದೊರ್ವ ಪರ[3]ದಂ ಸರ್ವ ರತ್ನ ಕಂಬಳಂಗಳ[3] ಲಕ್ಷದೀನಾರಂಗಳ್ ಬೆಲೆಯುಪ್ಪವನುಜ್ಜೇನಿಗೆ ಮಾಱಲ್ಕೊಂಡು ಬಂದೊನಾ ಪೊಟಲನಾಳ್ವೊಂ ವೃಷಭಾಂಕನೆಂಬೊನರಸಂಗಂ ಜ್ಯೋತಿರ್ಮಾಲೆಯೆಂಬ ಮಹಾದೇವಿ[4]ಗಮಿಂತಿರ್ವರ್ಗ್ಗಂ[4] ತೋಱಿದೊಡೆ [5]ಅವಱ[5] ಬೆಲೆಯುಂ ಬೆಸಗೊಂಡೊಡೆ ಲಕ್ಷ ದೀನಾರಂಗಳ್ ಬೆಲೆಯೆಂದು ಪೇೞ್ದೊಡೆ ಕೊಳಲಾಱರದರಸಂ ಪೋಗಲ್ವೇೞ್ದನಂತು ಪೊಟಲೊಳಗೆಲ್ಲಂ ತೋಱಿ ಯಾರುಂ ಕೊಳಲಾಱದಿರ್ದೊಡೆ ರತ್ನಂ ಕಂಬಳಂಗಳಂ ಕೊಂಡು [6]ಪೋಗಿ ಯಶೋಭದ್ರೆಗೆ ತೋಱಿದೊಡೆ[6] ಲಕ್ಷದೀನಾರಂಗಳಂ ಕೊಟ್ಟು [7]ರತ್ನಕಂಬಳಂಗಳ್ ಕೊಂಡೋರೊಂದಱೊಳಂ ನಾಲ್ಕು ಖಂಡಮಾಗಿ[7] ಮೂವತ್ತೆರಡು ಖಂಡಂಗಳಂ ಮಾಡಿ ಮೂವತ್ತಿರ್ವರ್ ಸೊಸೆವಿರ್ಕಳ್ಗೆ ಪಚ್ಚುಗೊಟ್ಟೊಡವರುಂ ತಂತಮ್ಮ ಕೆರ್ಪುಗಳೊಳ್ ತಗುಳ್ಚಿ[8]ದರೆಂಬ ಮಾತನರಸಂ ಕೇಳ್ದು ಚೋದ್ಯಂಬಟ್ಟವರ ವಿಭೂತಿಯುಂ

1. + ನಿನ್ನ (ಕಖಗ). 2. (ಘಛಜ)ಗಳಲ್ಲಿಲ್ಲ. 3. ದನೊಂದು ರತ್ನಕಂಬಳಂ (ಘಛಜ). 4. ಗಂ ಕಂಬಳಮಂ (ಘಛಜ). 5. ಅವರು (ಘಛಜ). 6. ಪೊಳಲಂ ಪೊಱಮಟ್ಟು ಪೋಪನನಾರಾನುಮೆಂದರ್ ಸುಕುಮಾರಸ್ವಾಮಿಯ ತಾಯ್ ಕೊಳ್ಗುಂ ಪೋಗಿಮನೆ ಪೋಪದೆ (ಘಛಘ). 7 ಕೊಂಡು (ಘಛಜ) 8. + ಪಾಲಿಸಿದರ್ ಮತ್ತಮಿಂತೆಂದು ರತ್ನಕಂಬಳಂ ಸುಕುಮಾರಸ್ವಾಮಿಯ ತಾಯ್ ಲಕ್ಷದೀನಾರಂಗಳಂ ಕೊಟ್ಟುಕೊಂಡ ಮೂವತ್ತೆರಡು ಖಂಡಂ ಮಾಡಿ ಮೂವತ್ತಿರ್ವರ್ ಸೊಸೆವಿರ್ಕಳ್ಗೆ (ಖ). ಇದು ಪುನರುಕ್ತ.

ನೋೞ್ಪೆನೆಂದು ಮನೆಗೆ ವರ್ಪುದಂ. ಯಶೋಭದ್ರೆ ಕೇಳ್ದರಸರ್ ಬರ್ಪ ಬಟ್ಟೆಯೊಳೆಲ್ಲಂ ಪಂಚರತ್ನಂಗಳಿಂ ರಂಗವಲ್ಲಿಯನಿಕ್ಕಿ ನೇತ್ರಪ[1]ಟ್ಟೆದುಕೂಲ ಚೀನಾದಿ[1] ದಿವ್ಯವಸ್ತ್ರಂಗಳಂ ಪಾಸಿ ಮಣಿ[2]ಭದ್ರ[2]ಮಪ್ಪ ಹೇಮಮುಕ್ತಾಹಾರಂಗಳಿಂ ತೋರಣಂಗಟ್ಟಿಸಿಯರಸರ ಬರವಂ ಪಾರುತ್ತಿರೆ ನೃಪತಿಯುಂ ಬಂದು ಸುರೇಂದ್ರ ಭವನೋಪಮಮಪ್ಪ ಪ್ರಾಸಾದಮಂ ಪೊಕ್ಕು ವಿಸ್ಮಯಚಿತ್ತನಾಗಿ* ಸುರಲೋ[3]ಕಂಬೊ[3]ಕ್ಕ ಪುಣ್ಯಮಂ [4]ತಂಬೊಲಾಗಳ್[4] ಮಹಾ ವಿಭೂತಿಯಿಂ [5]ಶಯ್ಯಾತಳದೊಳಿರ್ದು ಸುಕುಮಾರನೆಲ್ಲಿದನೆಂದು ಬೆಸಗೊಂಡೊಡೆ ಸ್ವಾಮಿ ಆತಂ ಕರಂ ಸಾದು ನಿಮ್ಮ ಬರ[6]ಮ[6]ನಱಿಯಂ ಪ್ರಾಸಾದದ ಮೇಗಣ ನೆಲೆಯೊಳಿರ್ದನೆಂದೊಡರಸಂ ಬಱಿಯನಟ್ಟಿಮೆನೆ ತಾಯ್ ಪೋಗಿ ಮಗನೆ ಅರ[7]ಸರ್ ವಂದರ್ ಬಾ[7] ಪೋಪಮೆನೆ ಅರಸರೆಂಬೊರಾರೆನೆ ತಾಯೆಂದಳ್ [8]ನಮ್ಮ[8]ನಾಳ್ವರೆಂದೊಡೆ ನಮ್ಮನಾಳ್ವರುಮೊಳರೆ ಎಂದು ವಿಸ್ಮಯಂಬಟ್ಟು ತಾಯ ವಚನಮಂ ಮಾರ್ಕೊಳಲಾಱದೆ ಬರ್ಪೊನಂ ನರೇಶ್ವರಂ ಕಂಡು ಕಣ್ಬೆತ್ತ ಫಲಮನಿಂದು ಪೆತ್ತೆನೆಂದು ಪ್ರತ್ಯಕ್ಷ ಕಾಮದೇವನನಪ್ಪಿ [9]ಕೊಳ್ವಂತಪ್ಪಿ[9]ಕೊಂಡು ದಿವ್ಯಶಯ್ಯಾತಳದ ಮೇಗೊ[10]ಡನಿರಿಸಿದಾ[10]ಗಳ್ ಸ್ವಜನ ಪರಿಜನಂಗಳ್ ಸಿದ್ಧಾರ್ಥಂಗಳಂ ಮಾಂಗಲ್ಯಮೆಂದಿರ್ವಗ್ಗಂ ಸೇಸೆ[11]ಯನಿಕ್ಕಲಾಗಳಾ[11] ಸಿದ್ಧಾರ್ಥಂಗಳ್ ಸುಕುಮಾರಸ್ವಾಮಿಯಾಸನಮನೊತ್ತೆ ಕಟಿ[12] [ವ]ಮನಲು[12]ಗಿಸುವುದುಮಂ ಸೊಡರಂ ನೋಡಿದಾಗಳ್ ಕಣ್ಣೀರ್ಗಳ್ ಸುರಿವುದುಮಂ ಕಂಡೀಗಳೀತಂಗೆ[13] ಬ್ಯಾಧಿಗಳೆಂದು ಬಗೆದಿರ್ಪ್ಪಿನಂ[13] ಮಜ್ಜನಕ್ಕೆಟ್ಟಿಸ್ನಿಪೆಂದೊಡಂತೆಗೆಯ್ವೆಮೆಂದು ಮಜ್ಜನಂಗೊಂ[14]ಡಮರ ಸನ್ನಿಭ[14] ಮಣಿಕುಟ್ಟಿಮಮಪ್ಪ ಬಾವಿಯಂ ಪೊಕ್ಕು ಮಿಂದಲ್ಲಿಯನರ್ಘ್ಯಮಪ್ಪ ತನ್ನ ಬೆರಲ ಮಾಣಿಕದುಂಗುರಂ [15]ಬಿಟ್ಟುದ[15] ನಱಸಲ್ವೇಡಿ ಛಿದ್ರಕದ್ವಾರದ ತೂಂತನುರ್ಚಿ ನೀರಂ ಕಳೆದಾಗಳಿಂದ್ರನ ಭಂಡಾರಂ ತೆಱೆದಂತಪ್ಪ [16]ಲೇಸಪ್ಪ[16]ನಾನಾ ಮಣಿಯ ವಿಚಿತ್ರ ಭೂಷಣಂಗಳಂ ಪಲವುಮಂ ಕಂ[17]ಡು ಮಹಾ[19]ಶ್ಚರ್ಯಭೂತನಾಗಿ ನೋಡುತ್ತಿರ್ಪನ್ನೆಗಮಾರೋಗಿಸಲೆಟ್ಟಿಸ್ನಿಮೆಂದಾಗಳ್ ಪರಿ[18]ಯ[18]ಣದ ಮೊದಲೊಳ್ ಸುಕುಮಾರಂ ಬೆರಸು ನಾನಾಪ್ರಕಾರ ದಿನಿಯುವಪ್ಪುಣಿಸುಗಳನುಣುತ್ತಂ ಸುಕುಮಾರಸ್ವಾಮಿ ಅರ್ಧಾಹಾರಮಂ ನುಂಗುಗುಮರ್ಧಾಹಾರಮನುಗುೞ್ಗುಮದಂ ನೋಡಿ ಇದುವು [19]ಮೊಂದು ಕುತ್ತ[ಂ] [19]ಆಹಾರದ ಮೇಗರುಚಿಯೆಂದು ಬಗೆದುಣಿಸು ಸಮೆದಬೞಿಕ್ಕೆ ಗಂಧ ತಾಂಬೂಲ ಮಾಲ್ಯ ವಸ್ತ್ರಾ

---

1. ಟ್ಟೆಯ ಚೀನದುಕೂಲಾದಿ (ಫಭ), ಟ್ಟೆಯ ಚೀನದ ದುಗೂಲಾಂಬರಾದಿ (ಜ). 2. ಗಣನಿಬದ್ಧ (ಫಭಜ). 3. ಕಮಂಪೊ (ಜ). 4. ತನಂತೆ ನೋಡುತ್ತಿರ್ದರಸನಂ ಯಶೋಭದ್ರೆಯಿದಿರ್ಗೊಂಡು (ಫಚಭಜ). 5. + ಕುಳ್ಳಿರಿಸೆ (ಫಚಭಜ). 6. ವ (ಸ–ಖ). 7. ಸರ್ಬಂದರ್ ಬಾ (ಕಗ), ಸಂ ಕರೆದಪಂ (ಫಚಭಜ). 8. ನಿಮ್ಮ (ಕಗ). 9. (ಜ)ದಲ್ಲಿಲ್ಲ. 10. ಡರಿಸಿದನಾ (ಜ). 11. ಗಳನಿಕ್ಕೆ (ಜ). 12. ರಮನಲ್ಲಿ (ಕಗ), ರಮನ (ಖ). ಯನಲು (ಫಚಭಜ). 13. ಬಾಷ್ಪಾದಿತನೆಂದಿರ್ಪ್ಪನ್ನೆಗಂ (ಫಚಭಜ). 14. ಡದೆ (ಫಚಜ). 15. ಬಿರ್ದುದ (ಕಖಗ), ಬಿಳ್ದುದದ (ಫಚಭಜ). 16. ಲೋಲ (ಫ), (ಚಭಜ)ಗಳಲ್ಲಿಲ್ಲ. 17. ಡಾ (ಖಫಚಭಜ). 18. ಯಾ (ಕಖಗ). 19. ಮೊಂದು ಕುತ್ತು (ಖ), ವುದೊಂದು ವ್ಯಾಧಿ (ಫಚಭಜ).

ಭರಣಂಗಳಂ ತಂದು ಕೊಟ್ಟಾಗವಂ ತೊಟ್ಟುಟ್ಟು ಪಸದನಂಗೊಂಡು ಸುಖಸಂಕಥಾವಿನೋ[1]ದದಿಂದಿರ್ದೊಡೆ[1] ಯಶೋಭದ್ರೆಯುಮರಸನುಂತೆಂದು ಬೆಸಗೊಂಡನಬ್ಬಾ ಎಮ್ಮ ತಮ್ಮನ ಕಟಿಪ್ರದೇಶ[2]ಭಾ[2]ಗಕ್ಕಂ ಕಣ್ಣ ನೀರ್ ಬರ್ಪುದರ್ಕಂ ಆರುಚಿಗಮೇಕೆ ಮರ್ದಂ ಮಾಡಿಸಿದಿರಿಲ್ಲೆನೆ ದೇವಾ ಅತಂಗಿವು ಕುತ್ತಮಲ್ಲವು ಸೇ[3]ಸೆಯಕ್ಕಿ[3]ದ ಸ[4]ರುಸಪಂ[4]ಗಳೊತ್ತೆ ಸೈರಿಸಲಾಱಂ ಮತ್ತೆ ಆವಕಾಲಮುಂ ಮಾಣಿಕದ ಬೆಳಗಿನೊಳಿರ್ಪುದಱಿಂದಂ ಸೊಡರ ಬೆಳಗಿಂಗೆ ಸೈರಿಸದೆ ಕಣ್ಣ ನೀರ್ ಬರ್ಕುಂ ಮತ್ತಂ ಕಮಳನೀಳೋತ್ಪಳದೊಳ್ ವಾಸಿಸಿದಕ್ಕಿಯೊಳ್ ಪೆಱವಕ್ಕಿಯುಂ [5]ನೀವ್ರಂ[5] ಬಂದೊಡೆ ಬೆರಸಿಯುಟ್ಟುದು ಕೂೞುಮಪ್ಪುದಱಿಂ ವಾಸಿಸಿದಕ್ಕಿಯ ಕೂೞಂ [6]ನುಂಗುಗು[6]ಮುೞಿದ ಕೂೞನುಗುೞ್ಗುಮದಱಿಂದೀತಂಗೀಯವಸ್ಥೆಗಳಾದುವೆನೆ ಕೇಳ್ದು ವಿಸ್ಮಯಂ ಬಟ್ಟು ಈತನ ಕ್ಷಣಮಾತ್ರದ ಭೋಗಕ್ಕಂ ಸುಖಕ್ಕಂ ಎಮ್ಮೆಲ್ಲಾ ಕಾಲಮರಸುತನಂಗೆಯ್ವಲ್ಲಿಯೊಳಪ್ಪ ಭೋಗೋಪಭೋಗಂಗಳ್ ದೊರೆಯಲ್ಲವದಱಿಂದೀ ಲೋಕದೊಳೀತನೆ ಪರಮಾರ್ಥಂ ಸುಖಿಯೆಂದೊಸೆದರಸನವಂತಿ ಸುಕುಮಾರನೆಂದು ಪೆಸರನಿಟ್ಟಂ

ಯಶೋಭದ್ರೆಯುಮರಸನನನೇಕ ವಸ್ತುವಾಹನಂಗಳಿಂದಂ ಪೂಜಿಸಿ ಕೞಿಪಿದೊಳಿಂತು ಸುಕುಮಾರ ಸ್ವಾಮಿಗೆ ಸುಖದಿಂದಂ ಕಾಲಂ ಸಲೆ ಮತ್ತೊಂದು ದಿವಸಂ ಯಶೋಭದ್ರೆ[7]ಯ ಭ್ರಾತರರಪ್ಪ[7] ದಯಾಭದ್ರರೆಂಬ ರಿಸಿಯರ್ ಮುನ್ನಮವರ ಪಕ್ಕದೆ ಸೂರದತ್ತಂ ಧರ್ಮಂಗೇಳ್ದು ವೈರಾಗ್ಯಮಾಗಿ ಪುತ್ರಮುಖಂಗಂಡು ತಪಂಬಟ್ಟೊನಾತನ ಮಗನುಂ ರಿಸಿಯರಂ ಕಂಡಾ[8]ಗಳೆ[8] ತಪಂಬಡುಗುಮೆಂಬುದಂ ಮುನ್ನೆ ನೈಮಿತ್ತಿಕರಾದೇಶಂಗೆಯ್ದಿರ್ದರ್ ಮತ್ತಂ ದಯಾಭದ್ರರೆಂಬ ರಿಸಿಯರ್ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪ ದಿವ್ಯಜ್ಞಾನಿಗಳ್ ಸುಕುಮಾರಸ್ವಾಮಿಗೆ ನಾಲ್ಕುತಿಂಗ[9]ಳುಮ್ಮೆ[9]ದುದಿವಸಮಾಯುಷ್ಯಪ್ರಮಾಣ[10]ಮನಱಿದುಪಕಾರಾರ್ಥಮು[10]ಜ್ಜೇನಿಗೆ ವಂದು ಸುಕುಮಾರ ಸ್ವಾಮಿಯ ಮಾಡದ [11]ಪೆಱ[11]ಗಣ ನಂದನ ವನದೊಳಗಣ ಜಿನಾಲಯದೊಳಾಷಾಢ ಮಾಸದ ಚತುರ್ದಶಿಯ ದಿವಸ[12]ದಂದು ಪಱ[3]ವೊೞ್ತು[12] ಬಂದು ಜೋಗುಗೊಂಡಿರ್ದರನ್ನೆಗಂ ವನಪಾಲಕರ್ ಪೋಗಿ ಯಶೋಭದ್ರೆಗೆ ರಿಸಿಯರ ಬರವಂ ಪೇೞ್ದೊಡಾಕೆಯುಂ ಬಂದು ದೇವರುಮಂ ರಿಸಿಯರುಮಂ ಬಂದಿಸಿ ಭಟ್ಟಾರಾ ನೀಮಿಲ್ಲಿಗೇಕೆ ಬಂದಿ[12]ರಿಲ್ಲಿಂದಂ ಪೊಱವೊೞಲೊಳ್ ಪೆಱವುಳ ಬಸದಿಯಿಲ್ಲಾ[13] ಎಂದೊಡೆ ಭಟ್ಟಾರರೆಂದರಬ್ಬಾ ನಿಡುವಯಣಂ ಬಂದು ನೋದೆಗೆಟ್ಟೆಂತಾನುಮಿಲ್ಲಿಗೆಯ್ದಾ[14]ನತ್ತು [14]ಜೋಗಿನ

1. ದದೊಳಿರ್ದಾಗಳ್ (ಘಚಛ). 2. ಶದರೋ (ಘಚಛಜ). 3. ಸಿಕ್ಕ (ಜ). 4. ಸರ್ಪಾವ (ಘಚಛಜ). 5. ನಿಮ್ಮಡಿ (ಘಚಛಜ). 6. ನುಂಜ್ಜು (ಛಜ). 7. ತನ್ನ ಭತ್ತಾರರುಂ (ಘಚಛಜ). 8. ಕ್ಷಣದೆ (ಚಜ). 9. ಳಮೇಂಗ್ಳೆ (ಘಚಛಜ). 10. ಮೆಂದರಿದು (ಘಚಛಜ). 11. ಕೆಳ (ಖ). 12. ದಲು ಪರೆವೊತ್ತ್ರ (ಖ), ದಂದು ಪರವೃತ್ತ (ಕ), ದೊಳು ಪರವೊತ್ತ (ಗ), ದೊಳ್ ಪರೆವೊಳ್ತು (ಘಛ), ದೊಳ್ ಪಗೆವೊಳ್ತು (ಚ), ದೊಳು ಪಱವೊಳ್ತು (ಜ). 13. ವೊೞಲೊಳಗೆ ಬಸದಿಗಳಿಲ್ಲಾ (ಘಚಜ). ವೊೞಲೊಳಿನ್ ಪೆಱವು ಬಸದಿಗಳಿಲ್ಲಾ (ಛ). 14. ನರುಗೆಟ್ಟು (ಕ).

ಪೊಟ್ಟುಱ[3]ೊಳೆಯ್ದು ಬಂದು ಜೋಗುಗೊಂಡಿರ್ದ[1]ಮತ್ತಲುಂ ಪೋಗಲಾಗದೆನೆ ಅಂತಪ್ಪೊಡೆ ಭಟಾರಾ ರಿಮ್ಮನೊಂದಂ ಬೇಡಿದಪ್ಪೆಂ[1] ನಾಲ್ಕು ತಿಂಗಳುಮೇನುಮ ನೋದದೆ ಮೋನಂಗೊಂಡು ಬಸದಿಯಂಗಣದೊಳ್ ನಡಪಾಡದೊಳಳಣಡಂಗಿರ್ದು ಜೋಗು ನೆಱ[3]ದಂದು ಬಿಜಯಂಗೆಯ್ಯಿಮೆಂದೊಡಂತೆಗೆಯ್ವೆಮೆಂದು ಭಟಾರರಿರ್ದರ್

ಮತ್ತಿತ್ತಲ್ ಸುಕುಮಾರಸ್ವಾಮಿಯುಂ ಸರ್ವತೋಭದ್ರಮೆಂಬುತ್ತುಂಗ ವಿಚಿತ್ರಮಾಗಿರ್ದ ಪ್ರಾಸಾದದ ಮೇ[2]ಗೇಟ[2]ನೆಯ ನೆಲೆಯೊಳ್ ಕಾರ್ತಿಕ ಮಾಸದ ಪೂರ್ಣ್ಣಮಿಯಂದು ಸುಖದಿಂದೆ [3]ಲುಂದಿರ್ದ[3]ನನ್ನೆಗಮಿತ್ತ ದಯಾಭದ್ರ ಭಟಾರರ್ಗೆ ಜೋಗು ನೆಱ[3]ದು ಯಶೋಭದ್ರೆಯ ಬೇಡಿದ ಮೋನದ ಪ್ರಮಾಣಾವಸಾನ ದೊಳ್ ಬೈಗಿರುಳಿನ ಪಂಚಮಹಾಶಬ್ದದ ಪೊಟ್ಟುಱ[3]ೊಳ್ ತ್ರಿಲೋಕ ಪ್ರಜ್ಞಪ್ತಿ ಯೆಂಬುದು ಮೃದು ಮಧುರ ಗಂಭೀರ ಸ್ವರದಿಂ ಭಟಾರರ್ ಪರಿವಿಡಿಗೆಯ್ದಾಗಳ್ ಅಧೋಲೋಕ ತಿರ್ಯಗ್ಲೋಕಂಗಳಿರ್ದ ಸ್ವರೂಪಮಂ ಪ್ರಮಾಣಮುಮನೋದಿ ಊರ್ಧ್ವಲೋಕ ವ್ಯಾವರ್ಣನೆಯಂ ಪೇಟ್ದಾಗ[4]ಳಚ್ಯುತ[4]ಕಲ್ಪದ ಪದ್ಮಗುಲ್ಮ ವಿಮಾನಮಂ ವ್ಯಾವರ್ಣಿಸುವುದಂ ಸುಕುಮಾರಸ್ವಾಮಿ ಕೇಳ್ದು ಜಾತಿಸ್ಮರನಾಗಿಯಾ ನಿಲ್ಲಿ[5] ಪುಟ್ಟಿ[ರ್ದೆ][5]ನೆಂಬುದನಱ[3]ದು ಅಹೋ ಸುರಲೋಕಸುಖಮೆಂಬಮೃತಸಮುದ್ರದ ನೀರೆಲ್ಲಮಂ ಕುಡಿದು ತಣಿಯದನೀ ಮನುಷ್ಯ ಭವದ ಸುಖಮೆಂಬ ಪುಲ್ವನಿಯೊಳ್ ಸಿಲ್ಕೆ ಶಿವಸುಖಮನೆಯ್ದಿಸುವ ಸಚ್ಚಾರಿತ್ರದಿಂ ಒ[6]ಟ್ಟಿ[6]ದೆನೆಂದು ತನ್ನಂ ತಾಂ ನಿಂದಿಸುತ್ತಂ ಮಂಚದಿಂದಿೞಿದು ಮಾಡದೊಳ[7]ಗಿರ್ದ[7] ವಸ್ತ್ರಂಗಳಂ ತೆಗೆದುಕೊಂಡು [8]ಪ್ರಾಸಾದದ ಪೆಱಗಣ ಗವಾಕ್ಷ ಜಾಳದೊಳ್[8] ಕಟ್ಟಿ[9]ಕೊಂಡೊಂದೊಂದಱ ತುದಿಯೊಳೊಂದೊಂದು[9] ವಸ್ತ್ರಮಂ ತಗುಳ್ಚಿ ಪಿಡಿದಿೞಿದು ಜಿನಾಲಯಮನೆಯ್ದಿ ದೇವರ್ಗೆ ನಮಸ್ಕಾರಂಗೆಯ್ದು ದಯಾಭದ್ರಭಟಾರರ್ಗೆಱಗಿ ಪೊಡವಟ್ಟು [10]ದೀಕ್ಷೆಯಂ ಪ್ರಸಾದಂಗೆಯ್ದೆನ್ನಂ[10] ಸಂಸಾರಾರ್ಣವದತ್ತಣಿಂದೆ[11]ತ್ತಿಮೆಂದೊಂಗೆ ಭಟಾರರ್ ಮೂಱುದಿವಸಂ ನಿನಗಾಯುಷ್ಯಮೆಂದೊಡೀಗಳೀ ನಿಸ್ಸಾರಮಪ್ಪ ದೇಹದಿಂ ಸಾರಮಪ್ಪ ತಪಮಂ ಕೈಕೊಂಡು ಪಲಕಾಲಂ ನೆ[12]ಟಿಲ್ ಪೆತ್ತೆ[12]ನಿಲ್ಲ ನಿಸ್ಸಾರಮಪ್ಪ ಭೋಗ ದೊಳ್ ಸಿ[13]ಲ್ಕಿ[13] ಅಮೇಧ್ಯದೊಳ್ ಕ್ರೀಡಿಸುವ ಬಾಳಕಂಬೊಲ್ ಕಾಲಮಂ ಬಱಿದೆ [14]ಕಳೆದೆ[14]ನೆಂದು ತನ್ನನಾದಮಾನುಂ ನಿಂದಿಸಿ ತತ್ಪಾದಮೂಲದೊಳ್ ತಪಂಬಟ್ಟು ಪಂಚಮಹಾಬ್ರತಂಗಳನೇಱ[3]ಸಿಕೊಂಡು ಪಡಿಕಮಣಂಗೇಳ್ದು ತದ ನಂತ[15]ರಂ[15] [16]ನಿಶ್ಚಯ ಸಮ್ಯಕ್ತ್ವಮಂ ಕೈಕೊಂಡಿಂಬಟಿಕ್ಕಿ[16] ಮಹಾಕಾಳಮೆಂಬ ಶ್ಮಶಾನಕ್ಕೆ ಪೋಗಿ ಯಾವಜ್ಜೀವಮಾಹಾರ[17]ಕ್ಕೆ[17] ನಿವೃತ್ತಿಗೆಯ್ದು ಪ್ರಾಯೋಪಗಮನ

1. ವಿನ್ನೆತ್ತ ಪೋಪೆಯಬ್ಬಾಯೆನೆಯಂತಪ್ಪಡೆ ಭಟಾರಾ ನಿಮ್ಮನೊಂದಡನೊಂಬದಿಸಿಪೆಂ. (ಫಚಭಜ). 2. ಗಳೀಳ (ಕಗ), ಗಣನೇಳ (ಜ). 3. ಉಂದಿಳ್ದ (ಕಖಗ). ಪಟ್ಟಿರ್ದ (ಫಚಭಜ). ಪಟ್ಟಿರ್ದೊ (ಜ). 4. ಆರಣ (ಕಖಗ). 5. ಪುಟ್ಟಿಳ್ದೆ (ಕಖಗ), ಪುಟ್ಟಿದೆ (ಫಚಭಜ). 6. ಳ್ದ (ಕಖಗ). 7. ಗೊಟ್ಟಿರ್ದ (ಫಚಭಜ). 8. ಪೆಱಗಣೆಗವಾಕ್ಷದೊಳ್ (ಫಭಚಜ). 9. ಯೋರೆಂದಱ ತುದಿಯೊಳೋರೆಂದು (ಫಚಭಜ). 10. ದೀಕ್ಷಾಪ್ರಸಾದದಿಂ (ಫಚಭಜ). 11. ನ್ನನ (ಫಜಭಜ). 12. ಳ್ಪ (ಕಗ). 13. ಕ್ಕಿ (ಕಗಫ ಚಭಜ). 14. ಕಳಿಪದೆ (ಕಗಜ). 15. ರಮೆ (ಫಚಭಜ)ಗಳಲ್ಲಿಲ್ಲ. 17. ಶರೀರ (ಫಚಭಜ).

ವಿಧಾನದಿಂ ಪ್ರಚ್ಛನ್ನಮಪ್ಪೆಡೆಯೊಳ್ ಮೃತಕಸಜ್ಜೆಯೊಳಿರ್ದು ಸಂನ್ಯಸಂಗೆಯ್ದು ಧರ್ಮಧ್ಯಾನ [1]ಶುಕ್ಲಧ್ಯಾನಂ[1]ಗಳಂ [2]ಧ್ಯಾಯಿಸುತ್ತಿ[2]ರ್ಪನ್ನೆಗಂ

ಇತ್ತ ವಾಯುಭೂತಿಯಪ್ಪ ಭವದಂದಿನತ್ತಿಗೆಯಪ್ಪ ಸೋಮದತ್ತೆಯೆಂಬೊಳ್ ನಿದಾನಂಗೆಯ್ದು ತನ್ನ ನಾಲ್ವರ್ ಮಕ್ಕಳುಂ ತಾನುಂ ಸಂಸಾರಸಮುದ್ರದೊಳ್ ನೀಡುಂ ತಿಱ್ಱನೆ ತಿರಿದು ಬಂದು ಪೆಣ್ಣರಿಯಾಗಿ ಪುಟ್ಟಿ ತನ್ನ ನಾಲ್ಕುಮಱಿಗಳ್ವೆರಸಾಹಾರಮನಱಸಿ ತೊಳಲುತ್ತಂ [3]ಬರ್ಪು[3]ದನ್ನೆಗಂ ಸುಕುಮಾರಸ್ವಾಮಿ[4]ಯುಂ[4] ಮಹಾಕಾಳಕ್ಕೆ ಪೋಪ[5]ನೆಲ್ಲಾ ಕಾಲಮುಂ[6] ಮಣಿಕುಟ್ಟಿಮಭೂಮಿ[7]ಯೊಳ್ ಪಾಸಿದ ನೇತ್ರ[8]ಪಟಿಯ ಮೇಗೆ ನಡೆ[9]ದ[9] ಮೃದು ಲಲಿತಮಪ್ಪ ಚರಣದ್ವಯದೊಳ್ ಮುನ್ನೆಂದುಂ ನೆಲನಂ [10]ಕಿ[10]ಟ್ಟಿಯಱಿಯದೊಂ ಕಠಿಣಭೂಮಿಯೊಳ್ ನಡೆದೊಡೆ ಕಿಱು[11]ಗಲ್ಗಳುಂ[11]ಪೆಟ್ಟೆಗಳು[12]ಮಗುಳ್ದು[12] ಪುಗುಳೊಡೆದು [13]ಪೊಱಿಮಟ್ಟು[13] ಕರಗದ ದಾರೆವೊಲೆಡೆವಱಿಯದೆ [14]ಮಹಾಕಾಳ ಶ್ಮಶಾನಂಬರೆಗಮೊಕ್ಕ ನೆತ್ತರ ದಾರೆಯ ಗಂದದಿಂ[15]ದಂ ನರಿಗಳ್[15] ಬಂದು ಕಂ[16]ಡು[16]ರಾಗಿಸಿ ಮಱಿಗಳ್ವೆರಸಡಿಯಿಂದಂ ತೊಟ್ಟೆರಡುಂ ಕಾಲ್ಗಳಂ ಮೊೞಕಾಲ್ವರೆಗಮೊಂದು ದಿವಸಂ ತಿಂದತ್ತೆರಡನೆಯ ದಿವಸಂ ಮೊೞಕಾಲಿಂ ತೊಟ್ಟು ಕಟಿವರೆಗಂ ತಿಂದತ್ತು ಮೂಱನೆಯ ದಿವಸಂ ಬಸಿಱಂ ಪೋೞ್ದು ಕರುಳಂ ತೋಡಿ ತಿನೆ ಪೃಥಕ್ತ್ವವಿತರ್ಕ ವೀಚಾರಮೆಂಬ ಪ್ರಥಮ ಶುಕ್ಲಧ್ಯಾನದೊಳ್ ಕೂಡಿಯುಪಶಾಂತ [17]ಗುಣಸ್ಥಾನದೊಳಿರ್ದು ರತ್ನತ್ರಯಮಂ ಸಾದಿಸಿ [18]ಸಯುಸತ್ತ್ರಮ ದೇವನಾಗಿ[18]ಪುಟ್ಟಿದೊಂ

ಮತ್ತಿತ್ತ ತಾಯುಂ ಪೆಂಡಿರು* ಪರಿವಾರ[19]ಮುಮೆಲ್ಲಾ ದೆಸೆಗಳೊಳಂ ಪರಿವರಿದು ಪೋಗಿ[19] ಸುಕುಮಾರಸ್ವಾಮಿಯನೆರಡು ದಿವಸಮಿರುಳುಂ ಪಗಲುಮಱಸಿಯುಂ ಕಾಣದೆ ಮೂಱನೆಯ ದಿವಸದಂದು ಬೈಗಿನ ಪೊೞ್ತಱೊಳ್ ದೇವರ್ಕಳ್ ಬಂದು ಸುಕುಮಾರಸ್ವಾಮಿಯನಹೊ ಸೂರಾ ಅಹೊ ಮಹಾಪುರುಷ ಅಹೊ ಧೈರ್ಯವಂತ ಅಹೊ ಸಂಸಾರಭೀರು[20] ನಿನ್ನಂತುಪಸರ್ಗಮನಾರಪ್ಪೊಡಂ ಸೈರಿಸಿ ರತ್ನತ್ರಯಮಂ ಸಾಧಿಸಿದೊರಿಲ್ಲೆಂದು ದೇವತೆಗಳ್ ಪೊಗೞ್ದು ಕಳಕಳಧ್ವನಿಯುಮಂ ದೇವದುಂದುಭಿಯ ರವಮುಮಂ ಯಶೋಭದ್ರೆ[21] ನೋಡಿ ದೇವಸಂಘಾತಮಂ ಕಂಡು ಮಗನ ಸಾವನಱಿದು ಬಯ್ಗಿರುಳಾದಾಗಳ್ ಮೂವತ್ತಿರ್ವರ್ ಸೊಸೆವಿರ್ಕಳ್ಗಂ ಪೇೞ್ದಟ್ಟಿ[22] ಸುಕುಮಾರಸ್ವಾಮಿ ನಿಮಗೆಲ್ಲರ್ಗೆ ಮುಳಿದು ಪೋಗಿಯಡಂಗಿ[23]ರ್ದೊನನಾ[23]ನಱಿವೆಂ ನೀವೆಲ್ಲಂ

---

1. (ಘಚಛಜ)ಗಳಲ್ಲಿಲ್ಲ. 2. ಸಾದಿಸುತ್ತಿಮಿ (ಜ). 3. ಬರ್ಪ (ಕಖಗಘ). 4. ಯುಂ (ಕಖಗ). 5. + ನ (ಕಖಗ). 6. + ಮುನ್ನ (ಕಖಗ). 7. + ಕೆ (ಕಗ). 8. + ದ (ಘಚಛಜ). 9. ವಾತಂ (ಘಚಛಜ). 10. ಮೆ (ಕಖಗ). 11. ವರಲ್ಗಳುಂ (ಘಚಛ). 12. ಮಳ್ದು (ಖ). ಮೊತ್ತೆ (ಘಚಛಜ). 13. (ಘಚಛಜ)ಗಳಲ್ಲಿಲ್ಲ. 14. + ಪೊಱಪೊಣ್ಮೆ (ಘಚಛಜ). 15. (ಜ) ದಲ್ಲಿಲ್ಲ. 16. ದಾದಮಾನುಂ (ಘಚಛಜ). 17. + ಕಷಾಯಂ (ಘಚಛಜ). 18. (ಘಚಛಜ)ಗಳಲ್ಲಿಲ್ಲ. 19. ಮುಂನೆರೆದು ಎಲ್ಲಾ ಯೆಡೆಗೆ ಪೋಗಿ (ಘಚಛಜ). * ಇಲ್ಲಿಂದ ಮುಂದಕ್ಕೆ (ಜ) ಪ್ರತಿಯನ್ನು ಉಪಯೋಗಿಸಿಲ್ಲ. 20. + ಅಹೊ ಎಕ್ಕಲ ವೀರಾ (ಘಚಛ). 21. + ಕೇಳ್ದೆಚ್ಚತ್ತು ನೋಡಿ (ಘಚಛ). 22. + ದಳ್ (ಘಚಛ). 23. ರ್ದುದನಾ (ಕ).

ನೆಱೆಯೆ ತೊಟ್ಟುಟ್ಟು ಪಸದನಂಗೊಂಡು ಚೆಲ್ವೆಯರಾಗಿ ಬನ್ನಿಂ [1]ಪ್ರೋ[1]ಪಂ ತಿಳಿಪಿಕೊಂಡು ಬ[2]ರ್ಪಂ ನಿಮ್ಮ[2] ಸ್ವಾಮಿಯನೆಂದೊಡವರ್ಗಳನಿಬರುಂ ರಾಗಿಸಿ ಕೈಗೆಯ್ದತ್ತೆಯೊಡನೆ ಪರಿವಾರಸಹಿತಂ ಮಹಾಕಾಳಕ್ಕೆ ಪೋಗಿ ನೋೞ್ಪ[3]ರನ್ನೆಗಂ*ನಮೇರು ಮಂದಾರಸಂತಾನಕ ಪಾರಿಯಾತ್ರಮೆಂಬ ದೇವರ್ಕಳ್ ಸುರಿದ ಪುಷ್ಪವೃಷ್ಟಿಯಿಂದಂ ಮುಚ್ಚಿಪಟ್ಟನಾಗಿ ಕಂಪಿಂಗೆಱಗಿದ ತುಂಬಿಯ ಸಮೂಹಮಂ ಮೇಗೆ ಸುೞಿವುದಂ ಕಂಡಿಲ್ಲಿರ್ದ್ದನೆಂದು ಯಶೋಭದ್ರೆ ತೋಱಿದೊಡೆ ಪೋಗಿ ತೆಱೆದು ನೋೞ್ಪರನ್ನೆಗಂ* ಮೃತಕಮಂ ಕಂಡನಿಬರುಂ ಮೂರ್ಛೆವೋಗಿ ನೀಡಱಿಂದೆೞ್ಚತ್ತು ತಮ್ಮ ಬಸಿಱುಮಂ ತಲೆಯುಮಂ [4]ಬ[4]ಡಿದು ಕೊಂಡು ಸುಕುಮಾರಸ್ವಾಮಿಯ ರೂಪಮಂ ತೇಜಮುಮಂ ಯೌವನಮುಂ ಲಾವಣ್ಯಮಂ ಸೌಭಾಗ್ಯಮಂ ಯಶಮುಂ ಮೆಲ್ಪಂ ನುಡಿಯ ಬಲ್ಮೆಯುಂ ಶುಚಿತ್ವಮಂ ಶೌಚಮಂ ಶ್ರೀಯುಂ ಸಂಪತ್ತುಂ ಸೊಬಗಂ ಒಲ್ಮೆಯುಂ ಧೈರ್ಯಮುಂ ಎಂದಿವು ಮೊದಲಾಗೊಡೆಯವಾತನೊಳ್ ನೆಲಸಿರ್ದ ಗುಣಂಗಳಂ ನೆನೆನೆನೆದನಿಬರುಂ[5] ಪ್ರಲಾಪಂಗೆಯ್ಯುತ್ತಂ ಸೈರಿಸಲಾಱದೆ ನಿರಂತರಂ ಮೂರ್ಛೆವೋಗುತ್ತಂ ನೀಡುಂ ಬೇಗಂ ದುಃಖಂಗೆಯ್ದುೞ್ತು ನೀರಿೞಿದೆಣ್ಬರ್ ಬಸಿ[6]ಱ ಪೆಂ[6]ಡಿರುೞಿಯೆ ಇರ್ಪತ್ತುನಾಲ್ವರ್ ಪೆಂಡಿರುಂ ಮತ್ತಂ ಪೆಱರ್ ನಂಟರ್ಕಳುಂ ಪರಿವಾರಮುಂ ಯಶೋಭದ್ರೆಯೊಡನೆ ದಯಾಭದ್ರರ್ ಗುರುಗಳಾಗೆ ಕಮಳಶ್ರೀ ಕಂತಿಯರ್ ಕಂತಿಯರಾಗೆ ತಪಂಬಟ್ಟುಗ್ರೋಗ್ರ ತಪಂಗೆಯ್ದನಿಬರುಂ ಸೌಧರ್ಮ [7]ಕಲ್ಪಂ[7] ಮೊದಲಾಗೊಡೆಯ ಕಲ್ಪಂಗಳೊಳ್ ಪುಟ್ಟಿದರ್ .

ಮತ್ತಿಂತಪ್ಪುದಂ ಚಿಂತಿಸಲು ಸೈರಿಸಲುಮಾಗದ ತಿರಿಕೋಪಸರ್ಗಮನವಂತಿ ಸುಕುಮಾರಸ್ವಾಮಿ ಮೂಱುದಿವಸಮಿರುಳುಂ ಪಗಲುಂ ಸೈರಿಸಿ ರತ್ನತ್ರಯಮನೆಂತು ಸಾದಿಸಿದನಂತೆ ಸಂನ್ಯಸನಂಗೆಯ್ದ[8]ರ್ದಾ[8]ರಾಧಕರಪ್ಪ ಮಹಾಪುರುಷರುಮವಂತಿ ಸುಕುಮಾರಸ್ವಾಮಿಯ ಪರಮಸುಖಿಯಪ್ಪುಪಸರ್ಗಮಂ ವಿಜಯ ವಿಧಾನಮಂ ಮನದೊಳನವರತಂ ಚಿಂತಿಸು[9]ತ್ತಾಪ್ತಾಗಮಪದಾರ್ಥದಿರ್ಗಳೊಳತೀವ ಸ್ಥಿರರಾಗಿ ಪರಮ ಸಹಜ ನಿಜರತ್ನತ್ರಯದೊಳ್ ಕೂಡಿ ಅಭೇದವಾಗೆಯ್ದೆಕೂಡಿ ಶರೀರಂ ಮೊದಲಾಗೊಡೆಯ ಸಮಸ್ತ ಬಾಹ್ಯಾಭ್ಯಂತರ ಪರಿಗ್ರಹಂಗಳಂ ನೆಱೆ ತೊಱೆದು ಅಪೂರ್ವಾಪವರ್ಗ ಸುಖಂಗಳನೆಯ್ದುಗೆ[9]

ಮತ್ತುಜ್ಜೇನಿಯ ತೆಂಕಣದೆಸೆಯೊಳವಂತಿ ಸುಕುಮಾರಸ್ವಾಮಿಯ ಕಾಲಂಗೆಯ್ದೆಡೆ ಈಗಳುಂ ಪುಣ್ಯಮುಂ ಪವಿತ್ರಮುಮಾದುದು ಮತ್ತಂ[10] ಮಹಾಪುರುಷನ ಶರೀರಮಂ ಚತುರ್ನಿಕಾಯಾಮರತತಿಗಳ್ ಭಕ್ತಿಯಿಂದಗರು ಕಾಳಾಗರು ಗೋಶೀರ್ಷ ಚಂದನಂ ಮೊದಲಾಗೊಡೆಯ ಅನೇಕ ಸುಗಂಧ ದ್ರವ್ಯಂಗಳಿಂದಂ

---

1. ಬಾಪ್ಪೋ (ಖ), ಕೋ (ಗ). 2. ರ್ಪ ಮಿಂತು (ಕಗ). 3. +ರ (ಕಗ). *—* (ಘಚಛ) ಗಳಲ್ಲಿಲ್ಲ. 4. ಪಿ (ಖ). 5. +ವಿ (ಘಚಛ). 6. ರ್ಪೆಂ (ಘಚಛ). 7. ಂ (ಘಚಛ). 8. ಳ್ದಾ (ಕಖಗ) 9. ತ್ತಂ ಪಂಚನಮಸ್ಕಾರಮನುಚ್ಚರಿಸುತ್ತಂ ದೇವರಂ ಧ್ಯಾನಿಸುತ್ತಂ ಮುದಿಪಿ ರತ್ನತ್ರಯಮಂ ಸಾದಿಸಿಯಭ್ಯುದಯ ಸುಖಂಗಳನೆಯ್ದಿ ಕರ್ಮಕ್ಷಯಂ ಗೆಯ್ದು ಮೋಕ್ಷಮಂ ಸಾದಿಸುಗೆ (ಘಚಛ). 10. ಗಂಧೋದಕಂ ಬಿಳ್ದುದಱಿಂದಂ (ಘಚಛ).

ಪೂಜಿಸಿದ ವಸ್ತುಗಳ್ ಕಾಲಾಂತರದಿಂ ಕರಗಿ ಬಿಟ್ಟುದಾ ಸ್ಥಾನಕ್ಕಂ[1] ಗಂಧವತಿಯೆಂಬ ತೊಱೆಯಾದುದು ದೇವರ್ಕಳ್ ಪೊಗಟ್ಟಿ ಕಳಕಳಧ್ವನಿಯಿಂ ಪೆಂಡಿರ್ಕಳ ಪ್ರಳಾಪಂಗೆಯ್ದುಟ್ಟಿ ಕಳಕಳಧ್ವನಿಯಿಂದಂ ಕಳಕಳಾಯ[1]ತಮೆಂದು[1] ಸಿದ್ಧಾಯ[2]ತನ[2] ಮಾದುದು

1. ಮೆಂಬುದು (ಘಚಛ). 2. (ಕಖ)ಗಳಲ್ಲಿಲ್ಲ.

## (೨) ಸುಕೌಶಳ ಸ್ವಾಮಿಯ ಕಥೆ

ಸುಕೌಶಳ ಸ್ವಾಮಿಯ ಕಥೆಯಂ ಪೇೞ್ವೆಂ :

ಗಾಹೆ ॥ ಮೊಗ್ಗಳ ಗಿರಿ[1]ಮ್ಮಿ[1]ಯ ಸುಕೌಸಳೋವಿ ಸಿದ್ಧತ್ಥ ದಯಿದಗೋ ಭಗವಂ ।
ವಗ್ಘೀಯೆ ಖಯಿದಂ ಪದಿದೋ ಪಡಿವಣ್ಣೋ ಉತ್ತಮಂ ಅಟ್ಠಂ ॥

[ಮೊಗ್ಗಳ ಗಿರಿಮ್ಮಿಯ—[2]ಮೊಗ್ಗಳಮೆಂಬ[2] ಪರ್ವತದೊಳ್. ಸುಕೌಸಳೋವಿ—ಸುಕೌಸಳಸ್ವಾಮಿಯುಂ. ಸಿದ್ಧತ್ಥ ದಯಿದಗೋ—ಸಿದ್ಧಾರ್ಥನೆಂಬ ಪರೆದನ[3]ಕಾದಲಿಸೆ[3] ಪಡುವ ಮಗಂ. ಭಗವಂ—ಪೆರ್ಮೆಯನೊಡೆಯೊಂ, ವಘ್ಘೀಯೆ ಖಯಿದಂ ಪದಿದೋ—ಮುನ್ನಿನ ಭವದ ತಾಯಪ್ಪ ಪೆಣ್ಬುಲಿಯಿಂದಂ ತಿನೆ [4]ಬ[ರ್ದಿ]ದೊಳ[4]ನಾಗಿಯುಂ, ಪಡಿವಣ್ಣೊ—ಪೊರ್ದಿದೊಂ. ಉತ್ತಮಂ ಅಟ್ಠಂ—ಮಿಕ್ಕ ದರ್ಶನ ಜ್ಞಾನ ಚಾರಿತ್ರಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ದಕ್ಷಿಣ ಭರತಕ್ಷೇತ್ರದೊ[5]ಳಂಗಮೆಂ[5]ಬುದು ನಾಡಲ್ಲಿ ಚಂಪಾನಗರಮೆಂಬುದು ಪೊೞಲದನಾಳ್ವೊಂ ಗಂಧಭಾಜನನೆಂಬರಸನಿಂದ್ರನೊಳೋರಂತಪ್ಪ ಭೋಗೈಶ್ವರ್ಯವಿಭವಮನೊಡೆಯೊಂ [6]ನ್ಯಾ[6]ಯದಿಂದಂ ಪ್ರಜೆಗಳಂ[7] ಪ್ರತಿಪಾಳಿಸುವೊ[7] [8]ನಧಿಗಮ[8] ಸಮ್ಯಕ್ ದೃಷ್ಟಿಯುಪ್ಪನೇೞು ಗುಣಂಗಳಿಂದಂ ಕೂಡಿ[9]ದೊ[9]ನಾಯೇೞುಂಗುಣಂಗಳೆಂಬುವಾವುವೆಂದೊಡೆ

ಗಾಹೆ ॥ ಸಮ್ಮದ್ದಸ್ಸಣಸುದ್ಧೋ ಕವ್ಮೋ ಸುಸೀಲಗುಣಣಿಳಯೊ ।
[10]ಉಜುಗತ್ತೋ ಗುರುಭತ್ತೋ ಪವಯಣ ಕುಸಳೋ ಮದಿಪ್ಪಗಬ್ಭೋಯ ॥

ಎಂದೇೞುಂ ಗುಣಂಗಳಿಂದಂ ಕೂಡಿದೊನಂತಪ್ಪರಸಂ ಶರತ್ಕಾಲದ ಮುಗಿಲೊಳೋರಂತಪ್ಪುದನಾದಮಾನುಂ ವಿಚಿತ್ರಮಪ್ಪುದಂ ಸಹಸ್ರಕೂಟಮೆಂಬ ಜಿನಾಲಯಮಂ ಮಾಡಿಸಿ ಅದರ್ಕನವರತಂ ಮಹಾಪೂಜೆಯುಮಂ ಮ[11]ಹಿಮೆ[11]ಯುಮಭಿಷೇಕಂಗ[12]ಳುಮಂ[12] ಸಲಿಸುತಿರ್ಪೊಂ ಮತ್ತಾ ಪೊೞಲೊಳೊರ್ವಂ ಸಾಗರದತ್ತನೆಂಬೊಂ ಸೆಟ್ಟಿಯಾತನ ಭಾರ್ಯೆ ಸುಭದ್ರೆಯೆಂಬೊಳಾಯಿರ್ವರ್ಗಂ ಮಗಳ್ [13]ಸು[13]ರೂಪೆಯೆಂಬೊಳ್ ಮತ್ತಾಪೊೞಲೊಳ್ ಪೆಱನೊರ್ವಂ ಸೆಟ್ಟಿ ನಾಗದತ್ತನೆಂಬೊನಾತಂಗೆ [13]ಸು[13]ರೂಪೆಯಂ ಕೊಟ್ಟೊಡಾಯಿರ್ವರ್ಗಂ ಸುಕೇ[14]ಶಿನಿಯೆಂ[14]ಬ ಮಗಳಾದಳಾಕೆ

---

1. ಮಿ (ಖ). 2. ಮುದ್ಗರಗಿರಿಯೆಂಬ ಪರ್ವತದೊಳ್ (ಗಘಚಛ). 3. ಕಾಲದಲಿಸೆ (ಸ–ಛ). 4. ಬಳ್ದಿ (ಖಗ). ಪಡುತಿರ್ದೊನಾಗಿಯುಂ (ಘಚಛ), ಬಳ್ದಿದ (ಕ). 5. ಳ್ ಗಂಗೆಯೆಂ (ಕಖಗ). 6. ನ (ಕ). 7. (ಕ)ದಲ್ಲಿ ನಷ್ಟವಾಗಿದೆ. 8. ನಿದಿಗವಾಗಮು (ಕ)...ವಾ (ಖ). 9. ದ (ಕ). 10. ವಜುಗಂತೋ (ಖಗ), ವಜುಗುಲತೋ (ಘ). ಉಜುಗುಲತೋ (ಚಛ). 11. ಯ್ಮೆ (ಕ). 12. ಳ್ಮಂ (ಕಖಗ). 13. ಸ್ವ (ಕಗ). 14. ಶಿಯೆಂ (ಕ).

[1]ಬ[1]ಳೆದಿತ್ತಂತ ರೂಪಲಾವಣ್ಯ ಸೌಭಾಗ್ಯ ಕಾಂತಿ ಹಾವಭಾವವಿಲಾಸವಿಭ್ರಮಂಗಳ ನೊಡೆಯೊಳ್ ಪಲವುಂ ತೆಱದ ಶುಭಲಕ್ಷಣಂಗಳಿಂದಂ ಕೂಡಿದ ಮೆಯ್ಯನೊಡೆಯೊಳ್ ನವಯೌವನೆ ದೇವಗಣಿಕೆಯನೆ ಪೋಲ್ವಳೊಂದು ದಿವಸಂ ಅಷ್ಟಮಿ[2]ಯುಂ ನೋಂತು[3] ದೇವರನರ್ಚಿಸಲೆಂದು ಸಹಸ್ರಕೂಟ ಚೈತ್ಯಾಲಯಕ್ಕರ್ಚನೆಯುಂ ಕೊಂಡು ಪೋದಳನ್ನೆ ಗಮರಸನು[3]ಮಾಗಳೆ ದೇವರಂ ಬಂದಿಸಲ್ ಬಂದೊಡರಸಂಗೆ ನಾಣ್ಚಿ ಬಸದಿಯೊಳಗಣ ಕಂಬದ ಮಱೆಯೊಳ್ ಕೇರಂ ಸಾರ್ದು ಪೊನ್ನ ಬೆಳಗುವ ಗಳಂತಿಗೆಯನಾದವಮಾನು ಪೊಪ್ಪುತ್ತಿರ್ದುದಂ ಪಿಡಿದು ನಿಂದಿರ್ದೊಳನರಸಂ[3] ಕಂಡಿಲ್ಲಿಯ ಚಿತ್ರದ ಲೆಪ್ಪದ [4]ಕಾಷ್ಠಕರ್ಮದ[4] ರೂಪುಗಳೊಳೆಲ್ಲ[5]ಮಿಾ[5] ಸ್ತ್ರೀಯ ಜೀವ[6]ವಿದ್ಧ[6]ಮಿಂತುಟತಿಶಯ [7]ಮೆಂದರಸನಾಕೆಯ ರೂಪಿಂಗಚ್ಚರಿವಟ್ಟು[7] ಪೊಗೞ[3] ಕೆಲದೊಳಿರ್ದ ಕಚ್ಚಿದ್ದೇವದತ್ತ ನೀಕೆ ಕನ್ನೆ[8]ಯಿರ್ದೊ[8]ಳೆಂದು ಪೇೞ್ದೊಡಾರ ಮಗಳೆಂದು ಬೆಸಗೊಂಡೊಡೀ ಪೊೞಲ್ಗೆ ಪ್ರಧಾನಂ ನಾಗದತ್ತ ಸೆಟ್ಟಿಯ ಮಗಳೆಂದು ಪೇೞ್ದೊಡರಸಂ ಕೇಳ್ದು ಕೆಮ್ಮಗಿರ್ದು ದೇವರ್ಗೆ ನಮಸ್ಕಾರಂಗೆಯ್ದು[9] ಋಷಿಯರಂ ಬಂದಿಸಿ ತನ್ನ ಮನೆಗೆ ಪೋದನ್

ಇತ್ತ ಸುಕೇಶಿನಿಯುಂ ದೇವರನರ್ಚಿಸಿ ಬಂದಿಸಿ ಗುರುಪರಿವಿಡಿಯಿಂದಂ ರಿಸಿಯರಂ ಬಂದಿಸಿ ವ್ರತಂಗಳನೇಱಿಸಿಕೊಂಡು ಸಿದ್ಧಸೇಸೆಯುಂ ತಾಯ್ಗಂ ತಂದೆಗಂ ಪೋಗಿ ಕೊಟ್ಟೊಡವರ್ಗಳುಂ[10] ತಲೆಯೊಳಿಟ್ಟುಕೊಂಡು ಯೌವನಂ ನೆಱೆದ ಕೂಸಿನ ರೂಪಂ ನೋ[11]ಡುತ್ತಿರ್ದಾ[11]ರ್ಗೆ ಕಂಡುವಮೆಂದು ತಮ್ಮೊಳ್ ನುಡಿಯುತ್ತಿರ್ಪಿನ ಮರಸಂ ಕನ್ನೆಯ ರೂಪಂ ಕಂಡಾಟಿಸಿ ಕೂಸಿನ ತಾಯುಪ್ಪ ಸುರೂಪೆಗೆ ಬಟ್ಟೆಯನಟ್ಟಿ ಬರಿಸಿ ಕೂಸನಾರ್ಗೆ ಕೊಟ್ಟಪಿರೆಂದು ಬೆಸಗೊಂಡೊದೆನ್ನ ತಮ್ಮಂ ವರಾಂಗನೆಂಬೊ ನಾತನ ಮಗಂ ಜಿತರಂಗನೆಂಬೊನೆನ್ನ ಸೋದರಳಿಯನಾತಂಗೆ ಕೊಟ್ಟಪೆನೆಂ[12]ದು ಪೇೞ್ದೊ[12]ಡರಸಂ ಮಧುಸೇನಂ ಮಧುಸೂದನರೆಂಬಿರ್ವರ್ ಪ್ರಧಾನವರ್ಗಡೆಗಳಂ ನಾಗದತ್ತಸೆಟ್ಟಿಯಲ್ಲಿಗೆ ಕೂಸಂ ಬೇ[13]ಡಿಯ[13]ಟ್ಟಿಯುತ್ತವಳನಾಗಿಯುವರ ಬಟ್ಟೆಯನೆ ತಾನುಂ ನಾಗದತ್ತನ ಮನೆಗೆ ಪೋಗಿ ಕೂಸಂ ಬೇಡಿ ಪೆತ್ತಂ ನಾಗದತ್ತನುಮುಪ್ಪಾಟ್ಟಿಕ ಮಹಾಮಹಿಮೆಯನೆಂಟು ದಿವಸಂ ಮಾಡಿ ಪ್ರಶಸ್ತ [14]ದಿನ[14] ವಾರ ನಕ್ಷತ್ರ ಮುಹೂರ್ತ ಹೋರಾಲಗ್ನದೊಳ್ ಕೂಸಿನನುಕೂಲದೊಳ್ ಪಾಣಿಗ್ರಹಣ ಪುರಸ್ಸರಂ ಸುಕೇಶಿನಿಯುಂ ಗಂಧಭಾಜನನೆಂಬರಸಂಗೆ ಕೊಟ್ಟನಿಂತು ಮಹಾವಿಭೂತಿಯಿಂದಂ ಮದುವೆ ನಿಂದು ಗಂಧಭಾಜನ ನೃಪತಿಯುಂ ಸುಕೇಶಿನಿಯೊಳಿಷ್ಟವಿಷಯಕಾಮ ಭೋಗಂಗಳಂ ಪಲಕಾಲಮನುಭವಿಸುತ್ತಿರೆ

ಮತ್ತೊಂದು ದಿವಸಂ [15]ಕೌಶ[15]ಲಾಧಿಪತಿಯಪ್ಪತಿಬಳನೆಂಬರಸಂಗಂ ಕಳಿಂಗಾಧಿ

---

1. ಬೆ (ಕ). 2. ಯ ನೋಂಪಿಗೆ (ಕ). 3. (ಕಖಗ)ಗಳಲ್ಲಿ ಈ ಭಾಗ ಇಲ್ಲ. 4. ಕಲ್ಲುಮರದಲ್ಮಾಡಿದ (ಕಗ). 5. + ಮಿಲ್ಲ (ಕ). 6. ರೂಪಿದು (ಕಖಗ). 7. ಮುಪ್ಪ ರೂಪೆಲ್ಲಿಯುಮಿಲ್ಲೆಂದರಸಂ (ಖ). 8. ವಳ್ದೊ (ಕ). 9. + ಪೊಡೆವಟ್ಟು (ಖ). 10. + ತಮ ಗಿತ್ತ ಸೇಸೆಯುಂ (ಘಚಛ). 11. ಡುತ್ತಿರ್ದೊಂತಮಾ (ಕಖಗ). 12. ದೊ (ಕ). 13. ಡಲ (ಕ). 14. ದಿವಸ (ಖ). 15. ಕಂಸ (ಕ).

ಪತಿಯಪ್ಪ ಕಳಿಂಗನೆಂಬರಸಂ ತನ್ನೊಳ್ ವಿಗ್ರಹಮಾದೊಡೆ ಗಂಧಭಾಜನ ನೃಪತಿ ತನ್ನ ಮತಿ[1]ಶ್ರುತ[1]ನೆಂಬ ಮಂತ್ರಿಯುಮಟ್ಟಿ ಇರ್ವರ್ಗ್ಗಂ ಸಂಧಿಮಾಡಿದೊಡೆ ಕಳಿಂಗನೆಂಬರಸಂ ಮಧುಸೂದನನೆಂಬ ಪೆರ್ಗ್ಗಡೆಯ ಕೆಯ್ಯೊಳ್ ಮದಾಂಧ [2]ಗಂಧ ಹಸ್ತಿಯುಂ[2] ಗಂಧಭಾಜನನೃಪತಿಗೆ ಪಾಗುಡಮಟ್ಟಿದೊಡದಂ ಸೊರ್ಕ್ಕಿನಿಂದಂ ಮಸಗಿದುದು ಗಂಧಹಸ್ತಿಯುಮಂ ಸುಕೇಶಿನಿ ಕಂಡು ಜಾತಿಸ್ಮರೆಯಾಗಿ ಮೂರ್ಛೆ ವೋಗಿದ್ದೊರ್ಳಂ ದಾದಿ ಮೊದಲಾಗಿ ಕೆಲದೊಳಿದ್ದೊರ್ವರೆಲ್ಲಂ ಚಂದನದ [3]ನೀರ್ಗಳಂ[3] ತಳಿದು ಬೀಸೆ ನೀಡಱಿಂಪೆಟ್ಟೆತ್ತಳನ್ನೆಗಮರಸನುತ್ತಮವಳನಾಗಿ ಪರಿತಂದಿದೇನೀಕೆಗೇ ಕಿಂತಾಯ್ತೆಂದು ಬೆಸಗೊಳೆ ದಾದಿಯೆಂದಳ್ ಸೊ[4]ರ್ಕ್ಕಾನೆ[4]ಯುಮಂ ಕಂಡು ಮೂರ್ಛೆ ವೋದಳೆಂದು ಪೇೞ್ದೊಡಾ ಮಾತನರಸಂ ಕೇಳ್ದು [5]ಮಱುಸೋಱನಾನೆಯುಂ[5] ಕಂಡೆಂಜ ದಂ[6]ತಿರೆ[6] ಸುಕೇಶಿನಿಯ ಮಾಡದ ಕೇಗ್ಗಳೆಲ್ಲಾಯೆಡೆಗಳೊಳಂ ವ್ಯಾಳಂಗಳಪ್ಪಾನೆ ಗಳಂ ತನ್ನ ಚಿತ್ತಾರಿಗರಿಂದಂ ಬರೆಯಿಸಿದಂ ಮತ್ತೆ ಸುಕೇಶಿನಿಯುಂ ತನ್ನ ಮುನ್ನಿನ ಜನ್ಮದೊಳ್ ನೆಗೞ್ದುದೆಲ್ಲಮಂ ಪಟದೊಳ್ ತಾನೆ ಬರೆದಾರುಮಱಿಯದಂತಿರೇಕಾಂತ ದೊಳ್ ನೋಡುತ್ತಿರ್ಕ್ಕುಮಿಂತು ಕಾಲಂ ಸಲೆ

ಮತ್ತೊಂದು ದಿವಸಂ ಮುನ್ನಿನ ಗಂಧಹಸ್ತಿಯೊಡನೆ [7]ದಾರಿ[7]ಯೊಳ್ ಮೂವ ತ್ತೆರಡು ಗಜಕ್ರೀಡೆಗಳಿಂದಂ ನೀಡುಂ ಬೇಗಂ ಕ್ರೀಡಿಸಿಯಾನೆಯುಂ ಸೇದೆಗೆಡಿಸಿ ತನ್ನ ಬಸಕ್ಕೆ ಮಾಡಿಯೇಱಿಯಂಕುಸಮಂ ಪೊಳೆಯಿಸುತ್ತಮರಸಿಯಲ್ಲಿಗೆ [8]ವಂ[8]ದು ನೀಂದಿಂತಕ್ಕುಮೆ [9]ಮ[9]ಚ್ಚಿದಾ ಎಂದು ತನ್ನ ಸಾಹಸಮಂ ಪೇೞ್ದು ಮೆಱೆಯೆ ಸುಕೇ ಶಿನಿಯುಂ[10]ದೊ[10]ಳಿದೇ[11]ನೆಂಬಾನೆ[11] ತಗರೊಳೋರಂತಪ್ಪುದು ಚಂದನಮಲಯಮೆಂಬ ಪಿರಿಯ ಪರ್ವತದೊಳ್ ಇಂದ್ರನೀಲ ಮಾಣಿಕದೊಳೋರಂತಪ್ಪ ಬಣ್ಣಮನೊಡೆಯದು ಮಲಯಸುಂದರನೆಂಬಾನೆಯುಂಟು ಹಸ್ತಿಯೂಥಕ್ಕೆಱೆಯನಪ್ಪುದು ಎಲ್ಲಾ ಕಾಲಮುಂ ಮದದಿಂದಂ ಪೆರ್ಚುತ್ತಿರ್ದುದು ಕೆಂದಾವರೆಯ ವಣ್ಣದೊಳೋರಂತಪ್ಪ ಬಣ್ಣಮ ನೊಡೆಯ ಪದ್ಮಾವತಿಯೆಂಬ ಪಿಡಿ[12]ಯೊಡನೆ[12] ಕ್ರೀಡಿಸುತ್ತಿಪ್ಪಾನೆಯುಂ ನಿನ್ನ ವಸಕ್ಕೆ ಮಾಡಿ ಪಿಡಿದೇಱಿಕೊಂಡು ವಂದೊಡೆ ನಿನ್ನ ಗಜ[13]ಪ್ರಿಯತೆಯುಮೇಱಿ ಯಾಡಲ್[13] ಬಲ್ಮೆಯುಂ ಕಲಿತನಮುಂ ಸಾಹಸಮುಂ ಗಂಡಗುಣಮುಮನಱಿಯ ಲಕ್ಕುಮಾ ಯಾನೆಯುಂ ತಂದೆದು ಗಂಡರ್ ನಿನ್ನನ್ನರೀ ಭುವನದೊಳಾರುಮಿಲ್ಲೆಂದೊ ಸೆದು ಮೆಚ್ಚಿ ಪೊಗೞ್ವೆನೆಂದೊಡರಸ[14]ನಿಂ[14]ತೆಂದಂ ನೀನಪ್ಪೊಡಿಲ್ಲಿ ಪುಟ್ಟಿದೆ ಆ ಯಾನೆ ಯನೆಲ್ಲಿ ಕಂ[15]ಡೆಮೆಂ[15]ತಱಿವೆಯೆಂದು ಬೆಸಗೊಳೆ ಸುಕೇಶಿನಿಯಿಂತೆಂದಳ್

1. ವರ (ಘಚಛ). 2. ಸಿಂಧುರಮುಂ (ಘಚಜ). 3. ಹಿಮಸಲಿಲಂಗಳಂ (ಘಚಛ). ಕ್ರೀಡಾ (ಕ). 5. ಮಧುಸೂದನನಾನೆಯುಂ (ಘಜಛ). 6. ತೆ (ಘಚ). 7. ಚಾಲಿ (ಕ), ಬಾಳಿ (ಖ), ಬಾಲಿ (ಗ), ಬಾವಿ (ಚ) 8. ಬಂ (ಕ) 9. ಮೆ (ಖ). 10. ಬ (ಕ). 11. ದೇತಜಾನೆ (ಚ). 12. ಯನೆ (ಕ). 13 ಬಂಧನೋಪಾಯಕುಶಳಿಕೆಯುಮಜುವಿನೋದು (ಘಚಛ), ಪ್ರೀತಿಯುತಿರ್ಕೆಯುಮೇಱಿಯಾಡಲ್ (ಕಗ). 14. ಗಿ (ಖ). 15. ಡಱಿಯೆಯಂ (ಕ).

ಆಂ ಮುನ್ನಿನ ಜನ್ಮದೊಳ್ ಮನೋವೇಗೆಯೆಂಬ ವಿದ್ಯಾಧರಿ ಎನ್ನಿಂದಿನ ಭರ್ತಾರಂ ಮಣಿ[1]ಚೂ[1]ಳನೆಂಬೊಂ ವಿದ್ಯಾಧರನಾತನೊಡನೆ ಭೌಮವಿಹಾರಾರ್ಥಂ ತೊೞಲ್ವಲ್ಲಿ ಚಂದನಮಲಯಮೆಂಬ ಪರ್ವತದೊಳ್ ಕರಿಣೀವೃಂದಂ ಬೆರಸಾಡುವ ಕರಿ[2]ಪತಿ[2]ಯನೈರಾವಣ ಸನ್ನಿಭಮಂ ಕಂಡೆನೆಂದುಕ್ಕೆವದಿಂದಂ ಪೇೞ್ದೊಡಾ ಮಾತನರಸಂ ಕೇಳ್ದು ಪೂರ್ವಜನ್ಮಾಂತರದೊಳ್ ಕಟ್ಟಿಪಟ್ಟ ಮುಳಿಸನೊಡೆಯೊಂ ತನ್ನಾಳ್ವ ಸಮಸ್ತ ಬಲಂಬೆರಸು ಪೋಗಿ ಮಲಯಪರ್ವತಮೆಲ್ಲಮಂ ಬಳಸಿ ಸುತ್ತಿಮುತ್ತಿದಾಗಳಿಂದ್ರನೀಲಮಾಣಿಕದ ತೇಜದೊಳೋರಂತಪ್ಪ ಮೆಯ್ಯನೊಡೆಯ ಗಜಪತಿಯುಂ ಮುಗಿಲ ಧ್ವನಿಯುವೊಲ್ಗಂಭೀರಮಪ್ಪ ಗರ್ಜನೆಯನೊಡೆಯುದಂ ಬಂದು ಪಡೆಯೆಲ್ಲಮಂ ಪತವಿತತಕೋಳಾಹಳಮೆೞ್ದು ಕೊ[3]ಲ್ವ[3]ದನಾದಮಾನುಂ ಕಲಿಯುಪ್ಪುದನರಸಂ ಕಂಡು ಪಿಡಿಯಲಾಱದಾನೆಯುಂ ಕೊಂದೆರಡುಂ ನಿಡಿಯ ತೋರಮಪ್ಪ [4]ಕೊಂಬುಗ[ಳುಮಂ] [4]ಕುಂಭಸ್ಥಳದ ಮುತ್ತುಗ[4][ಳುಮಂ][4] ಕೊಂಡೊಸಗೆಯಿಂದಂ ಬೇಗಂ ಚಂಪಾಪುರಕ್ಕೆ ವಂದರಮನೆಯುಂ ಪೊಕ್ಕರಸಿಯುಂ ಕಂಡು ನಿನ್ನ ನಚ್ಚುವ ಮಲಯಸುಂದರನ ಕೊಂಬುಗ[5][ಳುಮಂ][5] ಮುತ್ತುಗ[6][ಳುಮಂ][6] ಕೊಳ್ಳೆಂದವಂ ಸುಕೇಶಿನಿಯ ಮುಂದೆ ತಂದಿಟ್ಟೊಡೆ ಸುಕೇಶಿನಿಯುಂ ಹಾ ಮಲಯಸುಂದರಾ ಹಾ ಎನ್ನ ನಲ್ಲನೆ ಹಾ ಎನ್ನ ಮಲಯಸುಂದರನಪ್ಪ ಸ್ವಾಮಿಯೆಂದು ಪ್ರಳಾಪಂಗೆಯ್ದು ಎರಡು ಕೊಂಬುಗಳುಮಂ ತೞ್ಕೈಸಿಯಾಡಮಾನುಂ ಬಿಗಿದಪ್ಪಿಕೊಂಡು ಸತ್ತಳ್ ಸುಕೇಶಿನಿ ಸತ್ತುದರ್ಕ್ಕರಸಂ ಮೊದಲಾಗಿ ಪರಿವಾರಮೆಲ್ಲಂ ಬೆಱಗಾಗಿ ವಿಸ್ಮಯಂಬಟ್ಟು ದುಃಖಂಗೆಯ್ದರ್

ಕೆಲವು ದಿವಸದಿಂ ಯಶೋಧರರೆಂಬ ಕೇವಲಜ್ಞಾನಿಗಳ್ ವಿಹಾರಿಸುತ್ತಮಾ ಚಂಪಾನಗರಕ್ಕೆ ವಂದು ಪ್ರಮದೋದ್ಯಾನವನದೊಳಿರ್ದ್ದರೆಂಬ ಮಾತನರಸಂ ಋಷಿನಿವೇದಕನಿಂದಱಿದು ಸಪರಿವಾರಂ ಬೆರಸು ಬಂದರ್ಚಿಸಿ ಯಥೋಚಿತಸ್ಥಾನದೊಳಿರ್ದಂ ಮತ್ತಂ ನಾಗದತ್ತ ಸೆಟ್ಟಿಯುಂ ಸುರೂಪೆಯುಂ ವರಾಂಗನುಂ ಪ್ರಿಯಂಗುವುಂ ಮೊದಲಾಗೊಡೆಯ ಶ್ರಾವಕ ಜನಂಗಳ್ ಬಂದರ್ಚಿಸಿ ನಮಸ್ಕಾರಂಗೆಯ್ದರ್ [7]ತಮ್ಮಡಿ[7]ಗಳೊಳಿರ್ದು ಧರ್ಮಮಂ ಕೇಳ್ದು ತದನಂತರಮೆ ವೈರಾಗ್ಯಮಾಗಿ ಸುಕೇಶಿನಿಯ ದುಃಖಮಂ ಸೈರಿಸಲಾಱದೆ ಸುಕೇಶಿನಿಯ ತಂದೆಯಪ್ಪ ನಾಗದತ್ತ ಸೆಟ್ಟಿಯುಂ ತಾಯ್ ಸುರೂಪೆಯುಂ ಮಾವನಪ್ಪ ವರಾಂಗನುಂ ವರಾಂಗನ ಭಾರ್ಯೆಯಪ್ಪ ಪ್ರಿಯಂಗುವುಮಂತು ನಾಲ್ವರುಮಭಿಮುಖರಾಗಿ ದೀಕ್ಷಾಪ್ರಸಾದಂಗೆಯ್ಯಿಂ ಭಟಾರಾ ಎಂದು ಬೇಡಿ ತಪಂಬಟ್ಟರ್ ಮತ್ತಂ ಸುಕೇಶಿನಿಯಾ ಮಲಯಸುಂದರನೆಂಬಾನೆಯ ಕೊಂಬುಗಳನಪ್ಪಿ ಸತ್ತಳೆಂಬ ಮಾತಂ ವರಾಂಗನುಂ ಕೇಳ್ದು ಜನ್ಮಾನುಬಂಧಿಯಪ್ಪ ಸ್ನೇಹಂ ಕಾರಣಮಾಗಿ ದುಃಖಮಂ ಸೈರಿಸಲಾಱದೆ ತಪಂಬಟ್ಟು ನಿದಾನಸಹಿತಂ ತಪಂಗೆಯ್ದು ನಿತ್ತ ಗಂಧಭಾಜನ ನೃಪತಿ ಯಶೋಧರ ಕೇವಲಿಗಳ

1. ಮಾ (ಭ). 2. ಯಪಿರಿ (ಫಚಫ). 3. ಳ್ವ (ಖ). 4. ಕೋಡುಗಳ್ಮಂ (ಫಚಫ), ಕೊಂಬುಗಳ್ಮಂ (ಕಮಿಗ). ಳ್ಮಂ (ಸ). 6. ಳ್ಮಂ (ಸ). 7. ತಂಮಂದಿರಂ (ಕ). ತಂತಮ್ಮೆಡೆಯೊ (ಫಚಫ).

ನಿಂತೆಂದು ಬೆಸಗೊಂಡಂ ಭಟಾರಾ ಸುಕೇಶಿನಿ ಮಲಯಸುಂದರನೆಂಬಾನೆಯು ಕೊಂಬುಗಳನಪ್ಪಿಕೊಂಡು ಸತ್ತುದರ್ಕ್ಕೆ ಕಾರಣಮೇನೆಂದು ಬೆಸಗೊಂಡೊಡೆ ಕೇವಲಜ್ಞಾನಿಗಳಿಂತೆಂದು ಪೇೞ್ದರ್

ದಕ್ಷಿಣಾಪಥದೊಳ್ [1]ದ್ರವಿಳ ವಿಷಯದೊಳ್[1] ದಕ್ಷಿಣ ಮಧುರೆಯೆಂಬುದು ಪೊೞಲದನಾಳ್ವೊಂ [2]ಸುಂದರ[2]ಪಾಂಡ್ಯನೆಂಬೊನರಸನಾತನರಸಿಯುಮ್ಮೃತಮಹಾದೇವಿಯೆಂಬೊಳಂತವರ್ಗ್ಗಳಿಪ್ಪ ವಿಷಯ ಕಾಮಭೋಗಂಗಳನನುಭವಿಸುತ್ತಿರೆ ಮತ್ತಮಾ ಪೊೞಲೊಳಾರ್ಯನಂದಿಯೆಂಬೊಂ ಸೆಟ್ಟಿಯಾತನ ಪರದಿ[3]ಯುವಿಧಿ[3]ಯೆಂಬೊಳಾ[4]ಇರ್ವರ್ಗ್ಗಂ ಸುಕೀರ್ತಿಯೆಂಬೊಳ್ ಮಗಳಾದಳ್ ಮತ್ತೊರ್ವನಾ ಪೊೞಲೊಳ್ ಸುದರ್ಶನನೆಂಬೊಂ ಪರದನಾತನ ಪರದಿ ವೀರಶ್ರೀಯೆಂಬೊಳಾಯಿರ್ವರ್ಗ್ಗಂ ಮಗಂ ಪ್ರಿಯದರ್ಶನನೆಂಬೊನಾತಂಗಾ ಸುಕೀರ್ತಿಯಂ ಕೊಟ್ಟರ್ ಸುಕೀರ್ತಿಯು ಕೆಳದಿ ಮಾಲೆಗಾರ್ತಿ ಪ್ರಿಯಸೇನೆಯೆಂಬೊ[4]ಳಂತವರ್ಗ್ಗಳಿಪ್ಪ ವಿಷಯ ಕಾಮಭೋಗಂಗಳನನುಭವಿಸುತ್ತಿರೆ ಮತ್ತೊಂದು ದಿವಸಂ ಸುಕೀರ್ತಿ ತನ್ನ ಭರ್ತಾರನನಿಂತೆಂದಳಡವಿಯೊಳಂ ಪರ್ವತಂಗಳೊಳಂ ಪುಳಿನಸ್ಥಳಂಗಳೊಳಮೆನಗೆ ಕ್ರೀಡಿಸಲೞ್ತಿಯಾದುದೆನೆ ನಿನ್ನೞ್ತಿಯಂ ನೆಱಪಲಕ್ಕುಮೆಂದು ಪ್ರಿಯದರ್ಶನನುಂ ಸುಕೀರ್ತಿಯುಂ ಪ್ರಿಯಸೇನೆಯುಮಂತು ಮೂವರುಂ ಪರಿವಾರಸಹಿತಮಡವಿಗೆ ಪೋಗಿಯಲ್ಲಿ [5]ಕಾನನ ವನ ಸರಿತ್ಸರೋವರ[5] ಪ್ರದೇಶಂಗಳೊಳ್ ಪರಿಜನಂಬೆರಸು ತದೀಪ್ಸಿತ ಪ್ರದೇಶಂಗಳೊಳ್ ವಿಹಾರಿಸಿ [6]ರಮ್ಯಮಪ್ಪ ಗಿರಿನದಿಯ ಪುಷ್ಪಪಲ್ಲವಲತಾ[6]ಕೀರ್ಣಮಪ್ಪ ಪುಳಿನಸ್ಥಳಂಗಳೊಳ್ ಕ್ರೀಡಿಸುತ್ತಿರ್ಪನ್ನೆಗಂ ಹಸ್ತಿಯೂಥಂ ಬಪ್ಪುದಂ ಕಂಡಾಗಳೊಂದು ಮದಾಂಧಗಂಧಸಿಂಧುರಂ ಕರಿಣೀವೃಂದಂಗಳಿಂ ಪರಿವೇಷ್ಟಿತನಾಗಿ ಕರಿಣೀಗಣಂಗಳಾ[7]ಕಾಶಪುಷ್ಪಂಗಳಿಂ[7] ಚಾಮರಮಿಕ್ಕೆ ಮೃದು ಪಲ್ಲವಂಗಳಂ ಕಬಳಂಗೊಳುತ್ತುಂ ಲೀಲೆಯಿಂ ಬಂದು ಸ್ವಚ್ಛ [8]ವಿಚ್ಛಳಾಕಾರ[8]ಮಪ್ಪ ಮಡುವಂ ಪೊಕ್ಕು ಮನೋಹಾರಿಗಳಪ್ಪ ಕರಿಣೀಗಣದೊಡನೆ ಕ್ರೀಡಿಸುವುದಂ ಮೂವರುಂ ಕಂಡು ಹಸ್ತಿಭೋಗಂಗಳೊಳಪ್ಪ ಕಾಂಕ್ಷೆಯಿಂದಂ ನಿದಾನಂಗೆಯ್ದು ತಿರ್ಯಗಾಯುಷ್ಯಮಂ ಕಟ್ಟಿದರಿಂತು ಕಾಲಂ ಸಲೆ ಮತ್ತೊಂದು ದಿವಸಂ ಬಱಸಿಡಿಲ್ ಪೊಡೆದು ಪ್ರಿಯಸೇನೆ ಸತ್ತಳ್ ಪ್ರಿಯದರ್ಶನನೊಂದು ದಿವಸಂ ತನ್ನ ಭಾರ್ಯೆವೆರಸು ಕದಳೀವನದೊಳ್ [9]ಮಱಲುಂದಿದಲ್ಲಿಗೆ[9] ಕಾಳಂಗನಾಗಂ ಬಂದೊಡದಱ ಮೇಗೆ ಕಾಲಂ ನೀಡಿದೊಡೆ ಕರ್ಚ್ಚಿತ್ತಾತನುಮಾಗಳೆ ಪರವಶನಾಗಿ ಪ್ರಾಣಪರಿತ್ಯಾಗಂಗೆಯ್ದನಂ ಕಂಡು ಸುಕೀರ್ತಿಯುಂ ಕಾದಲನ ವಿಯೋಗಂ ಕಾರಣಮಾಗೆ ಪ್ರಾಣವಲ್ಲಭನ ಸುರಿಗೆಯಂ ಕೊಂಡು ತನ್ನ ತಾನಿಱಿದು[10] ಸತ್ತಳ್

1. (ಕಖಗ) ಪ್ರತಿಗಳಲ್ಲಿಲ್ಲ 2. ಗಂದರ (ಗ), ಗಾಂದಾರ (ಘಚ). ಗಂದಾರ (ಛ). 3. ಯುವಧಿ (ಕ). ತಿ ವೀರಶ್ರೀ (ಛ). 4. (ಕ)ದಲ್ಲಿ ಇಲ್ಲ. 5. (ಕ)ದಲ್ಲಿ ನಷ್ಟವಾಗಿದೆ. 6. (ಕ)ದಲ್ಲಿ ನಷ್ಟವಾಗಿದೆ. 7. ಳ್ ಪೊಸಕುಸುಮಂಗಳಿಂ (ಘಚಛ) 8. ವಿಚ್ಛಾಳಾಕ (ಖ), ಲಿಚ್ಛಾಳಾಕ (ಕಗ). 9. ಪಟ್ಟಿದ್ದಲ್ಲಿಗೆ (ಘಚಛ). 10. +ಕೊಂಡು (ಕ)

ಅಂತಾ ಮೂವರುಂ ಸತ್ತು ತೆಂಕಣ ಪಡುವಣ ಸಮುದ್ರದ ತಡಿಯೊಳ್
ಚಂದನಮಲಯಮೆಂಬಾದಮಾನುಂ ರಮ್ಯರಪ್ಪ ಪರ್ವತದೊಳ್ ಪ್ರಿಯದರ್ಶನ
ನಿಂದ್ರನೀಲ ಮಾಣಿಕದೊಳೋರಂತಪ್ಪ ಮೆಯ್ಯನೊಡೆಯದಾಗಿ ಸುಭದ್ರಜಾತಿ
ಯುಪ್ಪಾನೆಗೆ ಮಲಯಸುಂದರನೆಂಬಾನೆಯಾಗಿ ಪುಟ್ಟಿದೊಂ ಸುಕೀರ್ತಿಯುಂ ಧವಳ
ವರ್ಣಮಪ್ಪ ಮಲಯಾವತಿಯೆಂಬ ಪಿಡಿಯಾಗಿ ಪುಟ್ಟಿದಳ್ ಪ್ರಿಯಸೇನೆಯುಂ
ಕೆಂದಾವರೆಯ ವಣ್ಣದೊಳೋರಂತಪ್ಪ ಮೆಯ್ಯನೊಡೆಯ ಪದ್ಮಾವತಿಯೆಂಬ ಪಿಡಿ
ಯಾಗಿ ಪುಟ್ಟಿದಳಾಯೆರಡುಂ ಪಿಡಿಗಳುಂ ಸುಭದ್ರಜಾತಿಯುಪ್ಪಾನೆಗೆ ಪುಟ್ಟಿದವನ್ನಾ
ಮೂಱರ್ಕ[1]ಮಾರಣ್ಯ[1]ನಿವಾಸಿಗಳಪ್ಪ ಜನಂಗಳುಂ ತಾಪಸಾದಿಗಳುಮವಂ ಕಂಡೊ
ಗ್ಗಳಿಲ್ಲಮೊಸೆದು ಮೆಚ್ಚಿ ತದ್ದೇಹಾನುಸಾರಿಗಳಪ್ಪ ಪೆಸರನಿಟ್ಟುದಱಿಂದಾ ನಾಡೊಳ್
ಪ್ರಸಿದ್ಧಿಗೆ ಸಂದುವಂತವರ್ಕೆ ಕಾಲಂ ಸಲೆ ಮತ್ತಮಲ್ಲಿ ಯೂಥಾಧಿಪತಿ ಭದ್ರಜಾತಿ
ಯಪ್ಪ ಸುಂದರನೆಂಬಾನೆ ಚಾರಣರಿಸಿಯರ್ಕಳ ಪಾದಯುಗಳಂಗಳಂ ವಿದ್ಯಾಧರ
ನರ್ಚಿಸಿ ಪೊಡೆವಟ್ಟು ಪೋಪುದಂ ಕಂಡು ತಾನುಂ ನಿಚ್ಚಮಾ ಸ್ಥಿತಿಯೊಳ್
ತಾಮರೆಯ ಪೂಗಳಂ ತಂದರ್ಚಿಸಿ ಪೂಜಿಸಿ ಪೊಡೆವಟ್ಟು ಪೋಕುಮಿಂತು ಪುಣ್ಯಮಂ
ನೆರಪುತ್ತಂ ಕಾಲಂ ಸಲೆ ಮತ್ತೊಂದು ದಿವಸಂ ಪ್ರಭಂಕರಿಯೆಂಬ ಸರೋವರದೊಳ್
[2]ಮಲಯಸುಂದರಂ ಪೂರ್ವಭವದ ಪ್ರಾಣವಲ್ಲಭೆಯರ್ಕಳಂ ಕಂಡತಿಸ್ನೇಹದಿಂದಂ
ಪೊರ್ದಲಾಟಿಸುವುದಂ ಕಂಡು ಸುಂದರನೆಂಬಾನೆ ಸಾರಲೀಯದುದಱಿಂ ತದ್ವಿರಹ
ಪರಿತಪ್ತಮನದಿಂದಂ ಸಲ್ವುದಂ ನವಯೌವನಮನೆಯ್ದಿ[2] ಆತ್ಮಬಲಮನದಱ ಬಲ
ದೊಳ್ ವೃಕ್ಷಭಂಜನ ಸಾಮರ್ಥ್ಯದಿಂ ಪರೀಕ್ಷಿಸಿ ಮಱಿಯಾನೆ[3]ಗಳಂ[3] ಪರಿಭವ
ಮನದರ್ಕೆ ಕಂಡು ವೃದ್ಧನಪ್ಪಾ ಸುಂದರನೊಳ್ ಯುದ್ಧಂಗೆಯ್ದು ಕೊಂದಾ
ಯೂಥಕ್ಕೆಲ್ಲಮಧಿಪತಿಯಾಗಿ ಮಲಯಾವತಿಯುಮಂ ಪದ್ಮಾವತಿಯುಮನೊಡ
ಗೊಂಡಿಷ್ಟ ವಿಷಯಕಾಮಭೋಗಂಗಳನನುಭವಿಸುತ್ತಮಾಯೆರಡುಂ ಪಿಡಿಗಳ್
ತಮ್ಮೊಳನ್ಯೋನ್ಯ ಸ್ನೇಹದೊಳ್ ಕೂಡಿದುವು ಮಲಯಸುಂದರನ್ ಬಲದ ದೆಸೆ
ಯೊಳ್ ಮಲಯಾವತಿಗೆ ಪೋಪ ದಾಯಮನೆಡದ ದೆಸೆಯೊಳ್ ಪದ್ಮಾವತಿಗೆ ಪೋಪ
ದಾಯಮನಿತ್ತಂತು ಪ್ರಭಂಕರಿಯೆಂಬ ಸರೋವರದೊಳ್ ಸ್ವೇಚ್ಛೆಯಿಂ ಕ್ರೀಡಿಸಿ
ಪೊಱಮಡುವಾಗಳ್ ಮಲಯಾವತಿಯ ಮಸ್ತಕದೊಳ್ ವಿಕಸಿತ ಸಹಸ್ರಪತ್ರ
ಕುಸುಮಮನಿಡುವ ದಾಯಮಂ ಕೊಟ್ಟು ಸಲಿಸುತ್ತಂ ಉೞಿದ ಪಿಡಿಗಳೆಲ್ಲಮಂ ತೊಱೆ
ದಾಯೆರಡಱೊಳಮಾಸಕ್ತನಾಗಿ ಕಾಮ ಭೋಗಂಗಳನನುಭವಿಸುತ್ತಮಿಂತು ಸುಖ
ದೊಳಿರ್ಪ್ಪ ಕಾಲದೊಳ್

ಮತ್ತೊಂದು ದಿವಸಂ ಪ್ರಭಂಕರಿಯೆಂಬ ಕೊಳದೊಳ್ ಸ್ವೇಚ್ಛೆಯಿಂ ನೀಡುಂ
ಕ್ರೀಡಿಸುತ್ತಂ[4] ತಡಂಬಂದು ಮನಃಪೂರ್ವಕಮಲ್ಲದೆ ಪೊಱಮಡುವಾಗಳ್ ಪದ್ಮಾವತಿ
ಬಲದ ದೆಸೆಯೊಳಾಗಿ ಮಲಯಾವತಿಯೆಡದ ದೆಸೆಯೊಳಾಗಿ ಪೊಱಮಟ್ಟು ಬರೆ
ಮದಾಂಧ ಗಂಧಸಿಂಧುರಂ ಮದದಿಂ ಮೆಯ್ಯಱಿಯದೆ ಬಲದ ದೆಸೆಯೊಳಿರ್ದ

1. ಮೂಱನ್ನ (ತ). 2. (ಕಖಗ)ಗಳಲ್ಲಿ ಇಲ್ಲ. 3. ಮುಪ್ಪಂದಿನ (ಘಚಛ). 4. + ಮಾಮಾಟಂ ಮುಳುಗುತ್ತಂ (ಘಚಛ).

ಪದ್ಮಾವತಿಯುಂ ಮಲಯಾವತಿಗೆತ್ತು ಪದ್ಮಾವತಿಯಂ ಮಸ್ತಕದೊಳ್ ವಿಕಸಿತ ಸಹಸ್ರಪತ್ರ ಕುಸುಮಮನಿಟ್ಟೊಡೆ ಮಲಯಾವತಿ ನೋಡಿ ತನ್ನಂ ಪರಿಭವಿಸಿದನೆಂದು ಪದ್ಮಾವತಿಯೊಳಪ್ಪ ಪುರುಡುಂ ಕಾರಣಮಾಗಿ ಮುಳಿಸಿನಿಂದಂ ಚಂದಮಲಯ ಪರ್ವತದ ತುತ್ತತುದಿಯಿಂ ಬೇಗಂ ಪರಿದಡರ್ದಂತಲ್ಲಿಂದಂ ತನ್ನನಿಕ್ಕಿ ಮಲಯಾವತಿ ಶತಖಂಡಮಾಗಿ ಬಿಟ್ಟು ಸತ್ತತ್ತದಱ ಸತ್ತುದಂ ಮಲಯಸುಂದರಂ ಕಂಡು ಮಲಯಾವತಿಯ ವಿಯೋಗದೊಳಾದಮಾನುಂ ದುಃಖಂಗೈದು ಪದ್ಮಾವತಿಯನೊಡಗೊಂಡು ಪೋಯ್ತು ಮತ್ತು ಮಲಯಾವತಿಯೆಂಬ ಪಿಡಿ ಸತ್ತು ಸುಕೇಶಿನಿಯೆಂಬೊಳಾದಳಾ ಪದ್ಮಾವತಿಯೆಂಬ ಪಿಡಿಯುಮಾಯುಷ್ಯಾಂತದೊಳ್ ಸತ್ತು ಸುಕೇಶಿನಿಯ ತಾಯ್ ಸುರೂಪೆಯ ಸೋದರ ತಮ್ಮಂ ವರಾಂಗನಾದೊಂ ಮತ್ತಾ ಮಲಯಸುಂದರನಿಂದಂ ಕೊ[1]ಲೆಸತ್ತ[1] ಸುಂದರನೆಂಬಾನೆ ಸುವೇಗನೆಂಬ ವಿದ್ಯಾಧರನಿಂದಂ ಪೂಜಿಸೆಪಟ್ಟ ಚಾರಣರಿಷಿಯರ ಪಾದಪದ್ಮಯುಗಳಂಗಳುಮಂ ನೋಡಿಯುಪಶಮಕ್ಕೆ ಸಂದು ತಾನುಂ ತಾವರೆಯ ಪೂಗಳಂ ತಂದು ಪ್ರತಿದಿನಮರ್ಚಿಸಿ ಪೂಜಿಸಿ ಪೊಡೆವಟ್ಟು ಪೋಕುಮಾ ಚಾರಣರಿಷಿಯರಡಿವೊಣರನರ್ಚಿಸಿದ ಪುಣ್ಯದಿಂದಂ ಸತ್ತಿಲ್ಲಿ ನೀಂ ಚಂಪಾಪುರಕ್ಕಧಿಪತಿಯುಮ್ ಗಂಧಭಾಜನನೆಂಬರಸನಾದಯ್ ಸುಕೇಶಿನಿಯುಂ ಜಾತಿಸ್ಮರೆಯಾಗಿ ತನ್ನ ಮುನ್ನಿನ ಭವದ ಭರ್ತಾರನಪ್ಪ ಮಲಯಸುಂದರನಂ ನೆನೆದು ನಿನ್ನಿಂದಂ ಕೊ[1]ಲೆಸತ್ತುದ[1]ಱ ಕೋಟ್ಕಳನಾದಮಾನುಂ ಬಿಗಿದಪ್ಪಿಕೊಂಡು ಸತ್ತುದರ್ಕ್ಕಂದು ಕಾರಣಂ ಮತ್ತೆ ನೀಂ ಮುನ್ನೆ ಸುಂದರನೆಂಬಾನೆಯಾಗಿ ಚಾರಣರಿಷಿಯರ ಪಾದಯುಗಳಂಗಳನರ್ಚಿಸುವಂದು ನಿನ್ನಂ ಕಂಡಾಯೆರಡುಂ ಪಿಡಿಗಳ್ ನಿನ್ನೊಡವೋಗಿಯರ್ಚಿಸಿ ಪುಣ್ಯಮಂ ನೆರಪಿದ ಫಲದಿಂದಂ ಸುಕೇಶಿನಿಯುಂ ವರಾಂಗನುಮಾದರೆಂದು ಯಶೋಧರ ಕೇವಲಿಗಳ್ ಸವಿಸ್ತರಂ ಪೇೞ್ದೊಡೆ ಗಂಧಭಾಜನನೆಂಬರಸಂ ಕೇಳ್ದು ಮತ್ತಂಮಿಂತೆಂದಂ ಭಟಾರಾ ಸುಕೇಶಿನಿ ಸತ್ತೀಗಳೆಲ್ಲಿ ಪುಟ್ಟಿದಳೆಂದು ಬೆಸಗೊಂಡೊಡೆ ಭಟಾರರಿಂತೆಂದು ಪೇೞ್ದರ್

ಸು[2]ರಟ[2]ಮೆಂಬುದು ನಾಡಲ್ಲಿ ಗಿರಿನಗರಮೆಂಬುದು ಪೊೞಲದನಾಳ್ವೊಂ ನಿನ್ನಾಳ್ ಮಹಾಸಾಮಂತನತಿರಥನೆಂಬೊನಾತನರಸಿ ಗೌರಿಯೆಂಬಳಾ ಇರ್ವರ್ಗ್ಗಂ ಸುಕೇಶಿನಿ ಸತ್ತು ಮನೋಹರಿಯೆಂಬೊಳ್ ಮಗಳಾಗಿ ಪುಟ್ಟಿದಳ್ ಮತ್ತಾ ಅರಸನ ಮಂತ್ರಿ ವಿಜಯನೆಂಬೊನಾತನ ಭಾರ್ಯೆ ವೀರಶ್ರೀಯೆಂಬೊಳಾ ಇರ್ವರ್ಗ್ಗಂ ಮಲಯಸುಂದರಂ ಸತ್ತು ಕುಬೇರಕಾಂತನೆಂಬೊಂ ಮಗನಾಗಿ ಪುಟ್ಟಿದೊಂ ವಿಭವೈಶ್ವರ್ಯಂಗಳಿಂದಂ ಕುಬೇರನೊಳೋರೆನ್ನನಪ್ಪೊಂ ಮತ್ತಾ ಪೊೞಲೊಳ್ ರಾಜಶ್ರೇಷ್ಠಿ ಧನ[3]ದನ[3]ೆಂಬೊನಾತನ ಪರದಿ ಧನಶ್ರೀಯೆಂಬೊಳಾ ಇರ್ವರ್ಗ್ಗಂ ಮಲಯಸುಂದರಂ ಸತ್ತುದಂ ಸುಕೇಶಿನಿ ಕಂಡು ಸೈರಿಸಲಾಱದೆ ಪ್ರಾಣಪರಿತ್ಯಾಗಂಗೆಯ್ದುಳಂ ನೆನೆದು ದ್ರವ್ಯತಪದೊಳ್ ಕೂಡಿ ತಪಂಗೆಯ್ದು ವರಾಂಗಂ ಸತ್ತು ಶ್ರೀಧರನೆಂಬೊಂ ಮಗನಾಗಿ ಪುಟ್ಟಿದೊನಾತನ ಭಾರ್ಯೆ ಕುಬೇರಶ್ರೀಯೆಂಬೊಳಾ ಶ್ರೀದರಂ ಕುಬೇರಕಾಂತಂಗಿಷ್ಟ

1. ಲಲ್ಪಟ್ಟ (ಕಖಗ). 2. ರಾಟ್ಟ (ಘ). ರಾಷ್ಟ್ರ (ಛ). 3. ದೇವನೆಂ (ಘಚಛ).

ಮಿತ್ರನಾಗಿ ಸಲೆ ಮತ್ತೊಂದು ದಿವಸಂ ಶ್ರೀಧರಂ ಕುಬೇರಕಾಂತನೊಡನೆ [1]ಮಱುಲುಂಡಿಯಾ[1]ತನ ರತ್ನಕಂಬಳಮಂ ಪೊದೆದು ತನ್ನ ಮನೆಗೆ ಬರ್ಪ್ಪೊನಂ ಕಂಡು ಸವತಿಯೊಳಪ್ಪ ಶಂಕೆಯಿಂದಂ ಪ್ರಾಸಾದದ ಮೇಗಣಿಂದಂ ನೆಲಕ್ಕಿಕ್ಕಿ ಬಿಟ್ಟು ಸತ್ತೊಳಾ ಸತ್ತೊಳಂ ಶ್ರೀಧರಂ ಕಂಡಾದಮಾನುಂ ದುಃಖಂಗೆಯ್ದು ಶೋಕಾಭಿಭೂತನಾಗಿರ್ದೊನಂ ಕುಬೇರಕಾಂತಂ ಬಂದು ಕಂಡು ಶ್ರೀಧರಾ ಪರಮಮಿತ್ರಾ ಇಂತೇಕೆ [2]ಬರ್ದ್ದ[2] ಬಂಬಳಂ ಬಾಡಿ ಪಾಡೞಿದು ಬೆಗಂಬಟ್ಟಿರ್ದೆಯೆಂದು ಬೆಸಗೊಂಡೊಡೆ ತನ್ನ ಕೆಳೆಯಂಗಿಂತೆಂದು ಶ್ರೀಧರಂ ಪೇೞ್ಗುಂ ನಿನ್ನ ರತ್ನಕಂಬಳಮಂ ಪೊದೆದು ಮನೆಗೆ ಪಂದೊಡೆ ಸವತಿಯೊಳಪ್ಪ ಶಂಕೆಯಿಂದೆನ್ನ ಭಾರ್ಯೆ ಕುಬೇರಶ್ರೀ ಮಾಡದ ಮೇಗಣಿಂದಂ ತನ್ನಂ ನೆಲಕ್ಕಿಕ್ಕಿ ಬಿಟ್ಟು ಸತ್ತಳೆನ್ನುಮಾಯಿರ್ದ್ದಳೆಂದು ತೋಱಿದೊಡೆ ಕುಬೇರಕಾಂತಂ ನೋಡೆ ನೋಡೆ ಜಾತಿಸ್ಮರನಾಗಿ ಕೆಳೆಯಂಗಿಂತೆಂದು ಪೇೞ್ಗುಮೆನ್ನ ಪೆಂಡತಿ ಮಲಯಾವತಿಯಪ್ಪ ಪಿಡಿ ಪುರುಡಿನಿಂದಂ ಚಂದನಮಲಯಮೆಂಬ ಪರ್ವ್ವತದ ಶಿಖರದಿಂದಂ ತನ್ನನಿಕ್ಕಿ ಸತ್ತಂತೆ ನಿನ್ನ ಹೆಂಡತಿಯುಂ ಸತ್ತಳೆಂದು [3]ಪೇೞ್ದು ಬೆಗಂಬಡಲ್ವೇಡೆಂದು[3] ಸಂತಯಿಸಿ ತನ್ನ ಮನೆಗೆ ಪೋಗಿ ಜಾತಿಸ್ಮರನಪ್ಪುದಱಿಂ ಕುಬೇರಕಾಂತಂ ತನ್ನ ಮುನ್ನಿನ ಮಲಯಸುಂದರನಪ್ಪ ಭವದ ನೆಗೞ್ತೆಗಳೆಲ್ಲಮಂ ಮಲಯಾವತಿ ಪದ್ಮಾವತಿ ಮೊದಲಾಗಿ ಕರಿಣೀವೃಂದಸಹಿತಂ ವನಹಸ್ತಿಕ್ರೀಡೆಗಳೆಲ್ಲಮನೊಂದು ಪಟದೊಳ್ ಬರೆದದಂ ನೋಡುತ್ತಂ ಪಾಡುತ್ತಂ ಹಾ ಎನ್ನ ಮಲಯಾವತಿ ಹಾ ಎನ್ನ ನಲ್ಲಳೆ ನೀನೀಗಳೆಲ್ಲಿರ್ದೆಯೆಂದೞಸುತ್ತಂ ಮರುಳ್ಗೊಂಡು ಪ್ರಳಾಪಂಗೆಯ್ಯುತ್ತಂ ಉಜ್ಜಯಂತ ಪರ್ವ್ವತಮಂ ಬಲಗೊಂಡು ಬರ್ಪ್ಪೊನಂ ಚಿತ್ರಾಂಗದನೆಂಬ ವಿದ್ಯಾಧರಂ ಕಂಡು ಕರುಣಿಸಿ ಧರ್ಮವಾತ್ಸಲ್ಯದಿಂದಂ ತನ್ನ [4]ಕಾಮಮುದ್ರಿಕೆಯುಂ ಸ್ವೇ[4]ಪ್ಸಿತ ಕಾರ್ಯಸಿದ್ಧಿಯಂ ಮಾಡುವ ವಿದ್ಯೆಯುಂ ಕುಬೇರಕಾಂತಂಗೆ ಕೊಟ್ಟಂ ಕುಬೇರಕಾಂತನುಂ ವಿದ್ಯಾದೇವತೆಯಂ ಬೆಸಗೊಂಡೆನ್ನ ಮುನ್ನಿನ ಭವದ ಪ್ರಾಣವಲ್ಲಭೆಯೆಲ್ಲಿರ್ದ್ದಳೆನೆ ವಿದ್ಯಾದೇವತೆಯೆಂದಳ್ ನಿನ್ನ ಪ್ರಾಣವಲ್ಲಭೆಯುತಿರಥನೆಂಬರಸಂಗೆ ಮಗಳ್ ಮನೋಹರಿಯಾಗಿರ್ದಳೆಂದು ವಿದ್ಯಾದೇವತೆ ಪೇೞೆ ಕೇಳ್ದು ಱಿದು ಪಿಶಾಚವೇಷಮಂ ಕೈಕೊಂಡರಮನೆಯಂಗಣದೊಳಿರ್ದು ಪಟಮಂ ನಿಮಿರ್ಚ್ಚಿಯೆತ್ತಿ, ತೋಱಿ ಪಾಡುತ್ತಮಿಲಿ ಮಲಯಾವತಿ ಹಾ ಎನ್ನ ಕಾದ[5]ಲಳೆ[5] ನೀನೀಗಳೆಲ್ಲಿರ್ದ್ದೆಯೆಂದು ಪಾಡುವುದಂ ಕೇಳ್ದು ಪಟಮಂ ನೋಡಿ ಮನೋಹರಿ ಜಾತಿಸ್ಮರೆಯಾಗಿ ತನ್ನ ಮುನ್ನಿನ ಭವಮನಱಿದು [6]ದಾಮರಥಿ[6]ಯೆಂಬ ತನ್ನ ದಾದಿಗೊಸಗೆಯಿಂದಮಿಂತೆಂದಳೀಯಂಗಣದೊಳ್ ಪಟಮಂ ತೋಱುವಾತನೆನ್ನ ಮುನ್ನಿನ ಭವದ ಭರ್ತಾರನೆಂದು ಪೇೞ್ದು ಮತ್ತಮಿಂತೆಂದಳಬ್ಬಾ ನೀನೆನ್ನ ಪ್ರಾಣಮಂ ಕಾವುದು ಕಾರಣಮಾಗಿ ಆತನಲ್ಲಿಗೆ ಪೋಗಿ ಏಕಾಂತದೊಳಿಂತೆಂದು ಪೇೞ್ ಪದ್ಮಾವತಿಯು ತಲೆಯೊಳಟ್ಟಿಯಿಂದಂ ನೀಂ ತಾವರೆಯ ಪೂವಂ ಮುನ್ನಮಿಟ್ಟು ಮಲಯಾವತಿ ಪ್ರಾಣವಲ್ಲಭೆ ಎಲ್ಲಿರ್ದ್ದ

1. ಸಿದ್ಧೆಗೈದಾ (ಘಚಛ). 2. ಬಿಳ್ದು (ಘಛ), (ಚ)ದಲ್ಲಿ ನಷ್ಟವಾಗಿದೆ. 3. (ಕಖಗ)ಗಳಲ್ಲಿ ನಷ್ಟವಾಗಿದೆ. 4. ಸಾಮಮುಂ ..ಶ್ರೀರ್ಯೆಯುಂ ಈ (ಕಖಗ). 5. ಲೊಳ್ (ಕಖ), ಲಳ್ (ಗ), ನಲ್ಲಳೆ (ಛ). 6. ವಾಮರತಿ (ಘಚಛ).

ಯೆಂದೀಗಳೇಕೆ ಮಲಯಸುಂದರಾ ನೀನಾರಯ್ದಪ್ಪೆಯೆಂದು ಪೇೞ್ದು ಮತ್ತಮಿಂತೆಂದು ಪೇೞ್ದಳ್ ನಿನ್ನ ಪ್ರಾಣವಲ್ಲಭೆ ನಿನ್ನನೆಯಱಿಸಿ ಬಯಸುತ್ತಿರ್ಪಳಾಕೆ ನಿನ್ನೊಳ್ ಕೂಡುವನ್ನೆಗಮಿಾ ಪಟಮಂ ತೋಱಿಯಾಕೆಯ ಪ್ರಾಣಮಂ ಕಾವೆನೆಂದು ಪಟಮಂ ಬೇಡಿಕೊಂಡು ಬಾ ಎಂದು [1]ಕಲ್ಪಿ[1]ಸಿಯಟ್ಟಿದೊಡಾಕೆಯುಂ ಕಲ್ಪಿಸಿದ ಪಾಂಗಿನೊಳಾತನಲ್ಲಿಗೆವೋಗೇಕಾಂತದೊಳೆಲ್ಲಮಂ ನುಡಿ[2]ದು ಕುಬೇರಕಾಂತನ ಕೆಯ್ಯ ಪಟಮಂ ಬೇಡಿಕೊಂಡು ಪೋಗಿ ಮನೋಹರಿಗೆ ಕೊಟ್ಟಳ್ ಮನೋಹರಿಯುಮಾ ಪಟಮಂ ಕೊಂಡು ದೆವಸಕ್ಕಮಟ್ಕಱೊಳ್ ನೋಡುತ್ತಿರ್ಕ್ಕುಂ

ಮತ್ತಿತ್ತ ಕುಬೇರಕಾಂತಂ ತನ್ನ ಮರುಳ್ವೇಷಮಂ ತೊಱೆದು ಸ್ವಾಭಾವಿಕನಾಗಿ ತನ್ನ ಮನೆಗೆ ವಂದೊಡೆ ಪ್ರಸನ್ನ ರೂಪನಾಗಿರ್ದ್ದನಂ ವಿಜಯನಿಂತೆಂದು ಬೆಸಗೊಂಡಂ ಮಗನೆ ನೀನಿನಿತು ದಿವಸಮೇಕೆ ಮರುಳಾಗಿರ್ದ್ದೆ ಈಗಳೆಂತು ಮರುಳ್ತನಂ [3]ಪಿಂಗಿತೆಂದು[3] ಬೆಸಗೊಂಡೊಡೆ ಕುಬೇರಕಾಂತನಿಂತೆಂದು ಪೇೞ್ದಂ ನೀಯರಸರ ಮಗಳಪ್ಪ ಮನೋಹರಿ ಎನ್ನ ಮುನ್ನಿನ ಭವದ ಹೆಂಡತಿಯಾಕೆಯನಱಿಸಲ್ವೇಡಿ [೨]ನಿತು ದಿವಸಂ ಮರುಳ್ಗೊಂಡಿರ್ದೆಂ ಮತ್ತೀಗಳಾರಯ್ದಱಿಸಿ ಕಂಡೆನಪ್ಪುದಱಿಂದಂ ಮರುಳ್ತನಂ [3]ಪಿಂಗಿತೆಂದು[3] ಪೇೞ್ದೊಡೆ ತಂದೆಯೆಂದಂ ಮಗನೆ ನಿನ್ನ ಮುನ್ನಿನ ಪೆಂಡತಿಯೆಂದಱಿದೆಯಪ್ಪೊಡಮಿಾಗಳಾಕೆಯರಸನ ಮಗಳಾಗಿಪ್ಪುದಱಿಂ ನಿನಗತಿ ದುರ್ಲಭೆ ಭಾಗ್ಯಮಿಲ್ಲದುದಂ ಪೆಱಲಾಗ ನಿನಗಾಕೆಯೊಳಪ್ಪ ಬೇಂಟಮನುೞಿವುದು ಮಗನೆ ಎಂದೊಡೆ ಕುಬೇರಕಾಂತಂ ಕಾಮವಿದ್ಯೆಯಿಂದಂ ಹಸ್ತ್ಯಶ್ವರಥಪದಾತಿಬಲಸಮೂಹಮನೆನಿತಾನುಮಂ ವಿಭವೈಶ್ವರ್ಯ ಸಮನ್ವಿತಂ ತಂದೆಗೆ ತೋಱಿದೊಡೆ ತಂದೆಯುಂ ಮಗನ ಸಾಮರ್ಥ್ಯಮಂ ಕಂಡಾದಮಾನುಂ ಸಂತಸಂಬಟ್ಟಿರ್ದಂ ಮತ್ತೊಂದು ದಿವಸಂ ಅತಿರಥ ಮಹಾರಾಜಂ ಮಂತ್ರಿಯರ್ಕಳೊಡನೆ ಮಂತಣಮಿರ್ದ್ದಲ್ಲಿ ಮಂತ್ರಿಯರ್ಕಳನಿಂತೆಂದು ಬೆಸಗೊಂಡಂ ಮನೋಹರಿಗೆ ಯೌವನಂ ನೆಱೆದುದು ಕೂಸು [4]ಕುಡಲ್ಕಾದುದಾರ್ಗೆ ಕುಡುವಮೆಂದು[4] ಮಂತ್ರಿಯರ್ಕ್ಕಳಂ ಬೆಸಗೊಂಡೊಡೆ ಉೞಿದ ಮಂತ್ರಿಯರ್ಕಳೆಲ್ಲಂ ತಂತಮ್ಮ ಬಗೆದರಸುಗಳ ಪೆಸರ್ಗ್ಗಳಂ ಪೇೞ್ದುವರ್ಗ್ಗೆ ಕುಡುವಮೆಂದೊಡೆ ಕುಬೇರಕಾಂತನ ತಂದೆಯಪ್ಪ ವಿಜಯನೆಂಬ ಮಂತ್ರಿಯುಕ್ಕೈವದಿಂದವರ ಪೇೞ್ದ ಮದವಕ್ಕಳಂ ನಿರಾಕರಿಸಿ ಮನೋಹರಿಯ ರೂಪಿಂಗಂ ಜವ್ವನಕ್ಕಂ [5]ಕಳಾಗುಣಂಗಳನಱಿವುದರ್ಕ್ಕಮಿವರ್ ಯೋಗ್ಯರ್ ಮದವಕ್ಕಳಲ್ಲರ್ ಕೂಸಿಂಗೆ ಸ್ವಯಂಬರಮಂ ಪಣ್ಣುವಂ ಸ್ವಯಂಬರದೊಳ್ ತನ್ನ ಭಾಗ್ಯದೊಳ್ ಮೆಚ್ಚಿದವರಂ ಕಯ್ಕೊಳ್ಗೆಂದು ನುಡಿದೊಡರಸನುಮಾತನ ಮಾತನೊಡಂಬಟ್ಟು ಸ್ವಯಂಬರಸಾಲೆಯುಂ ಮಾಡಿಸಿ ಅರಸುಗಳ್ಗೆಲ್ಲಂ ಬೞಿಯನಟ್ಟಿ ಬರಿಸೆ ಸ್ವಯಂವರಸಾಲೆಯೊಳ್ ನೆರೆದಿರ್ದ್ದ

---

1. ಲಿ (ಘಚಭ). 2. + ದಿಂತೆಂದಳ್ ಮಲಯಸುಂದರಾ ನೀಂ ಮುನ್ನ ಪದ್ಮಾವತಿಯ ಮಸ್ತಕದಲು ತಾಮರೆಯ ಪುಷ್ಪಮನಿಕ್ಕಿಯಾಗಳ್ ಮಲಯಾವತಿಯೆಂದಱಿಸಲ್ತಕ್ಕುದೆಯೆಂದೊಡಾಂ ಮೆಯ್ಮಱೆದಿಕ್ಕಿದೆನೆಂದೊಡಾಕೆಯಿಂತೆಂದಳಿಕ್ಕಿದೊಡಮೇಂ ನಿನ್ನ ಪ್ರಾಣವಲ್ಲಭೆಯಪ್ಪ ಮಳಯಾವತಿ ನಿನ್ನೊಳು ಕೂಡುವನ್ನೆಗಮಿಾ ಪಟಮಂ ಕಂಡು ನೋಡುತ್ತಿರ್ಕ್ಕುಮೆಂ (ಘಚಭ). 3. ತೀಳಿದುದೆಂದು (ಘಚಭ). 4. (ಕಖಗಘಚ)ಗಳಲ್ಲಿ ನಷ್ಟವಾಗಿದೆ. 5. + ತೇಜಕ್ಕಂ (ಭ).

ರಂಗ [1]ವೆಂಗಿ[1] ಕಳಿಂಗ ಕಾಂಭೋಜ [2]ಕಾಶಿ ಕೌಶಲ [3]ಪಲ್ಲವ[3] ಪಾಂಚಾಳ ಮಗಧ ಮಾಳವ ವತ್ಸ ಮಹಾರಾಷ್ಟ್ರ ಕುಣಾಳ ಕುರುಜಾಂಗಣ ದ್ರವಿಳ ಲಾಳ ಕರ್ನ್ನಾಟ ಗೌಳ ಸು[4]ಹುಮ[4] ಸುರ[5]ಶ್ರಾಸ[5] ಸೂರ[6]ಸೇನ[6]ಯ ಪ್ರಭೃತಿ ನಾನಾ ವಿಷಯಾಧಿಪತಿಗಳಪ್ಪರಸುಗಳೆಲ್ಲಂ ನೆರೆದಿರ್ದ್ದರಲ್ಲಿಯಾರುಮಂ ಮೆಚ್ಚದೆ ದಾಂಟಿ ಪೋಗಿ ಕುಬೇರಕಾಂತಂಗೆ ಮಾಲೆಯಂ ಸೂಡಿ[7]ದಳಾಗಳರಸುಗಳೆಲ್ಲಂ[7] ನೆರೆದಾಮೇಕೈಕ ಪ್ರಧಾನರೆ ಮಿರ್ದ್ದಂತಿರೆ ಬಡವಂಗೇನುಮಲ್ಲದೊಂಗೆ ಮಾಲೆಯಂ ಸೂಡಿದಳೆಂದು ಸಭಾಕ್ಷೋಭಮಾಗಿ ಕುಬೇರಕಾಂತನೊಳನಿಬರುಂ ನೆರೆದು ಯುದ್ಧಂಗೆಯ್ವೊಡೆ ಸಂಗ್ರಾಮರಂಗದೊಳ್ ಸುವ[8]ರ್ಮ್ಮವರ್ಮ್ಮಂ[8] ಮೊದಲಾಗೊಡೆಯರ್ಕಳೆಲ್ಲರುಮಂ ಗೆಲ್ದು ಮನೋಹರಿಯುಂ ಪಾಣಿಗ್ರಹಣಪುರಸ್ಸರಂ ಮದುವೆನಿಂದು [9]ಸೊಪಾರ[9]ಕ್ಕಧಿಪತಿಯಾಗಿರ್ದ್ದನ್

ಇಂತು ಕುಬೇರಕಾಂತಂ ಮನೋಹರಿಯೊಳಿಷ್ಟ ವಿಷಯಕಾಮಭೋಗಂಗಳನನುಭವಿಸುತ್ತಮಿರೆಯಿರೆ ಸುವ[10]ರ್ಮ್ಮವರ್ಮ್ಮ[10]ನೆಂಬರಸಂ ರಾಜ್ಯಪರಿಭ್ರಷ್ಟನಾಗಿ ತಾಪಸತಪಮಂ ಕೈಕೊಂಡು ನೆಗೞ್ದು ಸತ್ತು ಪ್ರತಿಸೂರ್ಯನೆಂಬ ವ್ಯಂತರದೇವನಾಗಿ ಪುಟ್ಟಿದೊಂ ಮತ್ತೆ ಶ್ರೀಧರನುಂ ಕುಬೇರಕಾಂತನುಂ ಮನೋಹರಿಯುಮನ್ಯೋನ್ಯಾತಿ ಸ್ನೇಹದೊಳ್ ಕೂಡಿ ರಾಜ್ಯಂಗೆಯ್ದು ತಮ್ಮ ಗೆಯ್ದ ದಾನಧರ್ಮದ ಫಲದಿಂದಂ ಅನ್ಯಜನ್ಮದೊಳಿಂತಪ್ಪ ವಿದ್ಯೆಯಕ್ಕೆಂದು ಮೂವರುಂ ನಿದಾನಂಗೆಯ್ದು ಮುನ್ನಂ ಶ್ರೀಧರಂ ಸತ್ತುಂ ವಿಜಯಾರ್ಧಪರ್ವತದ ಉತ್ತರ ಶ್ರೇಣಿಯೊಳ್ ಅಳಕಾಪುರಮೆಂಬುದು ಪೊಳಲದನಾಳ್ವೊಂ ಗಗನವಲ್ಲಭನೆಂಬೊನಾತನ ಭಾರ್ಯೆ ಅನಂಗಮಾಲೆಯೆಂಬೊಳಾಯಿರ್ವ್ವರ್ಗ್ಗಂ ಶ್ರೀಧರಂ ಚಂಡವೇಗನೆಂಬೊಂ ಮಗನಾಗಿ ಪುಟ್ಟಿದೊಂ ಆ ಚಂಡವೇಗನ ಮಹಾದೇವಿ ವಿದ್ಯು[11]ಲ್ಲ[11]ತೆಯೆಂಬೊಳಾಯಿರ್ವ್ವರ್ಗ್ಗಂ ಕುಬೇರಕಾಂತಂ ಸತ್ತು ವಿದ್ಯುನ್ಮಾಳಿಯೆಂಬ ಮಗನಾಗಿ ಪುಟ್ಟಿದೊಂ ಮತ್ತಂ ದಕ್ಷಿಣಶ್ರೇಣಿಯೊಳ್ ವಿದ್ಯು[11]ಲ್ಲ[11]ತೆಯ ಸೋದರ ತಮ್ಮಂ ಮೇಘಕೂಟಾಧಿಪತಿ ಮೇಘಮಾಳಿಯೆಂಬೊಂ ವಿದ್ಯಾಧರನಾತನ ಮಹಾದೇವಿ ರತಿಬಿಂದುವೆಂಬೊಳಾಯಿರ್ವ್ವರ್ಗ್ಗಂ ಮನೋಹರಿ ಸತ್ತು ವಿರಳವೇಗೆಯೆಂಬೊಳ್ ಮಗಳಾಗಿ ಪುಟ್ಟಿದಳ್ ಮತ್ತೊಂದು ದಿವಸಂ ಚಂಡವೇಗನುಂ ವಿದ್ಯುನ್ಮಾಲಿಯುಮಂತು ತಮ್ಮಿರ್ವ್ವರುಂ ಉಜ್ಜಯಂತ ಪರ್ವತದ ಶಿಖರದೊಳ್ ಅರಿಷ್ಟನೇಮಿ ಭಟ್ಟಾರರ ಪರಿನಿರ್ವ್ವಾಣಭೂಮಿ[12]ಯೊಳ್ ಭಕ್ತಿಯಿಂದ ಪೂಜಿಸಲೆಂದರ್ಚನೆಯಂ ಕೊಂಡು[12] ಪೋದೊಡಾ ಪರ್ವ್ವತದ ಶಿಖರಮಂ ಕಂಡು ವಿದ್ಯುನ್ಮಾಲಿ ಮೂರ್ಛೆ[13]ವೋಗಿ[13] ಜಾತಿಸ್ಮರನಾಗಿ ಮನೋಹರಿಯಂ ನೆನೆದು ಮಾಸೋಪವಾಸಂಗೆಯ್ದು ಪ್ರ[14]ಜ್ಞ[14]ಪ್ತಿಯೆಂಬ ಮಹಾವಿದ್ಯೆಯಂ ಸಾಧಿಸಿದೊಡಾ ವಿದ್ಯೆ ಬೆಸನೇನೆಂದು ಮುಂದೆ ನಿಲೆ ಎನ್ನ ಮುನ್ನಿನ ಭವದ

---

1. (ಕಖಗ)ಗಳಲ್ಲಿಲ್ಲ. ವಂಗ (ಘ). 2. ಕಲುಶಿಕವು (ಕಖಗ). 3. ಪಾಂಚ (ಚ), ಪಾಂಡ್ಯ (?). 4. ರಮ್ಯ (ಘಚಛ). 5. ಕಾಸ್ತ (ಚಛ). 5. ವೀರ್ಯ (ಕಖ). 7. ದೊಡರಸುಗಳೆಲ್ಲರಿಂದಾ (ಘಚಛ). 8. ಣ್ಣ ವರ್ಣ್ಣಂ (ಘಚಛ). 9. ಸೋಪಾನಗರ (ಘಚಛ), ಣ್ಣ ವರ್ಣ್ಣ (ಘ). 11. ಳ್ಳ (ಕ). 12. ಯಂ ಕಂಡು (ಕಗ). 13. ಯೊಳ್ (ಕ). 14. ಜ್ಞಾ (ಕ).

ಪ್ರಾಣವಲ್ಲಭೆಯಪ್ಪ ಮನೋಹರಿ ಈಗಳೀ ಲೋಕದೊಳಿಲ್ಲಿರ್ದ್ದಳೆಂಬುದನಱಿಸಿ ಬೇಗ ಮೆನಗೆ [1]ಪೇೞೆಂ[1]ದೊಡಾ ವಿದ್ಯೆಯಿಂತೆಂದು ಪೇೞ್ದಿತ್ತು

ವಿಜಯಾರ್ಧ ಪರ್ವತದ ದಕ್ಷಿಣ ಶ್ರೇಣಿಯೊಳ್ ಮೇಘಕೂಟ ಪುರಾಧಿಪತಿ ಮೇಘಮಾಳಿಯೆಂಬೊಂ ವಿದ್ಯಾಧರಂ ನಿನ್ನ ಸೋದರ ಮಾವನಾತಂಗೆ ಮನೋಹರಿ ಸತ್ತು ವಿರಳವೇಗೆ[2]ಯೆಂಬೊಳ್ ಮಗಳಾಗಿ[2]ರ್ದ್ದಳೆಂದೊಡಂತಪ್ಪೊಡೆ [3]ನೀನೆನ್ನ[3] ಮಾವನ ಮನೆಗೆ ವೋಗಿ ವಿರಳವೇಗೆಗಿಂತೆಂದು ಪೇೞ್ ಎಲೆ ಮನೋಹರಿ ನೀಂ ಮುನ್ನಿನ ಭವದೊಳ್ ಕುಬೇರಕಾಂತನೊಡನೆ ಕ್ರೀಡಿಸಿದ ಕ್ರೀಡೆಗಳಂ ನೆನೆದಾ ಎಂದು ಪೇೞೆಂದು ವಿದ್ಯೆಯುಮಂ ಕಲ್ಪಿಸಿಯಟ್ಟಿದೊಡಾ ವಿದ್ಯೆಯುಂ ಪೋಗಿ [4]ಕಲ್ಪಿಸಿದ ಪಾಂಗಿನೊಳ್[4] ನುಡಿದೊಡೆ ವಿರಳವೇಗೆ ಮೂರ್ಛೆವೋಗಿರ್ದ್ದು ನೀಡಱಿಂ[5]ದೆೞ್ಚತ್ತು[5] ಜಾತಿಸ್ಮರೆಯಾಗಿ ವಿರಹಸಂತಾಪದಿಂ ತನ್ನ ಮುನ್ನಿನ ಭರ್ತಾರನಂ ನೆನೆಯುತ್ತಿರೆ ವಿದ್ಯುನ್ಮಾಳಿಯುಂ ತನ್ನ ಮನೆಗೆ ವೋಗಿ ತಂದೆ[6] ಚಂಡವೇಗಂಗೆ ತನ್ನ ವೃತ್ತಾಂತಮೆಲ್ಲಮಂ ಪೇೞ್ದೊಡಾ ತನುಮಾದಮಾನುಮೊಸೆದು ತನ್ನ ಮೈದುನನಪ್ಪ ಮೇಘಮಾಳಿ ವಿದ್ಯಾಧರನಲ್ಲಿಗೆ ಪೆರ್ಗ್ಗಡೆಗಳಂ ಕೂಸಂ ಬೇಡಿಯಟ್ಟಿ ಪೆತ್ತು ವಿರಳವೇಗೆಯುಂ ವಿದ್ಯುನ್ಮಾಲಿ ಮದುವೆನಿಂದಾಕೆಯೊಳಿಷ್ಟವಿಷಯಕಾಮಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ

ಮತ್ತೊಂದು ದಿವಸಂ ವಿದ್ಯಾನಿರ್ಮಿತ ವಿಚಿತ್ರಮಾ[7]ಗುತ್ತಿ[7]ರ್ದ ವಿಮಾನಮ[8]ನೇಱಿಕೊಂಡು ಪೋಪಲ್ಲಿ[8] ಹಿಮವಂತ ಪರ್ವ್ವತದ ಮೇಗೆ ಪಾಱುವ ವಿಮಾನಮಂ ಮುಂಪೇೞ್ದ ಪ್ರತಿಸೂರ್ಯನೆಂಬ ವ್ಯಂತರದೇವಂ ಕಂಡು ತನ್ನ ಸುವರ್ಣವರ್ಮ್ಮನಪ್ಪ ಭವದ ಪಗೆಯಂ ನೆನೆದಿರ್ವ್ವರುಮಂ [9]ಕೂಡಿ ಕೊಂದ[9]ನಿಂತಿರ್ವ್ವರುಂ ಸತ್ತು ಗಂಗೆಯೆಂಬ ಮಹಾನದಿಯ ತೆಂಕಣ ಪಡುವಣ ಕೋಣೆಯೊಳ್ ಸುಕೌಶಳಮೆಂಬ ವಿಷಯದೊಳಯೋಧ್ಯಾಪುರಮೆಂಬ ಪೊೞಲೊಳ್ ಸಾಗರಸೇನನೆಂ[10]ಬೊಂ[10] ರಾಜಶ್ರೇಷ್ಠಿಯಾತನ ಭಾರ್ಯೆ ಧರಣಿಯೆಂಬೊಳಾಯಿರ್ವ್ವರ್ಗಂ ವಿದ್ಯುನ್ಮಾಳಿಯೆಂಬ ವಿದ್ಯಾಧರಂ ಕಾಲಂಗೆಯ್ದು ಸಿದ್ಧಾರ್ಥನೆಂಬೊ ಮಗನಾಗಿ ಪುಟ್ಟಿದೊಂ ಪಿತೃಮಾತೃ[11]ಗಳೊ[11]ಸಗೆಯುಂ ಮಾಡುತ್ತಂ ಶ್ರೀವಿಭವ ರೂಪಕಾಂತಿ ಸೌಭಾಗ್ಯಾದಿಗುಣಂ[12]ಗಳಿಂ ನೆ[12]ಱೆದೊಂ

ಮತ್ತಿತ್ತ ಮ[13]ಗಧೆ[13]ಯೆಂಬುದು ನಾಡಲ್ಲಿ ರಾಜಗೃಹಮೆಂಬ ಪೊೞಲೊಳ್ ಸಮುದ್ರವಿಜಯನೆಂಬೊಂ ರಾಜಶ್ರೇಷ್ಠಿಯಾತಂಗೆ ಸಾಗರಸೆಟ್ಟಿಯ ಸೋದರ ತಂಗೆ [14]ಸುಮತಿಯೆಂಬೊಳಂ ಕೊಟ್ಟರಾ[14]ಯಿರ್ವ್ವರ್ಗ್ಗಂ ವಿರಳವೇಗೆಯೆಂಬ ವಿದ್ಯಾಧರಿ ಕಾಲಂಗೆಯ್ದು ಶ್ರೀಕಾಂತೆಯೆಂಬೊಳ್ ಮಗಳಾಗಿ ಪುಟ್ಟಿದೊಳತ್ಯಂತ ರೂಪಲಾವಣ್ಯ ಸೌಭಾಗ್ಯಕಾಂತಿ ಹಾವಭಾವ ವಿಲಾಸವಿಭ್ರಮಂಗಳಿಂ ಕೂಡಿದೊಳ್ ದೇವಗಣಿಕೆಯನೆ

---

1. ೞ್ವುದೆಂ (ಕಗ). 2. ಯಾಗಿ (ಕ). 3. ನೀಂ (ಖ). 4. (ಕ)ದಲ್ಲಿ ನಷ್ಟವಾಗಿದೆ. 5. (ಕ)ದಲ್ಲಿ ಇಲ್ಲ. 6. +ಗೆ (ಕ). 7. ಗಿ (ಕ). 8. ನಿರ್ವರುಮೇಱಿ ಭೌಮವಿಹಾರಕ್ಕೆಂದು ತೊೞಲ್ವಲ್ಲಿ (ಘಙಝ). 9. ಕಾದಿಕೊಂಡ (ಖ). 10. ಬ (ಕ). 11. ಸ್ವಜನಪರಿಜನಂಗಳೆಲ್ಲಮೊ (ಘಙಝ). 12. ಳೊಳ್ಮೆ (ಖ). 13. ರವಸೆ (ಘಙ). 14. (ಕಖಘ)ಗಳಲ್ಲಿಲ್ಲ.

ಪೋಲ್ವ ಕಾಂತೆಯುಂ ಸೋದರ ಮಾವನ ಮಗಂಗೆ [1]ಪಿರಿದುಂ ವಿಸ್ತಾರದಿಂ ಸಿದ್ಧಾರ್ಥಂಗೆ[1] ಕೊಟ್ಟರಿಂತು ಸಿದ್ಧಾರ್ಥನುಂ ಶ್ರೀಕಾಂತೆಯುಂ ತಮ್ಮೊಳನ್ಯೋನ್ಯ ಸ್ನೇಹದೊಳ್ ಕೂಡಿ [ಇ]ಷ್ಟ ವಿಷಯಕಾಮಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತೊಂದು ದಿವಸಂ ಸಪ್ತತಳಪ್ರಾಸಾದದ ಮೇಲಿರ್ವ್ವರುಮಿಷ್ಟಪರಿವಾರ ಸಹಿತಂ [2]ದಿಶಾವಳೋಕನಂಗೆಯ್ಯುತ್ತಂ[2] ಸುಖಸಂಕಥಾವಿನೋದದಿಂದಪ್ಪನ್ನೆಗಂ ವಿಚಿತ್ರಮಾಗುತ್ತಿರ್ದ್ದ ವಿಮಾನಮನೇಱಿ ಆಕಾಶಪಥಕ್ಕೊಗೆದು ಪೋಗೆ ಪೋಪ ವಿದ್ಯಾಧರ ಯುಗಳಮಂ ಕಂಡಿರ್ವ್ವರುಂ ಮೂರ್ಛೆವೋಗಿ ನೀಡಱಿಂದೆಚ್ಚತ್ತು ಜಾತಿಸ್ಮರರಾಗಿ ತಮ್ಮ ಮುನ್ನಿನ ಭವಮಂ ನೆನೆದು [3]ಸಂಸಾರದ[3] ಪೊಲ್ಲಮೆಯುಮನನಿತ್ಯತೆಯುಮಂ ಬಗೆದು ವೈರಾಗ್ಯಪರರಾಗಿ ಇರ್ವ್ವರುಂ ತಪಂ ಬಡುವ ಬುದ್ಧಿಯನೊಡೆಯರಾಗಿ [4]ಸ್ವಜನ[4]ಪರಿಜನ ಮಂತ್ರಿಮಿತ್ರವರ್ಗ್ಗಕ್ಕೆಲ್ಲಂ ಬಱಿಯನಟ್ಟಿ ಬರಿಸಿ ಸಂಸಾರದ ಪೊಲ್ಲಮೆಯುಮಂ [5]ತಂತಮ್ಮ ಬಗೆದ ಕಾರ್ಯ್ಯಮುಮ[5]ನವರ ಮುಂದೆ ನುಡಿದೊಡವರ್ಗ್ಗಳೆಲ್ಲಂ ನೆರೆದಿಂತೆಂದರಮ್ಮಾ ಪೂರ್ವದಿಂದಂ ಬಂದ ಕುಲಸಂತತಿಯಂ ಕಾವೊರಾರುಮಿಲ್ಲನಿತು ಭಾರಮನಾರ್ಗ್ಗೊಪ್ಪಿಸಿ ತಪಂಬಟ್ಟಪ್ಪಿರದಱಿಂ ಕೆಲವು ಕಾಲದಿಂ ಮಗನಾದೊಡೆ ಮಗಂಗೆ ಸಮಸ್ತ ಭಾರಮಂ ನಿರೂಪಿಸಿ ತಪಂಬಡುವುದೆಂದು ನುಡಿದೊಡೆ ಸಿದ್ಧಾರ್ಥನೆಂದಂ ನಿಮ್ಮೆಲ್ಲರ ಪೇೞ್ದುದನಿಂ[6]ಬುಗೆಯ್ದಪ್ಪೆನೆಂದು ಮಗನಾದಂದೆನ್ನ ತಪಂಬಡುವಂದಾರುಂ ವಕ್ರಂಬರಸಲ್ಲೆಂದು ನುಡಿದೊಡಂಬಡಿಸಿ ಕೆಲವು ಕಾಲಂ ಪರಿವಾರಂ ಬಾರಿಸೆ ಮಾಣ್ದಿರ್ದ್ದ[7]ಷ್ಟವಿಷಯ ಕಾಮಭೋಗಂಗಳನನುಭವಿಸುತ್ತಿರೆಯಿರೆ

ಮತ್ತೆ ಸಿದ್ಧಾರ್ಥನ ಪಿರಿಯರಸಿ [8]ಜಯಾವತಿ[8]ಯೆಂಬೊಳ್ ಮಕ್ಕಳಂ ಬೇಡಿ ದೇವರ್ಗ್ಗಂ ದೇವತೆಗಳ್ಗಂ ಪರಸಿ ಪೂಜೆಯಂ ಮಾಡುತ್ತಿರ್ಪ್ಪೊಳೊಂದು ದಿವಸಂ ವಿಜಯಭದ್ರರೆಂಬ ಭಟಾರರವಧಿಜ್ಞಾನಿಗಳ್ ಚರಿಗೆವೊಕ್ಕೊಡೆ ಕಂಡವರಂ ಜಯಾವತಿ ನಿಱಿಸಿಯಾದಮಾನುಂ ಭಕ್ತಿಯಿಂ[9]ದಂ ಕೈಯಲಿಕ್ಕಿ ನಿರಂತರಂ ಮಾಡಿ ಕುಳ್ಳಿರ್ದ್ದ ಬಱಿಕ್ಕಂತೆಂದು[9] ಬೆಸಗೊಂಡಳ್ ಭಟಾರಾ ಎನಗೆ ಮಕ್ಕಳಕ್ಕುಮೊ ಆಗದೊ ಎಂದು ಬೆಸಗೊಂಡೊಡೆ ಭಟಾರರಿಂತೆಂದರ್ ವಿಭವವೈಶ್ವರ್ಯ ರೂಪಕಾಂತಿ ಸೌಭಾಗ್ಯಾದಿ ಗುಣಂಗಳಿಂದಂ ಸಿದ್ಧಾರ್ಥನಿಂದಗ್ಗಳಂ ಕುಲತಿಲಕನಪ್ಪ ಮಗನಂ ಪೆಱುವಯ್ ಪೆತ್ತಾಗಳಿಂತು ಪೂರ್ಣ್ನಮಿಯಂದಿನ ಚಂದ್ರನಂ ಕಂಡಾಗಳಾದಿತ್ಯನಸ್ತಮಾನಕ್ಕೆ ಸಲ್ಗುಮಂತೆ ಮಗನಂ ಕಂಡಾಗಳೆ ನಿನ್ನ ಭರ್ತಾರನುಂ ತಪಂಬಡುಗುಮಾ ರಿಸಿಯರಂ ಕಂಡಾಗಳೆ ಮಗನುಂ ತಪಂಬಡುಗುಮೆಂದು ಭಟ್ಟಾರರ್ ಪೇೞ್ದು ಪೋದರಿತ್ತ ಜಯಾವತಿಗೆ ಹರ್ಷ ವಿಷಾದಂಗಳೆರಡುಮೊರ್ಮ್ಮೊದಲಾಗೆ ಕಾಲಂ ಸಲೆ ಮತ್ತಿತ್ತ ಚಂಡವೇಗಂ ಪಲಕಾಲ ಮರಸುಗೆಯ್ದು ಆಯುಷ್ಯಾಂತದೊಳ್ ಕೆಟ್ಟಿದು ಜಯಾವತಿಯ ಗರ್ಭದೊಳ್ ನೆಲಸಿ

1. ರೂಪವಿಭವ ಸಂಪನ್ನಂಗೆ (ಕಖಗ). 2. (ಕಖಗ)ಗಳಲ್ಲಿಲ್ಲ. 3. ಮಾಡಿದ (ಕಖಗ).
4. ವಿಶ್ವಜ್ಞ (ಕಗ), ವಿದ್ವಜ್ಞ (ಖ). 5. ತಪಂಬಡುವ ಪರಿಚ್ಛೇದಮುಮಂ (ಘಚಛ).
6. +ಗೆಯ್ದಾದಿ (ಖ). 7. + ದುರ್ಗಕಣ್ಗಂ ಮನಕ್ಕಂ ಮೆಚ್ಚಪಡುವ ಶ್ರೀಯಾ ದೇವತೆಗಳನೆ ಪೋಲ್ವಪಲರೊಳ್ಪೆಂದಪೊಡವಿ (ಘಚಛ). 8. ವಿಜಯಾವತಿಯೆಂದು (ಘಚಛ) ಪ್ರತಿಗಳಲ್ಲಿದೆ.
9. ದಮೂಡಿ ಕುಳ್ಳಿರ ವೇಳ್ದಂತೆಂದು (ಘಚಛ).

ಗರ್ಭವಾದೊಡೆ ಜಯಾವತಿ ಮುಂ ನೆಲಮನೆಯುಂ ಮಾಡಿಸಿ ಎನಗೆ ಕುತ್ತಂ ಜಲೋಧರಮಾದುದರ್ಕ್ಕೆ [1]ಕ್ರಿಯೆ[1]ಗೆಯ್ಸಿದಪ್ಪೆನೆಂದು ಸಿದ್ಧಾರ್ಥಂಗೆ ಪೇೞ್ದು ಕುತ್ತಮಂ ಭಾವಿಸಿ ನೆಲಮನೆಯೊಳಗಿರ್ದು ನವಮಾಸಂ ನೆಱೆದಂದು ಪ್ರಸೂತೆಯಾಗಿ ಮಗನಂ ಪೆತ್ತು ತಾನುಂ ದಾದಿಯುಂ ಮತ್ತಂ ಬೆಸಕೆಯ್ವ ತೊೞ್ತುಮಿಂತು ಮೂವರುಮಱಿವೊರೞಿದರಾರುಮಱಿಯರಿಂತು ದಿವಸಂಗಳ್ ಸಲೆ

ಮತ್ತೊಂದು ದಿವಸಂ ಬೆಸಕೆಯ್ವ ತೊೞ್ತು ನೀರಂ ತರಲ್ ಪೋದಲ್ಲಿ ನೀರಪೊೞೆಯೊಳಾಕೆಯು ಕೆಳದಿ ನಾಗ[2]ಬ್ಬೆ[2]ಯೆಂಬಾಳಾಕೆಯುಂ ಕಂಡಿತೆಂದು ಬೆಸಗೊಂಡಳೆಲೆಗೆ ಕುಂದ[3]ಬೆ[3] ಪಲದಿವಸದಿಂದಂ ನಿನ್ನಂ ಕಂಡೆನಿಲ್ಲಿನಿತು ದಿವಸದಿಂ ಮುಂ ಕಾಣ್ಮುದರ್ಕ್ಕೆ ಕಾರಣಮಂ ಪೇೞೆಂದು ಬೆಸಗೊಂಡಳ್ಗೆ ಕಾರಣಮಂ ನಿನಗೆ ಪೇೞ್ದಪ್ಪೆಂ ನೀನಾರ್ಗ್ಗಂ ಪೇೞೆಯಪ್ಪೊಡೆಂದು ಸೂ*ರು*ಳಿಸಿ ಇಂತೆಂದು ಪೇೞ್ದಳ್ ನೋಡಾ ಎಮ್ಮ ಸೆಟ್ಟಿತಿ ಜಯಾವತಿ ಬೆಸಲೆಯಾದಳ್ ಕಿರುಂಡೆ[4]ಗನಂ ಪೆ[4]ತ್ತಳಾರುಮನಱಿಯಲೀಯದೆ ನೆಲಮನೆಯೊಳಡಂಗಿಪ್ಪಳೆಂದು ಪೇೞ್ದೊಡಾ ಮಾತನಲ್ಲಿಯೊರ್ವಂ ಸಂಜೆವಾರಿಸುತ್ತಿರ್ದ್ದ ಬ್ರಾಹ್ಮಣಂ ದಾರಿದ್ರ್ಯಾಭಿಭೂತಂ ಸೋಮಶರ್ಮ್ಮನೆಂಬಾತಂ ಕೇಳ್ದದಮಾನುಂ ಸಂತೋಷಂಬಟ್ಟು ಪಿರಿದೊಂದು ಮಾದುಫಲಮಂ ಕೊಂಡು ಪೋಗಿ ಸಿದ್ಧಾರ್ಥನಂ ಕಂಡಿಂತೆಂದು ಬಿನ್ನವಿಕುಂ ಸಿದ್ಧಾರ್ಥಸೆಟ್ಟಿ ಮಹಾಪುರುಷಾ ನಿನಗಾನೊಂದೊಸಗೆಯಂ ಪೇೞಲ್[5] ಬಂದೆಂ ಜಯಾವತಿ ಬೆಸಲೆಯಾದಳ್ ಮಗಂ ಪೆತ್ತಳೆಂದು ಪೇೞ್ದೊಡೆ ಪೇೞ್ದ ಭಟ್ಟಂಗೆ ಕಟಕ ಕಟಿಸೂತ್ರಂ ಮೊದಲಾಗೊಡೆಯ ಅಂಗಚಿತ್ತಮುಮಂ ಪಿರಿದು ಕಸವರಮುಮಂ ಕೊಟ್ಟು ಪಾರ್ವಂಗೆ ದಾರಿದ್ರ್ಯಮೋ[5]ಕ್ಷ[5]ಮಂ ಮಾಡಿ ಸಿದ್ಧಾರ್ಥನೀ ಪಾರ್ವನ ಮಾತಂ ಕೇಳ್ದಾಗಳೆ ಪುತ್ರಮುಖಮಂ ನೋೞ್ಪೆನೆಂದು ಭೋಂಕನೆ ನೆಲಮನೆಯೊಳಗಂ ಪೊಕ್ಕು ನೋೞ್ಪನ್ನೆಗಂ ಜಯಾವತಿ ತನ್ನ ಸೋಂಕಿಲ ಮೇಗ[6]ಟ್ಟಾ[6]ಡಿಸುತ್ತಿಪ್ಪ ಕೂಸಂ ಎಳನೇಸಱ ತೇಜದೊಳೋರಂತಪ್ಪನಂ ಕಂಡು ಪಲವು ಕಾಲಂ ಬಾೞ್ವೆಯಾಗೆಂದು ಮಗನಂ ಪರಸಿ ಮತ್ತಮಿಂತೆಂದನೆನ್ನ ಮೂವತ್ತೆರಡು ಕೋಟಿ ಕಸವರಕ್ಕಂ ರಾಜಶ್ರೇಷ್ಠಿ ಪದಕ್ಕಮೆನ್ನ ಸಂತತಿಗಮೆಲ್ಲ ಎನ್ನಿಂದಿತ್ತ ನೀನೆ ಅರಸನೆಂದು ನುಡಿದು ಸಮಸ್ತಭಾರಮೆಲ್ಲಮಂ ಕೂಸಿಂಗೆ ಸಮರ್ಪಿಸಿ ಸೋಂಕಿಲೊಳಿರ್ದ ಕೂಸಿಂಗೆ ಸೆಟ್ಟಿವಟ್ಟಂಗಟ್ಟಿ ಪರಸಿ ಸೇಸೆಯನಿಕ್ಕಿ ಸೋಂಕಿಲೊಳಿರ್ದ್ದನಂ ಕಂಡನಪ್ಪುದಱಿಂ ಸುಕೌಶಲಸ್ವಾಮಿಯೆಂದು ಪೆಸರನಿಟ್ಟು ನೆಲಮನೆಯಂ ಪೂೞಿಮಟ್ಟು ಸ್ವಜನ ಪರಿಜನ ಬಂಧುವರ್ಗಕ್ಕೆಲ್ಲಂ ನಿಶ್ಶಲ್ಯಂಗೆಯ್ದು ನೀಮಿನಿಬರುಂ ಸುಕೌಶಲಸ್ವಾಮಿಯುಂ ಪಿಡಿದು ಬಾೞಿಮೆಂದು ಕಲ್ಪಿಸಿ ಸಂತಯಿಸಿ ವಿನಯಂಧರರೆಂಬಾಚಾರ್ಯರ ಪಕ್ಕದೆ ಪಲಂಬರುಂಬೆರಸು ತಪಂಬಟ್ಟಂ ಮತ್ತೆ ಶ್ರೀಕಾಂತ ಮೊದಲಾಗೊಡೆಯ ಪಲಂಬರ್ ಪೆಂಡಿರ್ಕ್ಕಳ್ ವಿನಯಂಧರಭಟ್ಟಾರರ್ ಗುರುಗಳಾಗೆ ಗುಣಮತಿ ಕಂತಿಯರ್ ಕಂತಿಯರಾಗೆ ತಪಂಬಟ್ಟು ಪಲಕಾಲಮುಗ್ರೋಗ್ರ ತಪಶ್ಚರಣಂ

---

1. ವೈದ್ಯಂ (ಫಚಝ). 2. ಜೆ (ಕ), ವತಿ (ಫಚಝ). 3. ದೆ (ಕ). ವೆ (ಚ), *ಱು (ಫ). 4. ಗಂಜ (ಕಗ). ಗಂಜೆ (ಖ), ಮಗನಂ ಪೆ (ಛ), ಕಿರುಂಡಿ ಮಗನಂ ಪೆತ್ತಳ್ ಎಂದಿರಬಹುದೆ ? 5. ಚನಂ (ಕ). 6. ದರ್ೞ (ಖ), ಮೇಗಿರ್ದ್ದಮೊಲೆಯೂ (ಕ).

ಗೆಯ್ದು ಸಮಾಧಿಮರಣದಿಂದಂ ಮುಡಿಪಿ ದೇವಲೋಕದೊಳನಿಬರುಂ ಪುಟ್ಟಿದರ್ ಮತ್ತಿತ್ತ ಸಿದ್ಧಾರ್ಥರಿಸಿಯುಂ ಪನ್ನೆರಡು ವರುಷಂಬರಂ ಗುರುಗಳನಗಲದೆ ದ್ವಾದಶಾಂಗ ಚತುರ್ದಶ ಪೂರ್ವಮಪ್ಪಾಗಮಮೆಲ್ಲಮಂ ಕಲ್ತೇಕವಿಹಾರಿಯುಪ್ಪೆಂ ಭಟಾರಾ ಎಂದು ಗುರುಗಳಂ ಬೆಸಗೊಂಡವರನುಮತದಿಂದೇಕವಿಹಾರಿಯಾಗಿ [1]ಗ್ರಾಮೇ ಏಕರಾತ್ರಂ ನಗರೇ ಪಂಚರಾತ್ರಂ ಅಟವ್ಯಾಂ ದಶರಾತ್ರಮೆಂಬೀ ನ್ಯಾಯದಿಂ ವಿಹಾರಿಸುತ್ತಂ [2]ಛಟ್ಟಟ್ಠಮ ದಸಮ ದುವಾಳ[2]ಸಾಷ್ಟೋಪವಾಸ ಪಕ್ಷೋಪವಾಸ ಮಾಸೋಪವಾಸಂಗಳಂ ಮಾಡುತ್ತಂ ಪಲಕಾಲಂ ತಪಂಗೆಯ್ಯುತ್ತಮಿರ್ದರ್

ಇತ್ತ ಜಯಾವತಿ ಮುಂ ಭಟಾರರ್ ಪೇೞ್ದಾದೇಶಮಂ ನೆನೆದು ತನ್ನ ಮನೆಯಂ ರಿಸಿಯರುಂ ಪುಗಲೀಯದಂತಿರೆ ಬಾಗಿಲ್ಗಾಪಿನವರಂ ಕಲ್ಪಿಸಿದೊಳ್ ಮತ್ತೆ ಸಿದ್ಧಾರ್ಥರಿಷಿಯರ ಮೇಗೆ ಕ್ರೋಧಮಂ ಭಾವಿಸಿ ಬಾಲವದ್ದೆಯುಂ ಕೂಸಂ ಸಿಸುವನವ್ಯಕ್ತನಂ ಬಿಸುಟ್ಟೆಂತು ತಪಂಬಟ್ಟೆ ಪಾಪಕರ್ಮ ದಯೆಯಿಲ್ಲದೊಂ ನಿಷ್ಕರುಣಿ ಎಂದು ಬಯ್ದಳ್ ಮತ್ತೆ ಸುಕೌಸಳ ಸ್ವಾಮಿಯುಂ ಮೊಲೆಯೂಡುವ ದಾದಿ ಸುಬ್ರತೆಯೆಂಬೊಳ್ ಸುಮತಿಯೆಂಬೊಳೂಡುವ ದಾದಿ ನಂದೆಯೆಂಬೊಳಾಡಿಸುವ ದಾದಿ ಸುಪ್ರಭೆಯೆಂಬೊಳ್ ಮಜ್ಜನಂಬುಗಿಸುವ ದಾದಿ ಮೇಘಮಾಲೆಯೆಂಬೊಳ್ ಪಸದನಂಗೊಳಿಸುವ ದಾದಿ ಇಂತಯ್ವರ್ ದಾದಿಯರ್ಕಳ್ ನಡಪೆ ಸುಖದಿಂದಂ ಬಳೆದು ಪದಿನಾಱುಂ ವರುಷಂಬೋಗಿ ಯೌವನವಾದೊಡೆ ಮೂವತ್ತಿರ್ವ್ವರರಸು ಮಕ್ಕಳ ಕೂಸುಗಳನತ್ಯಂತ ಲಾವಣ್ಯಸೌಭಾಗ್ಯಕಾಂತಿಹಾವ ಭಾವವಿಲಾಸ ವಿಭ್ರಮಂಗಳಿಂ ಕೂಡಿದೋರಂ ಬೇಡಿಯೊಂದೆ ಪಸೆಯೊಳ್ ಮದುವೆ ನಿಱಿಸಿದಳ್ ಮತ್ತೇಕಶಾಲ ದ್ವಿಶಾಲ ತ್ರಿಶಾಲ ಚತುಃಶಾಲ ಸ್ವಸ್ತಿ ನಂದ್ಯಾವರ್ತಂ ಮೊದಲಾಗೊಡೆಯ ಮಾಡಂಗಳಂ ಮೂವತ್ತೆರಟ್ಟಿಳ್ಳಿಮಾಡಂಗ[3][ಳುಮಂ][3]ಮಾಡಿಸಿ ತನ್ನ ಮನೆಯಂಗಣದೊಳ್ ಸೆಂಡಾ[4]ಡುವ ತಟ್ಟಿಯುಮಾನೆಯನೇಱುವ ವಿನೋದಂ[4] ಮೊದಲಾಗೊಡೆಯ ವಿನೋದ ಸ್ಥಾನಂಗಳೆಲ್ಲಮಂ ಮಾಡಿಸಿ ಪೊಱಮಡಲೀಯದಂತು ಕಾಪಂ ಮಾಡಿ ಮಗನೈಶ್ವರ್ಯಮಂ ವಿನೋದಮುಮನಟ್ಟ್ತಿಯಿಂದಂ ದಿವಸಕ್ಕಂ ನೋಡುತ್ತಿರ್ಕ್ಕುಮಾ ಸುಕೌಶಳ ಸ್ವಾಮಿಯುಂ ಮೂವತ್ತಿರ್ವ್ವರ್ ಪೆಂಡಿರ್ಕ್ಕಳೊಡನೆ ಇಷ್ಟವಿಷಯ ಕಾಮಭೋಗಸುಖಂಗಳಂ ಪಲಕಾಲಮನುಭವಿಸುತ್ತಿರೆ

ಮತ್ತೊಂದು ದಿವಸಂ ಸುಕೌಶಳಸ್ವಾಮಿಯುಂ ಪೃಥ್ವೀ[5]ಧರ[5]ಮೆಂಬ ಪ್ರಾಸಾದ ಏೞನೆಯ ನೆಲೆಯ ಮೇಗೆ ತಾನುಂ ತಾಯುಂ ಸುವ್ರತೆ ಮೊದಲಾಗೊಡೆಯ ಅಯ್ವರ್ ದಾದಿಯರುಂ ಸ್ವಯಂಪ್ರಭೆ ಮೊದಲಾಗೊಡೆಯ ಮೂವತ್ತಿರ್ವ್ವರ್ ಪೆಂಡಿರ್ಕ್ಕಳಂನಿತಿಬರಿಂದಂ ಪರಿವೇಷ್ಟಿತನಾಗಿ ಗವಾಕ್ಷಜಾಲಾಂತರದೊಳ್ ದಿಶಾವಲೋಕನಂಗೆಯ್ಯುತ್ತಂ . ಸುಖಸಂಕಥಾವಿನೋದದಿಂದಿರ್ಪ್ಪನ್ನೆಗಮಿತ್ತ ಸಿದ್ಧಾರ್ಥರಿಸಿಯರ್ ಗ್ರಾಮನಗರಖೇಡಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ

1. (ಬ) ಪ್ರತಿಯಲ್ಲಿ ನಷ್ಟವಾಗಿದೆ. 2. ಛಟ್ಟಾಷ್ಟಮದಂ ದಶಮದ ದ * * * (ಕರ್ಗ) "ಷಷ್ಠಾಷ್ಟಮದಶಮದ್ವಾದಶ" ಎಂದು ಇದಕ್ಕೆ ಸರಿಯಾದ ಸಂಸ್ಕೃತ ಪಾಠ. 3. ಳ್ಳುಂ (ಬ). 4. ದಲುಂ ವೈಹಾಳಿ (ಘಚಛ). 8. ತಿಲಕ (ಘಚಛ).

ವಿಹಾರಿಸುತ್ತಮಯೋಧ್ಯಾನಗರಮಂ ಬಂದು ಮಾಸೋಪವಾಸದ ಪಾರಣೆಯಂದು ಚರಿಗೆವೊಕ್ಕು ಕಿಱುಮನೆ ಪೆರ್ಮನೆಯೆನ್ನದುಣಲ್ ತಕ್ಕ ಮನೆಗಳಂ ಯಥಾಕ್ರಮದಿಂ ಪುಗುತ್ತಂ ಬರ್ಪರ್ ಸುಕೌಶಳಸ್ವಾಮಿಯ ಮನೆಯಂ ಪೊಕ್ಕು ಪೊಱಮಡುವರ್ ಗಿಡಿಗಿಡಿಜಂತ್ರಂ ಮಿಳಿಮಿಳಿನೇತ್ರರಪ್ಪ ಮಾಸೋಪವಾಸಂಗೆಯ್ದ ರಿಸಿಯರ್ ಪೋಪುದಂ ಸುಕೌಶಳಸ್ವಾಮಿ ಕಂಡೀ ಪೋಪರೇನೆಂಬರಬ್ಬಾ ಅಪೂರ್ವರೂಪರಿನ್ನರನೆಂದುಂ ಕಂಡಱಿಯೆನೆಂದು ತಾಯುಂ ಬೆಸಗೊಂಡೊಡೆ ತಾಯ್ ಇಂತೆಂದು ಪೇೞ್ದಳ್ ಮಗನೆ ಈತನಂಗ[1]ಡಿಯಲವಡಂ ಪೆಱುಕಿ ತಿಂದು ಬಾೞ್ವೆಂ[1] ಬೈಕಂಗುಳಿ ಬೇಡಿ ಪೊೞಲೆಲ್ಲಮಂ ತೊೞಲ್ದು ಬಸಿಱಂ ಪೊರೆವೊಂ ದೇಸಿಗನಾರುಮಿಲ್ಲದೊಂ ಕೊಂವಣಕ್ಕಪ್ಪೊಡಂ ಭಾಗಸಮಿಲ್ಲದೊನೆಂದು ಜಯಾವತಿ ಪೇೞ್ದೊಡೆ ಸುವ್ರತೆಯೆಂಬ ದಾದಿ ಮಾಕೞ್ಗಿಂತೆಂದಳ್ ಹಾ ಪೊಲ್ಲ[2]ದಂ ನು[2]ಡಿದಯ್ ಸ್ವಾಮಿಯುಂ ಪರಮೇಶ್ವರನಂ ನೀಂ ಮೊದಲಾಗೊಡೆಯ ಮೂವತ್ತಿರ್ವ್ವರುಮೊಳ್ಪೆಂಡಿರ್ಕಳುಮಂ ಮೂವತ್ತೆರೞ್ಕೋಟಿ ಕಸವರಮುಮಂ ಕೊ[3]ೞೆದ[3] ಪುಲ್ಲದರ್ಕ್ಕಂ ತೊಱೆವಂತನಿತುಮಂ ತೊಱೆದು ಕರ್ಮಕ್ಷಯಾರ್ಥಂ ತಪಂಬಟ್ಟಾತನನಿಳಿಸಿ ಪರಿಭವಿಸಿ ಮುಟ್ಟುಗಿಡಿಸಿ ನುಡಿಯಲ್ವೇಡೆಂದು ಬಾರಿಸಿದೊಳಂ ಜಯಾವತಿ ಕಣ್ಕತ್ತಿ ಬಾರಿಸಿದೊಡೆ ಕೆಮ್ಮಗಿರ್ದ್ದು ಪೆಱಪೆಱವನೆ ನುಡಿಯಲ್ ತಗುಳ್ದೊಡೆ ಸುಕೌಶಳಸ್ವಾಮಿಯವರಿರ್ವರ ನುಡಿಗಳ್ ಸಗ[4]ರ್ಭ[4]ವಚನಂಗಳೆಂದು ತನ್ನ ಮನದೊಳೆ ಬಗೆಯುತ್ತಿರ್ಪಿನಂ ಬಾಣಸಿಗಂ ಬಂದು ಬೋನಮೆತ್ತಿಯೋಗರ ಮಾಱಿದಪ್ಪುದೆಂದು ಪೇೞ್ದೊಡೆ ತಾಯುಂ ಸುವ್ರತೆ ಮೊದಲಾಗೊಡೆಯ ದಾದಿಯರೆಯ್ವರುಮಾತನ ಪೆಂಡಿರ್ಕಳ್ ಸ್ವಯಂಪ್ರಭೆ ಶ್ರೀದತ್ತೆ ಬಂಧುಮತಿ ಭಾನುಮತಿ ಮಿತ್ರಸೇನೆ ಪ್ರಿಯಂಗು ಸುಂದರಿ ಪ್ರಿಯದೆ ಶ್ಯಾಮಲತೆ ವಿದ್ಯುಲ್ಲತೆ ಅಚಲೆ ವಿಮಳಮತಿ ಶ್ರೀಕಾಂತೆ ಶಶಿಪ್ರಭೆ ಸೂರಸೇನೆ ಅನಂತಮತಿ ಸರಸ್ವತಿ ವಿಜಯೆ ವೈಜಯಂತೆ ಅಪರಾಜಿತೆ ಕನಕಮಾಳೆ ಧಾನ್ಯೆ ಧನಶ್ರೀ ವಸುಂಧರೆಯೆಂದಿವರ್ ಮೊದಲಾಗೊಡೆಯರೆಲ್ಲರ್ ನೆರೆದಿಂತೆಂದರ್ ವೇಳಾತಿಕ್ರಮಮಾದಪುದಾರೋಗಿಸಲ್ಕೇೞಿಮೆಂದು ನುಡಿದೊಡೆ ಸುಕೌಶಳಸ್ವಾಮಿಯಿಂತೆಂದನೀ ವೃತ್ತಾಂತಮೆಲ್ಲಮನಱಿದೊಡಲ್ಲದುಣ್ಬೆನಲ್ಲೆನದಱಿಂ ಪೇೞಿಮ್ ಸುವ್ರತೆ ಏನಂ ಕಂಡಿರಾರುಳ್ಳುದನುಳ್ಳಂತೆ ಪೇೞೆಯಪ್ಪೊಡೆ ನಿನಗೆನ್ನಾಣೆಯೆಂದು ತನ್ನ ಮೇಗೆ ಸೂರುಳಿಸಿ ಬೆಸಗೊಂಡೊಡೆ ಸುವ್ರತೆಯೆಂಬೊಳ್ ಮೊಲೆಯೂಡಿದ ದಾದಿಯಿಂತೆಂದು ಪೇೞ್ದಳ್ ಕೇಳ್ ಮಗನೆ ಇವರ್ ನಿನ್ನ ತಂದೆವೀರ್ ಸಿದ್ಧಾರ್ಥರೆಂಬೊರ್ ನೀನ್ ತೊಟ್ಟಿಲೊಳಿರ್ದ್ದಂತೆ ನಿನಗೆ ಸೆಟ್ಟಿವಟ್ಟಂಗಟ್ಟಿ ಸಂಸಾರಕ್ಕೆ ಪೇಸಿ ಕರ್ಮಕ್ಷಯಾರ್ಥಂ ತಪಂಬಟ್ಟೀ ಮೆಯ್ಯಂ ನಿಱಿಸಲ್ವೇಡಿ . ಪೊೞಲೊಳಗೆ ಚರಿಗೆವೊಕ್ಕು [5]ಬಾವರಿವುಗುತ್ತುಂ[5] ಬಂದು ನಿನ್ನ ಮನೆಯಂ ಪೊಕ್ಕು ಪೊಱಮಟ್ಟು ಪೋದರೆಂದು ಪೇೞ್ದಿನ್ನಾರೋಗಿಸಲ್ವೇೞ್ಕುಂ ಏೞು ಮಗನೆ ಎಂದೊಡೆ ಸುಕೌಸಳಸ್ವಾಮಿಯೆಂದನಂತಪ್ಪೊಡಾನುವರಂತಪ್ಪ ರೂಪಂ ಕೈಕೊಂಡಲ್ಲದುಣ್ಣೆನೆಂದು

---

1. ಗದಿಯಲವಟು ಪೆಱುಕಿ ತಿ . . . . (ಕಖ) ಗಡಿಯಲವಟು ಪೆಱುಕಿ ತಿ. ಬಾೞ್ವೆಂ (ಗ). ಗಡಿಯಲವಡಂ ಪಿಱುಕಿ ತಿಂದು ಬಾೞ್ವೆಂ (ಚಛ). 2. ದುಮಾ (ಕಖಗ). 3. ಳದ (ಘಚಛ). 4. ರ್ಗ (ಕಖಗ). 5. ತಿರಿಯುತ್ತಂ (ಘಚ), ತಿರುಗುತ್ತಂ (ಛ).

ಪ್ರತಿಜ್ಞೆಗೆಯ್ದಿರ್ದೊಡೆ ಸ್ವಜನ ಪರಿಜನ ಬಂಧುವರ್ಗಮೆಲ್ಲಂ ನೆರೆದಿಂತೆಂದರ್ ನೀನಿನ್ನುಂ [1]ಕೂಸಯ್[1] ಕಾಮಭೋಗಂಗಳನನುಭವಿಸುವ ದಿವಸಂಗಳ್ ತಪಂಬಡುವ ದಿವಸಮಲ್ಲಂ ಪ್ರಾಯಂಬೋದಿಂಬಳಿಕ್ಕೆ ನಿನ್ನಪ್ಪನೆಂತು ನಿನಗೆ ಸೆಟ್ಟಿವಟ್ಟಂಗಟ್ಟಿ ಸಮಸ್ತಭಾರಮಂ ಸಮರ್ಪಿಸಿ ತಪಂಬಟ್ಟನಂತೆ ನೀನುಂ ನಿನಗೆ ಮಗನಾದೊಡೆ ಮಗಂಗೆ ಸೆಟ್ಟಿವಟ್ಟಂಗಟ್ಟಿ ಸಮಸ್ತ ಭಾರಮಂ ನಿರೂಪಿಸಿ ತಪಂಬಡುವುದೆಂದೆಲ್ಲರುಂ ನುಡಿದೊಡಿಂತೆಂದನನ್ನೆಗಮೀಂ ಸಾವರೊ ಬಾಳ್ವರೊ ಎಂತಱಿಯಲಕ್ಕುಂ ಮಾನಸರ್ವಾೞ್ಬುದು ಪನಿಪುಲ್ಲ ಮುಗಿಲ ಸಂಜೆಯೊಳೋರಂತಪ್ಪುದಱಿಂದಾರ್ ಬಾರಿಸಿದೊಡಂ ನಿಲ್ವೆನಲ್ಲೆಂದು ಸ್ವಯಂಪ್ರಭೆಯೆಂಬೊಳ್ ಬಸಿಱ ಪೆಂಡತಿಯಾಕೆಯ ಬಸಿಱ ಕೂಸಿಂಗೆ ಸೆಟ್ಟಿವಟ್ಟಂಗಟ್ಟಿ ಮನೆಯಿಂದಂ ಪೊಱಮಟ್ಟು ರಿಸಿಯರಿರ್ದ್ದೆಡೆಯುಂ ಬೆಸಗೊಳುತ್ತಂ ಪೋಗಿ ಬಹಿರುದ್ಯಾನವನದೊಳ್ ಸ್ಫಟಿಕಶಿಲಾತಲದ ಮೇಗಿರ್ದ್ದ ಸಿದ್ಧಾರ್ಥ ಭಟಾರರಂ ಕಂಡು ಸುಕೌಶಳಸ್ವಾಮಿ ಜಾತಿಸ್ಮರನಾಗಿ ದರ್ಶನವಿಶುದ್ಧಿಯೊಳ್ ಕೂಡಿದ ಶುಭಪರಿಣಾಮದಿಂದಂ ಬಂದಿಸಿದಾಗಳವಧಿಜ್ಞಾನಮುಮಾಗೆ ಅವರ ತನ್ನ ಮುನ್ನಿನ ಭವಾಂತರಂಗಳೆಲ್ಲಮಂ ಪ್ರತ್ಯಕ್ಷಮಾಗಱಿದು ಮನದೊಳಿಂತೆಂದು ಬಗೆದನಿವಂ ಮುನ್ನಿನ ಭವಾಂತರದೊಳ್ ಪ್ರಿಯದರ್ಶನನೆಂಬ ಸೆಟ್ಟಿ ಕಾಲಂಗೆಯ್ದು ಮಲಯ ಸುಂದರನೆಂಬಾನೆಯಾಗಿ ಪುಟ್ಟಿದನಲ್ಲಿಂ ಬೞಿಯಂ ಕುಬೇರಕಾಂತನೆಂಬೊನಾದನಲ್ಲಿಂ ಬೞಿಯಂ ವಿದ್ಯುನ್ಮಾಳಿಯೆಂಬ ವಿದ್ಯಾಧರನಾದನಲ್ಲಿಂ ಬೞಿಯಂ ಸಿದ್ಧಾರ್ಥನೆಂಬೊನೀಗಳಾಗಿ ತಪಂಬಟ್ಟನೆಂತು ಸಿದ್ಧಾರ್ಥ ಭಟ್ಟಾರರ ಭವಂಗಳ್ಪಿದು ಮತ್ತಾಂ ಮುನ್ನಿನ ಭವದೊಳ್ ಪ್ರಿಯಸೇನೆಯೆಂಬ ಮಾಲೆಗಾರ್ತಿಯೆಂ ಕಾಲಂಗೆಯ್ದು ಪದ್ಮಾವತಿಯೆಂಬ ಪಿಡಿಯಾಗಿ ಪುಟ್ಟಿದೆನಲ್ಲಿಂ ಬೞಿಯಂ ವರಾಂಗನಾದೆನಲ್ಲಿಂ ಬೞಿಯಂ ಶ್ರೀಧರನಾದೆನಲ್ಲಿಂ ಬೞಿಯಂ ಚಂಡವೇಗನೆಂಬ ವಿಧ್ಯಾಧರನಾದೆನಲ್ಲಿಂ ಬೞಿಯಂ ಸಿದ್ಧಾರ್ಥಂಗಂ ಜಯಾವತಿಗಂ ಮಗನನಾಂ ಸುಕೌಶಳಸ್ವಾಮಿಯಾಗಿ ಪುಟ್ಟಿದೆನಿಂತೆನ್ನ ಭವಾಂತರಮಾೞು ಮತ್ತಾಂ ಪ್ರಿಯಸೇನೆಯಪ್ಪಂದೆನ್ನ ಕೆಳದಿ ಸುಕೀರ್ತಿಯೆಂಬಳ್ ಪ್ರಿಯದರ್ಶನನ ಭಾರ್ಯೆ ಕಾಲಂಗೆಯ್ದು ಮಲಯಾವತಿಯೆಂಬ ಪಿಡಿಯಾಗಿ ಪುಟ್ಟಿದೊಳಲ್ಲಿಂ ಬೞಿಯಂ ಸುಕೇಶಿನಿಯಾದಳಲ್ಲಿಂ ಬೞಿಯಂ ಮನೋಹರಿಯಾದಳಲ್ಲಿಂ ಬೞಿಯಂ ವಿರಳವೇಗೆಯೆಂಬ ವಿದ್ಯಾಧರಿಯಾದಳಲ್ಲಿಂ ಬೞಿಯಂ ಶ್ರೀಕಾಂತೆಯಾದೊಳಾಕೆಯಂ ಸಿದ್ಧಾರ್ಥಂಗೆ ಕೊಟ್ಟುದಂತು ಶ್ರೀಕಾಂತೆಯ ಭವಾಂತರಮಾೞಿಂತು ಮೂವರ ಭವಾಂತರಂಗಳನಱಿದು ಸಂಸಾರಕ್ಕೆ ವೈರಾಗ್ಯಮಾಗಿ ಸಿದ್ಧಾರ್ಥ ಭಟ್ಟಾರರ [2]ಪಕ್ಕದೆ[2] ಸುಕೌಸಳ ಸ್ವಾಮಿ ತಪಂಬಟ್ಟಂ ಸ್ವಯಂಪ್ರಭೆಯುಂ ಬೞಿಯ ಉೞಿದ ಮೂವತ್ತಿರ್ವ್ವರ್ ಪೆಂಡಿರುಂ ಸಿದ್ಧಾರ್ಥ ಭಟಾರರ್ ಗುರುಗಳಾಗೆ ಗುಣಮತಿ ಕಂತಿಯರ್ ಕಂತಿಯರಾಗೆ ತಪಂಬಟ್ಟು ಪಲಕಾಲಮುಗ್ರೋಗ್ರ ತಪಶ್ಚರಣಂಗೆಯ್ದು ಸಮಾಧಿಮರಣದಿಂ ಮುಡಿಪಿ ದೇವಲೋಕದೊಳ್ ಪುಟ್ಟಿದರ್

ಮತ್ತಿತ್ತ ಜಯಾವತಿಯುಂ ತನ್ನಂ ಬಾರಿಸೆವಾರಿಸೆ ಸುಕೌಶಲಸ್ವಾಮಿ ತಪಂ

1. ಕಿಱುಕೂಸನ್ನೆ (ಘಟ). 2. ಪಾದಮೂಲದೊಳ್ (ಘಟಫ).

ಬಟ್ಟನೆಂದು ಮುಳಿದು ಜಿನಧರ್ಮಮಂ ಪೞಿದು [1]ಉನ್ಮಾರ್ಗೋಪದೇಶದಿಂದಾರ್ತಧ್ಯಾನದೊಳ್ ಕೂಡಿ ಸತ್ತು ಮೊಗ್ಗಳಗಿರಿಯೆಂಬ ಪರ್ವತದೊಳ್ ಪೆಣ್ಬುಲಿಯಾಗಿ ಪುಟ್ಟಿದಳ್ ಮತ್ತಿತ್ತ ಸುಕೌಸಲಸ್ವಾಮಿ ದ್ವಾದಶಾಂಗ ಚತುರ್ದಶ ಪೂರ್ವಮಪ್ಪಾಗಮಮೆಲ್ಲಮಂ ಕಲ್ತು ಗುರುಗಳೊಡನೆ ಗ್ರಾಮನಗರಖೇಡಖರ್ವಡ ಮಡಂಬಪತ್ತನದ್ರೋಣಾಮುಖಂಗಳಂ ವಿಹಾರಿಸುತ್ತಂ ಪಲಂಕಾಲಂ ತಪಂಬಟ್ಟು ಮೊಗ್ಗಳಗಿರಿಯೆಂಬ ಪರ್ವತಕ್ಕೆ ವಂದು ಮೞೆಗಾಲದೊಳಿರ್ಪರುವೊಂದೆ ಗುಹೆಯೊಳ್ ಜೋಗುಗೊಂಡು ನಾಲ್ಕು ತಿಂಗಳಿರ್ಪರುಮುಪವಾಸಂಗೆಯ್ದು ಜೋಗಂ ನೆಱೆದೊಡೆ ಚಾತುರ್ಮಾಸದ ಪಾರಣೆಯೆಂದು ಸುಕೌಸಲಸ್ವಾಮಿಯಪ್ಪ ರಿಸಿಯರ್ ಗುಹೆಯಿಂದಂ ಮುನ್ನ ಪೊಱಮಟ್ಟು ದೆಸೆಗಳ ನೋೞ್ಪರನ್ನೆಗಂ ತಾಯಪ್ಪ ಪೆಣ್ಬುಲಿ ಪಲವು ದಿವಸಮಾಹಾರಮಂ ಪೆಱದೆ ಪಸಿದ ಮಲ್ಮಲ ಮಱುಗುತಿರ್ದ್ದು ರಿಸಿಯರಂ ಕಂಡು ಮುಳಿದು ಮಸಗಿ ಮೇಲ್ವಾಯಲ್ ಪರಿತಪ್ಪುದಂ ಕಂಡು ಸುಕೌಸಳಸ್ವಾಮಿ ಆಹಾರ ಶರೀರಕ್ಕೆ ಯಾವಜ್ಜೀವಂ ನಿವೃತ್ತಿಯೆಂದು ಕಾಯೋತ್ಸರ್ಗಂ ಗೆಯ್ದು

ಗಾಹೆ ॥ ಖಮ್ಮಾಮಿ ಸವ್ವಜೀವಾಣಂ ಸವ್ವೇ ಜೀವಾ ಖಮಂತು ಮೇ
ಮೆತ್ತೀ ಮೇ ಸವ್ವಭೂದೇಸು ವೇರಂ ಮಜ್ಝ ಣ ಕೇಣಚಿ ॥
ಮಜ್ಝ ಸೌಹಾವಂ ಣಾ[2]ಣಂ ದಂಸಣಚರಣಂ ಣಕೋವಿ ಲಾವ[3]ಣ್ಣಂ[3]
ಜೋ ಸವ್ವಯಣಗ್ಗಾಹಿ ಸೋ ಹಂ ಣೋ ಗಾಹವೇಯಾದಾ ॥ (?)
ಭಿಜ್ಜಉ ಭಿಜ್ಜಉ ಜಾಉ ಖಉ ಜೋಣಯ ಏಹು ಸರೀರು
ಅಪ್ಪಾ ಭಾ[4]ವ[4]ಹಿ ಣಿ[5]ಮ್ಮ[5]ಲಉ ಜೇಂ ಪಾವಹಿ ಭವತೀರು ॥

ಎಂದಿಂತು ಕ್ಷಮೆಯುಂ ಭಾವಿಸಿ ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಧ್ಯಾನಿಸುತ್ತಮಿರೆ ಪುಲಿ ಬಂದು ಪಾಯ್ದು ಬಸಿಱಂ ಪೋೞ್ದು ನೆತ್ತರಂ ಕುಡಿದು ತೆಗಲೆಯುಂ ಪೋೞ್ದು ತಿನ್ವಾಗಳ್ ಸಿದ್ಧಾರ್ಥರಿಸಿಯುಂ ಗುಹೆಯಿಂ ಪೊಱಮಟ್ಟು ಬಂದು ಕಂಡು ಹಾ ಪಂಚಮಹಾಪಾತಕಿ ಮಗನನೇಕೆ ಕೊಂದು ತಿಂದೆ ಮುನ್ನೆ ಕುಂಕುಮಪಂಕಿತಮಪ್ಪ ದಿಬ್ಯದೇಹದೊಳ್ ಬೆಮರ ಬಿಂದುಗಳಂ ಕಂಡು ನೆತ್ತರೆಂದು ಬಗೆದು ಮೂರ್ಛೆಗೆ ಸಲ್ವಾಕೆಯೆ ಈಗಳ್ ಮಗನಂ ಪೋೞ್ದು ತಿಂದಪ್ಪಯ್ ಅಹೋ ಕಷ್ಟಂ ಸಂಸಾರಮೆಂದು ಸಿದ್ಧಾರ್ಥ ಭಟ್ಟಾರರ್ ನುಡಿವ ವಚನಮಂ ಕೇಳ್ದು ವಕ್ಷಃಸ್ಥಳದ ಶ್ರೀಲಾಂಛನಮಂ ಕಂಡು ಜಾತಿಸ್ಮರೆಯಾಗಿ ಮೂರ್ಛೆಗೆ ಸಂದು ನೀಡಱಿಂದೆೞ್ಚೆತ್ತು ಹಾ ಪಂಚಮಹಾಪಾತಕಿಯೆನ್ನ ಮಗನಂ ಪೋೞ್ದು ತಿಂದೆನೆಂದು ತನ್ನಂ ತಾಂ ನಿಂದಿಸಿ ತಲೆಯುಂ ಕಾಲ್ಗಳಂ ಪಾಷಾಣವೃಕ್ಷಂಗಳೊಳ್ ಶತಚೂರ್ಣಮಾಗೆ ಬಡಿದುಕೊಂಡು ಹಾ ಮಗನೆ ಪೊಲ್ಲದಂಗೆಯ್ದೆನೆಂದು ಪ್ರಳಾಪಂಗೆಯ್ದು [6]ಮಹಾಶೋಕಂಗೆಯ್ಯುತ್ತಿರೆ ಭಟ್ಟಾರರದರ್ಕೆ ಧರ್ಮಶ್ರವಣಂಗೆಯ್ದು ಸಂಸಾರಸ್ಥಿತಿಯನಱಿಯೆ ಪೇೞ್ದು ವ್ರತಂಗಳನೇಱಿಸಿದೊಡುಪಶಮಕ್ಕೆ ಸಂದಾಹಾರ ಶರೀರಕ್ಕೆ ಯಾವಜ್ಜೀವಂ ನಿವೃತ್ತಿಗೆಯ್ದು[6]

1. (ಖ)ದಲ್ಲಿ ನಷ್ಟವಾಗಿದೆ. 2. ಹೋವಣೊ (ಕ). 3. ವರಣಂ (ಕ). 4. ವಾ (ಗ). 5. ವಾ (ಕ). ಕೊನೆಯ ಎರಡು ಗಾಹೆಗಳು (ಖಘಚಛ)ಗಳಲ್ಲಿ ದೊರೆಯುವುದಿಲ್ಲ. 6 ಈ ಭಾಗ (ಕಖಗ) ಪ್ರತಿಗಳಲ್ಲಿಲ್ಲ. ಇದಕ್ಕೆ ಬದಲಾಗಿ 'ತೋಱಿದಂ' ಎಂದಿಷ್ಟೇ ಇದೆ.

ಶುಭಪರಿಣಾಮದೊಳ್ ಕೂಡಿ ಮುಡಿಪಿ ಸೌಧರ್ಮ ಕಲ್ಪದೊಳ್ ಪುಟ್ಟಿತ್ತು [1]ಸಿದ್ಧಾರ್ಥರಿಸಿಯರುಂ ಸಮ್ಯಗ್ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ ಕರ್ಮಕ್ಷಯಂಗೆಯ್ದು ಮೋಕ್ಷಮನೆಯ್ದಿದರ್[1] ಸುಕೌಸಲಸ್ವಾಮಿಯುಂ ತಿರಿಕೋಪಸರ್ಗಮಂ ಸೈರಿಸಿ ಸರ್ವಾರ್ಥಸಿದ್ಧಿಯೊಳ್ ಸಯಸತ್ತಮ ದೇವನಾಗಿ ಪುಟ್ಟಿ ಮೂವತ್ತುಮೂಱು ಸಾಗರೋಪಮಾಯುಷ್ಯಮನೊಡೆಯನಪ್ಪಹಮಿಂದ್ರನಾದೊನ್

ಎಂಬಿದೆಲ್ಲಮಂ ಯಶೋಧರ ಕೇವಲಿಗಳ್ ಪೇೞೆ ಚಂಪಾಪುರಾಧಿಪತಿಯಪ್ಪ ಗಂಧಭಾಜನನೆಂಬರಸಂ ಕೇಳ್ದಾದಮಾನುಂ ಸಂತುಷ್ಟಚಿತ್ತನಾಗಿ ಭಟಾರರ್ಗ್ಗೆಱಗಿ ಪೊಡೆವಟ್ಟು ಸಂಸಾರ ಶರೀರ ಭೋಗ ನಿರ್ವ್ವೇಗ ಪರಾಯಣನಾಗಿ ಧಾತ್ರಿವಾಹನನೆಂಬ ತನ್ನ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ನೂರ್ವರರಸು ಮಕ್ಕಳ್ವೆರಸು ಯಶೋಧರ ಕೇವಲಿಗಳ ಪಕ್ಕದೆ ತಪಂಬಟ್ಟಟಂ ಮತ್ತಪ್ಸರಸೆಯರ್ಕಳೊಳೋರನ್ನರಪ್ಪರಸಿಯರಯ್ನೂರ್ವರುಂ ಯಶೋಧರ ಕೇವಲಿಗಳ್ ಗುರುಗಳಾಗೆ ಪದ್ಮಾವತಿ ಕಂತಿಯರ್ ಕಂತಿಯರಾಗೆ ತಪಂಬಟ್ಟು [2]ಸಮಾಧಿ ಮರಣದಿಂದಂ ಮುಡಿಪಿ ಸೌಧರ್ಮಂ ಮೊದಲಾಗೊಡೆಯ ದೇವಲೋಕದೊಳ್ ಪುಟ್ಟಿದರಿತ್ತ ಗಂಧಭಾಜನ ಮುನಿಯುಂ ದ್ವಾದಶಾಂಗ ಚತುರ್ದಶ ಪೂರ್ವಮಪ್ಪಾಗಮಮೆಲ್ಲಮಂ ಕಲ್ತು ಪಲ ಕಾಲ[2]ಮುಗ್ರೋಗ್ರ ತಪಶ್ಚರಣಂಗೆಯ್ದು ಗ್ರಾಮನಗರಖೇಡಖರ್ವಡಮಡಂಬಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಪೋಗಿ ಪಾಂ[3]ಡ್ಯ[3] ವಿಷಯದೊಳ್ [4]ಪಳಿ ಕುಂತಳೆಯೆಂ[4]ಬ ಪರ್ವತದ ಮೇಗಿರ್ದು ಬಾಹ್ಯಾಭ್ಯಂತರ ಪರಿಗ್ರಹ ಪರಿತ್ಯಾಗ ಪೂರ್ವಕಂ ಕಾಯೋತ್ಸರ್ಗಂಗೆಯ್ದು ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಜಾನಿಸಿ ಕರ್ಮಕ್ಷಯಂಗೆಯ್ದು ಸುರಾಸುರೇಂದ್ರರ್ಕಳಿಂ ಪೂಜೆಯನೆಯ್ದಿ ಮೋಕ್ಷಕ್ಕೆ ಪೋದರ್

ಮತ್ತಾರಾಧಕರಪ್ಪವರ್ಗಳ್ ಸುಕೌಶಲಸ್ವಾಮಿಯ ತಿರಿಕೋಪಸರ್ಗಮಂ ಮನದೆ ಬಗೆದು ಪಸಿವುಂ ನೀರಳ್ಕೆ ದಾಹವಾತಂ ಸೂಲೆಯೆಂದಿವು ಮೊದಲಾಗೊಡೆಯ ವೇದನೆಗಳಂ ಸೈರಿಸಿ ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ ಸಮಾಧಿಮರಣದಿಂ ಮುಡಿಪಿ ಯಭ್ಯುದಯ ನಿಶ್ರೇಯಸ ಸುಖಂಗಳನೆಯ್ದುಗೆ

1. ಈ ಭಾಗ (ಕಖಗ) ಪ್ರತಿಗಳಲ್ಲಿಲ್ಲ. 2. ಈ ಭಾಗ (ಕಖಗ)ಗಳಲ್ಲಿಲ್ಲ. 3. ಡು (ಘಚಛ). 4. ಪಿಳಿಕುಂಥಮೆಂ (ಘಚಛ).

# (೩) ಗಜಕುಮಾರನ ಕಥೆ

ಗಜಕುಮಾರನ ಕಥೆಯಂ ಪೇೞ್ವೆಂ :

ಗಾಹೆ ॥ ಭೂಮಿಾಏ ಸಮಂ ಖೀಲಾಭಾಇದ ದೇಹೋವಿ ಅಲ್ಲಚಮ್ಮಂ ವ।
ಭಗವಂ ಪಿ ಗಜಕುಮಾರೋ ಪಡಿವಣ್ಣೋ ಉತ್ತಮಂ ಅಟ್ಠಂ ॥

[[1]ಭೂಮಿಾ ಏ ಸಮಂ—ನೆಲದೊಳೋರಂತಾಗೆ ಮಲಚ್ಚಿರ್ಯುರದಿಂ ತಗುಳ್ದು ನಾಭಿವರೆಗಂ ಬಸಿಱಿಂ ಪೋೞ್ದು, ಅಲ್ಲಚಮ್ಮಂ—ಪಂದೊವಲಂ ತೆಗೆದು, ಖೀಲಾಭಾಇದದೆಹೋವಿ[1]—ಕಾಯ್ದ ಕಬ್ಬೊರ್ಬಿನ್ನ ನಿಡಿಯುವುಂ ತೋರವುಮಪ್ಪ ಕೀಲ್ಗಳಿಂದಂ ಮೆಯ್ಯೆಲ್ಲಮಂ ನಿರಂತರಮುರ್ಚಿ ಪೋಗಿ ನೆಲನಂ [2]ತಾಪಿನಂ ಕೀ[2]ಲಿಱಿಯೆಪಟ್ಟ ಮೆಯ್ಯನೊಡೆಯನಾಗಿಯುಂ, ಭಗವಂ—ಪರಿದಪ್ಪ ಪೆರ್ಮೆಯನೊಡೆಯಂ, ಗಜಕುಮಾರೋಪಿ—ಗಜಕುಮಾರನುಂ, ಪಡಿವಣ್ಣೋ—ಪೂ[3]ರ್ದಿ[3]ದೊಂ, ಉತ್ತಮಂ ಅಟ್ಠಂ—ಮಿಕ್ಕ ದರ್ಶನಜ್ಞಾನಚಾರಿತ್ರಂಗಳಾರಾಧನೆಯುಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಸುರ[4]ಟ[4]ಮೆಂಬುದು ನಾಡಲ್ಲಿ ದ್ವಾರಾವತಿಯೆಂಬುದು ಪೊೞಲದನಾಳ್ವೊಂ [5]ವಿಷ್ಣು ಅರ್ಧಚಕ್ರಿ[5]ಯಾತನ ತಂದೆ ವಸುದೇವಸ್ವಾಮಿಯೆಂಬೊನಾ [6]ವಸುದೇವಸ್ವಾಮಿಯ[6]ರಸಿ ಗಾಂಧರ್ವದತ್ತೆಯೆಂಬೊಳಾಯಿರ್ವರ್ಗಂ ಗಜಕುಮಾರನೆಂಬೊಂ ಮಗ[7]ನಪ್ಪೊನಂತವರ್ಗಳಿಷ್ಟ ವಿಷಯಕಾಮಭೋಗಂಗಳನನುಭವಿಸುತ್ತಂ ಕಾಲಂ ಸಲೆ ಮತ್ತಿತ್ತ ಸೂರದತ್ತಮೆಂಬುದು ನಾಡಲ್ಲಿ ಪೌದನಪುರಮೆಂಬುದು ಪೊೞಲದನಾಳ್ವೊನಪರಾಜಿತನೆಂಬೊನರಸ[7]ನಾದಮಾನುಂ ಪ್ರಚಂಡ ಬಳಗರ್ವಿತನಾರುಮನುಱಿದೊಂ ವಿಷ್ಣು[8]ಗಂ ಬೆಸ[8]ಕೆಯ್ಯನೊಂದು ದಿವಸಂ ವಿಷ್ಣು ಪೊೞಲೊಳ್ [9]ಗೋಸಣೆ[9]ಯುಂ ತೊೞ[10]ಲ್ಚಿದನಾ[10]ವನೊರ್ವಂ ಪೌದನಪುರಾಧಿಪತಿಯಪ್ಪಪರಾಜಿತನಂ ಸಂಗ್ರಾಮದೊಳ್ ಕಾದಿ ಗೆಲ್ದು ಪಿ[11]ಡಿ[11]ಕೊಂಡು ಬರ್ಕುಮಾತಂಗೆಯಾತನ ಬೇಡುವುದೆಲ್ಲಮಂ ಕುಡುವೆನೆಂದು ತೊೞಲ್ವ ಗೋಸಣೆಯುಂ ಗಜಕುಮಾರಂ ಪಿಡಿದೊಡಾ ಮಾತನರಸಂ ಕೇಳ್ದು ಗಜಕುಮಾರನಂ ಕರೆಯಿಸಿಯಾತನೊಡನೆ ಚಾತುರ್ದಂತ ಬಳಮಂ ಕೂಡಿಯಟ್ಟಿದೊಡಾತನುಂ ಪೋಗಿಯಪರಾಜಿತನೊಡನೆ ಮಹಾಯುದ್ಧಂಗೆಯ್ದು ಗೆಲ್ದು ಪೆಡಂಗೆಯ್ಯುಡಿಯೆ ಕಟ್ಟಿ ಗಜತುರಗವಸ್ತುವಾಹನಸಹಿತಂ ತಂದು ವಿಷ್ಣುಗೊಪ್ಪಿಸಿದೊಡಾತನುಮೊಸೆದು ನೀನ್ ಮೆಚ್ಚಿದುದಂ ಬೇಡಿ

1. ಭೂಮಿಾಏ-ಸಮನೆಲ ತೆವರಂ, ಅಲ್ಲಚಮ್ಮಮಂ ಪಪಟ-ಒರ್ವನ ತೋಳಂ ತೆಗೆದು, ನಿರಖಾಇರದೇ ಹೋಪಿ (ಫಚಛ). 2. ತಾಂಗ (ಘಛ). 3. ಳ್ದಿ (ಕಖಗ). 4. ಥ (ಘಚಛ). 5. ವಿಷ್ಣು ಅರ್ಧಚಕ್ರವರ್ತಿ (ಗ). ವಿಷ್ಣುವರ್ಧನ ಚಕ್ರವರ್ತಿ (ಘಛ). ಅರ್ಧಚಕ್ರವರ್ತಿಯಪ್ಪ ವಿಷ್ಣುವೆಂಬನಾ (ಚ) 6. ತನ್ನ (ಘಚಛ). 7. (ಕಖಗ)ಗಳಲ್ಲಿ ಇಲ್ಲ. 8. ಗವಿುಂಬು (ಘಚಛ). 9. ಘೋಷಣೆ (ಕಖಘ). 10. ಚ್ಚಿಯಾ (ಕಖಗ). 11. ಡಿದು ಕಟ್ಟಿ (ಘಛ).

ಕೊಳ್ಳೆನೆ ಪೆಱತೇನುಮನೊಲ್ಲೆನ್ ನಿಮ್ಮ ಪ್ರಸಾದದಿಂದೆನಗೆಲ್ಲಮುಂಟು ಒಂದು ಬೇಟ್ಪೆಂ ನಿಮ್ಮಂತಃಪುರಮುೞಿಯೆ ಪೊಱಲೊಳಗೆನ್ನ ಮೆಚ್ಚಿದ ಪೆಂಡಿರನೆ ಕೊಂಡೆನ್ನಿಚ್ಛೆಯೊಳ್ ಮೆಚ್ಚಿದಂತೆ ಬಾೞ್ವೆನೀ ದಾಯಮಂ ಬೇಡಿರ್ದೆನಿದನೆನಗೆ ದಯೆಗೆಯ್ದು ಸಲಿಸುವುದೆಂದೊಡರಸನುಮಂತೆಗೆಯ್ಯೆಂದು ಗಜಕುಮಾರಂಗೆ ಬೇಡಿದುದಂ ಕೊಟ್ಟಂ

ಗಜಕುಮಾರನುಂ ತನ್ನ ಬೇಡಿ[1]ದ ವರಮಂ[1] ಪೆತ್ತು ಪರದರ ಪಾರ್ವರೊಕ್ಕಲಿಗರ ಸಾಮಂತರ ಪೊಱಲೊಳಗುಳ್ಳ ಒಳ್ಪೆಂಡಿರೆಲ್ಲರಂ ಕಣ್ಗಂ ಮನಕ್ಕಂ ಮೆಚ್ಚಿದವರೊಳ್ ತನ್ನಿಚ್ಛೆಯಿ[2]ಂದಂ ಮೊೞೆದು[2] ಮೊಟ್ಟಯಿಸಿ[3]ಯುಯ್ದು[3] ಬಾೞುತ್ತಿರೆ ಮತ್ತಮಾ ಪೊಱಲೊಳ್ ಪಂ[4]ಗುಳ[4]ನೆಂಬ ಸುವರ್ಣ[5]ಗಾಱ[5]ನ ಪೆಂಡತಿ ವಸುಂಧರಿಯೆಂಬೊಳತ್ಯಂತ ರೂಪಲಾವಣ್ಯ ಸೌಭಾಗ್ಯ ಕಾಂತಿ ಹಾವಭಾವ ವಿಲಾಸ ವಿಭ್ರಮಂಗಳನೊಡೆಯೊಳಂ ಕಂಡು ಗಜಕುಮಾರನಾಕೆಗಾಟಿಸಿ ತನ್ನ ಮನೆಯೊಳಿಟ್ಟಾಕೆಗಾಸಕ್ತನಾಗಿ ಬಾೞುತ್ತಿರ್ಕುಮಾ ಪಿರಣಿಗನುಂ ಪೆಂಡತಿಯ ವಿಯೋಗದೊಳ್ ಸಂತಾಪದಿಂದಮಿರುಳುಂ ಪಗಲುಮನವರತಂ ಬೇ[6][ಯು][6]ತ್ತಮುಸಮರ್ಥನಪ್ಪುದಱಿಂದಂ ಮನದೊಳ್ ಗಜಕುಮಾರಂಗೆ ಮುಳಿಯುತ್ತಿರ್ಕುಂ

ಇಂತು ಪಲಕಾಲಂ ಸಲೆ ಮತ್ತೊಂದು ದಿವಸಮರಿಷ್ಟನೇಮಿ ಭಟ್ಟಾರರ ಸಮವಸರಣಂ ವಿಹಾರಿಸುತ್ತಂ ದ್ವಾರಾವತಿಗೆ ವಂದೊಡೆ ವಿಷ್ಣುವಿನೊಡನೆ ಗಜಕುಮಾರಂ ತ್ರಿಭುವನ ಪರಮೇಶ್ವರನಲ್ಲಿಗೆ ಪೋಗಿ ವಂದಿಸಿ ಪೂಜಿಸಿರ್ದು ಭಟಾರರ್ ಧರ್ಮಮಂ ಪೇೞ್ವಲ್ಲಿಯುಗಮ್ಯಾಗಮನಂಗೆಯ್ವೊಡಂ ಪೆಱರ ಸಜ್ಜನಂಗಳೊಳ್ ಬ[7]ರ್ದೊಡೆ ಮೆಯ್ದುವ[7] ದುರ್ಗತಿಗಳೊಳಪ್ಪ ದುಃಖಂಗಳಂ ಪೇೞೆ[3] ಕೇಳ್ದು ನಾನ್ಯಥಾಜಿನಭಾಷಿತಮೆಂದು ನಂಬಿ ಭೋಗಂಗಳ್ಗೆ ಪೇಸಿ ವೈರಾಗ್ಯಮಾಗಿ ಎಲ್ಲಮಂ ತೊಱೆದರಿಷ್ಟನೇಮಿ ಭಟ್ಟಾರರ ಪಕ್ಕದೆ ತಪಂಬಟ್ಟುಗ್ರೋಗ್ರ ತಪಶ್ಚರಣಂಗೆಯ್ದು ಪನ್ನೆರಡು ವರ್ಷಂ ಪೋದೊಡೆ [8]ಗ್ರಾಮನಗರಖೇಡಖರ್ವಡ ಮಡಂಬಪಟ್ಟಣ ದ್ರೋಣಾಮುಖಂಗಳಂ[8] ವಿಹಾರಿಸುತ್ತಂ ಮತ್ತಮಾ ದ್ವಾರಾವತಿಗೆ ವಂದು [9]ರೇವತೋ[9]ದ್ಯಾನ ವನದೊಳ್ ರಾತ್ರಿ ಪ್ರತಿಮೆನಿಂದೊಸಂ ಸ್ವಜನ ಪರಿಜನ ಬಂಧುವರ್ಗಮುಂ ಶ್ರಾವಕರ್ಕಳುಂ ಬಂದರ್ಚಿಸಿ ಪೊಡೆಮಟ್ಟು ಪೋಪರು [10]ಪಂಗುಳ[10]ನೆಂಬ ಸುವರ್ಣಕಾರಕಂ ಕಂಡು ಬೆಸಗೊಂಡು ಭಟಾರರ ಬರವಂ ಕೇಳ್ದಱಿದು ಪಗೆ[11]ವನ[11]ನಿಱಿಯಲ್ಪೆತ್ತೆನೆಂದು ರಾಗಿಸಿ ಪಲವು ನಿಡಿಯುವುಂ ತೋರಮುಮಪ್ಪ ಕಬ್ಬೊನ್ನ ಕೀಲ್ಗಳಂ ಕೊಂಡು ಬಂದು ಕ್ಷಮಾಂಗನಾಲಿಂಗಿತನಪ್ಪ ಮಹಾಮುನಿಯುಂ [12]ಮಲರ್ಚಿ[12] ಪಟ್ಟಿರಿಸಿಯುರಃಸ್ಥಲಮಂ ನಾಭಿವರೆಗಂ[13]ವಿದಾರಿಸಿ ಪಂದೊವಲ್ ಪೊರೆತಾಪಿನೆಗಂ[13]ಸಮ[14]ಸ್ತ[14]ಮುಯುವ

1. ದುದಂ (ಛ). 2. ದ ಮೆಳೆದು (ಕಖಗ), ದಂ ಮೆಱೆದು (ಘಛ). 3. (ಘಚಛ)ಗಳಲ್ಲಿಲ್ಲ. 4. ಬಿಂಗಲ (ಘಚ), ಬಿಂಗಳ (ಛ). 5. ಕಾರ (ಘಚ), ಕಾರಕ (ಛ). 6. ವು (ಕಖಗಘಚಜ). ಡು (ಛ). 7. ದರ್ಗೆಯ್ದ (ಚ). ದರ್ಡುಮೆಯ್ದುವ (ಕಖಗ). 8. (ಘ)ದಲ್ಲಿ ಇಲ್ಲ; ಗ್ರಾಮೇಕರಾತ್ರಂ ನಗರೇ ಪಂಚರಾತ್ರಮುಟವ್ಯಾಂ ದಶರಾತ್ರಮೆಂಬೀ ನ್ಯಾಯದಿಂ ನಾನಾ ದೇಶಂಗಳಂ (ಚಛ). 9. ಪ್ರಮದೋ (ಘಚಛ). 10. ಬಿಂಗಲ (ಘಚಛ). 11. ಯ (ಕಖಗ). 12. ಮರಳ್ಚಿ (ಘಛ), ಮರಲ್ಚಿ (ಚ). 13. ಬೆಂದೋಲ್ತೊಲುಗಿದು (ಕಖಗ). ವಿದಾರಿಸಿಬಂದೊಲ್ಪರೆತಾಪಿನೆಗಂ (ಘಛ). 14. ಸ್ತ (ಕಖಗ).

ಪ್ರದೇಶಂಗಳೊಳ್ ಕಾಯ್ದ ಕರ್ಬೊನ್ನ ಕೀಲ್ಗಳಂ ನೆಲನಂ ತಾಪಿನಮುರ್ಚಿ ಪೋಗಿ[1]ೞ[1]ದೊಡೆ ಕ್ಷಮೆಯುಂ ಭಾವಿಸಿ ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಚಾನಿಸಿ ರತ್ನತ್ರಯಮಂ ಸಾಧಿಸಿ ಸಮಾಧಿಮರಣದಿಂ ಮುಡಿಪಿ ದೇವಲೋಕಮೆಂಬ ಪ್ರಾಸಾದಕ್ಕೆ ಕಳಸಮಾಗುತ್ತಿರ್ದ ಸರ್ವಾರ್ಥಸಿದ್ಧಿಯೆಂಬ ಸ್ವರ್ಗದೊಳ್ ಮೂವತ್ತುಮೂಱು ಸಾಗರೋಪಮಾಯುಷ್ಯ ಸ್ಥಿತಿಯನೊಡೆಯನೇಕ ಹಸ್ತಪ್ರಮಾಣನುಂ [2]ಪುಂಡರೀಕ ವರ್ಣಂಗಳನೊಡೆಯೊ[2]ನಹಮಿಂದ್ರ ದೇವನಾಗಿ ಪುಟ್ಟಿದೊಂ

ಮತ್ತಂ ಪೆಱರುಮಾರಾಧಕರಪ್ಪವರ್ಗಳ್ ಗಜಕುಮಾರನ ಮನುಷ್ಯೋಪಸರ್ಗದೊಳಾದ ವೇದನೆಯುಂ ಮನದೊಳ್ ಭಾವಿಸುತ್ತಂ ಪಸಿವು ನೀರಟ್ಕೆ ದಾಹವಾತಂ ಸೂಲೆ ಮೊದಲಾಗೊಡೆಯ ವೇದನೆಗಳಂ ಸೈರಿಸಿ ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸಮಾಧಿಮರಣದಿಂದಂ ಮುಡಿಪಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

1. ೞ (ಛ). 2. (ಕಖಗ)ಗಳಲ್ಲಿಲ್ಲ.

# (೪) ಸನತ್ಕುಮಾರ ಚಕ್ರವರ್ತಿಯ ಕಥೆ

ಸನತ್ಕುಮಾರ ಚಕ್ರವರ್ತಿಯ ಕಥೆಯುಂ ಪೇೞ್ವೆಂ :

ಗಾಹೆ ॥ [1]ಕಚ್ಛು[1]ಜರಖಾಸ ಸೋಸೋಂ ಭತ್ತಚ್ಛದಿ ಅಚ್ಛಿಕುಚ್ಛಿದುಕ್ಖಾಣಿ ।
ಅ[2][ಧಿಯಾಸಿ][2]ದಾಣಿ ಸಮ್ಮಂ ಸಣಂಕುಮಾರೇಣ ವಾಸಸದಂ ॥

[[3]ಕಚ್ಛು—ಕೆರಕುಂ, ಜರ—ನರೆಯುಂ,[3] ಖಾಸ—ಕೆಮ್ಮುಂ, ಸೋಸೋ—ಬಾಯ್ ಬತ್ತುವುದು; ಭತ್ತಚ್ಛದಿ—ಛರ್ದಿಯುಂ, ಅಚ್ಛಿಕುಚ್ಛಿದುಕ್ಖಾಣಿ—ಕಣ್ಣ ಬಸಿಱ ಬೇನೆಗಳುಮೆಂದಿವು ಮೊದಲಾಗೊಡೆಯು, ಅ[ಧಿಯಾಸಿ]ದಾಣಿ—ಸೈರಿಸೆಪಟ್ಟುವು. ಸಮ್ಮಂ—ಒಳ್ಳಿತ್ತಾಗಿ, ಸಣಂಕುಮಾರೇಣ—ಸನತ್ಕುಮಾರ ಚಕ್ರವರ್ತಿರಿಸಿಯಿಂದಂ, ವಾಸಸದಂ—ನೂಱು ವರುಷಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಕುರುಜಾಂಗಣಮೆಂಬುದು ನಾಡಲ್ಲಿ ಹಸ್ತಿನಾಪುರಮೆಂಬುದು [4]ಪೊೞಲ[4]ದನಾಳ್ವೊಂ ವಿಶ್ವಸೇನ ಮಹಾರಾಜನೆಂಬರಸನಾತನ ಮಹಾದೇವಿ ಸಹದೇವಿಯೆಂಬೊಳಾಯಿರ್ವರ್ಗ್ಗಂ ಸನತ್ಕುಮಾರನೆಂಬೊಂ [5]ಪುಟ್ಟಿದೊನಾತಂ ಸರ್ವಲಕ್ಷಣಸಂಪೂರ್ಣಂ ಸಕಳಕಳಾಪಾರಗಂ ಚೆಲ್ವಿನಿಂ ದೇವಾಸುರರ್ಕ[6]ಳಂ[6] ಗೆಲ್ವ ರೂಪನೊಡೆಯನಾತಂಗೆ ಕೆಳೆಯುಂ ಸಿಂ[7]ಹ[7]ವಿಕ್ರಮನೆಂಬ ಸಾಮಂತನ ಮಗಂ ಮಹೇಂದ್ರಸಿಂಹನೆಂಬೊನಂತವರ್ಗ್ಗನ್ಯೋನ್ಯ ಪ್ರೀತಿಯಿಂದಂ ಕಾಲಂ ಸಲೆ

ಮತ್ತೊಂದು ದಿವಸಂ ಏಕಚಕ್ರಪುರಾ[8]ಧೀಶಂ[8] ಭೂರಾಮನಾಮಧೇಯನಪ್ಪ [9]ಶತ್ರುಂದಮಂ[9] ವಿಶ್ವಸೇನ ಮಹಾರಾಜಂಗೆ ಪಾಗುಡ[10]ಮಂನಟ್ಟಿ[10] ಪಟ್ಟ[11]ವಾರಮರಗಮೆಂಬ[11] ದುಷ್ಟಾಶ್ವಮಂ ಕುಮಾರನೇಱಿ ಲಕ್ಷ್ಮೀಗೃಹಮೆಂಬುದ್ಯಾನವನದ ಮಧ್ಯ[12]ಸ್ಥಮಪ್ಪ [ಸ್ಥಲದೊಳ್]ಸಲ್ವನಾ ದುಷ್ಟಾಶ್ವಮಂ ಕೊಸೆಗೊಳೆ ಗಾಳಿಯಿಂದಂ ಬೇಗಮಾಗಿ ವಾರಿತಪೂರಿತಂ ಪರಿದು ಕುಮಾರನಂ ಕೊಂಡು ಮಹಾಟವಿಯಂ ಪೊಕ್ಕೊಡಿತ್ತ ವಿಶ್ವಸೇನ ಮಹಾರಾಜನ ಮಹಾಸಾಮಂತರ್ಕಳುಂ ಪರಿವಾರಮುಮೆಲ್ಲಂ ಕುದುರೆವಡಿವಜ್ಜೆಯುಂ ನೋಡಿ ನಾಡೆ*ಗೆಟ್ಟುಪೋಗಿ[12] ಮೂಱನೆಯ ದಿವಸದಂದು

1. ಕಂಭಂಕಂ ಕಂಭ (ಘಚಛ). 2. ಡಿಹಾಸಿ (ಕಖಗ), ವಿಹಾಸ (ಘಚಛ). 3. ತತ್ತ ಕೆರಕುಂ ಜ್ವರಮೆಯ್ಗಳುಂ (ಕಖಗ), ಕಂಭಂಕಂ–ಕೆರಕುಂ ಜ್ವರನರೆಯುಂ (ಛ), ಪುರಮ (ಕಖಗ). 5. +ಮಗಂ (ಛ). 6. ಳ್ಕಂ (ಗ). 7. ಗ (ಕಖಘ). 8. ಧಿಪತಿ (ಕಖ), ಧಿಪಂ (ಗ). 9. ಸತ್ರುಪಿಂದಂ (ಕಗ), ಶತ್ರುವಿಂಧಂ (ಖ). 10. ಮಟ್ಟೆ (ಕಖಗ). 11. ವಾರತುರಗಮೆಂಬ (ಗ), ವಾಂತ (ಘಛ). ವಾಹನ (ಚ). 12. ಈ ಭಾಗ (ಕಖಗ)ಗಳಲ್ಲಿ ಮಾತ್ರವಿದೆ: ಸ್ಥಲದೊಳ್ ಕುಮಾರನಂದು ದುಷ್ಟಾಶ್ವಮೆತ್ತಿಕೊಂಡು ಪೋಗೆ (ಘಚ). ಸ್ಥಿತಿಕದೊಳ್ (ಛ).
*ಗಂಟು ಎಂದಿರಬಹುದೆ ?

ಅಡಿವಜ್ಜೆ ಕೆಟ್ಟೊಡೆ ಪೋದ ದೆಸೆಯುನಱಿಯದೆ ಹಾ ಪುತ್ರಾ ಎಂದು ಮಹಾ ದುಃಖಾಕ್ರಾಂತನಾಗಿ ಪ್ರಲಾಪಂಗೆಯ್ವ ನೃಪತಿಯುಂ ಮಹೇಂದ್ರಸಿಂಹಂ ಸಂತಯಿಸಿ ಇಂತೆಂದು ನುಡಿದಂ ಕುಮಾರನಂ ಪಾತಾಳಮಂ ಪೊಕ್ಕನಪ್ಪೊಡಮಱಿಸಿಕೊಂಡು ಬರ್ಪೆಂ ನಿಮ್ಮಡಿ ಸೀಮುಬ್ಬೆಗಂಬಡದೆ ಮಗುೞೆಪೆಂದರಸನಂ ಮಗುೞ್ಚಿ ಪರಿವಾ[1]ರಂಬೆರಸು[1] ಮಹಾಟವಿಯುಂ [2]ಪೊಕ್ಕು[2] ತೊೞಲ್ದು ನೋ[3][ಟ್ಟಿ][3]ನಂ ಪರಿ[4]ಜನಂಗಳ್ ಕುಮಾರನನಱಸಿ ಕಾಣದೆ ಬೇಸತ್ತು ಮಹೇಂದ್ರಸಿಂಹನಂ ಬಿಸುಟು ಪೊೞಲ್ಗೆ ಪೋದರ್

ಇತ್ತ ಮಹೇಂದ್ರಸಿಂಹನೊರ್ವನೆ ನಾನಾ ವಿಧ ಗಿರಿಗಹನ ವಿಷಯ ವಿಷಮ ಪ್ರದೇಶಂಗ[5][ಳುಮಂ][5] ವ್ಯಾಧನಿವಾಸಂಗ[5][ಳುಮಂ][5] ಯಥಾ[6]ಕ್ರಮದಿಂದಂ[6] ಕೞಿದು ಪೋಗಿ ಪ್ರಿಯಂಗು[7]ಷಂಡ[7]ಮೆಂಬ ವನಮನೆಯ್ದಿ ತದ್ವನ ಮಧ್ಯಸ್ಥ ಗೃಹದೊಳಿರು[8]ಳಿರ್ದ್ದ[8] ಮಿತ್ರನ ವಿಯೋಗದೊಳಪ್ಪ ದುಃಖದಿಂದಂ ಕಾರುಣ್ಯಮಾಗೆ ಪ್ರಳಾಪಂ ಗೆಯ್ದು[9]ಟ್ಟು[9] ದೇವತೆಯ ಮುಂದೆ ನಿದ್ರೆಗೆಯ್ದೊಂ ಮನೋಹರಿಯೆಂಬ ಜಾವ[10]ದಾಗಳ್[10] ಕರಿಣೀ ಶತಂಗಳಿಂ ಪರಿವೇಷ್ಟಿತನಾಗಿ ತಿಳಿನೀರ ಕೊಳದೊಳಗೆ ಕ್ರೀಡಿಸುವ ಸೊರ್ಕ್ಕಾನೆಯುಮಂ ಫಲಭರಿತಮಾದ ಮಾವಿನ ಮರನುಮಂ ಕನಸಿನೊಳ್ ಕಂಡು ಮನೋರಥ ಸಿದ್ಧಿಯಾಯ್ತೆಂದು ಒಸೆದು ಮಗುೞ್ದು ನಿದ್ರಾವಶಗತನಾದೊನಂ ಕಂಡು ಕರುಣಿಸಿ ಭೂತಾಂಬರನೆಂಬ ವ್ಯಂತರ ದೇವನೆತ್ತಿಕೊಂಡು ಪೋಗಿ ವಿಜಯಾರ್ಧ ಪರ್ವತಕ್ಕಾಸನ್ನಮಪ್ಪ ಭೂತರಮಣಮೆಂಬ ವನದ ನಡು[11]ವಿನೊಳಿರ್ದ್ದ[11] ಕ್ಷುಲ್ಲಕ ಮಾನಸಮೆಂಬ ಸರೋವರದ ತಡಿಯೊಳಿಕ್ಕಿ ಪೋದನ್

ಆಗಳಾತನುಂ ನೇಸಮ್ಮೂಡುವಾಗಳ್ ತೂಂಕಡುಗೆಟ್ಟು ದೆಸೆಗಳಂ ನೋ[12]ಟ್ಟಂ[12] ಸಮುದ್ರದೊಳೋರಂತಪ್ಪ [13]ಕೋಕನದ[13] ಕುಮುದ ಕುವಲಯ ಕಲ್ಹಾ[14]ರೇಂದೀಂವರಾದಿಗಳಿಂದಂ[14] ಹಂಸ ಚಕ್ರ[15]ವಾ[15]ಕ ಬಳಾಕವಿಪಕ್ಷಿಗಣಂಗ[16]ಳ್[16] ನೀರೊಳ ಗಾಡುತ್ತುಂ[17] ಮುೞುಗುತ್ತುಂ ನಾನಾ ಪ್ರಕಾರದಿಂ[18]ದಂ ಮಾ[18]ಱುಲಿವ ದನಿಗಳಿಂದ ಮತಿರಮಣೀಯಮಪ್ಪ ಕೊಳನಂ ಕಂಡಾದಮಾನುಂ ವಿಸ್ಮಯಚಿತ್ತನಾಗಿ ಆ ಭೂತ ರಮಣಮೆಂಬ ವನದೊಳಶೋಕ ಪುನ್ನಾಗ ವಕುಲ ಚಂಪಕಸಹಕಾರಲವಂಗ ಕ್ರಮುಕ ನಾಳಿಕೇರನಾಗವಲ್ಲೀ[19]ಪಿನದ್ಧ[19] ದ್ರುಮಷಂಡ ಮಂಡಿತ[20]ಮನಿ[20]ಂದ್ರವನದೊಳೋ ರಂತಪ್ಪುದಂ ನೋಡುತ್ತುಂ ತೊೞಲ್ವೊಂ ತನಗನುಕೂಲಮಪ್ಪ ಶಕುನನಿಮಿತ್ತಂಗ[21][ಳುಮಂ] ಕಂಡಿಂದಪೋಘಮೆನ್ನ ಸ್ವಾಮಿಯುಂ ಕಾಣ್ಬೆನೆಂದು ಸಂತುಷ್ಟಚಿತ್ತ ನಾಗಿಯಾ ಬನದ ನಡುವೆ ತೊೞಲ್ವೊಂ ಮೃದುಮಧುರಗಂಭೀರಧ್ವನಿಯೊಳ್

---

1. ರಜನಂಗಳಿಂ ಬೆರಸಿ (ಕಖಗ). 2. (ಕಖಗ)ಗಳಲ್ಲಿಲ್ಲ. 3. ರ್ಪ್ಪ (ಕಖಗ). 4. +ವಾರ (ಕಖಗ). 5. ಳ್ಮಂ (ಸ). 6. ಮಂಗಳಿಂ (ಕಖಗ). 7. ಷ (ಘಚಛ). 8. ಳ್ (ಘಚ). 9. ತ್ತು (ಕಖಗಘ). 10. ದೊಳ್ (ಘಚ). 11. ವೆ (ಚಛ). 12. ಳ್ಪನ್ನೆಗಂ (ಚ). 13. ಕೊಳದ (ಘ). 14. ರ ಕಲ್ಹಾಮರೇಂದ್ರ ದೇವಾದಿಗಳಿಂದಂ (ಕಖಗ). 15. ಬ (ಘ). 16 ಳಿಂದಂ (ಕಖಗ) 17. +ಮೂಡುತ್ತುಂ (ಘಚಛ). 18. ದವ (ಕಖಗ). 19. ವಿನದ್ಧ (ಘಚಛ). 20. ಮಹೇಂ (ಕಖ). 21. ಳ್ಮಂ (ಸ).

ಕೂಡಿದ ಮೃದಂಗ ವಂಶ ತಾಳಾದಿಗಳ ಧ್ವನಿಗೆ[1][ಳುಮಂ] ಮಂದ್ರತಾರಲಯಾನ್ವಿತ ಮಾಗೆ[2] ಕಿವಿಗಂ ಮನಕ್ಕಂ ಸೊಗಯಿಸುವಂತಪ್ಪ [3]ಪಾಟವ[3]ಮಂ ಕೇಳ್ದು ಪರಿ ಚಂದನ ಕಾಳಾಗರು ಮಲಯಜ ತುರುಷ್ಕಾದಿಗಳ ಕಂಪು ಬಂದು ತೀಡಿದೊಡಿದು ದೇವನಿವಾಸಮಕ್ಕುಮೆಂದು ಬಗೆದು ಭಯಾಶ್ಚರ್ಯದಿಂದಂ ವ್ಯಾಕುಳಿತ ಮನದೊ ನಾಗಿ ಇನ್ನಿದನಮೋಘಂ ನೋಟ್ಪೆನೆಂದಾ ದೆಸೆಗಾಗಿ [4]ಸಲ್ವನಾಂ[4] ಕನತ್ಕನಕ ವಿನಿರ್ಮಿತಮಂ ನಾನಾಮಣಿಗಣ [5]ಪಿನದ್ಧಮಂ ಚಳತ್ಕೇತುಪತಾಕಾಢ್ಯಮಂ[5] ವಿದ್ಯಾ ಧರ ಯುವತೀಜನಕ್ರೀಡನಾರ್ಥಮಪ್ಪ ಪ್ರಾಸಾದಮಂ ಕಂಡು ವಿಸ್ಮಯಚಿತ್ತ ನಾಗಿಯದಱ ಸಮೀಪಕ್ಕೆ ಸಾರ್ದೊಂದು ಮರನಂ ಮಱೆಗೊಂಡು ನೋಟ್ಪೊಂ ತತ್ಪುರೇಸ್ಥಿತಮಪ್ಪ ಮಣಿಮಂಟಪದೊಳ್ ದಿವ್ಯಸ್ತ್ರೀಜನಂಗಳ್ [6]ವಿಲಾಸದಿಂ[6] ಚಾಮರ ವಿಕ್ಕೆ ದಿವ್ಯಶಯ್ಯಾತಳದ ಮೇಗಿರ್ದ ನಾಟಕವಂ ನೋಟ್ಪ ಕುಮಾರನಂ ಕಂಡು ಹರ್ಷಚಿತ್ತದಿಂದಂ ಕುಸುಮಿತ ಕದಂಬ ವೃಕ್ಷಂಬೊಲ್ ಕಂಟಕಿತ ರೋಮಾಂಚಿತ ಗಾತ್ರನಾಗಿ[7] ಪರಿದು ವರ್ಪೂನಂ [8]ಕಂಡಿದಿರೆ[9]ಯ್ದೆ[ಯಾ][9]ತನುಂ ಕುಮಾರನ ಚರಣಾರವಿಂದಂಗಳ್ಗೆ[10]ಱಗಿ ಬಿರ್ದ ಮೂರ್ಛಾಗತನಾದೊಡಾಗಳ್ ಶೀತಳ ಕ್ರಿಯೆ ಗಳಿಂದೆಚ್ಚತ್ತುಱದಿಂಗ[11]ಳಿಂ[11] ಕಂಡೆಂ ಸ್ವಾಮಿ [12]ನಿನ್ನಂ ನಂಬಿರ್ದೆ[12]ನಾನೆಂದು ಮಹಾ ದುಃಖದಿಂದಟ್ವನಂ ಸಂತಯಿಸಿ ವಿಪುಳಶ್ರೀಯೆಂಬ [13]ವಿದ್ಯಾಧರ[13]ವಿಳಾಸಿನಿಯಂ ಕರೆ ದಿಂತೆಂದು ಪೇಟ್ದಿನೆನ್ನ ಸಹೋದರನೆಂತುಂ ಶ್ರಮಮಂ ನೀಗಿ ಸುಖದಿಂ ತಣಿದೊನಕ್ಕು ಮಂತಾಗೆ ಸ್ನಾನಪಾನಭೋಜನಾದಿ ಕ್ರಿಯೆಗಳಿಂ ಬೇಗಂ ಮಾಡೆಂದು ಪೇಟ್ವೊ ಡಾಕೆಯುಮಂತೆಗೆಯ್ವೆನೆಂದಾತನಂ ಮಹಾವಿಭೂತಿಯಿಂದಂ ವಿದ್ಯಾಧರ ವಿಲಾಸಿ ಮಜ್ಜನಂಬುಗಿಸಿ ದಿವ್ಯಾಹಾರಮನೂಡಿ ವಸ್ತ್ರಾಭರಣ ಗಂಧಮಾಲ್ಯಾದಿ ತಾಂಬೂಲಾದಿ ಗಳಿಂ ತಣಿಪಿದಾಗಳಾತನುಂ ಮುನ್ನಿನ ದುಃಖಮೆಲ್ಲಮಂ ಮಱೆದಂ ಮುನ್ನಂ ಕ್ಲೇಶ ಭಾಗಿಯಪ್ಪ ಪುರುಷಂ ಸ್ವರ್ಗಮನೆಯ್ದಿ [14]ಮಾಱ[ಪ್ಪವೊ] ಲೆ [ಅ]ಯ್ತಾ [14]ಗಳಲ್ಲಿಂ ಬಂದು ಕುಮಾರನೋರಾಸನದೊಳಿರ್ದ ಸರ್ವಾಭರಣಭೂಷಿತನಾಗಿ ನೇತ್ರಮನೋ [15]ಹರಿಯೆಂಬ[15] ದಿವ್ಯಸಭೆಯುಮಂ ನೋಡಿ ವಿಸ್ಮಯಚಿತ್ತನಾಗಿ ಇಂತೆಂದಂ ಸ್ವಾಮಿ ವ್ರತಶೀಲೋಪವಾಸ ತಪಶ್ಚರಣ ಸಂನ್ಯಸನಾದಿ [16]ಶುಭಾ[16]ನುಷ್ಠಾನ ಕ್ರಿಯೆಗಳಿಂ ಸತ್ಪುರುಷಂ ಮಱುಭವದೊಳ್ ದೇವಾಂಗನೆಯು[17]ರ್ಕ್ಕಳೆ[17]ಱೆಯನಕ್ಕಂ ನೀಮೀ ಭವದಿಂದಿಂತಪ್ಪ ವಿಭವಮನೆಯ್ದಿದಿರಿದೆನಗೆ ಮಹಾವಿಸ್ಮಯಮೆನೆ ಕುಮಾರನಿಂತೆಂದ ನಿವರ್ಗ್ಗಳ್ ದೇವಕನ್ನೆಯರಲ್ಲರ್ ವಿದ್ಯಾಧರಿಯರ್ಕಳೆನೆ ಇವರ್ಗ್ಗಳಂ ನೀಮೆಂತು

---

1. ಕ್ಕಂ 2. (ಸ) + ಪಾಡುವಂ (ಕಖಗ). 3. ಗೀತಮು (ಘಚಛ). 4. ಸಾರ್ವಂ (ಘಚಛ). 5. ವಿನದಮಪ್ಪ ಪಲತೆಱದ ಕೌತುಕಮಂ (ಘಚಛ). 6. ಲಟಹದಿಂ (ಘಚಛ). 7. + ಮಹೇಂದ್ರಸಿಂಹಂ (ಘಚಛ). 8. + ಸನತ್ಕುಮಾರಂ (ಘಚಛ). 9. ಳ್ದುಮಾ(ಕಖಗ) ಯ್ದುಮಾ (ಖ). ಳ್ದುಬಂದ (ಘಚಛ). 10. + ಮಹೇಂದ್ರಸಿಂಹನೆ (ಘಚಛ). 11. ಳಿಂಗೆ (ಘಚಛ). 12. ನಿನ್ನಿಂಬಾಳ್ವೆ (ಘಚಛ). 13. ಬಿಂಬಾಧರ (ಘಚಛ). 14. ಮಾಱಪ್ಪೊಲೆಯಾ (ಗ), ಮಾಱಪ್ಪೊಲೆಂದಾ (ಕಖ), (ಘಚಛ). 15. ಹಾರಿಯಪ್ಪ (ಘಚಛ). 16. ಸುಖಾ (ಕಖಗ). 17. ರ್ಗ (ಘಚಛ).

ಪೆತ್ತಿರೆಲ್ಲಿ ಪೋಣಾವ ಸ್ವರೂಪದಿಂ ಬಂದಿರಿದನೆನಗೆ ತಿಳಿಯೆ ಪೇೞಿಮನೆ ಕುಮಾರ ನಿರುಳೆಲ್ಲಮತಿರಂಜನೆಯೆಂಬ ನಾಟಕವುಂ ನೋಡಿ ನಿದ್ರಾಸುಖಮಂ [1]ಪೆಜಿದೊನಾ[1] ಕಮಳಮತಿಯೆಂಬ ವಿದ್ಯಾಧರ ವಿಳಾಸಿನಿಯುಂ ವಿದಗ್ಧೆಯುಂ ಕರೆದೆನ್ನ ಸಂಬಂಧಿಯಪ್ಪ ಕಥೆಯೆಲ್ಲಮಂ ಮಹೇಂದ್ರಸಿಂಹಂಗೆ ಪೇೞೆಂದು ನಿದ್ರಾವಶಗತನಾಗಿ ವಾಸಗೃಹಮಂ ಪೊಕ್ಕನಿತ್ತಾಕೆಯುಮಾತಂಗಿಂತೆಂದು ಪೇೞಲ್ ತಗುಳ್ದಳ್

ಕುಮಾರನಿಂದಾರೂಢಮಪ್ಪ ದುಷ್ಟಾಶ್ವಂ ಕುಮಾರನಂ ಕೊಂಡು ಮನೋವೇಗದಿಂ ಗಿರಿ ವನ ದರಿ ನದೀಪ್ರದೇಶಂಗಳೊಳ್ ಮೂಱುದಿವಸಮಿರುಳುಂ ಪಗಲುಂ ಪರಿಯುತ್ತಿರ್ದುದು ಕರುಳ್ ಪಱಿದು ತೆಗಲೆಯೊಡೆದು ಕಾಲಂಗೆಯ್ದುತ್ತಾಗಳ್ ಕುಮಾರನುಂ ಪಸಿವುಂ ನೀರೞ್ಕೆಯಿಂ[2]ದಮಾದಂ ಬಾಧಿಸೆಪಟ್ಟು[2] ಬಸಮೞಿದು ಪಿರಿದೊಂದಾಲದ ಮರದ ಕೆೞಗೆ ಶಿಲಾತಳದ ಮೇಗೆ [3]ಪಟ್ಟಿರ್ದ್ದ[3]ನಾಗಳಲ್ಲಿಯಾ ವಟವೃಕ್ಷವಾಸಿಯಪ್ಪ ಮನೋಹರನೆಂಬ ಯಕ್ಷಂ ಕಂಡೀ ಪುರುಷಂ ಸಕಲಚಕ್ರವರ್ತಿಯಪ್ಪನೆಂದಱಿದು ಗಂಧೋದಕಮಂ ಮೇಲೆ ತಳಿದು ತಣ್ಗಾಳಿಯುಂ ವಿಗುರ್ವ್ವಿಸಿ ದೇಹಕ್ಕಾಪ್ಯಾಯನಂ ಮಾಡಿ ಸ್ವರ್ಣ ಭಾಜನದಿಂದಾಮೋದ ಸುಗಂಧಮಪ್ಪ ಕೊಡುವ ನೀರನಾತಂಗೆ ಕುಡಿಯಱಿದನಾಗಳ್ ಕುಮಾರಂ ನೀನಾರ್ಗ್ಗೀ ನೀರನೆಲ್ಲಿಂ ತಂದಯ್ ಪೇೞೆಂದು ಬೆಸಗೊಂಡೊಡಾತನಿಂತೆಂದನಾನೀ ವಟವೃಕ್ಷನಿವಾಸಿಯೆನ್ ಮನೋಹರನೆಂಬ ಯಕ್ಷನೆನ್ ಕ್ಷುಲ್ಲಕಮಾನಸವೆಂಬ [4]ಸರೋವರದಿಂ[4] ತಂದೆನೀ ನೀರನೆನೆ ಅಂತಪ್ಪೊಡೆ ನೀನೆನ್ನನಾ ಕೊಳ[5]ಕ್ಕೊಡಗೊಂಡು[5] ಪೋಗಲ್ಲಿಯಾ ನೀರಂ ಮಿಂದು ಕುಡಿದೊಡಲ್ಲದೆನಗೆ ನೀರೞ್ಕೆ ಕಿಡದೆಂದು ಪೇೞ್ದೊಡೆ ಕುಮಾರನನೆತ್ತಿಕೊಂಡು ಪೋಗಿ ಯಕ್ಷನಾ ಸರೋವರದ ತಡಿಯೊಳ್[6]ಟಿಪಿ[6] ಪೋದಳ್

ಆ [7]ಅವಸರದೊಳ್[7] ಸಿತಯಕ್ಷನೆಂಬ ವ್ಯಂತರದೇವಂ [8]ಕುಮಾರನ ಪೂರ್ವವೈರಿ ಭೌಮವಿಹಾರಕ್ಕೆ ಬಂದು ಕುಮಾರನಂ ಕಂಡು ಕ್ರೋಧಾಗ್ನಿ ಪೆರ್ಚ್ಚೆ ಭೈರವ ರೂಪಧಾರಿಯಾಗಿ ಕಳಕಳಧ್ವನಿಯಿಂದಂ ಗರ್ಜಿಸಿ ಬರ್ಪ್ಪನಂ ಕಂಡಾಗಳ್ ಸಿಂಹನಾದಂಗೆಯ್ದು ಖಟ್ಗಸನ್ನಿಭಮಪ್ಪ ಮಹಾಶಿಲೆಯುಂ ಕಿೞ್ತಿತ್ತಿಕೊಂಡು ಪ್ರತಿರಾಕ್ಷಸಂಬೊಲ್ ನಿಂದ ಕುಮಾರನಂ ನೋಡಿ ವ್ಯಂತರದೇವಮ್[8] ನಾಗಪಾಶದಿಂದಂ ವೇಷ್ಟಿಸಿದೊಡೆ ಕುಮಾರನದಂ ಹಸ್ತತಳದಿಂ ಪಱಿಯೆ ಪೊಯ್ದನಾಗಳಾ ದೇವಂ ನಾನಾವಿಧ ಮಾಯಾ ಯುದ್ಧಂಗಳಿಂ ಕಾದೆ ಕುಮಾರನಂ ಯುಷ್ಟಿ ಮುಷ್ಟಿ ಪ್ರಹಾರಾದಿಗಳಿಂ ಗೆಲ್ದಿರ್ದ್ದೊನನೆತ್ತಿಕೊಂಡು ಸಮುದ್ರದ ಬಡವಾಮುಖದೊಳಿಕ್ಕಿ ಕೊಲ್ವೆನಮೋಘಮೆಂದು ನೆಲದಿಂದು[9]ಬರ್[9] ಬಂದಾಕಾಶಕ್ಕೆ ನೆಗೞಿದೊನ ಸ್ಕಂಧಮಂ ತಿವಿದೊಂ ಕುಮಾರನ[10]ಅವ್ಯಷ್ಟಿ ವಜ್ರಘಾತಂಬೊಲಪ್ಪ[10] ಮುಷ್ಟಿಯಿಂ ದಿವ್ಯಪುರುಷನ

1. ಪಿರಿದೊಂವ (ಕಖ), ಪಿರಿದೊಂದ (ಗ), ಪಿಱಿದೊನನಾ (ಘಛ). 2. ಸೇದೆವಟ್ಟು ಮಱಿವಂತಾ (ಘಚಛ). 3. ನಿದ್ರೆಗೆಯ್ದು (ಕಖಗ). 4. ಕೊಳದಿಂ (ಘಚಛ). 5. ಕ್ಕೆ ಕೊಂಡು (ಕಖಗ). 6. ರಿಸಿ (ಚಛ). 7. ಸರೋವರದೊಳ್ (ಘಚಛ). 8. (ಘಚಛ)ಗಳಲ್ಲಿ ಇಲ್ಲ. 9. ಚಿರ್ (ಕಗ). 10. ನುಂ ಆಮುಷ್ಟಿ ವಜ್ರಘಾತಮಂಬೊಲಾ (ಕಗ), ನವಜ್ರಘಾತಂಬೊಲಪ್ಪ (ಘಚಛ).

ಹಸ್ತಪ್ರಹಾರಮೆಂಬ [1]ಮುದ್ರಾಪೀಡೆಯಿಂ[1] ತ್ರಸ್ತಾ[2]ಭಿಭೂ[2]ತನಾಗಿ ಬೆನ್ನಿತ್ತೋಡಿದನಾಗಳ್ ತನ್ನಿವಾಸಿಗಳಪ್ಪ ಯಕ್ಷ ಕಿನ್ನರಾದಿಗಳ್ ಮಸ್ತಕದೊಳ್ ನ್ಯಸ್ತಹಸ್ತರ್ಕ್ಕಳಾಗಿ ಜಯಜಯ[3]ಶಬ್ದಗಳಿಂದಂ[3] ಪು[4]ಷ್ಪಾ[4]ದಿಗಳಿಂ ಕುಮಾರನಂ ಪೂಜಿಸಿದರ್

ಆ ಅವಸರದೊಳಿಂದ್ರಪ್ರಭನೆಂಬ ವಿದ್ಯಾಧರಂ ಬಂದು ಕುಮಾರನ ಚರಣಾರವಿಂದಂಗಳ್ಗೆಱಗಿ ಪೊಡೆಮಟ್ಟಿಂತೆಂ[5]ದನ್ ಸ್ವಾ[5]ಮಿ ಮೂಱ[6]ತ್ತಾಱು[6] ವರುಷಂ ನಿನ್ನ ಬರವನಾನೆನ್ನರಸನ ಬೆಸದಿಂ ಪಾರುತ್ತಿರ್ದೆಂ ನೀನೆನ್ನ ಭಾಗ್ಯದಿನಿಲ್ಲಿಗೆ ಬಂದಯ್ ಏಱು ವಿಮಾನಮನೆನೆ ಅಂತೆಗೆಯ್ವೆನೆನ್ನ ಬಯಕೆಯುಂ ತೀರ್ಜೆ[7]ದಬಟ್ಟಿಕ್ಕೆ[7]ಱುವೆನೆಂದು ಕೊಳನಂ ಪೊಕ್ಕು ಸ್ವೇಚ್ಛೆಯಿಂ [8]ಕ್ರೀಡಿಸಿ[8] ಪೊಱಮಟ್ಟನನಾ ಖೇಚರಂ ಕೊಂಡು ಪೋಗಿ ತದ್ವನದೊಳತಿ ರಮಣೀಯಮಪ್ಪ ಪ್ರದೇಶದೊಳಾಡುತ್ತಿರ್ದ ವಿದ್ಯಾಧರ ಕನ್ನೆಯರ್ಕ್ಕಳ ಪಕ್ಕದಿರಿಸಿ ಪೋದನ್ ಇತ್ತ ಖೇಚರ ಕನ್ನೆಯರ್ಕಳ ಕಣ್ಗಳೆಂಬ ಮೀಂಗಳ್ ಕುಮಾರನ ರೂಪೆಂಬ ಗಾಳದಿಂ ತೆಗೆಯೆಪಟ್ಟು [9]ತಪನ[9] ತಾಪನ ದಹನ ವಿ[10]ಮೋಹನ ಮ[10]ರಣ ಸ್ವರೂಪದ ಕಾಮಶರಂಗಳವರ್ಗ್ಗಳೆರ್ದೆಯನುರ್ಚಿಪೋಗಿ ಪರವಸೆಯರಾಗಿ ಮಱುಗಿದಱುನೀರ ಮೀಂಗಳ್ವೊಲಾದರಿದೇಂ ಚೋದ್ಯಮೊ ಕುಸುಮಬಾಣನ ಬಿಲ್ಬಲ್ಮೆ

ಶ್ಲೋಕ ॥ ಅಹೋ ಧನುಷಿ ಕೌಶಲ್ಯಂ ಮನ್ಮಥಸ್ಯ ಮಹಾತ್ಮನಃ ।
ಅಸ್ಪೃಶನ್ನಪಿ ಗಾತ್ರಾಣಿ ಭಿನತ್ತ್ಯಂತರ್ಗತಂ ಮನಃ ॥

ಇವರ್ಗ್ಗಳ್ [11]ತ್ರ[11]ನ್ಮುಖ ನಿರೀಕ್ಷಣದೊಳಾಸಕ್ತೆಯರಾಗಿರ್ದ್ದರಾಗಳಾ ಇಂದ್ರಪ್ರಭನೆಂಬ ವಿದ್ಯಾಧರಂ ಪ್ರಿಯ[12]ಸಂಗ[12]ಮಮೆಂಬ ಪೊಟಿಲನೆಯ್ದಿ ಭಾನುವೇಗನೆಂಬ ವಿದ್ಯಾಧರಂಗೆ ಪೇೞ್ದನಾದೇಶ ಪುರುಷನಂ ತಂದು ಭೂತರಮಣದ ಜ್ಯೋತಿರ್ವಿತಾನಮೆಂಬ ಮಣಿಮಂಟಪದೊಳ್ ಕನ್ಯೆಯರ ಪಕ್ಕದಿರಿಸಿ ಬಂದೆನೆನೆ ಆಗಳಾತಂಗೆ ತಣಿವಿನೆಗಂ ತುಚ್ಛಿದಾನಂಗೊಟ್ಟು ವಿಪುಳಶ್ರೀಯೆಂಬ ಖೇಚರಿಯುಮಂ ಕರೆದಿಂತೆಂದಂ ಶೀಘ್ರಂ ಪೋಗಿ ಕೀರ್ತಿಧವಳಂಗೆ ಭೋಜನಾದಿ ವಿಧಿಯುಮಂ ಮಾಡೆಂದು ಪೇೞ್ದೊಡಾಕೆಯುಮಂತೆಗೆಯ್ವೆನೆಂದು ಸಪರಿವಾರಂಬೆರಸು ಬಂದಾತಂಗೆ ಮಜ್ಜನ ಭೋಜನ [13]ಪ್ರಸಾಧ[13]ನಾದಿಗ[14]ಳುಮಂ ಮಾಡಿ[14] ಮತ್ತೆ ಕುಮಾರನಂ ದಿವ್ಯಶಯ್ಯಾತಳದೊಳ್ ಸುಖದಿನಿರಿಸಿ ಅನಂಗ[15]ಸುಂ[15]ದರಿಯೆಂಬ ವಿದ್ಯಾಧರಿಯುನಾಡಪೇೞ್ದು ನಾಟಕಮ[16]ನಭಿನಯಿ[16]ಸುತ್ತಂ ಕುಮಾರನ ಮುಂದೆ ವಿನಯಾನ್ವಿತೆಯಾಗಿರ್ದೊಳಂ ಕುಮಾರಂ ನೋಡಿ ಇಂತೆಂದು ನೀಮೆನಗೀದೃಗ್ವಿಧಮಪ್ಪುಪಕಾರಮನೇಕೆ ಗೆಯ್ದಪ್ಪಿರ್ ನೀಮೇ ನಾರ್ಗ್ಗೆಂದು ಬೆಸಗೊಂಡೊಡಾಕೆಯಿಂತೆಂದಳ್

---

1. ಮಹಾಮುದ್ರೆಯುಂ ಪಿಡಿಯೆ (ಘಚಛ). 2. ಭೀ (ಕಖಗ). 3. ನಿನಾದಪೂರ್ವಕಂ (ಘಚಛ). 4. ಜಪ್ಯಾ (ಕಖಗ). 5. ದನಾ (ಕ-ಛ). 6. ತ್ತು (ಘಚಛ). 7. ದೊಡೇ (ಛ). 8. ನೀರಂ ಕುಡಿದು (ಘಚಛ). 9. ತೊಟ್ಟನೆ (ಘಚಛ). ತರ್ಪಣ (ಖ). 10. ದಹಕಾ (ಘಚಛ). 11. ಮ (ಕಖಗ). 12. ಮಂಶ (ಘಛ). 13. (ಘಚಛ)ಗಳಲ್ಲಿಲ್ಲ. 14. ಳಿಂ ಸಂತೋಷಂಬಡಿಸಿ (ಘಚಛ). 15. ಸೌಂ (ಕಖಗ). 16. ನಾಡಿ (ಘಛ).

ಕೇಳ್ ಪೇೞ್ವೆಂ ಸ್ವಾಮಿ ವಿಜಯಾರ್ಧ ಪರ್ವತದೊಳ್ ಪ್ರಿಯಸಂಗಮ ಪುರಾಧಿಪತಿಯಪ್ಪ ಭಾನುವೇಗನೆಂಬ ವಿದ್ಯಾಧರಂಗೆ ಶ್ರೀಮಾಲೆ ಮೊದಲಾಗೊಡೆಯ ಮಹಾದೇವಿಯರೆಣ್ಬರವರ್ಗ್ಗೆ ಪುಟ್ಟಿದೊರೀಯೆಣ್ಬರುಂ ಕನ್ನೆಯರ್ಕಳ್ ಲ[1]ಕ್ಷ್ಮೀ[1]ಮತಿ ಕನಕಕಾಂತೆ ಮಂದಾರಸೇನೆ ಅಳಕೆ ಅಲಂಭೂಷೆ ಹೇಮವತಿ ಹೇಮಮಾಳಿನಿ ವಿಜಯಾರ್ಧವತಿಯೆಂದೀ ಪೆಸರ್ಗಳನೊಡೆಯರೆಣ್ಬರುಂ ಮ[2]ಕ್ಕ[2]ಳನಾರ್ಗೆ ಕುಡುವ ಮೆಂದೊಂದು ದಿವಸಂ ನೈಮಿತ್ತಿಕನಂ ಭಾನುವೇಗಂ ಬೆಸಗೊಂಡೊಡಾತನಿಂತೆಂದಂ ಕ್ಷುಲ್ಲಕಮಾನಸಮೆಂಬ ಕೊಳದೊಳ್ ಸಿತಯಕ್ಷನೆಂಬ ದೇವನಂ ಸಂಗ್ರಾಮ ದೊಳಾವೊಂ ಗೆಲ್ಗುಮಾತಂಗೆ ಕೂಸುಗಳಂ ಕುಡಿಮೆಂದು ಪೇೞ್ದನದಱಿಂ ನೀನೆಮ್ಮ ಸ್ವಾಮಿಯೆಂದು ಪೇೞ್ದವಸರದೊಳ್ ಮಹಾವಿಭೂತಿಯಿಂ ಬರ್ಪ ಖೇಚರೇಂದ್ರನಂ ತೋಱಿದೊಡೀತಂ ನಿಮ್ಮ ಮಾವನೆಂದಾಗಳ್ ಕುಮಾರನುಮಿದಿರೆೞ್ದು ತದ್ಯೋಗ್ಯ ಮಪ್ಪ ವಿನಯಮುಮಂ ಗೆ[3]ಯ್ದಿರ್ದೊನಂ[3] ವಿದ್ಯಾಧರೇಂದ್ರ ಕುಮಾರನಂ ನೋಡಿ ತ್ರಿಭುವನಕ್ಕೆಲ್ಲಂ ತಿಳಕಮಾಗಿರ್ದ್ದಳಿಯನಂ ಸಾನೆ ಪೆ[4]ತ್ತೆ[4]ನೆಂದಾದಮಾನುಂ ಸಂತುಷ್ಟ ಚಿತ್ತನಾಗಿ ಕುಮಾರನಂ ಕೊಂಡುಪೋಗಿ ತನ್ನ ಪೊೞಲಂ ಪೊಕ್ಕಾ ದೆವಸದೊಳೆಣ್ಬರ್ ಕನ್ನೆಯರ್ಕ್ಕಳಂ ಕೈನೀರೆಱೆದು ಕುಮಾರಂಗೆ ಕೊಟ್ಟಂ ಕುಮಾರನುಂ ದಿವ್ಯಾಂಗನ ಯರ್ಕ[5]ಳೊಡನೆ[5] ಸುಖದಿಂ[6]ದೊಂದಿರ್ದ[6]ನಾಗಳೊಂದು ವನದೇವತೆ ಬಂದು ಸುನಂದೆ ಯೆಂಬ ಕನ್ನೆಯ ದುಃಖಮಂ ಕಾಣಲಾಱದೆ ಕರುಣಿಸಿ ಕುಮಾರನನೆತ್ತಿಕೊಂಡು ಪೋಗಿ ಹರಿಕೂಟಮೆಂಬ [7]ಪರ್ವತದ[7] ಜ್ಯೋತಿರ್ವನದೊಳ್ ದಿವ್ಯಶಯ್ಯಾತಳಮಂ ವಿಗುರ್ವಿಸಿಯದಱ ಮೇಗೆ ಕುಮಾರನನಿಟ್ಟು ಪೋದೊಡಾತನುಂ ಪ್ರಭಾತಸಮಯ ದೊಳೆೞ್ಚತ್ತು ದೆಸೆಗಳಂ ನೋೞ್ಪೊನಾ ವನಮುಮಂ ತನ್ನಿರ್ದ್ದ ಲತಾ[8]ಮಂಟಪ[8] ಮುಮಂ ನೋಡಿ ಎನಗಿದು ಮಹಾ ವಿಸ್ಮಯಂ ರಾತ್ರಿಯೊಳ್ ವಿವಾಹಕಲ್ಯಾಣ ಮೆನಗೆ ಸ್ವಪ್ನದೊಳಾದುದೊ ನಿರುತ[9]ಮೊ[9] ಎಂದು ಸಂ[10]ದೇಹ[10]ಚಿತ್ತನಾಗಿ ತನ್ನ ಕೈಯೊಳ್ [11]ಕಟ್ಟಿದ[11] ಕಂಕಣಮಂ ನೋಡಿ ಕಂಡು ಕುಮಾರನಿಂತೆಂ[12]ದು. ಬಗೆದಂ[12]

ಶ್ಲೋಕ ॥ ಭವಿತವ್ಯಂ ಭವತ್ಯೇವ ಕರ್ಮಣಾಮೇಷ ನಿಶ್ಚಯಃ ।
ವಿಪತ್ತೌ ಕಿಂ ವಿಷಾದೇನ ಸಂಪತ್ತೌ ವಿಸ್ಮಯೇನ ಕಿಂ ॥

ಎಂದಿಂತು ವಸ್ತುಸ್ವರೂಪಂ ಕುಮಾರಂ ಬಗೆಯುತ್ತಿರ್ಪಿನೆಗಂ ದೂರಾಂತರದೊಳ್ [13]ಸಂಭ[13]ನ್ನಮಾಗುತ್ತಿರ್ದ್ದ [14]ವನದೊಳಿರ್ದ[14] ಕನ್ನೆಯಿಂತೆಂದು ಪುಯ್ಯಲಿಟ್ಟಳ್ ಸಾಕೇತಪುರಾಧಿಪತಿಯಪ್ಪ ಸುರಥನೆಂಬರಸಂಗಂ ಚಂದ್ರ[15]ಯಶಿ[15]ಯೆಂಬ ಮಹಾ ದೇವಿಗಂ ಪುಟ್ಟಿದೆನ್ ಸನತ್ಕುಮಾರನ ಭಾರ್ಯೆಯೆನ್ ಸುನಂದೆಯೆನೆಂಬೆನೆನ್ನ ನನ್ಯಾಯದಿಂ ವಜ್ರವೇಗನೆಂಬ ವಿದ್ಯಾಧರಂ ತಂದಂ ಕಿನ್ನರ ಕಿಂಪುರುಷ ಗರುಡ ಗಂಧರ್ವ ಯಕ್ಷರಾಕ್ಷಸಾದಿ ದೇವರ್ಕ್ಕಳಿರಾ ವಿದ್ಯಾಧರರ್ಕ್ಕಳಿರಾ ಶರಣಾಗಿಮಾರ

1. ಕ್ಷ (ಕಖ). 2. ಕ್ಕ (ಕಖಗ). 3. ಯ್ದಿರ್ದನಂ (ಕಖಗ). 4. ಕ್ಕೆ (ಕಗ). 5. ಳುಂ ತಾನುಂ (ಕಖಗ). 6. ನಿದ್ರೆಗೈದ (ಘಚಛ). 7. (ಘಚಛ)ಗಳಲ್ಲಿಲ್ಲ. 8. ವನ (ಕಖಗ). 9. ಮೆಯಾ ದುದೊ (ಕಖಗ). 10. ದೆಗೆ (ಕ), ತುಷ್ಟ (ಚಛ). 11. (ಘಚಛ) ಗಳಲ್ಲಿಲ್ಲ. 12. ದಂ (ಘಚಛ). 13. ಸ್ವಚ್ಛ (ಕಗ). 14. (ಕಗ)ಗಳಲ್ಲಿಲ್ಲ. 15. ಲೀಪೆ (ಘಚಛ).

ಪ್ಪುದಪೆನ್ನಂ ರಕ್ಷಿಸಿಮೆಂಬ ಕಾರುಣ್ಯಸ್ವರಮಂ ಕೇಳ್ದಾಶ್ಚರ್ಯ ಮನದೊನಾಗಿ ದೆಸೆಯಂ ನೋಡಿ ಸಲ್ವೊಂ ಸ್ಫಟಿಕಮಯಮಪ್ಪ ಶಿಲಾ[1]ಗೃಹ[1]ದ ಕೆಳಗಿರ್ದ್ದ [2]ಯಕ್ಷ[2] ಕನ್ನೆಯುಮಂ ಕಂಡು ನೀನಾರ್ಗ್ಗೇನೆಂಬೆಯಾ ಸನತ್ಕುಮಾರನೆಂಬೊನಾರ್ಗ್ಗೆಂದು ಕುಮಾರಂ ಬೆಸಗೊಂಡೊಡಾಕೆಯಿಂತೆಂದು ಪೇೞ್ದಳ್

ಅಯೋಧ್ಯಾಪುರಮನಾಳ್ವೊಂ ಸುರಥನೆಂಬೊನರಸನಾತನ ಮಹಾದೇವಿ ಚಂದ್ರಯಶಿಯೆಂಬೊಳಾಯಿರ್ವರ್ಗ್ಗಂ ಪುಟ್ಟಿದೆಂ ಸುನಂದೆಯೆಂಬೆಂ ಸನತ್ಕುಮಾರಂಗೆ ಗರ್ಭದೊಳಿರ್ದ್ದಂತೆ ನಿವೇದಿ[3]ಸೆಪಟ್ಟೆ[3]ನೆನ್ನಂ ಮದನೋದ್ಯಾನದೊಳುಯ್ಯಲಾಡುತ್ತಿರ್ದೊಳಂ ಭೌಮವಿಹಾರಾರ್ಥಂ ಬಂದು ವಜ್ರವೇಗನೆಂಬ ವಿಧ್ಯಾಧರಂ ಕಂಡೆನ್ನನೆತ್ತಿಕೊಂಡು [4]ಪುಯ್ಯಲಿಡೆಯಿಡೆ[4] ಬಂದನಿಂದಿಂಗೇೞು ದಿವಸಮುಂಟು ಮತ್ತಾ ಸನತ್ಕುಮಾರನೆಂಬೊಂ ಹಸ್ತಿನಾಪುರಮನಾಳ್ವೊಂ ವಿಶ್ವಸೇನ ಮಹಾರಾಜನೆಂಬೊನರಸನಾತನ ಮಹಾದೇವಿ ಸಹದೇವಿಯೆಂಬೊಳಾಯಿರ್ವರ್ಗ್ಗಂ ಪುಟ್ಟಿದಂ ಸನತ್ಕುಮಾರನೆಂಬೊನೆಂದು ಪೇೞ್ದೊಡೆ ಕುಮಾರನೆಂದಾತನಂ ಕಂಡೊಡೇನಱಿ[5]ವೋ[5] ಎಂದು ಬೆಸಗೊಂಡೊಡೆ ಸುನಂದೆಯಿಂತೆಂದಳ್ ಎನ್ನ ತಂದೆ ವಿಶ್ವಸೇನ ಮಹಾರಾಜನೊಳಪ್ಪ ಮಿತ್ರಸಂಬಂಧದಿನೊಂದು ದಿವಸಂ ಹಸ್ತಿನಾಪುರಕ್ಕೆ ಪೋಗಿ ಕುಮಾರನಂ ಕಂಡಾತನ ರೂಪಂ ಪಟದೊಳ್ ಬರೆದು ತಂ[6]ದಾ[6] ರೂಪನೆಲ್ಲಾ ಪೊೞ್ತುಂ ನೋೞ್ಪೆನುಂ ಬರೆವೆನುಂ ಭಾವಿಸುತ್ತಿರ್ಪೆನಪ್ಪುದಱಿಂದಱಿವೆನಾ ರೂಪಂ ನಿಮ್ಮನೆ ಪೋಲ್ಕುಮೆನೆಯಂತಪ್ಪೊಡಂ ಸನತ್ಕುಮಾರನಪ್ಪೆನೆಂದಾಗಳ್ ಹರ್ಷರೋಮಾಂಚ ಕಂಚುಕಿತೆ ವಿಕಸಿತ ವದನೆಯಾಗಿ[7]ಯಱಿಪಬಳ್ಳಿ ಕಾಲ್ತೊಡರ್ದತ್ತೆಂಬಂತೆವೊಲಾಯ್ತೆನ್ನ[7] ಭಾಗ್ಯದಿಂದಂ ಸ್ವಾಮಿ ನೀಮಿಲ್ಲಿಗೆ ಬಂದಿರಾ ವಜ್ರವೇಗಂ ತನ್ನ ತಂಗೆಯುಮೆನಗೆ ಕಾಪಿಟ್ಟು ತನ್ನ ಪೊೞಲ್ಗೆ [8]ನಿದ್ರೆಗೆಯ್ಯೆ[8] ಪೋದನಾಕೆಯುಂ ಜಳಕ್ರೀಡೆಗೆ ಪೋದಳವಳ್ ಬಾರದನ್ನೆಗಂ ಬೇಗಂ ಪೋಪಮೆನೆ ಕುಮಾರನಿಂತೆಂದನಂಜದಿರ್ ನಿನ್ನ ತಂದೊನನಮೋಘಂ ಮುತ್ತಂ ಮುೞಿ[9]ಕ್ಕುಯ್ದೊಡಲ್ಲದೆ ಪೋಗೆನೆನೆ ಭಯದಿಂದಂ ನಡುಗಿ ಇಂತೆಂದಳಾತನಾಕಾಶಗಾಮಿ ನೀಮೆಂತುಕೊಲ್ವಿರೆನೆ ಕುಮಾರಂ ನಕ್ಕಿಂತೆಂದಂ ಆಕಾಶಗಾಮಿಯಪ್ಪ ಕಾಗೆಯುಮೇಂ ಕೊಲ್ವುದರಿದೆ ಎಂದು ನುಡಿಯುತ್ತಿರ್ಪನ್ನೆಗಂ ವಜ್ರವೇಗನ ಬರವಂ ಕಂಡಾ ಕನ್ನೆಯಂಜಿ ಪ್ರಾಸಾದದೊಳಗೆ ಪೋಗಿ ಪೊಕ್ಕಿರ್ದಳ್

ಖೇಚರನಂ ಕುಮಾರನಂ ಕಂಡು ಪುರುಡಿಂ ಮುಳಿಸು ಪೆರ್ಚ್ಚಿಯೆನ್ನ ಪೆಂಡತಿಯೊಡನೆ ನುಡಿಯುತ್ತಿರ್ದ್ದೊನನಮೋಘಂ ಕೊಲ್ವೆನೆಂದು ಕಿಟ್ಟಿ ಬಾಳ್ವಿರಸು ಬಂದೆಱಗಿ ಇಱಿದಾತನೇಱಂ ಬಂಚಿಸಿ ಸಿಂಹಲಂಘನದಿಂ ಮೇಗೆ ನೆಗೆದು ವಜ್ರಸಮಾನಮಪ್ಪ ಕೈಯಿಂದಂ ಕುಮಾರನಾತನ ತೆಗಲೆಯಂ ಕಿವಿದೊಡಾತನಲ್ಲಿ ತನ್ನ ವಿದ್ಯಾಧರ[10]ಕರಣ[10]ಮುಂ ತೋರ್ಪ್ಪಂಬೊಲೆ ಮೇಗುಬ್ಬೆಳಿಸಿ ಬಿಟ್ಟಾಗಡೆ ಮಡಿದಂ

1. ತಳ (ಕಗ). 2. ಕ್ಷ (ಘಚ). 3. ಸಲ್ಪಟ್ಟೆ (ಕಗಖ). 4. (ಕಗ)ಗಳಲ್ಲಿಲ್ಲ. 5. ವಾ (ಕಖಗ). ವೆಯೊ (ಚ). 6. ದೊಡಾ (ಘಚಛ). 7. ಯಱಿಸಿ ಪೋಪ ಬಳ್ಳಿ ಕಾಲೊಳ್ ತಗುಳ್ದತ್ತೆಂಬವೊಲೆನ್ನ (ಘಚಛ). 8. (ಘಚಛ)ಗಳಲ್ಲಿಲ್ಲ. 9. ಕ್ಕೊಯ್ದಲ್ಲದೆ (ಕಖಗ). 10. ಗುಣ (ಚ), ಗರಣ (ಛ).

ಕುಮಾರನಿಂತೆಂದು ಬಗೆದನೊರ್ವಳೆ ಇರ್ದ ಸ್ತ್ರೀಯು ಪಕ್ಕದೆ ಸತ್ಪುರುಷಂಗಿರಲ್ ತಕ್ಕುದಲ್ಲೆಂದು ಮುನ್ನ ತನ್ನಿರ್ದ ಲತಾಮಂಟಪದೊಳ್ ಪೋಗಿರ್ದನನ್ನೆಗಮಿತ್ತ ವಜ್ರವೇಗನ ತಂಗೆ ಸಂಧ್ಯಾವಳಿಯೆಂಬೊ[1]ಳ್ ಮಾನಸ[1] ಸರೋವರದೊಳ್ ಜಲಕ್ರೀಡೆಯಾಡಿ ಬರ್ಪೊಳನ್ನೆಗಂ ತಮ್ಮಣ್ಣಂ ಸತ್ತುದಂ ಕಂಡು ಮೂರ್ಛಾಗತೆಯಾಗಿ ಬಿೞ್ದು ನೀಡಱಿಂದೆೞ್ಚತ್ತು ಕ್ರೋಧಾಗ್ನಿ ಪೆರ್ಚೆ ಎಮ್ಮಣ್ಣನಂ ಕೊಂದ ದುರಾತ್ಮನಂ ಪಾತಾಳಮಂ ಪೊಕ್ಕಿರ್ದನಪ್ಪೊಡಮಱಸಿ ಕೊಲ್ವೆನಮೋಘಮೆಂದು ಭಯಂಕರ ರೂಪಂ ಕೈಕೊಂಡು ದೆಸೆಗಳಂ ನೋೞ್ಪೊಳನ್ನೆಗಮಾರುಮಂ ಕಾಣದೆ ಸುನಂದೆಯಂ ಬೆಸಗೊಂಡೊಡಾಕೆಯಿಂತೆಂದಳ್ ದುಷ್ಟನಿಗ್ರಹ ಶಿಷ್ಟಪ್ರತಿಪಾಲನ ಸ್ವರೂಪದಿಂ ಪೃಥ್ವಿಯಂ ರಕ್ಷಿಸುವ ಸ್ವಾಮಿ [2]ಚೋರದಾರ ಪಾದರಿಗ[2]ರ್ಕ್ಕಳಂ ಕೊಲ್ಲದಿರ್ಕ್ಕುಮೆ ಎಂದೊಡಾತನಾವೊಸಲ್ಲಿಪೊಂ ತೋಱೆಂದು ಬೆಸಗೊಂಡೊಡೆ ಸುನಂದೆಯುಂ ಪೋಗಿ ಕುಮಾರನಂ ತೋಱಿದೊಡಾಕೆಯುಮಸಿಖೇಟಕಹಸ್ತೆಯಾಗಿ ವಿಭೀಷಣಮಪ್ಪ ರೂಪ್ರಮಂ ವಿಗುರ್ವಿಸಿ ಕೊಲ್ವೆನೆಂದು ಸಾರ್ದಾಗಳ್ ಕುಮಾರಂ ಸೌಷ್ಠವದೊಳಿರ್ದ್ದನಂ ನೋಡಿ ಕ್ರೋಧಂಗೆಟ್ಟು ಸ್ನೇಹಂ [3]ಪೆರ್ಚೆ[3] ಕಾಮಶರಂಗಂ [4]ಸ್ಮರ[4]ವಶಹೃದಯೆಯಾಗಿ ಇಂತೆಂದು ತನ್ನೊಳ್ ಬಗೆದೊಳೆಮ್ಮಣ್ಣಂ ತನ್ನ ದೋಷದಿಂ ಸತ್ತೊನೀತಂಗೇನುಂ ದೋಷಮಿಲ್ಲೆಂದು ವಿಕಾರ[5]ಮಪ್ಪ[5] ರೂಪಮನುಪಸಂಹರಿಸಿ ತನ್ನ ಮುನ್ನಿನ ಸ್ವಾಭಾವಿಕಮಪ್ಪ ರೂಪಂ ಕೈಕೊಂಡು ತಮ್ಮಣ್ಣನಂ ಸಂಸ್ಕರಿಸಿ ನೀರಿೞಿದು ತದ್ವಿರಹಾನಳನಿಂ ಬೆಂದು ಕರಗಿ ಕೊರಗಿ ಬಸಮೞಿದಿರ್ದ್ದ ಮೆಯ್ಯನೊಡೆಯೊಳ್ ಬಂದು ಸುನಂದೆಗಿಂತೆಂದಳ್ ನಿನ್ನ ಪ್ರಸಾದದಿಂ ಬಾೞ್ವೆಂ ನೀನೆನಗೆ *ಸೋದರಮುಂ ಕಲ್ಯಾಣಮಿತ್ರೆಯುಮಾದಯ್ ಆದಱಿಂ ನೀನೀಕುಮಾರಂಗೆ ಪೋಗಿ ಇಂತೆಂದು ಪೇೞ್ ವಿಜಯಾರ್ಧ ಪರ್ವತದೊಳಗ್ರಮಂದಿರಪುರಾಧಿಪತಿಯಪ್ಪ ಶನಿವೇಗನೆಂಬ ವಿದ್ಯಾಧರಂಗಂ ವಿದ್ಯುತ್ಪ್ರಭೆಯೆಂಬ ಮಹಾದೇವಿಗಂ ಮಗಳ್ ಸಂಧ್ಯಾವಳಿಯೆಂಬೊಳ್ ನೀಮೆ ಶರಣೆಂದಿರ್ದ್ದೊಳಾಕೆಯಂ ನೀಮಮೋಘಂ ಕೈಕೊಳಲ್ವೇೞ್ಕುಮೆಂದಿಂತು ನುಡಿಯೆಂದು ಕಲ್ಪಿಸಿಯಟ್ಟಿದೊಡಾಕೆಯುಂ ಕುಮಾರಂಗೆ ತದ್ವೃತ್ತಾಂತಮೆಲ್ಲಮಂ ಪೇೞ್ದೊಡಾತನುಂ ಪಿತೃಮಾತೃಗಳೀಯದ ಸ್ತ್ರೀಯರಂ ಕೈಕೊಳ್ವುದೆನಗಯೋಗ್ಯಮೆಂದು ಮಱುಮಾತುಗೊಟ್ಟೊಡೆ ಸುನಂದೆಯೆಂಬೊಳ್ ಮಿತ್ರಸಂಬಂಧಿಗಳಪ್ಪ ಜನಂಗಳ್ ಮುಂ[6]ಶಿಟ್ಟು[6] ಕುಡೆ ಕೊಳಲ್ ತಕ್ಕುದೆಂದು ನುಡಿದೊಡಂಬಡಿಸಿ ದಿವ್ಯದೇವತೆಗಳನೆ ಬಾಂಧವಜನಮಾಗೊಡೆಯುಳಂ ಮಹಾವಿಭೂತಿಯಿಂದಂ ಪಾಣಿಗ್ರಹಣಪುರಸ್ಸರಂ ಸಂಧ್ಯಾವಳಿಯಂ ಕುಮಾರಂಗೆ ಕೊಟ್ಟಳ್ *ಸಂಧಾವಳಿಯುಂ ಸುನಂದೆಯಂ ಕುಮಾರಂಗೆ ಕೊಟ್ಟಳಿಂ*ತನ್ಯೋನ್ಯ ಸಂಬಂಧದಿಂ ಗಾಂಧರ್ವವಿವಾಹದಿಂ [7]ಕಲ್ಯಾಣದೊಳ್ಕೂಡಿ[7] ಸುಖದಿಂದಿರ್ಪೊರ್

ಅನ್ನೆಗಮಿತ್ತಶನಿವೇಗಂ ತನ್ನಮಗಂ ಪಿರಿದು ಪೊೞ್ತು ಪೋಗಿ ತಡೆದನೆಂದು

---

1. ಳಾ (ಚಛ). 2. ಚಾರ ಚೋರ (ಘಜ). ಚೋರ ಜಾರ (ಛ). 3. ಪುಟ್ಟೆ (ಛ). 4. ಪರ (ಚಛ). 5. ಸ್ಪ (ಕಗ). 6. ದಿರ್ದು (ಕಖಘ), (ಘಚಛ)ಗಳಲ್ಲಿಲ್ಲ. 7. ಕಯ್ಗೂಡಿ (ಘಚಛ).

ಮಗನವಸ್ಥೆಯುಮನಱಿದು ಬಾಯೆಂದವಳೋಕಿನಿಯೆಂಬ ವಿದ್ಯೆಯುಮಾರಯ್ಯಲಟ್ಟಿದೊಡಾ ವಿದ್ಯೆಯುಂ ಪಾರಾವತ ರೂಪದಿಂದಾರೈದು ಪೋಪುದಂ ಸಂಧ್ಯಾವಳಿಯಱಿದಿಂತೆಂದು ತನ್ನ ಭರ್ತಾರಂಗೆ ಪೇೞ್ಗುಂ ಸ್ವಾಮಿ ಎನ್ನ ತಂದೆ ವಿದ್ಯಾಧರನಾದಮಾನುಂ ಪ್ರಚಂಡ ಮಹಾಬಳ ಪರಾಕ್ರಮಂ ವಜ್ರವೇಗನ ಸಾವನಱಿದಮೋಘಂ ನಿಮ್ಮ ಮೇಲೆ ಬರ್ಕುಮದಱಿಂ ನೀವಿಮಾ ಪ್ರಜ್ಞಪ್ತಿಯೆಂಬ ಮಹಾವಿದ್ಯೆಯುಂ ಕೊಳ್ಳಿಮೆನೆ ಕುಮಾರಂ ನಕ್ಕು ಪ್ರಹಸಿತವದನ[1]ನ[1]ನಾಗಿ ಖೇಚರರೆಂ[2]ಬೆರಲೆ[2]ಗಳಂ [3]ನಿಪಾತಿ[3]ಸಲ್ಕೆನಗೆ ವಿದ್ಯೆ[4]ಯುಂ ಬೇೞ್ಕುಮೆ ಎಂ[4]ದೊಲ್ಲದಿರ್ದೊನ ಪಾದದ್ವಯಂಗಳ್ಗೆಱಗಿ ಪೊಡೆವಟ್ಟು ಮೋಘಂ ಕೊಳಲೆವೇೞ್ಕುಮೆಂದು ಬಲಾತ್ಕಾರದಿಂ ವಿದ್ಯೆಯುಂ ಕೊಟ್ಟೊಡಾ ಅವಸರದೊಳ್

ಮತ್ತಿತ್ತ ರಥನೂಪುರ ಚಕ್ರವಾಳ ಪುರಾಧಿಪತಿಯಪ್ಪ ಚಂದ್ರಯಶನೆಂಬ ವಿದ್ಯಾಧರಂಗಂ ವಿದ್ಯುದ್ವೇಗೆಯೆಂಬ ಮಹಾದೇವಿಗಮಂತಿರ್ವರ್ಗಂ ಪುಟ್ಟಿದರ್ ಚಂದ್ರವೇಗನುಂ ಭಾನುವೇಗನುಮೆಂಬರ್ ಮಕ್ಕಳಾಗಿ ಇಂತಿಷ್ಟವಿಷಯಕಾಮ ಭೋಗಂಗಳನನುಭವಿಸುತ್ತಿರೆ ಮತ್ತೊಂದು ದಿವಸಂ ನೃಪತಿಗೆ ಸಂಸಾರವೈರಾಗ್ಯಮಾಗಿ ಚಂದ್ರವೇಗನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ಕಿಱಿಯಾತನಪ್ಪ ಭಾನುವೇಗಂಗೆ ಯುವರಾಜಪಟ್ಟಮಂ ಕಟ್ಟಿ ಗುಣಧರರೆಂಬ ಚಾರಣರಿಸಿಯರ ಪಕ್ಕದೆ ಜೈನದೀಕ್ಷೆಯಂ ಕೈಕೊಂಡು ಪಲಕಾಲಂ ತಪಂಗೆಯ್ದು ಸಮ್ಮೇದ ಪರ್ವತದೊಳ್ ಮೋಕ್ಷಕ್ಕೆ ಪೋದರ್ ಮತ್ತಾ ಚಂದ್ರವೇಗಂಗೆ ನೂರ್ವರ್ ಪೆಣ್ಗೂಸುಗಳಾದೊರವರ್ಗ್ಗಳತಿಶಯ ರೂಪುಲಾವಣ್ಯಮನೊಡೆಯೊರವರನಾ ಅಶನಿವೇಗಂ †ತನ್ನ ಮಗಂ ವಜ್ರವೇಗಂಗನವರತಂ ಪಾಗುಡಮುಂ ಪೆರ್ಗ್ಗಡೆಗಳುಮನಟ್ಟುತ್ತಿರ್ಕ್ಕುಂ ಮತ್ತಂ ಪೆಱರುಂ ವಿದ್ಯಾಧರರ್ಕ್ಕಳನವರತಂ ಕೂಸುಗಳಂ ಬೇಡಿಯಟ್ಟುತ್ತಿರೆ ಆರ್ಗಂ ಕುಡಲೊಲ್ಲದೆ ಮತ್ತೊಂದು ದಿವಸಂ ಮಕ್ಕಳನಾರ್ಗೆ ಕುಡುವಮೆಂದು ದೈವಜ್ಞನಂ ಬೆಸಗೊಂಡೊಡಾತನಿಂತೆಂದು ಪೇೞ್ದಂ ಮಾನಸಸರೋವರದೊಳ್ ಸಿತಯಕ್ಷನಂ ಯುದ್ಧದೊಳಾವೊಂ ಗೆಲ್ವೊಂ ಮತ್ತಶನಿವೇಗನ ಮಗಂ ವಜ್ರವೇಗನುಮಂ ಮುಷ್ಟಿಪ್ರಹಾರದಿಂ† ಕೊಲ್ವೊನಾ ಅಶನಿವೇಗನುಮಂ ಸಂಗ್ರಾಮದೊಳ್ ನಿಪಾತಿಸುವನಾವನೊರ್ವ್ವನಾತಂಗೆ ನಿಮ್ಮ ಮಗಳಂ ಕುಡಿಮೆಂದು ದೇವಗುರುವೆಂಬ ನೈಮಿತ್ತಿಕಂ ಪೇೞ್ದಂ ಮತ್ತೆಯುಮಾತನುಪದೇಶದಿಂ ತಱಿಸಂದ ಮನದೊಳಾಗಿ ಸರ್ವಾಯುಧ ಸನ್ನದ್ಧರಾಗಿ ದಿವ್ಯರಥಂಬೆರಸು ಹರಿಶ್ಚಂದ್ರ ಚಂದ್ರಸೇನರ್ಕ್ಕಳೆಂಬ ಮಕ್ಕಳನಟ್ಟಿದೊಡವರ್ಗ್ಗಳುಂ ಬಂದು ಕುಮಾರಂಗೆಱಗಿ ಪೊಡೆವಟ್ಟಿಂತೆಂದರ್ ರಥನೂಪುರ ಚಕ್ರವಾಳಪುರೇಶ್ವರನಪ್ಪ ಚಂದ್ರವೇಗಂಗಂ ಮಣಿದೇವಿಗಂ ಪುಟ್ಟಿದೆವು ಹರಿಶ್ಚಂದ್ರ ಚಂದ್ರಸೇನರ್ಕ್ಕಳೆಮೆಮ್ಮಮ್ಮನ ಬೆಸದಿಂ ನಿಮ್ಮನೋಲಗಿಸಲ್ ಬಂದೆವೆಂದು ಪೇೞ್ದಂ ಸುಖಸಂಕಥಾವಿನೋದದಿಂದಿರ್ಪ್ಪನ್ನೆಗಮವರ ಬೞಿಯಂನೆ ಸಹೋದರರ್ಕ್ಕಳಪ್ಪ ಚಂದ್ರವೇಗನುಂ ಭಾನುವೇಗನುಂ ತಮ್ಮಳ್ಳ ಸಮಸ್ತಬಲಂಬೆರಸು ಕುಮಾರನಂ ಕೂಡಿದರ್

1. ನಾರವಿಂದ (ಘಚ). 2. ಬೊರತಿ (ಕಖ), ಬೊರತ್ತುಲೆ (ಗ). 3. ಹತಿಯಿ (ಘಚಛ).
4. ಯೇವುದೆಂ (ಘಚಛ). †–† (ಘಚಛ)ಗಳಲ್ಲಿ ಈ ಭಾಗ ಇಲ್ಲ.

ಮತ್ತಿತ್ತ ಶನಿವೇಗಂ ತನ್ನ ಮಗನ ಕಟ್ಟಿದ ವೃತ್ತಾಂತಮೆಲ್ಲಮನವಳೋಕಿನಿಯೆಂಬ ವಿದ್ಯೆ ಪೇೞೆ ಕೇಳ್ದಱಿದು ಮುಳಿದು ಗರ್ಜಿಸಿ ಮಸಗಿ ಸಮಸ್ತ ಬಲಂಬೆರಸಿಂದ್ರನ ಮಱಿವೊಕ್ಕಡಮಮೋಘಂ ಕೊಲ್ವೆನೆಂದು ಮೇಲೆತ್ತಿಂದನಂ ಚಂದ್ರವೇಗಂ ಕಂಡು ಸನತ್ಕುಮಾರಂಗಿಂತೆಂದಂ ದೇವಾ ನಾನಾವಿಧಮಪ್ಪ ವಿದ್ಯಾಧರಯುದ್ಧಮಂ ನೀಂ ಕಿಮ್ಮನೆ ನೋಡುತ್ತಿರಾನೆ ಸಾಲ್ವೆನೆಂದು† [1]ಸಂಗ್ರಾಮಕ್ಕ[1]ಭಿಮುಖನಾಗಿ ಕಾದಲ್ ತಗುಳ್ದನಿತ್ತ ಕುಮಾರನುಂ ಗಗನ ತಳದೊಳ್ ವಜ್ರಸಾರಮೆಂಬ ರಥಮನೇಱಿ ಛತ್ರಚಾಮರ ಪಿಂಛಾತಪತ್ರ ಪಾಳಿಧ್ವಜ ಪತಾಕಾದ್ಯನೇಕಮಹಾ ವಿಭೂತಿಯೊಳ್ ಕೂಡಿ ಸಂಗ್ರಾಮಮಂ[2] ನೋಡುತ್ತಮಿರೆ ಮತ್ತಶನಿವೇಗಂ ಕುಮಾರನಂ ಕಂಡು ಕ್ರೋಧಾಗ್ನಿ ಪೆರ್ಚಿ ಎನ್ನ ಮಗನಂ ಕೊಂದೊನಂ ಬೇಗಂ ಮೃತ್ಯು[3]ರಾಜನಂ ಕಾಣ್ಬಂತಿರೆ ಮಾೞ್ಪೆನೆಂದು ಮುಳಿದು ಮಸಗಿ ಬಪ್ಪೋನಂ ಕುಮಾರಂ ಕಂಡಾಗಡೆ ಬಾಣಾಸನ ಹಸ್ತನಾಗಿ ಅರ್ಧಚಂದ್ರಮೆಂಬ ಸರದಿಂದಾತನ ತಲೆಯುಂ ಮೊಕ್ಕನೆವೋ[4]ಗೆಚ್ಚಂ ಅ[4]ದು ಜ್ವಲನ್ಮಣಿಮಕುಟಕುಂಡಲಂಗಳಿಂದೊಪ್ಪುತ್ತಿರ್ದುದು ವಿದ್ಯುತ್ಕಪಾಲಂಬೊಲ್ ನೆಲದೊಳ್ ಬಿದ್ದಿತ್ತಾಗಳಾ ತಲೆಯುಂ ಮಱುವಕ್ಕದವರ್ ಕಂಡು ಕೆಲರಂಜಿ ತ್ರಸ್ತಾ[5]ಭಿಭೂ[5]ತರಾಗಿಯೋಡಿ ಕೆಲರ್ ಶರಣೆಂದು ಕುಮಾರನ ಕಾಲ್ಗೆಱಗಿ ಪುಲ್ಲಂ ಕರ್ಚಿ ಪೊಡೆವಟ್ಟರ್ ಕುಮಾರನುಮಾಗಳಭಯಘೋಷಣೆಯುಂ ಪೊಯ್ಸಿಯವರ್ಗ್ಗಭಯ ದಾನಮಂ ಕೊಟ್ಟನಾಗಳ್ ಚಂದ್ರವೇಗನುಂ ಸಂಗ್ರಾಮ ಭೂಮಿ[6]ಯನರ್ಚಿಸಿ[6] ಮಹಾವಿಭೂತಿಯಿಂ ಕುಮಾರನನೊಡಗೊಂಡು ಪೋಗಿ ಪೊೞಲಂ ಪೊಕ್ಕು ಪ್ರಶಸ್ತ ದಿನ ವಾರ ನಕ್ಷತ್ರ ಹೋರಾ ಮುಹೂರ್ತ ಲಗ್ನದೊಳ್ ತನ್ನ ಮಕ್ಕಳ್ ಚಂದ್ರಮತಿ ಚಂದ್ರಶ್ರೀ ಚಂದ್ರಲೇಖೆ ಶಶಿಕಾಂತೆ ಮನೋ[7]ಹಾರಿಣಿ[7] ಹರಿಣಾಂಕೆ ಕಮಲಮುಖಿ ಪ್ರಿಯದರ್ಶನೆಯೆಂದಿವರ್ ಮೊದಲಾಗೊಡೆಯ ನೂರ್ವರ್ ಕನ್ನೆಯರ್ಕಳುಂ ಪಾಣಿಗ್ರಹಣಪುರಸ್ಸರಂ [8]ಕೊಟ್ಟನಂತಾ ನೂರ್ವರ್ ಕನ್ನೆಯರ್ಕಳುಂ [9]ಮುನ್ನಿನ ಖೇಚರಿಯರ್ಕಳುಂ[9] ಪೆಱ[10]ವುಮೆಂದಿವರೊಳ್[10] ಕೂಡಿ ಕುಮಾರಂ ವಿದ್ಯಾಧರ ಶ್ರೇಣಿಯೊಳ್ ಸುಖಮನನುಭವಿಸುತ್ತಿರ್ಪನ್ನೆಗಂ

*ಮತ್ತೊಂದು ದಿವಸಂ ಚಂದ್ರವೇಗಂ ಸಿದ್ಧಕೂಟಕ್ಕೆ ವಂದನಾಭಕ್ತಿಗೆ ವೋಗಿ ದೇವರನರ್ಚಿಸಿ ವಂದಿಸಿ ಸುಮಾಳಿಗಳೆಂಬ[11]ವಧಿ[11]ಜ್ಞಾನಿಗಳಪ್ಪ ಚಾರಣರಿಸಿಯರಂ ಗುರುಭಕ್ತಿಗೆಯ್ದು ವಂದಿಸಿ ಧರ್ಮಮಂ ಕೇಳ್ದು ತದನಂತರಮಿಂತೆಂದಂ ಭಟಾರಾ ಸನತ್ಕುಮಾರಂಗಂ ಸಿತಯಕ್ಷಂಗಂ ವೈರಸಂಬಂಧಕ್ಕೆ ಕಾರಣಮೇನೆಂದು ಬೆಸಗೊಂಡೊಡೆ ಭಟಾರರುಂ ತತ್ಸಂಬಂಧಿಯಪ್ಪ ಕಥೆಯುನಿಂತೆಂದು ಪೇೞಲ್ ತೊಡಗಿದರ್

---

1. ಕುಮಾರಂಗ (ಘಚಛ). 2. +ನಡೆ (ಘಚಛ). 3. ಜಂಗೆ ಮಾಗುಡಮಟ್ಟುವೆ (ಘಚಛ). 4. ಗಲಿಸುವುದುಮ (ಘಚಛ). 5. ಭೀ (ಕಖಗ). 6. ಯುಂ ಪೊಜಮಟ್ಟು (ಛ). 7. ರಮೆ (ಘಚ). 8. +ಕುಮಾರಂಗೆ (ಘಚಛ). 9. (ಘಚಛ)ಗಳಲ್ಲಿಲ್ಲ. 10. ರ್ ಕನ್ನೆಯರೊಳಂ (ಘಚಛ).
* (ಖ)ದಲ್ಲಿ ನಷ್ಟವಾಗಿದೆ. 11. ದಿವ್ಯ (ಘಚಛ).

ಈ ಜಂಬೂದ್ವೀಪ ಭರತಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ಕಾಂಚನ ಮೆಂಬುದು ಪೊೞಲದನಾಳ್ವೊಂ ಪ್ರತಿಮುಖನೆಂಬರಸನಪ್ಪುಶತಮಂತಃಪುರಕ್ಕಧಿಪ ನಾಗಿ ಕಾಲಂ ಸಲೆ ಮತ್ತಾ ಪೊೞಲೊಳ್ ನಾಗಚಂದ್ರನೆಂಬೊಂ ಸಾರ್ಥಾಧಿಪತಿ ಯಾತನ ಭಾರ್ಯೆ ವಿಷ್ಣುಶ್ರೀಯೆಂಬೊಳತ್ಯಂತ ರೂಪಲಾವಣ್ಯಸೌಭಾಗ್ಯಕಾಂತಿ ಹಾವಭಾವವಿಳಾಸವಿಭ್ರಮಂಗಳಿಂ ಕೂಡಿದೊ[1]ಳೊಂದು ದಿವಸಂ ಅರಸನಂ[1]ದ್ಯಾನ ವನಕ್ಕೆ ಪೋಗುತ್ತಂ ಪ್ರಾಸಾದ[2]ದೊಳಿರ್ದ ದೇವಾಂಗನಾಸನ್ನಿಭೆಯಪ್ಪ[3]ಳಂ ಕಂಡು ಕಾಮಶರಂಗಳಿಂ ಜರ್ಝರಿತ ಹೃದಯನಾಗಿ [4]ಮಂ[ತ್ರ][4] ಪ್ರಯೋಗದಿಂದಂ ವಿಷ್ಣು ಶ್ರೀಯನೊಳಕೊಂಡನಾಕೆಯುಮಾತಂಗಗ್ರ ವಲ್ಲಭೆಯಾಗಿ ಸಲ್ವೊಳಂ [5]ಸಮಸ್ತ ಮಂತಃಪುರಮಾ[5]ಕೆಗೆ ಮುಳಿಯುತ್ತಿ[6]ರ್ಪವೊಂ[6]ದು ದಿವಸಂ ಸಾರ್ವಭೌಮನೆಂಬ ಪಟ್ಟವರ್ಧನ ಗಜಂ ಸೊರ್ಕಿ ಮಸಗಿ [7]ಕ[7]ಟ್ಟುಗಳೆಲ್ಲಮಂ ಪಱಿದು ಹತತವಿತತ ಕೋಳಾಹಳಮೆೞ್ದು ಪೊೞಲೆಲ್ಲಮಂ ಕೊಲ್ವುದನರಸಂ ಕೇಳ್ದಾನೆಯುಂ ಕಟ್ಟಿಸಲೆಂದು ಪೋದನನ್ನೆಗಮಿತ್ತ ಅನಿಬರರಸಿಯರ್ಕಳ್ ನೆರೆದಂ ವಿಷಪ್ರಯೋಗದಿಂದಂ[8] ಕೊಂದಾ ರುಮಱಿಯದಂತಿರೆ ಸ್ಮಶಾನದೊಳೀಡಾ[9]ಡಿದೊ[9]ರನ್ನೆಗಮರಸನುಮಾನೆಯುಮಂ ಕಟ್ಟಿಸಿ ಬಂದರಸಿಯುಂ ಕಾಣದೆಲ್ಲಿರ್ದಳೆಂದು ಬೆಸಗೊಂಡೊಡೆ ಸತ್ತಳಂ[10]ಬಾ[10] ಮಾತಂ ಕೇಳ್ದು ಮೂರ್ಛಿತನಾಗಿ ನೀಡಱಿಂದೆೞ್ಚತ್ತು ಮಹಾದುಃಖಂಗೆಯ್ದು ಶ್ಮಶಾನ ಕ್ಕಾಕೆಯ ದೇಹಮಂ ನೋಡಲೆಂದು ಪೋಗಿಯದಱ ಭೀಭತ್ಸಮಂ ಕಂಡಾದಮಾನುಂ ಪೇಸಿ ಶರೀರವೈರಾಗ್ಯಮನೊಡೆಯನಾಗಿ ಅನ್ಯಾಯದಿಂ ಪರಸ್ತ್ರೀಹರಣಂಗೆಯ್ದಂ ಮಹಾಪಾತಕನೆನೆಂದು ತನ್ನಂ ತಾನಾದಮಾನುಂ ನಿಂದಿಸಿ ವಿಮಳವಾಹನನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ಸುವ್ರತರೆಂಬಾಚಾರ್ಯರ ಪಕ್ಕದೆ ದೀಕ್ಷೆಯಂ ಕೈಕೊಂಡು ಪಲಕಾಲಂ ತಪಂಗೆಯ್ದು[11] ಸಮಾಧಿಮರಣದಿಂ ಮುಡಿಪಿ ಪ್ರಾಣತ ಕಲ್ಪದೊಳಿರ್ಪತ್ತು ಸಾಗರೋಪಮಾಯುಷ್ಯಸ್ಥಿತಿಯನೊಡೆಯೊಂ ಪ್ರತೀಂದ್ರನಾಗಿ ಪುಟ್ಟಿ ದೇವಲೋಕದ ದಿವ್ಯಸುಖಮಂ ಪಲಕಾಲಮನುಭವಿಸಿ ಬಂದಿಲ್ಲಿ ಜಂಬೂ ದ್ವೀಪದ ಭರತ ಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ಕನಕ[12]ಮೆಂಬುದು ಪೊೞಲದನಾಳ್ವೊಂ ಹರಿವಾಹನನೆಂಬರಸಂ ಮತ್ತಮಾ ಪೊೞಲೊಳ್ ರಾಜಶ್ರೇಷ್ಠಿ ಅರ್ಹದ್ದಾಸನೆಂಬೊನಾತನ ಭಾರ್ಯೆ ಜಿನದತ್ತೆಯೆಂಬೊಳಾ ಇರ್ವರ್ಗಂ ಮಗಂ ಜಿನವರ್ಮನೆಂಬೊನಾಗಿ ಪುಟ್ಟಿ ರೂಪಲಾವಣ್ಯ ಸೌಭಾಗ್ಯ ಕಾಂತಿತ್ವದಿಂದಾದ ಮಾನುಂ ನೆಱೆದೊನಾಗಿ ಇಂತು ಕಾಲಂ ಸಲೆ ಅರ್ಹದ್ದಾಸಂಗೇನಾನುಮೊಂದು ಕಾರಣದಿಂ[13]ದಂ[13] ವೈರಾಗ್ಯಮಾಗಿ ಜಿನವರ್ಮಂಗೆ ರಾಜಶ್ರೇಷ್ಠಿ ಪದಮಂ ಕೊಟ್ಟು

---

1. ಳ್ ಮತ್ತಾ ಪ್ರತಿಮುಖನೊಂದುದಿವಸಂ ಬಹಿರು (ಘಚಛ). 2. + ತಳ (ಘಚಛ). 3. + ವಿಷ್ಣುಶ್ರೀಯುಂ (ಘಚಛ). 4. ಮಂತ್ರಿಯ (ಕಖಗ). ಮಂತ್ರಿ (ಘಚಛ). 5. ಕಂಡಾತ ಮಳಿವರಸಿಯರಾ (ಘಚಛ). 6. ರ್ದೊಂ (ಘಚಛ). 7. ಕಾಲ್ಗ (ಘಚಛ). 8. + ವಿಷ್ಣು ಶ್ರೀಯಂ (ಘಚಛ). 9. ಬಿಸುಡೋ (ಚ). 10. ದೊಡಾ (ಚ). 11. + ಸಮ್ಯಗ್ದರ್ಶನ ಜ್ಞಾನಚಾರಿತ್ರಮಂ ಸಾಧಿಸಿ (ಘಚಛ). 12. + ಪುರ (ಛ). 13. ದಾದಮಾನುಂ (ಘಚಛ).

ಶಿವಗುಪ್ತಾಚಾರ್ಯರ ಪಕ್ಕದೆ ದೀಕ್ಷೆಯುಂ ಕೈಕೊಂಡು [1]ತಪಂಗೆಯ್ದು[1] ಮೋಕ್ಷಕ್ಕೆ ವೋದನ್ ಮತ್ತಿತ್ತ ಜಿನವರ್ಮನುಂ ಪಲವುಂ ಜಿನಾಲಯಂಗಳಂ ಮಾಡಿಸಿ ದಾನ ಪೂಜೆ ಶೀಲೋಪವಾಸಮೆಂದಿಂತು ಚತುರ್ವಿಧಮಪ್ಪ ಶ್ರಾವಕಧರ್ಮದೊಳಗ್ಗಳನಾಗಿ ನೆಗೞುತ್ತಮಿಂತು ಪಲಕಾಲಂ ಸಲೆ

ಮತ್ತಾ ಮುನ್ನಿನ ಭವದ ನಾಗಚಂದ್ರನೆಂಬೊಂ ಸಾರ್ಥಾಧಿಪತಿ ವಿಷ್ಣುಶ್ರೀಯೆಂಬ ತನ್ನ ಭಾರ್ಯೆಯ ವಿಯೋಗಂ ಕಾರಣಮಾಗಿ ಆರ್ತಧ್ಯಾನದಿಂ ಸತ್ತು [2]ತಿರ್ಯಞ್ಚರ[2]ಕಾದಿಗಳೊಳ್ ಪಲಕಾಲಂ ತೊೞಲ್ದೀ ಭರತಕ್ಷೇತ್ರದೊಳ್ ಕಪಿಲನೆಂಬ ಪಾರ್ವ್ವಂಗಂ ಗಂಗೆಯೆಂಬ ಪಾರ್ವ್ವಂತಿಗಂ ಭಾರದ್ವಾಜನೆಂಬ ಮಗನಾಗಿ ಪುಟ್ಟಿ ಕನಕದಂಡಿಯೆಂಬ ಪರಿವ್ರಾಜಕಂಗೆ ಶಿಷ್ಯನಾಗಿ ನಾನಾ ದೇಶಂಗಳಂ ವಿಹಾರಿಸುತ್ತಂ ಕನಕಪುರಕ್ಕೆ ವಂದು ಮಾಸೋಪವಾಸಂಗೆಯ್ಯುತ್ತಂ ಮಹಾತಪಸ್ವಿಯಾಗಿ ನೆಗೞುತ್ತಿರೆ ತತ್ಪುರಾಧಿಪಂ ಪರಿವಾಹನನೆಂಬರಸಂ ಕಂಡಾದಮಾನುಮಾ ತಪಸ್ವಿಗೆ ಭಕ್ತನಾಗಿ ಬೆಸಕೆಯ್ಯೆ ಕಾಲಂ ಸಲೆ ಮತ್ತೊಂದು ದಿವಸಮರಸನೊಡನೆ ಜಿನವರ್ಮನಾ ಪರಿವ್ರಾಜಕನ ನಿವಾಸಕ್ಕೆ ವೋದೊಡೆ ಜಿನವರ್ಮನಂ ಕಂಡು [3]ಪೂರ್ವ ವೈರ[3] ಸಂಬಂಧದಿಂದಾದ ಕ್ರೋಧಾಗ್ನಿ ಪೆರ್ಚಿ ಮೞುಗುತಿರ್ದ್ದ ಮನಮನೊಡೆಯ [4]ತಪಸ್ವಿಯು[4]ನರಸನಿಂತೆಂದಂ ನೀಮೆಮ್ಮ ಮನೆಯೊಳ್ [5]ಪಾರಿಸಲ್ವೇೞ್ಪುದೆಂ[5]ದು ಪ್ರಾರ್ಥಿಸಿದೊಡಾತನಿಂತೆಂದಂ ಒಂದು ಪಾಂಗಿನೊಳ್ ನಿಮ್ಮ ಮನೆಯೊಳ್ [6]ಪಾರಿಸು[6]ವೆನೀ ಜಿನವರ್ಮನ ಬೆನ್ನೊಳಡಿಯಿಲ್ಲದ ತಳಿಗೆಯನಿಟ್ಟು ಬಿಸಿಯ ತುಯ್ಯಲನುಣ್ಬುದೆನಗಿಟ್ಟಿಯಿಾ ಪಾಂಗಿನೊಳೆನ್ನನೂಡಲಾರ್ಪೊಡುಣ್ಬೆನಲ್ಲದಾಗಳುಣ್ಣೆನೆಂದು ಪೇೞ್ದೊಡೆ ಕೇ[7][ಳ್ದಚ್ಚಿ][7]ಗನಾದರಸನಂ ಜಿನವರ್ಮಂ ಕಂಡಿಂತೆಂದಂ ದೇವಾ ತಪಸ್ವಿಗಾವ ಪಾಂಗಿನೊಳ್ ಮೆಚ್ಚು ಮೆಚ್ಚಿದ ಪಾಂಗಿನೊಳುಣ್ಗೆಂದೊಡಂಬಟ್ಟನಾಗಳಾ ಗರ್ಭಸುಖಿಯ ಬೆನ್ನೊಳ್ ಪಿರಿಯ [8]ಪರಿಯಾಣಮ[8]ನಿಟ್ಟದಂ ತೆಕ್ಕನೆ ತೀವಿ ಬಡ್ಡಿಸಿದೊಡೆ ಕುದಿಯುತ್ತಿರ್ದ ತುಯ್ಯಲಂ [9]ತಣ್ಣಿತ್ತಾಗಿಯಾ[9]ಱುವನ್ನೆಗಂ ಪಾರುತ್ತಿರ್ದ್ದು ನೀಡುಂ ಬೇಗಮುಂಡು ಸಮೆಧಬೞಿಕ್ಕೆ ತಳಿಗೆಯನೆತ್ತಿದೊಡಾ ತಳಿಗೆಯೊಡನೆ ಬೆನ್ನತೊ[10]ವ[10]ಲೆಲ್ಲಮೆರ್ದುಪೋದುದನರಸಂ ಕಂಡೀತಂ ತಪಸ್ವಿಯಲ್ಲಂ* ರಾಕ್ಷಸಂ ಪಂಚಮಹಾಪಾತಕನನೀ ಪೊೞಲೊಳಿರಲೀಯದಟ್ಟು ಕ[11]ಳೆಯಿ[11]ಮೆಂದು ನೃಪತಿ ಮುಳಿದೊಡೆ ಜಿನವರ್ಮಂ ತಪಸ್ವಿಗೆ ಮುಳಿಯಲ್ವೇಡೆಂದು ಬಾರಿಸಿ ಈತಂಗೇನುಂ ದೋಷಮಿಲ್ಲೆನ್ನ ಪೂರ್ವಕೃತ[12]ಕರ್ಮ[12]ಫಳವಿಪಾಕಮೆಂದು ನೃಪತಿಗೆ ಪೇೞ್ದು ಪರಿವ್ರಾಜಕಂಗೆ ನಿಶ್ಶಲ್ಯಂಗೆಯ್ದರಸನುಮಂ ಸ್ವಜನ ಪರಿಜನ ಬಂಧುವರ್ಗಮುಮಂ ಬಿಡಿಸಿ ಶ್ರೀವರ್ಮರೆಂಬಾಚಾರ್ಯರ ಪಕ್ಕದೆ ದೀಕ್ಷೆಯುಂ ಕೈಕೊಂಡು ಮಹಿಷಗಿರಿಯೆಂಬ ಪರ್ವತದೊಳೀ ಪು[13][ಣ್][13] ತೀರ್ವನ್ನೆಗಂ ಕೈಯನೆತ್ತಿಕೊಳ್ಳೆನೆಂದು ಕಾಯೋ

---

1. ಸಮ್ಯಗ್ದರ್ಶನ ಜ್ಞಾನ ಚಾರಿತ್ರಮುಂ ಸಾದಿಸಿ (ಚಛ). 2. ನರಕತಿರ (ಕಗ). 3. (ಕಗ)ಗಳಲ್ಲಿಲ್ಲ. 4. (ಕಗ)ಗಳಲ್ಲಿಲ್ಲ. 5. ಪರಸಲ್ವೇೞ್ಪುದೆಂ (ಕಖಗ). 6. ಪರಸು (ಕಖಗ). 7. ಕಗಿಜ್ಜಿ (ಕಗಘ), ಳ್ದುಜ್ಜು (ಘಚಛ). 8. ತಳಿಗೆಯ (ಘಚಛ). 9. ತನ್ನಿಂತಾನಾ (ಕಗ). 10. ಗ (ಕಗ). 11. ಳಿಪಿ (ಘಚಛ). 12. (ಕಖಗ)ಗಳಲ್ಲಿಲ್ಲ. 13. ಣು (ಸ).

ತ್ಸರ್ಗದಿಂ ನಿಂದೊನಂ ಗೃಧ್ರವಾಯಸಾದಿಗಳ್ ಪುಣ್ಣಂ ತೋಡಿ ತಿನೆ ಮೇರುಪರ್ವತಂ ಬೊಲಚಳಿತ ಧೈರ್ಯನಾಗೊಂದು ತಿಂಗಳ್ವರೆಗಂ ಸೈರಿಸಿ[1] ಸಮಾಧಿಮರಣದಿಂ ಮುಡಿಪಿಯುಚ್ಯುತಕಲ್ಪದೊಳಿರ್ಪತ್ತೆರಡು ಸಾಗರೋಪಮಾಯುಷ್ಯಸ್ಥಿತಿಯನೊಡೆಯೊನಚ್ಯುತೇಂದ್ರನಾಗಿ ಪುಟ್ಟಿಯಲ್ಲಿಯ ದೇವಲೋಕದ ದಿವ್ಯಸುಖಮಂ ಪಲಕಾಲಮನುಭವಿಸಿ ಬಂದಿಲ್ಲಿ ಸನತ್ಕುಮಾರನಾದನಾ ಪರಿವ್ರಾಜಕನುಮಾಯುಚ್ಯುತೇಂದ್ರಂಗೆ ವಾಹನ ದೇವನಾ[2]ದೊನ[2]ಲ್ಲಿಂ ಬಟ್ಟಿಬಂದಿಲ್ಲಿ ಚತುರ್ಗತಿ ಸಂಸಾರದೊಳ್ ನೀಡುಂ ತೊೞಲ್ದಂಜನಗಿರಿಯೆಂಬ ಪರ್ವತದ ತಟದೊಳ್ ತಾಪಸಾಶ್ರಮದೊಳ್ ವಸಿಷ್ಠನೆಂಬ ತಾಪಸಂಗಂ [3]ಘೂಕೆ[3]ಯೆಂಬ ತಾಪಸಿಗಂ [4]ಬಕ[4]ನೆಂಬೊಂ ಮಗನಾಗಿ ಪುಟ್ಟಿ ತಾಪಸ ತಪಮಂ ಕೈಕೊಂಡು ನೆಗೞ್ದು ಮಡಿದು ಸಿತಯಕ್ಷನಾದನೆಂದಿಂತಿರ್ವ್ವರ ಪೂರ್ವಭವವೈರಸಂಬಂಧಿಯಪ್ಪ ಕಥೆಯುಂ ಸವಿಸ್ತರಮಾಗಿ ಸುಮಾಲಿಗಳೆಂಬವಧಿಜ್ಞಾನಿಗಳಪ್ಪ ಚಾರಣರಿಸಿಯರ್ ಪೇೞೆ ಎಮ್ಮ ಸ್ವಾಮಿಯಪ್ಪ ಖಚರೇಂದ್ರಂ ಕೇಳ್ದಾದಮಾನುಂ ಸಂತುಷ್ಟಚಿತ್ತನಾಗಿ ಭಟಾರರಂ ಬಂದಿಸಿ ತನ್ನ ಪೊೞಲ್ಗೆಪೋದನ್

ಎಂದಿಂತು ಕಥಾಸಂಬಂಧಮೆಲ್ಲಮಂ ಕಮಳಮತಿಯೆಂಬ ಖೇಚರವಿಳಾಸಿನಿ ಸನತ್ಕುಮಾರಂ ಪೇೞೆವೇೞ್ದೊಡೆ ಮಹೇಂದ್ರಸಿಂಹಂಗೆ ಪೇೞ್ದೊಳಾ [5]ಅವಸರ[5]ದೊಳ್ ಕುಮಾರಂ ನಿದ್ರಾಸುಖವಿಮುಕ್ತನಾದೊಡಾತನ ಸಮೀಪಕ್ಕೆ ಮಹೇಂದ್ರಸಿಂಹಂ ಪೋಗಿ ಇಂತೆಂದಂ[6] ನಿನ್ನ ವಿಯೋಗದೊಳಪ್ಪ ದುಃಖದಿಂದಂ [7]ವಿಶ್ವಸೇನ ಮಹಾರಾಜನುಂ ಸಹದೇವಿ ಮಹಾದೇವಿ ಮೊದಲಾಗೊಡೆಯವರ್ಗ್ಗಳೆಲ್ಲಂ ಪ್ರಾಣ ಸಂದೇಹಮಾಗಿರ್ಕ್ಕು[7]ಮದಱಿಂ ನಿಮ್ಮ ಪೊೞಲ್ಗೆ [8]ಪೋಗಲ್ವೇೞ್ಕು[8]ಮೆಂದು ಪೇೞ್ದೊಡಾತನುಮಂತೆಗೆಯ್ವೆನೆಂದು ತಮ್ಮ ಮಾವಂಗಳಂ [9]ಬಿಡಿ[9]ಸಿ ವಿಚಿತ್ರಮಪ್ಪ ರಥಗಜ ತುರಗ ಗರುಡ ಕಳಹಂಸ ಮಯೂರಮಕರಸಿಂ[10]ಹ ವಿಮಾನಾಧಿರೂಢರ್ಕ್ಕಳಪ್ಪ [10]ವಿದ್ಯಾಧರರ್ಕ್ಕಳುಮಷ್ಟಸಹಸ್ರ ಸಂಖ್ಯಾ ಪ್ರಮಾಣಮಪ್ಪರಸಿಯರ್ಕ್ಕಳುಂ ಬೆರಸು ಮಹಾವಿಭೂತಿಯಿಂದಂ ಬಂದು ಹಸ್ತಿನಾಪುರಮಂ ಪೊಕ್ಕನಿಬರುಂ ವಿಶ್ವಸೇನ ಮಹಾರಾಜಂಗಂ ಸಹದೇವಿ ಮಹಾದೇವಿಗಂ ಸಾಷ್ಟಾಂಗವೆಱಗಿ ಪೊಡೆವಟ್ಟು ಅವರಾಶೀರ್ವಚನ ಶತಸಹಸ್ರಂಗಳನಾಂತುಕೊಂಡು ಸುಖದಿಂದಿರೆ ಸನತ್ಕುಮಾರಂಗೆ ಚಕ್ರಂಪುಟ್ಟಿ ಸಕಳ ಚಕ್ರವರ್ತಿಯಾಗಿ ಭೋಗೋಪಭೋಗಂಗಳೆಂಬ ಮಹಾಸಮುದ್ರದೊಳ್ ಪಲಕಾಲಂ ಕ್ರೀಡಿಸುತ್ತಿರ್ಪ್ಪನ್ನೆಗಂ

ಮತ್ತೊಂದು ದಿವಸಂ ಸೌಧರ್ಮ ಕಲ್ಪದೊಳಾ ಸೌಧರ್ಮೇಂದ್ರಂ ತನ್ನ ದೇವಸಭೆಯ ನಡುವೆ ಸಿಂಹಾಸನ ಮಸ್ತಕಸ್ಥಿತಂ ದೇವರ್ಕ್ಕಳಿಂ ಪರಿವೇಷ್ಟಿತನಾಗಿ [11]ಸೌದಾ[ಮಿ]ನಿ[11]ಯೆಂಬ ನಾಟಕಮಂ ನೋಡುತ್ತಿರ್ಪ್ಪನ್ನೆಗಂ ಈಶಾನಕಲ್ಪದಿಂದಂ

---

1. + ಸಮ್ಯಗ್ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ (ಘಚಛ). 2. ನಾಗಿ ಪುಟ್ಟಿಯ (ಕಖಗ). 3. ಗರ್ಘ್ಯಂಗೆ (ಕಖಗ). 4. ಜಠರ (ಕಖಗ). 5. ಪ್ರಸ್ತಾವ (ಘಚಛ). 6. + ನಿನ್ನ ತಾಯ್ಗಂ ತಂದೆಗಂ (ಚಛ). 7. ಪ್ರಾಣಸಂದೇಹಕ್ಕೆ ವಂದಿರ್ಕುಂ (ಚಛ). 8. ಬೇಗಂ ಪೋಪ (ಚಛ). 9. ಬಿರಿ (ಕಗ) 10. ಹಾದ್ಯನೇಕ ವಿವಿಧ ವಾಹನಾರೂಢರ್ಕಳುಮಪ್ಪ (ಛ). 11. ಸೋಕಾಮಣಿ (ಕಖಗ), ಸೌದಾಮನಿ (ಘಚಛ).

[1]ಸಹೋ[1]ತ್ಪನ್ನ ಸಂಗಮದೇವಂ ಬಂದು ಸೌಧರ್ಮೇಂದ್ರನ ಸಭೆಯ[2]ನವಯವ[3]ದಿಂ ಪೊಕ್ಕಿರ್ದಾಗಳಾ ಸಭೆಯೊಳಿರ್ದ ,ದೇವರ್ಕಳ ರೂಪುಂ ತೇಜಮುಂ ಲಾವಣ್ಯಮು ಮೆಲ್ಲಮಂ ಮಾಸಿಸಿ ತನ್ನ ತೇಜಮೆಯ್ಯುಗ್ಗಳಮಾಗಿರ್ದೊಡೆಂತು ಚಂದ್ರನುದಯಂಗೆಯ್ದಾಗಳ್ ಗ್ರಹನಕ್ಷತ್ರತಾರೆಗಳ ತೇಜಂ ಕುಂದುಗುಮಂತೆಲ್ಲರ ತೇಜಮುಮಂ ಕುಂದಿಸಿ ತಾನೆಯುಗ್ಗಳಮಾಗೆ [3]ಬೆಳಗುತ್ತಿರ್ದೊನಂ[3] ದೇವರ್ಕಳೆಲ್ಲಂ ವಿಸ್ಮಯಂಬಟ್ಟು ನೋಡಿ ಸೌಧರ್ಮೇಂದ್ರನನಿಂತೆಂದು ಬೆಸಗೊಂಡರ್ ಸ್ವಾಮಿ ಈ ಸಂಗಮನೆಂಬ ದೇವನತಿಶಯಮಪ್ಪ ರೂಪುಂ ಲಾವಣ್ಯಮುಂ ತೇಜಮುಂ ದ್ವಾದಶಾದಿತ್ಯರ್ಕಳೊರ್ಮೊದಲೆ ಉದಯಂಗೆಯ್ದಂತೆ ಬೆಳಗಿದಪ್ಪುದೇಕಾರಣದಿಂದಾದುಮೆಂದು ಬೆಸಗೊಂಡೊಡಿಂತೆಂದು ಸೌಧರ್ಮೇಂದ್ರಂ ಪೇೞಲ್ ತೊಡಗಿದನ್

ಈತಂ ಮುನ್ನಿನ ಭವದೊಳ್ ಈ ಜಂಬೂದ್ವೀಪದ[4] ಪೂರ್ವವಿದೇಹದೊಳ್ [5]ಸೀತೆಯೆಂಬ ತೊೞೆಯ ಬಡಗಣ ದೆಸೆಯೊಳ್[5] ಪುಷ್ಕಳಾವತಿಯೆಂಬುದು ನಾಡಲ್ಲಿ ಪುಂಡರೀಕಿಣಿಯೆಂಬುದು ಪೊೞಲದನಾಳ್ವೊಂ ಸಕಳ ಚಕ್ರವರ್ತಿ ವಿಮಳವಾಹನನೆಂಬರಸನಾತನ ಮಹಾದೇವಿ [6]ವಿಮ[6]ಳಮತಿಯೆಂಬೊಳಾ ಇರ್ವರ್ಗ್ಗಂ ಪುಟ್ಟಿದೊಂ ಮಗಂ ಕ್ಷೀರಕುಮಾರನೆಂಬೊನಾತಂ ವೈರಾಗ್ಯಮನೊಡೆಯನಾಗಿ ತಪಂಬಡಲ್ಕೆಂದು ಬಗೆದಿರ್ದ್ದೊಡೆ ತಾಯ್ ತಪಂಬಡಲೀಯದೆನಿತಾನುಂ ತೆಱದಿಂ ನುಡಿದು [7]ತಗುಳ್ದೊಡೆ[7] ತಾಯ ವಚನಮನತಿಕ್ರಮಿಸಲಾಱದೆ ಮನೆಯೊಳಿರ್ದ್ದಂತೆ ಬ್ರಹ್ಮಚರ್ಯ್ಯಂ ಮೊದಲಾಗೊಡೆಯ ವ್ರತಂಗಳಂ ಪ್ರತಿಪಾಳಿಸಿ [8]ಆಚಾಮ್ಲವರ್ಧನ[8]ಮೆಂಬ ನೋಂಪಿಯಂ ಪನ್ನೆರಡು ವರ್ಷಂಬರಂ ನೋಂತು ಸಮಾಧಿಮರಣದಿಂದಂ ಮುಡಿಪೆ ಇಂತಪ್ಪ ರೂಪುಂ ತೇಜಮುಂ ಲಾವಣ್ಯಮುಮುದಱಿಂದೀತಂಗಾದುದೆಂದು ಸೌಧರ್ಮೇಂದ್ರಂ ಪೇೞ್ದೊಡೆ ಮತ್ತಂ ದೇವರ್ಕ್ಕಳಿಂತೆಂದು ಬೆಸಗೊಂಡರ್ ಸ್ವಾಮಿ ಈತನಂತಪ್ಪ ರೂಪುಂ ತೇಜಮುಂ ಲಾವಣ್ಯಮುಮನೊಡೆಯರ್ ಪೆಱರಾರಾನುಮೊಳರೆ ಎಂದು ಬೆಸಗೊಂಡೊಡೆ ಸೌಧರ್ಮೇಂದ್ರ[9]ನೆಂದನೊಳನ್[9] ಹಸ್ತಿನಾಪುರದೊಳ್ ಕುರುವಂಶದಾತಂ ಸನತ್ಕುಮಾರನೆಂಬೊಂ[10] ಚಕ್ರವರ್ತಿಯಾತಂ[11] ದೇವರ್ಕಳ ರೂಪುಂ ಲಾವಣ್ಯಮುಂ ತೇಜಮುಮನೊಡೆಯನಾದವಾನುಮುಗ್ಗಳಮೆಂದು ಪೇೞ್ದೊಡೆ

ಇಂದ್ರನ ಮಾತಂ ನಂಬದೆ ವಿಜಯ ವೈಜಯಂತರೆಂಬರಿರ್ವರ್ ದೇವರ್ಕ್ಕಳ್ ಪಾರ್ವರ ರೂಪಂ ಕೈಕೊಂಡು ಹಸ್ತಿನಾಪುರಕ್ಕೆ ಸನತ್ಕುಮಾರ ಚಕ್ರವರ್ತಿಯ ರೂಪಂ ನೋಡಲೆಂದು ಬಂದು ಬಾಗಿಲೊಳಿರ್ದ್ದ ಪಡಿಯಱರನೆಂದರ್ ನಿಮ್ಮರಸಂಗಿಂತೆಂದು ಪೇೞಿಂ ಗೆಂಟಱಿಂ ಬಂದೆ[12]ವು[12] ನಿಮ್ಮ ರೂಪನೞ್ತಿವಟ್ಟು ನೋಡಲ್ಕೆಂದೊಡವರುಂ ಪೋಗಿ ತಮ್ಮರಸಂಗಱಿಪಿದೊಡೆ ಅರಸನನುಮತದಿಂದವರರಮನೆಯಂ ಪೊಕ್ಕರಸನ ಸಾರೆವೋಗಿ ನೋೞ್ಪಾಗಳರಸಂ ಸುಗಂಧ ತೈಲದಿಂ

1. ಸಾಹಸೋ (ಘಚಛ). 2. ನೆವ (ಘಚಛ). 3. ಸಭೆಯೊಳಿರ್ದ (ಕಖಗ). 4. + ಭರತದ(ಖ). 5. (ಘಚಛ)ಗಳಲ್ಲಿಲ್ಲ. 6. ಲಕ್ಷ್ಮೀ (ಘಚಛ). 7. ನಿಲಿಸಿದೊಡೆ (ಘಚಛ). 8. ಯಾಯುಲವರ್ಧಮಾನ (ಕಗ), ಯಾಯುಲವರ್ಗಮಾನ (ಖ), ಯಾಯಬಿಲಂವರ್ಧಮಾನ (ಚ). 9. ನೊರ್ವನೊಳನಾತಂ (ಛ). 10. + ಸಕಲ (ಚಛ). 11. + ಗೆ (ಸ). 12. ಮುಂ (ಕಖಗಛ).

ಮೆಯ್ಮನಭ್ಯಂಗನಂಗೆಯ್ದು ಮಜ್ಜನಂಬುಗಲೆಂದಿರ್ದವಸರದೊಳ್ ದೇವರ್ಕಳ್ ಸನತ್ಕುಮಾರ ಚಕ್ರವರ್ತಿಯ ರೂಪಂ ವಾಳಾಗ್ರದಿಂ ತೊಟ್ಟು ನಖಾಗ್ರಂಬರೆಗಂ ನಖಾಗ್ರದಿಂ ತೊಟ್ಟು ವಾಳಾಗ್ರಂಬರೆಗಂ [1]ಮಿಱುಗುವುಮಿಳಿರ್ಪುದುಮಂ[1] ನೀಡುಂ ಭಾವಿಸಿ ನೋಡಿ ಚೋದ್ಯಂಬಟ್ಟಿಂತು ರೂಪುಂ ತೇಜಮುಂ ಗಾಡಿಯುಂ ಯೌವನಮುಂ ದೇವರ್ಕಳ್ಗಮಿಲ್ಲೆಂದು ಚಕ್ರವರ್ತಿಯ ರೂಪಂ ಪೊಗೞ್ವುದರಸನಿಂತೆಂದಂ ನೀಮಾರ್ಗೆನಂಬಿರೆಲ್ಲಿಂ ಬಂದಿರೆಂದು ಬೆಸಗೊಂಡೊಡವರೆಂದರ್ ದೇವಲೋಕದಿಂ ಬಂದೆ[2]ವು ದೇವರ್ಕಳೆವು ಸೌಧರ್ಮಕಲ್ಪದೊಳ್ ದೇವರ್ಕಳ ಸಭೆಯ ನಡುವೆ ಸೌಧರ್ಮೇಂದ್ರಂ ನಿಮ್ಮ ರೂಪನಾದಮಾನುಂ ನಚ್ಚಿ ಬಣ್ಣಿಸಿದೊಡಿಂದ್ರನ ಮಾತಂ ನಂಬದೆ ನಿಮ್ಮಂ ನೋಡಲ್ ಬಂದೆವಿಂದ್ರನ ವ್ಯಾವರ್ಣಿಸುವುದರ್ಕ್ಕಗ್ಗಳಮೆ ನಿಮ್ಮ ರೂಪುಂ[3] ಯವ್ವನಮುಂ ಲಾವಣ್ಯಮುಮಂ ಕಂಡೆವೆಂದು ಪೇೞ್ದಮಿನ್ನೆಮ್ಮ ದೇವಲೋಕಕ್ಕೆ ಪೋಪೆವೆಂದೊಡರಸಂ ಮನಂ ಪೆರ್ಚಿ [4]ತನ್ನೊಳ್ ತನ್ನ ರೂಪಂ ನಚ್ಚಿ[4] ಕಿಱಿದುಬೇಗಂ ಮಾಣಿಮಭ್ಯಂಗನಂ ಗೆಯ್ದು ರೂಪಂ ಕಂಡಿರಿಂ ಮಜ್ಜನಂ ಬೊಕ್ಕು ಪಸದನಂಗೊಂಡಿರ್ದ ರೂಪಂ ನೋಡಿ [5]ಪೋಗಿ[5]ಮೆಂದರಸಂ ನುಡಿದೊಡಂತೆ ಗೆಯ್ವೆಮೆಂದು ದೇವರ್ಕ್ಕಳಿರ್ದ್ದೊಡರಸನುಂ ಮಜ್ಜನಂಬೊಕ್ಕು ಬೇಗಂ ಸರ್ವಾಭರಣ ಭೂಷಿತನಾಗಿ ಆಸ್ಥಾನಮಂಟಪದೊಳ್ ಸಿಂಹಾಸನ ಮಸ್ತಕ ಸ್ಥಿತನಾಗಿ ಸಾಮಂತ ಮಹಾಸಾಮಂತರ್ ಮೂವತ್ತಿರ್ಛಾಸಿರ್ವರ್ ಮುಕುಟ ಬದ್ಧರ್ಕಳುಂ ವಿದ್ಯಾಧರರ್ಕಳುಂ [6]ಯಕ್ಷದೇವರ್ಕಳುಂ[6] ಬಳಸಿಯುಮಿರ್ದೋಲಗಿಸೆ [7]ಮೂವತ್ತೆರಡುಂ[7] ಚಾಮರಂಗಳಿಕ್ಕೆ ಸೌಧರ್ಮೇಂದ್ರನಿಪ್ಪಂತಿರ್ದು ದೇವರ್ಕಳ್ಗೆ ಬೞಿಯಟ್ಟಿ ಬರಿಸಿ ನೋಡಿಮಿನ್ನೆನ್ನ ರೂಪನೆಂದು ತನ್ನಂ ತೋಱಿದೊಡೆ ದೇವರ್ಕಳ್ ನೋಡಿ ವಿಸ್ಮಯಂ ಬಟ್ಟಿದೇಂ ಚೋದ್ಯಮೊ

ಶ್ಲೋಕ ॥ ಅನೇಕರಾಗಸಂಕೀರ್ಣಂ ಘನಲಲಗ್ನಮಪಿ ಕ್ಷಣಾತ್ ।
ಮಾನುಷಂ ಯೌವನಂ ಕಷ್ಟಂ ನಶ್ಯತೀಂದ್ರಧನುರ್ಯಥಾ ॥

ಎಂ[8]ದೀ ಕ್ಷಣಮಾತ್ರದೊಳೆ ಮನುಷ್ಯರ ರೂಪುಂ ಗಾಡಿಯುಂ ಚೆಲ್ವುಂ ತೇಜಮುಂ ಯೌವನಮುಂ ಕುಂದಿತ್ತೆನೆ ಚಕ್ರವರ್ತಿಯೆಂದನೆನ್ನ ರೂಪಂ ಮುನ್ನೆ ನೀ[9]ಮ[9] ಪೊಗೞ್ದಿರೀಗಳೇಕೆ ಪೞಿದಪ್ಪಿರೆನೆ [10]ದೇವರೆಂದರ್ ಕೇಳರಸಾ[10]ದೇವರ್ಕಳ[11]ತೇಜಮುಂ ಲಾವಣ್ಯಮುಂ[11] ಪುಟ್ಟಿದ ಪ್ರಥಮ ಸಮಯದಿಂ ತೊ[12]ಟ್ಟು ಪೆರ್ಚುತ್ತುಂ ಪೋಕುಮಾಯುಷ್ಯದ ನಡುವರೆಗಮಲ್ಲಿಂದತ್ತ ಕುಂದುತ್ತಂ ಪೋಕುಮಾಯುಷ್ಯಾಂತಂಬರೆಗಂ[12] ಮತ್ತಾಮುಂ ನಿಮ್ಮ ರೂಪಂ ಯೌವನ ಭರಮೊಳಿರ್ದುದುಮಂ ಕಂಡೆ

1. ಮಿಱುಮಿಳಿರ್ಪುದು (ಕ), ಮಿಱಿಮುಂಮಿಳಿರ್ಪುದುಂ (ಖಘಚ), ನೇರಲುಮಿಳಿರ್ಪ (ಗ). 2. ಮುಂ (ಕಖಗ). 3. +ತೇಜಮುಂ (ಛ). 4. ತನ್ನ ರೂಪ ನಚ್ಚಿ (ಕಖಗ). 5. (ಕಖಗ)ಗಳಲ್ಲಿಲ್ಲ. 6. (ಘಚ)ಗಳಲ್ಲಿಲ್ಲ. 7. ಮೂವತ್ತಿರ್ವರ್ ವಿಲಾಸಿನಿಯರ್ (ಘಚ). ಮೂವತ್ತಿರ್ವರ್ ಕನ್ನೆಯರ್ (ಛ). 8. ದೊಡೀ (ಘ), ದಾಡಿ (ಚಛ). 9. ಮುಂ (ಕಖಗಘಛ) 10. ದೇವರ್ಕಳರಸಾ (ಛ). 11. ಚೆಲ್ವುಂ ಯೌವನಮುಂ ವಿಭವಮುಂ (ಘಚಛ). ರೂಪುಂ ಗಾಡಿಯುಂ (ಛ). 12. ಟ್ಟುದಿಂ ಗಳಾಯುಷ್ಯಮುಂಟೆನೆಯುಡೆಯೊಳೆಲ್ಲಿಯುಂ ಕಿದದೇಶಸ್ಥಿತಿಯೊಳ್ ಸ್ಥಿರಮಾಗಿರ್ಪಮಲ್ಲಿಂದತ್ತ ಕುಂದುತ್ತಂ ಪೋಕು (ಘಚಛ).

ವಿಾಗಳಾಯುಷ್ಯಮುಂ ತೇಜಮುಂ ರೂಪುಂ ಲಾವಣ್ಯಮುಂ ಯೌವನಮುಂ[1] ಕಿಱಿದು ಕುಂದಿದುದಂ ಕಂಡೆಮೆನೆ ಚಕ್ರವರ್ತಿ ನೀಮೆಂತಱಿದಿರೆಂದು ಬೆಸಗೊಂಡೊಡೆ ದೇವರ್ಕಳೆಂದರೆಮಗವಧಿಜ್ಞಾನಮುಂಟಪ್ಪುದಱಿಂದಱಿ[2]ದೆವು[2] ಮನುಷ್ಯರ್ಗ್ಗಱಿಯಲಾಗದೆಂದೊಂದು ದೋಣಿ[3]ಕೊಂ[3]ಡಮಂ ತರಿಸಿ ನೀರಂ ತೆಕ್ಕನೆ ತೀವಿಯುದಱೊಳಗೆ ಚಮರಿಯನದ್ದಿ ತೆಗೆದು ಬಳಸಿಯುಂ ಬೀಸಿದಾಗಳ್ ಸಭೆಯೊಳಿರ್ದ ಮಾನಸರ ಮೇಗೆಲ್ಲಂ ನೀರ್ ಪನಿತುದಂ ತೋಱಿ ದೇವರೆಂದರ್ ಪೇೞಿಮಾ ಚಮರಿಯೊಳ್ ತಗುಳ್ದು ಬಿರುಮಾದನಿತು ನೀರಂ ಕೊಂಡದೊಳ್ ಕುಂದಿ[4]ದುದಂ[4] ತೋಱಿಮೆಂದೊಡ ಮರುಮಱಿಯದಿದ್ರ್ದೊಡೆಂತಿದಂ[5]ನೀಮಱಿ[5]ಯಲಾಗದಂತೆ ಮಾನಸರಾಯುಷ್ಯಮುಂ ತೇಜಮುಂ ಲಾವಣ್ಯಮುಂ ಯೌವನಮುಂ ಪ್ರತಿಸಮಯಂ ಕುಂದು[6]ತಿರ್ಕುಮಾ ವೀಚಿಮರಣಮಂ[6] ನಿಮಗಱಿಯಲಾಗದೆಂದು ಪೇೞ್ದು ಹೇತು ದೃಷ್ಟಾಂತಂಗಳಿಂದಂ ಪ್ರತ್ಯಕ್ಷಮಂ ತೋಱಿ ಚಕ್ರವರ್ತಿಯಂ ನಂಬೆ ನುಡಿದು ದೇವರ್ಕಳ್ ತಮ್ಮ ಸೌಧರ್ಮಕಲ್ಪಕ್ಕೆ ವೋದರ್

ಮತ್ತಿತ್ತ ಸನತ್ಕುಮಾರ ಚಕ್ರವರ್ತಿಗದುವೆ [7]ನಿರ್ವೇಗಕ್ಕೆ ಕಾರಣವಾಗಿ ಶರೀರಭೋಗಕ್ಕೆ ಪೇಸಿ ಇಂತೆಂದು ಮನದೊಳ್ ಬಗೆಗುಂ :

**ವೃತ್ತ** ॥ ರೂಪಂ ಯೌವನಮಾಯುರಕ್ಷವಿಷಯಾ ಭೋಗೋಪಭೋಗಾ ವಪುಃ ।
ವೀರ್ಯಂ ಸ್ವೇಷ್ಟಸಮಾಗಮೋ ವಸುಮತಿಸೌಭಾಗ್ಯಭಾಗ್ಯಾದಯಃ ॥
ನೋ ನಿತ್ಯಾಃಸ್ಫುಟಮಾತ್ಮನಸ್ಸಮುದಿತ ಜ್ಞಾನೇಕ್ಷಣಾಭ್ಯಾಮೃತೇ ।
ಶೇಷಾ ಇತ್ಯನುಚಿಂತಯಂತು ಸುಧಿಯಃ ಸರ್ವೇ ಸದಾಽನಿತ್ಯತಾಂ ॥

**ಶ್ಲೋಕ** ॥ ಆದೌ ಜನ್ಮ ಜರಾರೋಗೌ ಮಧ್ಯೇಪ್ಯಂತೇ ಖಳಾಂತಕಃ ।
ಇತಿ ಚಕ್ರೈಕ ಸಂಭ್ರಾಂತಿರ್ಜಂತೋರ್ಮಧ್ಯೇ ಭವಾರ್ಣವಂ ॥

ಎಂದಿಂತು ವೈರಾಗ್ಯಮಂ ಭಾವಿಸಿ ವಿಜಯಕುಮಾರನೆಂಬ ಪಿರಿಯ ಮಗಂಗೆ ರಾಜ್ಯ ಪಟ್ಟಂಗಟ್ಟಿ ಪರಿವಾರಕ್ಕೆಲ್ಲಂ ನಿಶ್ಶಲ್ಯನಾಗಿ ಬಾಹ್ಯಾಭ್ಯಂತರ ಪರಿಗ್ರಹಂಗಳೆಲ್ಲಮಂ ತೊಱೆದು ಪಲಂಬರ್ ಮಕುಟಬದ್ಧ[8]ರ್ಕಳರಪ್ಪರಸುಮಕ್ಕಳ್ವೆರಸು[8] ವಿನಯಂಧರ ಭಟಾರರ ಪಕ್ಕದೆ ತಪಂಬಟ್ಟು ದೀಕ್ಷೋಪವಾಸತ್ರಿರಾತ್ರಂ ಗೆಯ್ದು ಶರೀರಸಂಧಾರಣ ನಿಮಿತ್ತಂ ಚರಿಗೆವೊಕ್ಕೊಡೊರ್ವಳ್ ಬಡ[9]ಬಿರ್ದಿ[9] ನಿಱಿಸಿ ಪ್ರಥಮ ದಿವಸದೊಳೆ ಪಾರಕಿನ ಕೂೞು[10]ಮಾವರೆಯುಮೆಣ್ಣೆ[10]ಯುಮಾಡಿನಳೆಯುಮಂ ಬಡ್ಡಿಸಿದೊಡದ ನಮೃತಮನುಣ್ಬಂತುಂಡು ಮತ್ತಂ ತ್ರಿರಾತ್ರಕ್ಕೆ [11]ಪಚ್ಚಖ್ಖಾಣಂ[11]ಗೊಂಡರಾ ಕಾಲದಿಂ ತೊಟ್ಟಾಹಾರದೊಳಪ್ಪ ದೋಷದಿಂದಂ 'ಕಚ್ಛುಜರಖಾಸಸೋಸೋ ಭತ್ತಚ್ಛದಿ ಅಚ್ಛಿಕುಚ್ಛಿದುಕ್ಖಾಣಿ' ಎಂದಿವು ಮೊದಲಾಗೊಡೆಯವೇೞುನೂಱು

---

1. + ಕಿಱಿ (ಘಚಭ). 2. ವೆಮುಂ (ಕಖಗ). 3. ಗೊಂ (ಘಭ). 4. ದೆಡೆಯಂ (ಘಚಭ). 5. ನಿಮಗ (ಘಚಭ). 6. ತಿರ್ದುವೀಚಿಯೆಂಬ ಮರಣಮುಮಂ (ಕಖಗ), ಕುರ್ಮಾರ್ ಚಿಮರಮಂ (ಘಚ). 7. ವೈರಾಗ್ಯ (ಭ). 8. ರ್ ವೆರಸು ಅರಸಿಯರ್ ಬೆರಸಿ (ಕಗ), ವಿ ವೆರಸು ಅರಸಿಯರುಂ ವೆರಸಿ (ಖ), (ಘಚ)ಗಳಲ್ಲಿಲ್ಲ. 9. ಳ್ದಿ (ಕಖಗ), ದ್ದಿ (ಚಭ). 10. ಮಾವರೆಯೆಣ್ಣೆ (ಕಗ). 11. ಪ್ರತ್ಯಾಖ್ಯಾನಂ (ಘಚ).

ವ್ಯಾಧಿಗಳಂ ನೂಱು ವರುಷಂಬರಂ ಒಳ್ಳಿತ್ತಾಗಿ ಸೈರಿಸಿ ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಮೆಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಹಾತ್ಮ್ಯದಿಂದಂ ಆಮೋಷಧಿ ಖೇಳೋಷಧಿ ಜಲ್ಲೋಷಧಿ ವಿಪ್ರೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊ[1]ಡಂ[1] ವ್ಯಾಧಿಗೆ ತಕ್ಕ ಪ್ರತೀಕಾರಮಂ ಮಾಡದಿಂತು ಘೋರವೀರ ತಪಶ್ಚರಣಂಗೆಯ್ಯೆ

ಮತ್ತೊಂದು ದಿವಸಂ ಸಾಧರ್ಮೇಂದ್ರಂ ತನ್ನ [2]ಸಭೆಯೊಳ್[2] ಸಿಂಹಾಸನಮಸ್ತಕಸ್ಥಿತನಾಗಿ ಧರ್ಮಶ್ರವಣಾನಂತರಂ ರಿಸಿಯರ್ಕಳ ಗುಣಂಗಳಂ ವ್ಯಾವರ್ಣಿಸುತ್ತಿರ್ದು ಸನತ್ಕುಮಾರ ರಿಸಿಯ ಗುಣಗಣಮನಾದಮಾನುಂ ಕೈಕೊಂಡಿಂತೆಂದು ಪೇೞಲ್ ತಗುಳ್ದೊನ್ ವಾತಪಿತ್ತಶ್ಲೇಷ್ಮ ಶ್ವಾಸ ಖಾಸ ಜರಾರು[3]ಚಿಛರ್ದ್ಯತಿ[3] ಸಾರಾಕ್ಷಿಕುಕ್ಷಿವೇದನಾಸ್ಫೋಟಕಂ ಪಿಟಕಂ ಶೂಲ ಭಗಂದರಂ ಕುಷ್ಠಕ್ಷಯ ಗಂಡ[4]ಶಿರೋವೇದನೆ ಮೊದಲಾಗೊಡೆಯವೇೞುನೂಱು ವ್ಯಾಧಿಗಳೊರ್ಮೊದಲೆ ಮೆಯ್ಯೊಳ್ ಪುಟ್ಟಿದೊಡಂತು ತಾಮುಂ ಋದ್ಧಿಸಂಪನ್ನರಾಗಿಯುಂ ವ್ಯಾಧಿಗೆ ತಕ್ಕ ಪ್ರತೀಕಾರಂಗೆಯ್ಯದೆ ನೂಱು ವರುಷಂಬರೆಗಂ ಒಳ್ಳಿತ್ತಾಗಿ ಸೈರಿಸಿ ತಪಂಗೆಯ್ದಪ್ಪರೆಂದು ಸೌಧರ್ಮೇಂದ್ರಂ ಪೊಗೞ್ದೊಡೆ ಕೇಳ್ದು ಮುನ್ನೆ ಬಂದ ದೇವರ್ಕಳಿರ್ವರುಂ ವೈದ್ಯರ ರೂಪಿನೊಳ್ ಮದ್ದುಗಳಂ ಪಸುಂಬೆಯೊಳ್ ತೆಕ್ಕನೆ ತೀವಿ ಪರೀಕ್ಷಿಸಲ್ಕೆಂದು ಸಾರೆವಂದು ವಂದಿಸಿ ಇಂತೆಂದರ್ ಭಟಾರಾ ನಿಮ್ಮ ಮೆಯ್ಯ ಕುತ್ತಂಗಳೆಲ್ಲಮಂ ಮದ್ದಂ ಮಾಡಿ ಕಿಡಿಸಲ್ ನೆಱಿವೆ[5]ವು[5] ಮದ್ದಂ ಮಾ[6]ಡು[6]ವುದನೊಡಂಬ[7]ಡವೇೞ್ಕುಮೆಂದೊಡೆ[7] ಭಟ್ಟಾರರುಂ ಮೋನಂಗೊಂಡು ನುಡಿಯದೆ ಕೆಮ್ಮಗಿರ್ದೊಡೆ ಪಿರಿದುಂ ಬೇಗಮಿ[8]ರ್ದ[8]ೞ್ದು ಪೋಗಿ ಮಱುದಿವಸಂ ಮಗುೞ್ದು ಬಂದಿಂತೆಂದರ್ ಭಟಾರಾ ವೈದ್ಯಶಾಸ್ತ್ರದೊಳಾ[9]ದಮಾನುಂ[9] ಕುಶಲರೆ[10]ಮುಂ[10] ಗ್ರಂಥಾರ್ಥ [11]ಸ್ವರೂಪದಿಂದೆಲ್ಲಾ ಕುಶಲರೆಮುಂ[11] ಕರ್ಮಜ್ಞರೆಮುಂ ಮದ್ದುಗಳುಮಭಿನವಂಗಳಾದಪೊಳ್ದವಿರ್ದುವುಂ ನಿಮ್ಮ ಮೆಯ್ಯ ಕುತ್ತಂಗಳೆಲ್ಲಮನೇೞು ದಿವಸದಿಂದೊಳಗೆ ಕಿಡಿಸಿ ನಿರೋಗಮಪ್ಪಂತಿರೆ ಮಾಡುವೆವು ಬೞಿಕ್ಕೇನುಂ ಸಂಕ್ಲೇಶಮಿಲ್ಲದೆ ತಪಂಗೆಯ್ವಿರೆಂದೊಡೆ ಭಟ್ಟಾರರವರೊಡನೆ ನುಡಿವಾಗಳುಗು[12]ೞಿ ಸೀ[12]ಕರಂಗಳ್ ತಮ್ಮ ಮುಂಗೆಯ್ಯಮೇಗೆ ಬಿೞ್ದೊಡೆ ಬೆರಲಿಂ [13]ಸೀಂಟಿ[13] ತೋಱಿದಾಯೆಡೆ ಸುವರ್ಣಾಯಮಾನವಾಗಿ ತೊಗುತ್ತಿರ್ದ ಮೆಯ್ಯ ತೇಜಮುಮಂ ದೇವರ್ಕಳ್ ವಿಸ್ಮಯಂಬಟ್ಟು ನೋಡುತ್ತಿರೆ ಭಟಾರರಿಂತೆಂದರೆಮಗೆ ಮದ್ದು ಬಾೞ್ತೆಯಪ್ಪೊಡೆಮಗಾಮೆ ಮದ್ದಂ ಬಲ್ಲೆ[14]ಮ[14]ಮಗದು ಬಾೞ್ತೆಯಲ್ತು ನೀಮುಂ ಜಾತಿಜರಾಮರಣಂಗಳೆಂಬೆಮ್ಮ ಕುತ್ತಮಂ ಕಿಡಿಸಲಾರ್ಪೊಡಾ ಮದ್ದನೊಡಂಬಡುವೆಮುೞಿದಾವ ಮದ್ದುಮ

---

1. ದವಂ (ಕಖಗ). 2. ಪರಿವಾರಂಬೆರಸು (ಘಚಛ). 3. ಜೆರಾದ್ಯೋ (ಕಖಗ). 4. + ಮಾಲಾ (ಘಚ). 5. ಮುಂ (ಕಖಗ). 6. ಡಿ ಕಿಡಿಸು (ಘ). 7. ಮವಿರಪ್ಪೊಡೆನೆ (ಚಛ). 8. ಳ್ದೆ (ಕಖಗ). 9. ದಂ (ಘಚಛ). 10. ವು (ಘಚಛ). 11. ಪ್ರಯೋಗಂಗಳೆಲ್ಲಮೆಮಗೆ ಪಾಠಂ (ಘಚಛ). 12. ಡಳಸಿಖ (ಖ). 13. ತೊಡೆದು (ಘಚಛ). 14. ವೆ (ಛ).

ನೊಡಂಬಡುವೆ[1]ವಲ್ಲೆವೆಂ[1]ದೊಡೆ ದೇವರ್ಕಳುಮಿಂತೆಂದರ್ ಜಾತಿಜರಾಮರಣಂಗಳೆಂಬ ಕುತ್ತಮಂ ಕಿಡಿಸಲ್ಕಾಮಾಱೆವಾ ಕುತ್ತಮಂ ಕಿಡಿಸಲ್ಕೆ ಭಟಾರಾ ನೀಮೆ ಸಮ[2]ರ್ಥರಿರ್ ಪರಮ[2]ವೈದ್ಯರಿರೆದರ್ಕೆಂದು ಮತ್ತಂ ದೇವರ್ಕಳೆಂದರ್ ಭಟಾರಾ ಸೌಧರ್ಮೇಂದ್ರ ನಿಮ್ಮ ತಪದೊಳಪ್ಪ ಗುಣಂಗ[3][ಳುಮಂ][3] ವ್ಯಾಧಿಗಳಂ ಸೈರಿಸಿ ನೆಗೞ್ವ ನೆಗೞ್ತೆಯುಮಂ ದೇವರ್ಕಳ ಸಭೆಯು ನಡುವೆಯಾದಮಾನುಂ ಕೈಕೊಂಡು ಪೊಗೞ್ದೊಡಾಮಿಂದ್ರನ ಮಾತಂ ನಂಬದೆ ನಿಮ್ಮಂ ಪರೀಕ್ಷಿಸಲ್ಕೆಂದು ಬಂದೆ[4]ವು[4] ಸೌಧರ್ಮೇಂದ್ರ ಪೊಗೞ್ದುದೇನುಂ ತಪ್ಪಿಲ್ಲೆಂದು ನುಡಿದು ಗುಣಂಗೊಂಡು ಮಗುೞ್ದು ವಂದಿಸಿ ಮರ್ದುಗಳೆಲ್ಲಮನೊಂದು ಪೞವಾವಿಯೊಳ್ ಪೊಯ್ದು ದೇವರ್ಕಳ್ ತಮ್ಮ ದೇವಲೋಕಕ್ಕೆ ಪೋದೊರಾ ಮರ್ದಿನ ಬಾವಿಯ ನೀರಂ ಮಿಂದೊರ್ಗ್ಗೆಲ್ಲಂ ಕುತ್ತಂಗಳ್ ಕೆ[5]ಡುವುವಾದವು[5]

ಸನತ್ಕುಮಾರ ಭಟಾರರುಮೇೞುನೂಱುಂ ವ್ಯಾಧಿಗಳಂ [6]ನೂಱುವರುಷಂ ಬರೆಗಂ[6] ಸೈರಿಸಿ [7]ಘೋರವೀರತಪಶ್ಚರಣಂಗೆಯ್ದು ಆಲದ ಮರದ ಕೆೞಗೆ ಸಂನ್ಯಸನಂಗೆಯ್ದು ಸಮಾಧಿಮರಣದಿಂ ಮುಡಿಪಿ ಮಿಕ್ಕ ರತ್ನತ್ರಯಂಗಳಂ ಸಾಧಿಸಿ[7] ಸನತ್ಕುಮಾರಕಲ್ಪದೊಳ್ ಏೞು ಸಾಗರೋಪಮಾಯುಷ್ಯಸ್ಥಿತಿಯನೊಡೆಯೊನಿಂದ್ರನಾಗಿ ಪುಟ್ಟಿದೊಂ

ಮತ್ತಾರಾಧರಪ್ಪ ಭವ್ಯರ್ಕಳೆಲ್ಲಂ ಸನತ್ಕುಮಾರ ಭಟಾರರಂ ಮನದೊಳ್ ಬಗೆದು ವ್ಯಾಧಿಗಳೊಳಪ್ಪ ವೇದನೆಗ[ಳುಮಂ] ಪಸಿವುಂ ನೀರೞ್ಕೆ ಮೊದಲಾಗೊಡೆಯ [8]ಬಾಧೆಯುಮಂ ಸೈರಿಸಿ [9]ದೇವರಂ ಧ್ಯಾನಿಸುತ್ತಂ ಪಂಚನಮಸ್ಕಾರಮಂ ಮನದೊಳುಚ್ಚರಿಸುತ್ತ[9] [10]ಮಿಕ್ಕ ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ[10] ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

---

1. ವಲ್ಲೆವೆಂ (ಫ). 2. ರುಂ ಖಿಪ್ಪರವು (ಕ). 3. ಳ್ಕಂ (ಸ). 4. ಮುಂ (ಸ.ಭ). 5. ಟ್ಟುಪೋಪವಾ (ಚ), ಟ್ಟುವಾ (ಫ). 6. (ಫಚಭ)ಗಳಲ್ಲಿಲ್ಲ. 7. (ಫಚಭ)ಗಳಲ್ಲಿಲ್ಲ. 8. + ಪರೀಷಹಂಗಳೊಳಾದ (ಫಚಭ), 9. ಸಮ್ಯಗ್ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ (ಫಚಭ). 10. ಮುಡಿಪಿ (ಫಚಭ).

# (೫) ಅಣ್ಣಿಕಾಪುತ್ರನ ಕಥೆ

ಅಣ್ಣಿಕಾಪುತ್ರನ ಕಥೆಯಂ ಪೇೞ್ವಂ :

> ಗಾಹೆ ॥ ಣಾವಾಎ ಣಿಬ್ಬುಡಾಏ ಗಂಗಾಮಜ್ಝೇ ಅಮೂಢಮಾಣಮದೀ ।
> ಆರಾಧಣಂ ಪವಣ್ಣೋ ಕಾಲಗದೊ[1][ಏಣಿಯಾ][1] ಪುತ್ತೋ ॥

[ಣಾವಾಎ—ನಾವೆ, ಣಿಬ್ಬುಡಾಏ—ಮುೞುಗಿದುದಾದೊಡೆ, ಗಂಗಾಮಜ್ಝೇ—ಗಂಗಾಮಹಾನದಿಯ ನಡುವೆ, ಅಮೂಢಮಾಣಮದೀ—ಮೋಹಿಸದ ಬುದ್ಧಿಯನೊಡೆಯನಾಗಿ, ಆರಾಧಣಂ—[2]ನಿಜಾತ್ಮಾರಾಧನೆಯಂ[2] ಪವಣ್ಣೋ—ಲೇಸಾಗಿ ಪೊರ್ದಿದೊಂ, ಕಾಲಗದೊ—ಕಾಲಂಗೆಯ್ದೊನಾಗಿ, [3][ಏಣಿಯಾ][3] ಪುತ್ತೋ—ಅಣ್ಣಿಕೆಯ ಮಗಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ಉತ್ತರ ಮಥುರೆಯೆಂಬುದು ಪೊೞಲದನಾಳ್ವೊಂ ಪ್ರಜಾಪಾಳನೆಂಬೊನರಸನಾತನ ಮಹಾದೇವಿ ಸುಪ್ರಭೆಯೆಂಬೊಳಂತವರ್ಗ್ಗಳಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಿರೆ ಮತ್ತಾ ಪೊೞಲೊಳ್ ಸಾರ್ಥಾಧಿಪತಿ ಧನದತ್ತನೆಂಬೊಂ ಪರದಂ ಧನಕನಕ ಸಮೃದ್ಧನಾತನ ಭಾರ್ಯೆ ಧನಶ್ರೀಯೆಂಬಾಳಾಯಿರ್ವರ್ಗಂ ಮಗಂ ಧನದೇವನೆಂಬೊನಂತವರ್ಗಳ್ಗೆ ಸುಖದಿಂ ಕಾಲಂ ಸಲೆ

ಮತ್ತೊಂದು ದಿವಸಂ ಧನದೇವಂ ಪರದಿಂಗೆಂದು ಪಿರಿದುಂ ಸಾರ[3]ಮಪ್ಪ ಭಂಡಮಂ ತೀವಿಕೊಂಡು ಪಿರಿದುಂ ಸಾರ್ಥಂಬೆರಸು ದಕ್ಷಿಣ ಮಧುರೆಗೆ ವೋದೊಡಾ ಪೊೞಲ ರಾಜಶ್ರೇಷ್ಠಿ ತಿಳಕಶ್ರೇಷ್ಠಿಯೆಂಬೊನಾತನ ಭಾರ್ಯೆ ನಂದೆಯೆಂಬೊಳಾಯಿರ್ವರ್ಗಂ ಮಕ್ಕಳ್ ಪದ್ಮಾವತಿ[4] ಸುಮತಿ ಗುಣಮತಿಯೆಂತಿವರ್ ಮೊದಲಾಗೊಡೆಯ ಎಣ್ಬರ್ ಪೆಣ್ಗೂಸುಗಳಾದೊ[5]ಡ[5]ವರೊಳಗೆಲ್ಲರಿಂ ಕಿಱಿಯಳಣ್ಣಿಕೆಯೆಂಬೊಳಾಕೆಯುಂ ಧನದತ್ತನ ಮಗನಪ್ಪ ಧನದೇವನಂ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಗುಣಂಗಳಿಂ ಕೂಡಿದೊನಂ *ತಿಳಕಶ್ರೇಷ್ಠಿಯುಂ ನಂದೆಯುಂ ಕಂಡಾತಂಗೆ ಬಯಸಿ ಅಣ್ಣಿಕೆಯೆಂಬ ಕೂಸಂ ಕೊಟ್ಟೊಡೆ ಕೆಲವು ದಿವಸಮಾ ಪೊೞಲೊಳಿರ್ದ್ದು ತಮ್ಮ ಕೊಂಡು ಪೋದ ಭಂಡಮಂ ಮಾಱಿ ಪೆಱದಂ ತಮ್ಮನಾ[6]ಟ್ಯಪೂರ್ವಮಪ್ಪ ಭಂಡಮಂ ತೀವಿಕೊಂಡು ತಮ್ಮ ಪೊೞಲ್ಗುತ್ತರ ಮಧುರೆಗೆ ಬಂದಿರ್ದ್ದರನ್ನೆಗಮಣ್ಣಿಕೆಗೆ ಗರ್ಭಮಾಗಿ ಮಗಂ ಪುಟ್ಟಿದೊಡೆ ಧನದೇವನ ತಾಯುಂ ತಂದೆಯುಂ ನಂಟರುಮೆಲ್ಲಂ ನೆರೆದಣ್ಣಿಕೆಯ ಮಗನೆಂ[7]ದಾತಂ[7]ಗಣ್ಣಿಕಾಪುತ್ರನೆಂದು ಪೆಸರನಿ[8]ಟ್ಟೊಡಾ[9]ತಂ ಕ್ರಮಕ್ರಮದಿಂ ಸುಖದಿಂ [9]ಬ[9]ಳೆದು ನವಯೌವನನಾಗಿ[10]ರ್ಪ್ಪನ್ನೆಗಂ

---

1. ಅಣ್ಣಿಕಾ (ಸ). 2. ದರ್ಶನಜ್ಞಾನಚಾರಿತ್ರಂಗಳಾರಾಧನೆಯುಂ (ಫಚಭ). 3. + ಧನ (ಫಚಭ). 3. + ಪ್ರಭಾವತಿ (ಫಚಭ). 5. ರ (ಫಭ). *ಪು ೬೬–೬೮ (ಏ)ದಲ್ಲಿ* ನಷ್ಟವಾಗಿದೆ. 6. ಳ್ಗೆ ಅ (ಕಗ), 7. ದೊಂಡಾತಂ (ಫಚ), 8. ಟ್ಟರಾ (ಫಚದ). * ದೆ (ಕಗದ). 10. + ಸುಖಮಿ (ಫಚಭ).

ಇತ್ತ [1]ದಮ[1]ಸೂರಿಗಳೆಂಬವರವಧಿಜ್ಞಾನಿಗಳಪ್ಪ ಆಚಾರ್ಯರ್ ಪಿರಿದುಂ ರಿಸಿ ಸಮುದಾಯಂಬೆರಸು ಗ್ರಾಮನಗರಖೇಡರ್ವಡಮಡಂಬಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೊರುತ್ತರ ಮಥುರೆಗೆ ಬಂದು ಬಹಿರುದ್ಯಾನ ವನದೊಳಿರ್ದ್ದರನಣ್ಣಿಕಾಪುತ್ರಂ ಪೋಗಿ [2]ವಂದಿಸಿ ಧರ್ಮಮಂ ಕೇಳ್ದು ಸಮ್ಯಕ್ತ್ವ ಪೂರ್ವಕಂ ಶ್ರಾವಕವ್ರತಂಗಳೆಲ್ಲಮುಂ ಕೈಕೊಂಡು ತದನಂತರಮೆ ಭಟಾರಾ ಎನಗಾಯುಷ್ಯಮೆನಿ[3]ತೆಂದು ತನ್ನಾಯುಷ್ಯಪ್ರಮಾಣಮಂ ಬೆಸಗೊಂಡೊಡೆ ಭಟಾರರುಂ ಕಿಱಿದೆ ನಿನಗಾಯುಷ್ಯಮೆಂದು ಪೇೞ್ದೊಡೆ ವೈರಾಗ್ಯಪರಾಯಣನಾಗಿ ತಾಯುಂ ತಂದೆಯುಮಂ ನಂಟರುಮಂ ಬಿಡಿಸಿ ನಿಶ್ಶಲ್ಯಂಗೆಯ್ದು [1]ದಮ[1]ಸೂರಿಗಳೆಂಬಾಚಾರ್ಯರ ಪಕ್ಕದೆ ತಪಂಬಟ್ಟು ದ್ವಾದಶಾಂಗ ಚತುರ್ದಶಪೂರ್ವಮಪ್ಪಾಗಮಮೆಲ್ಲಮಂ ಕಲ್ತು ಗುರುಗಳನೊಡಂಬಡಿಸಿ ಏಕವಿಹಾರಿಯಾಗಿ ಗ್ರಾಮೇಕರಾತ್ರಂ ನಗರೇ ಪಂಚರಾತ್ರಂ ಅಟವ್ಯಾಂ ದಶರಾತ್ರಮೆಂಬೀ ನ್ಯಾಯದಿಂ [4]ಗ್ರಾಮನಗರಖೇಡಖರ್ವಡಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ[4] ತೀರ್ಥಂಗಳೆಲ್ಲಮಂ ವಂದಿಸಲ್ಕೆಂದು ಗಂಗಾಮಹಾನದಿಯಂ ಪಾಯ್ದು ಪೋಪ ಬಗೆಯಿಂದಂ ನಾವೆಯನೇಱಿದೊಡದೊಂದುತ್ಪಾತ ವಾತದಿಂದಂ [5]ಗಂಗಾಮಹಾನದಿಯ[5] ನಡುವೆ ಮಡುವಿನೊಳ್ ಭಯಂಕರಮಾಗುತ್ತಿರ್ದ್ದ ತೆರೆ[6]ಯ[6]ನೊಡೆಯುದಱೊಳ್[7] ಮುೞುಗಿದೊಡಾ ಅಣ್ಣಿಕಾಪುತ್ರನೆಂಬ ರಿಸಿ ಪಿರಿದಪ್ಪ ಮಹಾತ್ಮ್ಯಮಂ ಮೋಹಿಸದ ಬುದ್ಧಿಯನೊಡೆಯೊಂ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಯಾವಜ್ಜೀವಂ ನಿವೃತ್ತಿಗೆಯ್ದು [8]ಕಾಯೋ[8]ತ್ಸರ್ಗಂ ನಿಂದು [9]ಧರ್ಮಧ್ಯಾನ[9] ಶುಕ್ಲಧ್ಯಾನಂ[10]ಗಳಂ[10] ಜಾನಿಸಿ ಸಕಳ ಕರ್ಮಂಗಳಂ ಕಿಡಿಸಿ [11]ಅಂತರ್ಗತ[11] ಕೇವಲಿಯಾಗಿ ಮೋಕ್ಷಕ್ಕೆ ಪೋದರ್

ಮತ್ತಂ ಪೆಱರಾರಾಧಕರಪ್ಪವರ್ಗಳೆಲ್ಲಮಣ್ಣಿಕಾಪುತ್ರನೆಂಬ ರಿಸಿಯುಂ ಮನದೊ[12]ಳಿಟ್ಟು [ಟ್ಕಿ][12]ಚೇತನೋಪಸರ್ಗಂ ಮೊದಲಾಗೊಡೆಯ ಉಪಸರ್ಗಂಗಳುಮಂ [13]ನೀರಱ ಮೊದಲಾಗೊಡೆಯ ಪರೀಷಹಂಗಳುಮಂ[13] ಸೈರಿಸಿ[14] ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗದ ಸುಖಂಗ[15]ಳಂ ಭವ್ಯರ್ಕಳೆ[15]ಯ್ದುಗೆ

---

1. ದಮದರ (ಘ), ದಮವರ (ಚ), ಯಮಧರ (ಛ). 2. + ಕಂಡು (ಛ). 3. ತುಂಟೆಂದು (ಘಚ). 4. (ಘಚಛ)ಗಳಲ್ಲಿಲ್ಲ. 5. (ಘಚಛ)ಗಳಲಿಲ್ಲ. 6. ಗಳ (ಘಚಛ). 7. + ನಾವೆ (ಘಚ). 8. ಉ (ಕಗ). 9. ಸಮ್ಯಗ್ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ (ಘಚಛ). 10. ಮಃ (ಚ). 11. ಅನಂತರಂ (ಘಚಛ). 12. ಳ್ ಬಗೆದ (ಘಚಛ). 13. + ಪಸಿವುಂ (ಘಚಛ). 14 + ಸಮ್ಯಕ್ (ಘಚಛ). 15. ಳನೆ (ಚ).

## (೬) ಭದ್ರಬಾಹು ಭಟ್ಟಾರರ ಕಥೆ

ಭದ್ರಬಾಹು ಭಟ್ಟಾರರ ಕಥೆಯಂ ಪೇೞ್ವೆಂ :

**ಗಾಹೆ** ॥ ಓಮೋದರಿಏ ಘೋರಾಏ ಭದ್ದಬಾಹೂ ಅಸಂಕಿಲಿಟ್ಠಮದೀ ।
ಘೋರಾಏ ತಿಗಿಂಚ್ಛಾಏ ಪಡಿವಣ್ಣೋ ಉತ್ತಮಂ ಅಟ್ಠಂ ॥

[ಓಮೋದರಿಏ— ಅರೆ ಉಣಿಸಿನಿಂದಂ. ಘೋರಾಏ—ಆದಮಾನುಂ ಕಡಿದಪ್ಪುದಱಿಂದಂ. ಭದ್ದಬಾಹು—ಭದ್ರಬಾಹು ಭಟ್ಟಾರರ್, ಅಸಂಕಿಲಿಟ್ಠಮದೀ—ಸಂಕ್ಲೇಶ [1]ಪರಿಣಾಮವಿಲ್ಲದೊನಾಗಿ,[1] ಘೋರಾಏ—ಕಡಿದಪ್ಪ, ತಿಗಿಂಚ್ಛಾಏ—ಪಸಿವಿನಿಂದಂ,* ಪಡಿವರ್ಣ್ಣೋ—ಪೊ[2]ರ್ದಿ[2]ದೊಂ, ಉತ್ತಮಂ ಅಟ್ಠಂ—ಮಿಕ್ಕ ದರ್ಶನಜ್ಞಾನ ಚಾರಿತ್ರಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ [3]ಪುರವರ್ಧನಮೆಂಬುದು . ನಾಡಲ್ಲಿ[3] [4]ಕೌಂಡಿನೀ[4] ನಗರಮೆಂಬುದು ಪೊೞಲದನಾಳ್ವೊಂ ಪದ್ಮರಥನೆಂಬೊನರಸನಾತನ ಮಹಾದೇವಿ ಪದ್ಮಶ್ರೀಯೆಂಬೊಳಂತವರ್ಗಗಳಿಷ್ಟ ವಿಷಯಕಾಮಭೋಗಂಗಳನನುಭವಿಸುತ್ತಿರೆ ಮತ್ತಾ ಅರಸನ [5]ಪುರೋಹಿತಂ[5] [6]ನಾಲ್ಕು ವೇದಮುಮಾಱಂಗಮುಂ[6] ಪದಿನೆಂಟು ಧರ್ಮಶಾಸ್ತ್ರಂಗಳುಮಂ ಬಲ್ಲೊಂ ಸೋಮಶರ್ಮನೆಂಬೊಂ ಪಾರ್ವನಾತನ ಭಾರ್ಯೆ ಪ್ರತ್ಯಕ್ಷ ಶ್ರೀಯಾದೇವತೆಯುನೆ ಪೋಲ್ವ ಸೋಮಶ್ರೀಯೆಂಬೊಳಾಯಿರ್ವರ್ಗ್ಗಂ ಮಗಂ ಪುಟ್ಟಿದೊಂ ತಾಯ್ಗಂ ತಂದೆಗಮೆಲ್ಲಾನಂಟರ್ಗೆಯುತ್ಸಾಹಮುಂ ಸುಖಮುಂ ವಿಭವಮುಮಂ ಪಡೆವುದಱಿಂದಮಾ ಕೂಸಿಂಗೆ ಭದ್ರಬಾಹುವೆಂಬ ಪೆಸರನೆಲ್ಲರುಂ ನೆರೆದಿಟ್ಟೊಡಾತನಂ ಬಿದಿಗೆಯ ಚಂದ್ರನಂತೆ ಕ್ರಮಕ್ರಮದಿಂ ಸುಖದಿಂ ಬೆಳೆದು ಮುಂಜಿಗಟ್ಟುವ ಪ್ರಾಯಮಾದೊಡೆ ಪ್ರಶಸ್ತ ದಿವಸ ವಾರ ನಕ್ಷತ್ರ ಮುಹೂರ್ತದೊಳ್ [7]ಮುಂಜಿಬಂಧನ ಕ್ರಿಯೆಯುಂ[7] ಮಾಡಿದ ಬೞಿಕ್ಕೆ ತನ್ನೋರೆಗೆಗಳಪ್ಪ ಪಲಂಬರ್ [8]ಮಾಣಿಗ[8]ಳ್ವೆರಸು ಪೊಱವೊೞಲೊಳ್ ಬಟ್ಟಾಡುತ್ತಿರೆ ಭದ್ರಬಾಹು[9]ವೆಂಬ ಮಾಣಿ[9]ಯೊಂದು ಬಟ್ಟಿನ ಮೇಗೆ ಪದಿನಾಲ್ಕು ಬಟ್ಟನೊಂದೊಂದಱ ಮೇಗೊಳಿಯೊಳಿಟ್ಟಾಡುತಿರ್ಪನ್ನೆಗಂ

ಇತ್ತ ವರ್ಧಮಾನಭಟ್ಟಾರರ್ ಮೋಕ್ಷಕ್ಕೆವೋದಿಂಬೞಿಕ್ಕೆ ಚತುರ್ದಶಪೂರ್ವಧಾರಿಗಳಪ್ಪ ಶ್ರುತಕೇವಳಿಗಳ್ ನಾಲ್ಕನೆಯವರ್ ಗೋವರ್ಧನರೆಂಬ ಭಟ್ಟಾರರುಜ್ಜಯಂತ[10]ಮಂ[10] ವಂದಿಸಲೆಂದು ವಿಹಾರಿಸುತ್ತಂ ಬರ್ಪೊರಾ [11]ಕೌಂಡಿನೀ[11]

---

1. ವಿಲ್ಲದ ಪರಿಣಾಮಮುಮನೊಡೆಯನಾಗಿ (ಘಚಥ). * + ಅಪಿ—ಮತ್ತೆ (ಸ). 2. ಳ್ದ (ಕಚಗ). 3. (ಘಚಥ)ಗಳಲ್ಲಿಲ್ಲ. 4. ಕಾಳಿಂಗೆ (ಘಥ), ಕಳಿಂಗ (ಚ). 5. ಪಾರ್ವಂ (ಘಚಥ). 6. (ಘಚಥ) ಗಳಲ್ಲಿಲ್ಲ. 7. ಮುಂಜಿಗಟ್ಟುವ ಕ್ರಿಯೆಗಳಂ (ಕಗ). 8. ಮಕ್ಕ (ಗ). + ಬ್ರಹ್ಮಚಾರಿಗಳಪ್ಪ (ಘಚಥ). 9. (ಘಚಥ)ಗಳಲ್ಲಿಲ್ಲ. 10. ಗಿರಿಯುಂ (ಥ). 11. ಕಳಿಂಗ (ಘಚಥ).

ನಗರಕ್ಕೆ ವಂದು ಪೊಱವೊಟಲೊಳೊಂದು ಬಟ್ಟನಮೇಗೆ ಪದಿನಾಲ್ಕುಂ ಬಟ್ಟೆ[1]ನೊಂದೊಂದಱಮೇಗೋಳಿಯೊಳಿಟ್ಟಾ[1]ಡುತ್ತಿರ್ಪ ಭದ್ರಬಾಹುಮಾಣಿಯಂ ಗೋವರ್ಧನ ಭಟ್ಟಾರರ್ ಪಿರಿದುಂ ಬೇಗಂ ನೋಡುತ್ತಿರ್ದಿಂತೆಂದು[2]ದ್ದೇಶಂ ಗೆಯ್ದೊರೀತನೆಮ್ಮಿಂಬಳಿಕ್ಕೆ ಚತುರ್ದಶಪೂರ್ವಧಾರಿಯು[3]ಪ್ಪ ಮಹಾತ್ಮ್ಯಮನೊಡೆಯೊಂ ಭದ್ರಬಾಹು ಭಟಾರರೆಂಬೊರಪ್ಪೊರೆಂದು ಬಗೆದಾತನವರ ಮನೆಗೊಡೆಗೊಂಡು ಪೋಗಿಯವರ ತಾಯ್ತುಂದೆಗಮಿಂತೆಂದರೀತನನೆಮಗೊಪ್ಪಿಸಿಮೆಲ್ಲಾ ಶಾಸ್ತ್ರಂಗ[4]ಳುಮಂ[4] [5]ಕಲ್ಪಿಸಿ[5] ಪಂಡಿತನಂ ಮಾಡಿ ನಿಮಗೊಪ್ಪಿಸುವೆಮೆಂದೊಡವರುಮಂತೆ* ಗೆಯ್ಯಿಮೆಂದೊಡಾತನನೊಡಗೊಂಡು ಪೋಗಿ ಕೆಲವು ದಿವಸದಿಂದೊಳಗೆ ವ್ಯಾಕರಣಂ ಪ್ರಮಾಣಂ ಛಂದಮಲಂಕಾರ ನಿಘಂಟು ಕಾವ್ಯ ನಾಟಕಂ ಮೊದಲಾಗೊಡೆಯ ಲೋಕದೊಳುಳ್ಳ ಶಾಸ್ತ್ರಂಗಳೆಲ್ಲ[6]ಮಂ ಕಲ್ಪಿಸಿ[6]ದೊಡಧಿಗಮ ಸಮ್ಯಗ್ದೃಷ್ಟಿಯಾಗಿ ಯಾಗಮದೊಳೆಲ್ಲಮನಱಿದು ಸಂಸಾರ ಶರೀರ ಭೋಗ ವೈರಾಗ್ಯಪರಾಯಣನಾಗಿ ಭಟ್ಟಾರಾ ಎನಗೆ ದೀಕ್ಷೆಯಂ ದಯೆಗೆಯ್ಯಿಮೆನೆ ಭಟ್ಟಾರರೆಂದರೆಮಗಂತು ದೀಕ್ಷೆಯಂ ಕುಡಲಾಗ ಮಗನೆ ನಿನ್ನ ಪೊಟಲ್ಗೆ ನೀಂ ಪೋಗಿ ನಿನ್ನ ಕಲ್ತ ವಿದ್ಯೆಯಂ ಪಂಡಿತಿ[7]ಕ್ಕೆ[7]ಯುಮನಾ ಪೊಱಲೊಳ್ ನೆಗಟ್ಚಿ ನೆಗಟ್ದ ಪಂಡಿತರ್ಕಳೊಡನೆ ವಾದಂಗೆಯ್ದುವರಂ ಗೆಲ್ದು ದಶದಿಶೆಗಳೊಳೆಲ್ಲಂ ನಿನ್ನ ಪಾಂಡಿತ್ಯದ ಯಶಮಂ ಪ[8]ಸರಿ[8]ಸಿ ನಿನ್ನನಾವೊಡಗೊಂಡು ಬಂದುದರ್ಕೆ ತಾಯ್ತುಂದೆಗಂ ಸಂತೋಸಂಮಾಡಿಯವರಂ ಬಿಡಿಸಿಯೊಡಂಬಡಿಸಿ ಬಂದೊಡೆ ತ[9]ಪಮಂ ಕು[9]ಡಲಕ್ಕುಮಂತೆಯಾಗದೆಂದೊಡೆ ಭದ್ರಬಾಹು [10]ಮಾಣಿಯುಂ[10] ಭಟ್ಟಾರರಂ ವಂದಿಸಿ ತನ್ನ ಪೊಟಲ್ಗೆವೋಗಿ ತಾಯುಂ ತಂದೆಯುಮಂ ಕಂಡು ಪೊಟಲೊಳ್ ನೆಗಟ್ದ ಪಂಡಿತರ್ಕಳೊಡನೆ ವಾದಂಗೆಯ್ದು ಗೆಲ್ದು ದಶದಿಶೆಗಳೊಳೆಲ್ಲಂ ತನ್ನ ಪಾಂಡಿತ್ಯದ ಯಶಮಂ ಪಸರಿಸಿ ತಾಯ್ತುಂದೆಗಂ ಸಂತೋಸಂ ಮಾಡಿಯವರನೊಡಂಬಡಿಸಿ ಬಂದು ಗೋವರ್ಧನ ಭಟ್ಟಾರರ ಪಕ್ಕದೆ ಕುಮಾರ ಬ್ರಹ್ಮಚಾರಿಯಾಗಿ ಭದ್ರಬಾಹು ತಪಂಬಟ್ಟು ಕೆಲವು ದಿವಸದಿಂದೊಳಗೆ ದ್ವಾದಶಾಂಗ ಚತುರ್ದಶಪೂರ್ವಮಪ್ಪಾಗಮಮೆಲ್ಲಮಂ ಗ್ರಂಥಾರ್ಥ ಸ್ವರೂಪದಿಂ ಕಲ್ತು ಸಕಲ ಶಾಸ್ತ್ರ ಪಾರಾವಾರಗನಾಗಿ ಎಲ್ಲಾ ವೋದುಗಳುಮಂ ನೆಱೆಯೋದಿ ಕಲ್ತು[11] ಶ್ರುತದೊಳಪ್ಪ ಭಕ್ತಿಕಾರಣವಾಗಿ ಪ್ರತಿಮಾಯೋಗಂ ನಿಂದೊರಂ ದೇವರ್ಕಳುಂ ಮನುಷ್ಯರ್ಕಳುಂ ಬಂದು ಪಿರಿದಪ್ಪ ಪೂಜೆಯಂ ಮಾಡಿಯರ್ಚಿಸಿ [12]ಪೂಜಿಸಿ ಬಂದಿಸಿದೊಡೆ[12]ಲ್ಲಾ ಋಷಿಸಮುದಾಯಮುಮಂ ಪ್ರತಿಪಾಲಿಸಲ್ಕೆ ಸಮರ್ಥರಾಗಿರ್ಪನ್ನೆಗಂ ಗೋವರ್ಧನ ಭಟ್ಟಾರರ್ ಸಮಾಧಿಮರಣದಿಂದಂ ರತ್ನತ್ರಯಮಂ ಸಾಧಿಸಿ ಮುಡಿಪಿ ದೇವಲೋಕಕ್ಕೆ ವೋದರ್

---

1. ನೋಳಿಯೋಳಿ (ಘಚಛ). 2. ಪದೇ (ಗ). 3. + ಯ್ದನೆಯ ಶ್ರುತಕೇವಳಿಯುವಧಿಜ್ಞಾನಿಂ ಪಲವು ರುದ್ಧಿಗಳಿಂದಂ ಕೂಡಿದೊಂ ದೇವರಿಂದಂ ಮನುಷ್ಯರಿಂದಂ ಅರ್ಚಿಸಿ ಪೂಜಿಸೆ ಪಡುವೊ ಪಿರಿದ (ಘಚಛ). 4. ಳ್ಳಂ (ಘಚಛ). 5. ನೋದಿಸಿ (ಘಚಛ). 6. ಮನೋದಿಸಿ (ಘಚಛ). 7. ರ್ಕೆ (ಕಗ), ರಪಿ (ಘಚಛ). 9. ಪಂಗು (ಘಚಛ). 10. ಭಟ್ಟನುಂ (ಚಛ). 11. + ಬಳಿಕ ನವರತಿ ಸ್ಥಿತಿಯಿಂ (ಘಚಛ). 12. ದರಿಂತೆ (ಘಚಛ).

ಇತ್ತ ಭದ್ರಬಾಹು ಭಟ್ಟಾರರ್ ಚತುರ್ದಶಪೂರ್ವಧಾರಿಗಳುಂ [1]ಕಡೆ [ಯೊ] ರಿಸಿ[1]ಯುಮ್ಮನೆಯು ಶ್ರುತಕೇವಳಿಗಳವಧಿಜ್ಞಾನಿಗಳುಂ ಪಲವುಂ ಋದ್ಧಿಗಳಿಂ ಕೂಡಿ ದೊರಲ್ಲಾ ಋಷಿಸಮುದಾಯಮುಮಂ ಪ್ರತಿಪಾಳಿಸುತ್ತಂ ಗ್ರಾಮನಗರಖೇಡ ಖರ್ವಡಮಡಂಬಪಟ್ಟಣ ದ್ರೋಣಾಮುಖಂಗಳಂ ವಿಹಾರಿಸು[2]ತ್ತಿರ್ಪ್ಪನ್ನೆಗಂ[2] ಮತ್ತಿತ್ತ ಮಗಧೆಯೆಂಬುದು ನಾಡಲ್ಲಿ ಪಾಟಳೀಪುತ್ರಪೆಂಬುದು ಪೊೞಲದನಾಳ್ವೊಂ ನಂದನೆಂಬರಸಂ ಪಲಕಾಲಮರಸುಗೆಯ್ಯುತ್ತಿರೆ ಮತ್ತೊಂದು ದಿವಸಂ ಚಾಣಾಕ್ಯ ನೆಂಬ ಭಟ್ಟನಂ ನಂದಂ ಪರಿಭವಿಸಿ ನೂಂಕಿಯಟ್ಟಿ ಕಳೆಯಿಸಿದೊಡಾತನುಂ ಮುಳಿದಂ ನಂದನಂ ಕಿಡಿಸಿ ನಂದನ ರಾಜ್ಯಸ್ಥಾನದೊಳ್ ಪೆಱನೊರ್ವನಂ ಚಂದ್ರಗುಪ್ತ ನೆಂಬೊನಂ ನಿಱಿಸಿದೊಡಾತನುಂ ಪಲಕಾಲಮರಸುಗೆಯ್ದು ಕಟಿದೊಡಾತನ ಮಗಂ ಬಿಂದುಸಾಗರನೆಂಬೊನರಸುಗೆಯ್ದು ಕಟಿದ ಬೞಿಕ್ಕಾತನ ಮಗನಶೋಕನೆಂಬೊನರಸು ಗೆಯ್ಯುತ್ತಿರೆ ಆತನ ಮಗಂ ಪ್ರತಾಪದಿಂ ತೇಜದಿಂದಾದಿತ್ಯನೊಳೋರನ್ನನಪ್ಪೊಂ ಕುಣಾಳನೆಂಬೊನಂತವರ್ಗಳಿಪ್ಪವಿಷಯ ಕಾಮಭೋಗಂಗಳನನುಭವಿಸುತ್ತಂ ಕಾಲಂ ಸಲೆ ಮತ್ತೊಂದು ದಿವಸಮಶೋಕ ಮಹಾರಾಜಂ ಪರಚಕ್ರದ ಮೇಗೆತ್ತಿ ಪೋಗಿ [3]ಅಲ್ಲಿಂದಂ[3] ಮಂತ್ರಿ, ಪುರೋಹಿತ ತಳವಱಾದಿಗಳ್ಗಿಂತೆದೋಲೆಯನಟ್ಟಿದೊನುಪಾ ಧ್ಯಾಯಂಗೆ ಕಲಿಮೆಯ ಕೂೞುಂ ತುಪ್ಪಮುಂ [4]ತೋಪೆಯು[4]ಮನುಣಲ್ಕೊಟ್ಟು ಕುಮಾರನನೋದಿಸುಗೆಂದೋಲೆಯನಟ್ಟಿದೊಡೆ ವಾಚಕನೋಲೆಯರ್ಥಮನಱಿಯದೆ ವಿಪರೀತಮಾಗಿಂತೆಂದು [5]ಬಾಚಿಸಿದನ್[5]

[6]ಉಪಾಧ್ಯಾಯಂ ಶಾಲಿಂ ಕೂರಂಚಿ ಮಶಿಂ ಘೃತಂ ದತ್ವಾ ಕುಮಾರಮಂಧಾಪಯೇತ್ ಎಂದಿಂತು ವಿಪರೀತವಾಗಿ ಲೇಖಾರ್ಥಮಂ ಬಾಚಿಸಿದೊಡೆನಿಬರುಂ ಕೇಳ್ದು ಅಪ್ರತಿ ಹತಶಾಸನನಪ್ಪ ನೃಪತಿಯಾಜ್ಞೆಗೆ ಭಯಸ್ಥರ್ಕಳಾಗಿ ಉಪಾಧ್ಯಾಯಂಗೆ ಕಲಿಮೆಯ ಕೂೞುಂ ಮಸಿಯುಂ ತುಪ್ಪಮುಮನುಣಲ್ಕೊಟ್ಟು ಕುಣಾಳನೆಂಬ ಕುಮಾರನೆರಡುಂ ಕಣ್ಗಳುಮನೊಡೆದು ಕುರುಡಂ ಮಾಡಿದ ಕೆಲವು ದಿವಸದಿಂದರಸಂ ಪರಚಕ್ರಮಂ ಸಾಧಿಸಿ ಬಂದು ಮಗಂ ಕುರುಡಾದುದಂ ಕಂಡಾದಮಾನುಮುಬ್ಬೆಗಂಬಟ್ಟು ಸೈರಿಸ ಲಾಱದೆ ಕುಣಾಳನರಸಿ ಚಂದ್ರಾನನೆಯೆಂಬೊಳ್ಗೆ ಮಗಂ ಪುಟ್ಟಿದೊಡಾತಂಗೆ [7]ಸಂಪ್ರತಿ[7] ಚಂದ್ರಗುಪ್ತನೆಂದು ಪೆಸರನಿಟ್ಟು ರಾಜ್ಯಾಭಿಷೇಕಂಗೆಯ್ದು ಪಟ್ಟಂಗಟ್ಟಿ ಸಮಸ್ತ ರಾಜ್ಯ[8]ಭಾರಮೆಲ್ಲ[8]ಮಂ ನಿರೂಪಿಸಿ ಕುಣಾಳನುಮನೆಂದಂ ಮಗನೆ ಬೇಡು ನೀನೆಂದೊಡಾತನುಂ ಕಾಕಿಣೀ ರತ್ನಮಂ ಬೇಡಿದೊಡಾ ರತ್ನಂ ಚಕ್ರವರ್ತಿಗಲ್ಲ ದಿಲ್ಲೆಂದು ಮಗಂಗೆ ಮಱುಮಾತುಗೊಟ್ಟು ಸಂಸಾರವೈರಾಗ್ಯಮಾದಮಾನಂ ಪೆರ್ಚಿ ಸುವ್ರತರೆಂಬ ಭಟ್ಟಾರರ ಪಕ್ಕದೆ ಜಿನದೀಕ್ಷೆಯಂ ಕೈಕೊಂಡು ಪರತ್ರೆಯಂ ಸಾಧಿ ಸಿದೊಂ ಮತ್ತಿತ್ತ ಸಂಪ್ರತಿ ಚಂದ್ರಗುಪ್ತಮಹಾರಾಜನರಸುಗೆಯ್ಯುತ್ತಿರೆ ಸಮಾಧಿ

1. ಕಿಂಡುಮಾರುಷಿನ (ಖ). ಕದ (ಘಚಛ). ಕಡಮಾರಿಸಿ (ಕಗ). 2. ತ್ತುಂ ಕಾಲಂ ಸಲೆ (ಚ). 3. ಅಲ್ಲಿರ್ದು (ಘಚಛ). 4. ತೋಉಯು (ಕಗ). 5. ಬಾಜಿಸಿದನ್ (ಖಗಘ). ಬೆಸಸಿದರ್ (ಛ). 6. + ಶ್ಲೋಕ ॥ (ಚ). 7. ಪ್ರತಿ (ಘಚಛ) ಮುಂದೆಯೂ ಈ ಪ್ರತಿಗಳಲ್ಲಿ ಇದೇ ಪಾಠ. 8. (ಘಚಛ)ಗಳಲ್ಲಿಲ್ಲ.

ಗುಪ್ತರೆಂಬಾಚಾರ್ಯರವಧಿಜ್ಞಾನಿಗಳ್ ವಿಹಾರಿಸುತ್ತುಂ ಬರ್ಪರಾ ಪಾಟಳೀಪುತ್ರಕ್ಕೆ ವಂದು ಪೊಱವೊೞಲ ಬಹಿರುದ್ಯಾನದೊಳಿರ್ದೊರಂ ಸಂಪ್ರತಿ ಚಂದ್ರಗುಪ್ತಂ ಪೋಗಿ ವಂದಿಸಿ ಧರ್ಮಮಂ ಕೇಳ್ದು ತದನಂತರಂ ತನ್ನ ಭವಾಂತರಂಗಳಂ ಬೆಸ [1]ಗೊಂಡೊಡೆ[1] ಭಟ್ಟಾರ[2]ರ್ ಪೇೞಲ್ ತೊಡಗಿ[2]ದರ್

ಈ ಜಂಬೂದ್ವೀಪದ ಭರತಕ್ಷೇತ್ರದೊಳವಂತಿಯೆಂಬುದು ನಾಡಲ್ಲಿ ವೈದಿಕ ಮೆಂಬುದು ಪೊೞಲದನಾಳ್ವೊಂ ಜಯವರ್ಮನೆಂಬೊನರಸನಾತನ ಮಹಾದೇವಿ [3]ಧಾರಿಣಿ[3]ಯೆಂಬೊಳಂತವರ್ಗಳಿಷ್ಟ ವಿಷಯ ಕಾಮಭೋಗಂಗಳನನುಭವಿಸುತ್ತಿರೆ ಮತ್ತಾ ಪೊೞಲ ಸಾರೆ [4]ಪರಾಳ[4]ಕೂಟಮೆಂಬೂರೊಳ್ ದೇವಿಲನೆಂಬೊಂ ಶಾಕ[5]ಟಿ[5]ಕಂ ಪರದನಾತನ ಭಾರ್ಯೆ ಪೃಥ್ವಿಶ್ರೀಯೆಂಬೊಳಾಕೆಯ ಗರ್ಭದೊಳ್ ಪಾಪಕರ್ಮ ಜೀವಂ ನೆಲಸಿದೊ[6]ಡೇನುಂ[6] ನೆವಮಿಲ್ಲದೆ ಕಸವರಮೆಲ್ಲಂ ಕೆ[7]ಟ್ಟತ್ತು[7] ಮತ್ತೊಂದು ದಿವಸಂ ಪಲಂಬ[8]ರ್ ಶಾಕಟಿಕ[8]ಪರದರುಂಬೆರಸು ಬಂಡಿಗಳೊಳ್ ಪ[9]ೞ್ತಿ[9]ಯುಂ ಧಾನ್ಯಮುಂ ತೀವಿಕೊಂಡು ಪೊೞಲ್ಗೆ ಮಾಱಲೆಂದು ಪೋಪನ್ನೆಗಮೆಡೆಯೊಳಡವಿ ಯೊಳ್ [10]ಕಳ್ಳರ್[10] ಬಟ್ಟೆಗಟ್ಟಿ [11]ಮೇಲ್ವಾಯ್ದಿಱ[11]ದೊಡೆ ದೇವಿಲಂ ಮೊದಲಾ [12]ಗೊಡೆಯು[12] ಪಲಂಬರ್ ಪರದರ್ ಸತ್ತರುೞಿದರೆಲ್ಲಮೋಡಿ ಕೆಟ್ಟೊಡೆ ಬಂಡಮು ಮೆೞ್ತುಗಳುಂ ಮೊದಲಾಗೆಲ್ಲಮುಂ ಕಳ್ಳರ್ ಕೊಂಡುಪೋದರಾ ಪ್ರಸ್ತಾವದೊಳ್ ಪೃಥ್ವಿಶ್ರೀ ಬೆಸಲೆಯಾಗಿ[13] ನಂದಿಮಿತ್ರನೆಂದಾ ಕೂಸಿಂಗೆ ಪೆಸರನಿಟ್ಟು ಎರ[14]ಟ್ಮೂಱು ತಿಂಗಳಿಗೆ[14] ತಾಯ್ ಕೞಿದೊಡೆ [15]ಬಂದ ನಂಟರ್ ನಡಪೆ ಬಳೆದೊಡಾ ನಂಟರುಂ ಕೞಿದುಳ್ಳರೆಲ್ಲಂ ಸತ್ತು[15] ಕುಲಕ್ಷಯಮಾದೊಡೂರವರೆಲ್ಲಮಿಂತೆಂದರೀ ತರುವಲಿ ನಮ್ಮೂರೊಳಿರೆ ನಮಗೆ ಸಾವುಂ ಕೇಡುಮಪೋಘಮಕ್ಕುಮಿವನನಟ್ಟಿ[16] ಕಳೆ[17]ಯಿ[17] ಮೆಂದೂರಿಂದಸುಬರುಮಟ್ಟಿ ಕಳೆದೊಡಾತನ್ ಕೆಲದೂರ್ಗಳುಮಂ ನಾ[18]ಟ್ಟಿಳುಮಂ[18] ತೊೞಲ್ದು ಬೈಕಂದಿರಿದೆಲ್ಲಿಯಾನುಂ ಪೆತ್ತುಂ ಪೆಱದೆಯುಮಿಂತು ಬಾೞುತ್ತಂ ಪದಿನೈದು ಪದಿನಾಱು ವರುಷದ ಪ್ರಾಯದಾತನಾಗಿ ವೈದಿಶಮೆಂಬ ಪೊೞಲ್ಗೆ ವರ್ಪೊನ್

ಅನ್ನೆಗಂ ಕಾಷ್ಠಕೂಟನೆಂಬ ಬೆಸದವಂ ಪುಳ್ಳಿಯ ಪೊಱೆಯುಂ ಪೊತ್ತು [19]ಪೊೞಲ್ಗೆ[19] ವರ್ಪೊನಂ ಕಂಡಾತನೊಡನೆ ಗೊಟ್ಟಿಯೊಳ್ ಬಂದು ಪೊಱವೊೞ ಲೊಳಾರವೆಯೊಳ್ [20]ಕಾಷ್ಠಕೂಟಂ ಸೇದೆಗೆಟ್ಟು ಪುಳ್ಳಿಯ ಪೂಱೆಯನಿೞಿಪಿ ಪಟ್ಟಿರ್ದೊಡೆ ತಾನುಂ ಪಟ್ಟಿರಲೆಂದು ಬಗೆದು ತಲೆಯೆತ್ತಿದಲ್ಕಱಿಯೇನುಮಂ ಕಾಣದೆ ತರ್ಪೊನೆಣ್ಬರಿಂದಂ ತಳರ್ಚಲಾಱದಂತಪ್ಪ ಪಿರಿದೊಂದು ಸಿಲೆಯಂ ತಂದು ತಲೆಯೆತ್ತಿಟ್ಟು ಪಟ್ಟಿರ್ದುದಂ ಕಾಷ್ಠಕೂಟನಾತನ ಬಲಮಂ ಕಂಡು ತನ್ನ[20] ಮನೆ

1. ಳೆ (ಘಚಝ). 2. ರಿಂತೆಂ (ಚ). 3. ವಾರಣಿ (ಕಖ). 4. ಪಲಾಲ (ಘಚಝ). 5. ದಿಕಂ (ಕಖಗ). 6. ಡೊಂದುಂ (ಘಚಝ). 7. ಟ್ಟು (ಘಚಝ). 8. ರುಂ ಶಾಕದಿಕ (ಕಖಗ). 9. ತ್ತಿ (ಸ.ಕ). 10. ಬೇಡರುಂ (ಕಖಗ). 11. ಮೇಲ್ವಾಯ್ದೞಗಿ (ಕ), ವೇಲ್ವೊಯ್ದುಱಗಿ (ಗ), ಇರುಳು ಹಾದಿಯನಿಱ (ಘಝ), ಹಾದಿಯನಿರುಳು ತಾಗಿ (ಚ). 12. ಗಿ (ಕಖಗ). 13 + ಯಾ ಪೂರ್ಗೆವಂದು (ಘಚಝ). 14. ಡು ಮೂಱುತಿಂಗಳೊಳಗೆ (ಸ.ಕ). 15. ಬಡ ನಂಟರುಂ ಕಳಿದು (ಕಖಗ). 16. + ಕಟ್ಟಿ (ಘಚಝ). 17. ವ (ಘಚಝ). 18. ಡ್ಗಳುಮುಂ (ಖ), ಟ್ಗಳ್ಮ (ಗಘಚಝ). 19. ಪೋಗಲ್ಕೆ (ಕಖಗ). 20. ಪುಳ್ಳಿಯಂ ಮಾಱ (ಕಖಗ).

ಗೊಡಗೊಂಡು ಪೋಗಿಯೂಡಿ ನಿನಗೀ ಪೊೞಲೊಳಾರಾನುಂ ನಂಟರೊಳರೆಯೆಂದು ಬೆಸಗೊಂಡೊಡಾರುಮಿಲ್ಲೆಂದೊಡಂತಪ್ಪೊಡೆ [1]ನೀನೆನ್ನೊಡನಿರೆತ್ತಲುಂ ಪೋಗದಿರೆಂದು[1] ತಾಂಗಿ ತಾನುಮಾತನುಮಂತಿರ್ಪರುಂ [2]ದಿವಸಕ್ಕಂ[2] ಪುಳ್ಳಿಯುಂ ತರೆ ಪದಿಂಬರ್ ತರ್ಪ ಪೋಱಿಯನೊರ್ವನೆ ತರ್ಪನಂತು ಪಲವು ದಿವ[3]ಸಂ ಸಲೆ[3] ಕಾಷ್ಠಕೂಟಂ ತನ್ನ ಪೆಂಡತಿ [4]ಜಯು[4]ಘಂಟೆಯೆಂಬೊಳನಿಂತೆಂದು ಕಲ್ಪಿಸಿದನೀತಂಗೆ ನೀಂ ಬಸಿಱ್ತೀವೆ ಬಡ್ಡಿಸದಿರೆಣ್ಣೆಯುಂ ತಿಣ್ಣಮೆಱೆಯದಿರ್ ಮಿಾಯಲ್ ಬೇಡಿದೊಡಮೆಱೆಯದಿರೆಂದು [5]ಕಲ್ಪಿಸಿದೊ[5]ಡಾಕೆಯುಮಾ ಪಾಂಗಿನೊಳ್ [6]ದಿವಸಕ್ಕಂ[6] ಬಡ್ಡಿಸೆ ನಂದಿಮಿತ್ರನುಂ ಪಿರಿಯ[7] ಪುಳ್ಳಿಯ[7] ಪೋಱಿಗಳಂ ದಿವಸಕ್ಕಂ ತಂದು ಕುಡಲವಂ ಮಾಱಿ ಕಾಷ್ಠಕೂಟನೊಡೆಯೊನಾದೊನಿಂತು ದಿವಸಂಗಳ್ ಸಲೆ ಮತ್ತೊಂದು ದಿವಸಂ ಜಯುಘಂಟೆ ಕರುಣಿಸಿ ತಣಿಯೆ ಬಡ್ಡಿಸಿದೊಡುಂಡು ಮಱುದಿವಸಮಿರ್ವರುಂ ಪುಳ್ಳಿ[8]ಗೆ ಪೋದಲ್ಲಿ ನಂದಿಮಿತ್ರನೆಂದನಯ್ಯ [9]ಎನಗುಡಲಿಲ್ಲೇನುಮೊಂದು ದಮ್ಮಕ್ಕಾದೊಡಂ[9] ಸೀರೆಯುಂ [10]ಕೊಂಡೀಯಿ[10]ಮೆಂದೊಡಂತೆ ಗೆಯ್ವೆಮೆಂದು ಮಱುಮಾತುಗೊಟ್ಟಿರ್ವರುಂ [11]ಪುಳ್ಳಿಯ ಪೋಱಿಯಂ[11] ಮನೆಗೆ [12]ತ[12]ಂದ ಬೞಿಕ್ಕೆ [13]ಕಾಷ್ಠಕೂಟಂ[13] ಪೆಂಡತಿಯನೆಂದನೀತಂಗೆ ನೀಂ ಬಸಿಱ್ತೀವೆಯುಣಲಿಕ್ಕಿದಾ ಎಂದೊಡೆ ಕರುಣಿಸಿ ಪರ್ವಮೆಂದು ತಣಿಯೆಯುಣಲಿಕ್ಕಿದೆನೆಂದೊಡೆ ಮುಳಿದು ಸಾಯೆಬಡಿದು ಮನೆಯಿಂ ಪೆಂಡತಿಯನಟ್ಟಿ ಕಳೆದೊಡೆ ನಂದಿಮಿತ್ರಂ ಪೋಗಿ ಜಯುಘಂಟೆಯಂ ಬೆಸಗೊಂಡನ್ ನಿನ್ನನೇಕೆ ಕಾಷ್ಠಕೂಟಂ ಬಡಿದ[14]ನಬ್ಬಾ ಎಂದು ಬೆಸಗೊಂಡೊಡೆ[14] ನಿನಗೆ ನಿನ್ನೆ ತಣಿಯೆಯುಣಲಿಕ್ಕಿದೆನೆಂದು ಮುಳಿದು ಬಡಿದಟ್ಟಿಕಳೆದೊನೆಂದೊಡಿಂತಪ್ಪ ಪಂಚ ಮಹಾಪಾತಕನ ಮನೆಯೊಳ್ ಮಾರಿಯಿರ್ಕೆಂದು ಕಾಷ್ಠಕೂಟನಂ ಬಿಸುಟು ಪೋಗಿ ಬೇಱೆ ತನಗೆ ಪುಳ್ಳಿಗಳಂ ದಿವಸಕ್ಕಂ ತಂದು ಮಾಱಿಲ್ ತಗುಳ್ದೊಡೆಂಟು ದಮ್ಮದ ಪುಳ್ಳಿಯಂ ತಂದೊಡಮೊಂದು [15]ಪಣ[15]ಮನಪ್ಪೊಡಂ ಪೆಱದೆ ಬಸಿರ್ಗಟ್ಟಿ ಮಂಬಲಿಗಮೆಣ್ಣೆಗಂ ಕೞಿಗಂ ಕೊಟ್ಟು ಪೋಕುಮಿಂತು ಬಾೞುತ್ತಮಿರೆ

ಮತ್ತೊಂದು ದಿವಸಂ ಪುಳ್ಳಿಗೆ ಪೋಗಿ ಪುಳ್ಳಿ[16]ಯ ಪೋಱಿಯಂ[16] ಪೊ[17]ತ್ತು[17] ಬರ್ಪೊನನ್ನೆಗಮೆಡೆಯೊಳ್ ಶಿವಗುಪ್ತಾಚಾರ್ಯರಷ್ಟಾಂಗ ನಿಮಿತ್ತಂಗಳಂ ಬಲ್ಲೊರಡವಿಗೆ ವೋಗಿ ಸಿದ್ಧಾಂತಮಂ ಪರಿವಿಡಿಗೆಯ್ದಂದಿನ ದಿವಸಮಲ್ಲಿಯೆ ದೇವರಂ ವಂದಿಸಿ ಪಕ್ಷೋಪವಾಸದ ಪಾರಣೆಗೆಂದು ಪೊೞಲ್ಗೆ ಚರಿಗೆವುಗುತಂ[18]ದೊಡೆ[18] ನಂದಿಮಿತ್ರಂ ಕಂಡಾಶ್ಚರ್ಯಭೂತನಾಗಿ ನೀಡುಂ ನೋಡಿಯಿವರೆಲ್ಲಿಗೆ ಪೋದಪ್ಪರೋ

---

1. ನೀನೆತ್ತಲುಂ ಪೋಗಲ್ವೇಡೆನ್ನೊಡವಿರೆಂದು (ಘಚಛ). 2. ನಿಚ್ಚ ನಿಚ್ಚಂ (ಘಚಛ) 3. ಮಂತರ (ಕಖಗ). 4. ಯಮ (ಘಚಛ); ಮುಂದಕ್ಕೂ ಇದೇ ಈ ಪ್ರತಿಗಳ ಪಾಠ. 5. ಪೇಳ್ದೊ (ಘಚ). 6. (ಘಚಛ)ಗಳಲ್ಲಿಲ್ಲ. 7. + ವಪ್ಪ (ಘಚಛ). 8. ಯತರವೋ (ಘಚಛ). 9. ಎಮಗುಡಲಿಲ್ಲೇನುಮೊಂದು ದಮ್ಮಕ್ಕಪ್ಪೊಡಂ (ಘ). ಎನಗೊಂದು (ಚ). ಎಮಗುಡಲೊಂದು ದಮ್ಮಕ್ಕಪ್ಪೊಡಂ (ಛ). 10. ಕುಡಿ (ಕಗ). 11. (ಘಚಛ)ಗಳಲ್ಲಿಲ್ಲ. 12. ವಂ (ಘಚಛ). 13. (ಕಖಗ)ಗಳಲ್ಲಿಲ್ಲ. 14. ಟ್ಟಿ ಕಳೆದನೆಂದೊಡೆ (ಘಚಛ). 15. ದಮ್ಮ (ಘಚಛ). 16. ಮಂತಲೆ ಪೊಱೆ (ಘಚಛ). 17. ಳ್ತು (ಕಖಗ). 18. ದರಂ (ಘಚಛ).

ಎಂದು ಬೞಿವೞಿಯನೆ ಬಂದು ಪೊಱವೊೞಲ ಬಸದಿಯ ಪ್ರಾಕಾರದೊಳಗೆ ಪುಳ್ಳಿಯ ಪೊೞ್ತ[1]ಯನಿಕ್ಕಿ ನೋೞ್ಪನನ್ನೆಗಮಿವರನೆಂದವರಂ ಬೞಿವೞಿಯನೆ ಬರ್ಪನ್ನೆಗಮಾ[1] ದಿವಸಮರಸಂ ಶಿವಗುಪ್ತ ಭಟ್ಟಾರಕರ್ಗ್ಗಾರಂ ಪಾರಣೆಯಂ ಮಾಡುವೆಂ ಪೆಱರಾರುಂ ನಿಱಿಸಲ್ ಸಲ್ಲೆಂದು ಪೊೞಲೊಳಗೆಲ್ಲಂ [2]ಗೋಸನೆ[2]ಯಂ [3]ತೊೞಲ್ಚಿ[3]ದೊಡಂಜಿಯಾರುಂ ನಿಱಿಸುವರಿಲ್ಲದೆ ಭಟಾರರುಂ ಕಿಱುಮನೆ ಪೆರ್ಮನೆಯೆನ್ನ[4]ದುಣಲ್ವೆಕ್ಕ[4] ಮನೆಗಳಂ ಚರಿಗೆವುಗುತ್ತಂ ಬರ್ಪೊರರಮನೆಯಂ ಪೊಕ್ಕಾಗಳ್ ಕಂಡರಸನುಂ ಮಹಾದೇವಿಯುಂ [5]ಸುವರ್ಣ[5]ಪೂರ್ಣ ಕಳಸಮುಂ ಕನ್ನಡಿಯುಂ ಪೂವುಮಕ್ಕಿಯುಂ ಮಾದುಫಲಮುಂ ಮೊದಲಾ[6]ಗೊಡೆಯನೇಕಾರ್ಘನೆಯಿಂದಿದಿರಂ[6] ಬಂದು ನಿಱಿಸಿ ಬಲಗೊಂಡುಬಂದು ಭಟಾರರ ಕಾ[7]ಲಂ[7] ಮಹಾದೇವಿ ನೀರ್ವೊಯ್ಯೆ[8] ಅರಸಂ ತಾನೆ [9]ಪ್ರಕ್ಷಾಳಿಸಿ[9] ಬೞಿಕ್ಕೊಡವೋದ ಬೋೞದಲೆಯ ದೇಸಿಗನ ಕಾಲಂ ಬ್ರಹ್ಮಯ್ಯಾ ನೀಡಿಂ ನಿಮ್ಮ ಕಾಲಂ [10]ತೊಳೆ[10]ವೆಮೆಂದು ಮಹಾದೇವಿ ತಾನೆ ಕಾಲಂ ಕರ್ಚಿ ಭಟ್ಟಾರಕರ್ಗೆ[11]ಱಿಗಿ ಕುಳ್ಳಿರಿಸಿ[11] ಪಿರಿಯ ಪೊನ್ನ ತಳಿಗೆಯುಮುಚ್ಚ್ವಮಪ್ಪಡ್ಡಣಿಗೆಯುಮನಿಟ್ಟು ಬ್ರಹ್ಮಚಾರಿಗಂ ಪೊನ್ನ ತಳಿಗೆಯುಮಡ್ಡಣಿಗೆಯುಮನಿಟ್ಟು ಭಟ್ಟಾರಕರ್ಗರಸಂ ತಾನೆ ಬಡ್ಡಿಸಲ್ವಗು[12]ಳ್ದ ಬೞಿಯಂ[12] ರಾಜಾನ್ನದ ಕೂೞುಂ ಪೆಸಱತೊವೆಯುಂ ಬೆಣ್ಣೆಗಾಸಿದಾಮೋದ ಸುಗಂಧ ಪರಿಮಳಂ [13]ನಾರ್ಪ[13] ತುಪ್ಪಮುಂ ಪಲವುಂ ತೆಱದ [14]ಬಾಡು[14]ಗಳುಂ ತುಯ್ಯಲುಂ ಪೂರಿಗೆಯಿಡ್ಡಲಿಗೆ[15] [15]ಸೋದಿಗೆ[16] ಲಾವಣಿಗೆ ಘೃತಪೂರಂ ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂ[17]ಗಳುಮಂ[17] ನಾನಾಪ್ರಕಾರದ ಪಾನಂ[17]ಗಳುಮಂ[17] ಭಟ್ಟಾರರ್ಗೆ ಬಡ್ಡಿಸಿದಂತೆ ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ ದೇಸಿಗಂ ಕಂಡು ಬೆಱಗಾಗಿ ಪುಟ್ಟಿದಂದಿಂ ತೊಟ್ಟಿಂತಪ್ಪುಣಿಸಂ ಕನಸಿನೊಳಪ್ಪೊಡಂ ಕಂಡಱಿಯದ [18]ಮಗಂ[18] ಚೋದ್ಯಂಬಟ್ಟೆಂದಪ್ಪೊಡಂ ತಣಿಯೆಯುಣ[19]ಲ್ವೆಱದ[19] ದೇಸಿಗಂ ನಾನಾಪ್ರಕಾರದುಣಿಸಂ ಸುಗಂಧಮಪ್ಪ ದಿವ್ಯಾಹಾರಮ[20]ನಾಕಂಠ[20]ಪ್ರಮಾಣಂಬರೆಗಂ ತಣಿಯೆಯುಂಡು ಬೞಿಕ್ಕೆ ಕರ್ಪೂರ ಸಮ್ಮಿಶ್ರಮಪ್ಪ [21]ನೆಲವತ್ತಿ[21]ಯಡಕೆಯ ಪೋೞ್ಗಳುಮಂ [22]ಕೈಶ್ರೀವಿಡೆಲೆಯುಮಂ[22] ಬ್ರಹ್ಮಯ್ಯಂಗೆ ಕೊಟ್ಟು ಭಟಾರ[23]ರ್ ಚರಿಗೆ ಮಾಡಿದ ಬೞಿಕ್ಕರಸನುಮಂ ಮಹಾದೇವಿಯುಮಂ ಕರ್ಮಕ್ಷಯಮುಮಕ್ಷಯದಾನಮುಮಕ್ಕೆಂದು ಪರಸಿ ಪೊಱಮಟ್ಟು ಬಸದಿಗೆ ಪೋಪಾಗಳ್ ಭಟ್ಟಾರರ ಬೞಿವೞಿಯನೆ

---

1. ಯಂ ಬಬ್ಬುವರಂ ನೋೞ್ಪೆನೆಂದವರ ಬೞಿವೞಿಯನೆ ಬರ್ಪ್ಪೊನನ್ನೆಗಮಾ (ಘಚಛ). ಘೋಷಣೆ (ಕಗ). 2. ತಗುಳ್ಚಿ (ಘಚಛ). 4. ದೆಯೋಗ್ಯಮಪ್ಪ (ಕಖಗ). 5. ಪೊನ್ನ (ಘಚಛ). 6. ಗರ್ಘನೆಯನಿದಿರಂ ಕೊಂಡು (ಘಚಛ). 7. ಲಮೇಲೆ (ಘಚಛ). 8. ರನೆಱೆದೊಡೆ (ಘಚಛ). 9. ಕರ್ಚಿದ (ಘಚಛ). 10. ಕರ್ಚುವೆ (ಘಛ), ಕರ್ಚುವ (ಚ). 11. (ಘಚಛ) ಗಳಲ್ಲಿಲ್ಲ. 12. ಳ್ದಂಪಳಿಯ (ಘಚಛ). 13. ತೋರ್ಪ (ಛ). 14. ಶಾಕಂ (ಘಛ). 15. + ಯಶೋವರ್ತಿಯುಂ ಆವಣಿಗೆಯುಂ (ಘಚಛ). 16. ಸೊಂಡಿಗೆ (ಗ). ಪೋಳಿಗೆಯುಂ (ಘಚಛ). 17. ಗಳ್ಮಂ (ಗಘಚಛ). 18. ನಂ (ಘಛ), ವಂ (ಚ). 19. ಲ್ಪಡೆಯದ (ಕಖಗ). 20. ಕಂಡೋಪ್ಪ (ಘಚಛ). 21. ಮೊಲುವೆತ್ತ (ಚ). 22. ಕೈಯಂ ಶೀವಿ (ಕಖಗ). 23. ರುಂಡಿಂ (ಘಚಛ).

ಪೋದಂ ಭಟ್ಟಾರರ್ ಬಸದಿಯಂ ಬಲಗೊಂಡು ಕಾಲಂ ಕರ್ಚೊಳಗಂ ಪೊಕ್ಕೀರ್ಯಾ [1]ಪತ್ತಿ[1]ಯಂ ಬಿಡಿಸಿ ಗೋಚಾರನಿಯಮಂಗೆಯ್ವುದಂ ನಂದಿಮಿತ್ರಂ ನೋಡುತ್ತಿರ್ದ್ದಿಂತೆಂದು ಮನದೊಳ್ ಬಗೆದಪ್ಪನಿಂತಪ್ಪ ರೂಪಮಂ ಕೈಕೊಂಡೊಡೆ[2] ಲೋಕದೊಳ್ ಗೌರವಮುಂ ಪೂಜೆಯುಮುಂ ಪೆಱಲಕ್ಕುಮೊಂದುಂ ಕ್ಲೇಶಮಿಲ್ಲದೆ ದಿವ್ಯಾಹಾರಮನೆಲ್ಲಾ ಕಾಲಮುಣಲ್ಪೆಱಲಕ್ಕುಮೆಂದು ಬಗೆದು ಭಟ್ಟಾರರ್ ನಿಯಮಂಗೆಯ್ದು ಸಮೆದಿರ್ದ ಬೞಿಕ್ಕೆ ಬಂದು ಮುಂದೆ ನಿಂದು ಕೈಗಳಂ ಮುಗಿದಿಂತೆಂದನ್ ಭಟಾರಾ ಎನ್ನಂ ನಿಮ್ಮಂತೆ ಮಾಡಿಮೆಂದೊಡೆ ಭಟಾರರಾತನಂ ನೋಡಿಯುಲ್ಲಾಯುಷ್ಯನುಮಾಸನ್ನ ಭವ್ಯನಪ್ಪುದನಱಿದೊಳ್ಳಿತಪ್ಪ ಮುಹೂರ್ತದೊಳ್ ತಪಂಬಡಿಸಿದೊಡಾತನುಂ ತಪಂಬಟ್ಟು ದೀಕ್ಷೋಪವಾಸಂ ಗೆಯ್ದಿರ್ದನ್

ಅನ್ನೆಗಮರಸನುಮರಸಿಯುಂ ಭಟ್ಟಾರರೊಡವಂದ ಬ್ರಹ್ಮಚಾರಿ ತಪಂಬಟ್ಟನೆಂಬುದಂ ಕೇಳ್ದೊಸೆದು ಮುನ್ನೆಮ್ಮ ಮನೆಯೊಳುಂಡು ತಪಂಬಟ್ಟನಿಂ ನಾಳೆ ನಮ್ಮ ಮನೆಯೊಳ್ ಪಾ[3]ನಿ[3]ಗಟ್ಟುವಮೆಂದು ಬಗೆದಿರ್ದು ಮಱುದಿವಸಂ ಸಾಮಂತ ಮಹಾಸಾಮಂತರ್ಕಳುಂ ರಾಜ್ಯಚಿಹ್ನಂಗಳುಂ ಬೆರಸು ಮಹಾವಿಭೂತಿಯಿಂದರಸಂ ಪೊಱಮಡಿನ ಬೇಗಂ ಬಸದಿಗೆ ವಂದು ವಾಹನದಿಂದಿೞಿದು ಬಲಗೊಂಡು ಬಂದು ಗಂಧ ಪುಷ್ಪ ದೀಪ ಧೂಪಾಕ್ಷತೆಗಳಿಂ ದೇವರನರ್ಚಿಸಿ ಕ್ರಿಯಾಪೂರ್ವಕಂ[4] ವಂದಿಸಿ ಭಟ್ಟಾರರ್ಗೆ ಗುರುಭಕ್ತಿಗೆಯ್ದು ಪಂಚಮುಷ್ಟಿಯಿಂ ವಂದಿಸಿ*ಯುಂತೆ* ಕಿ[5]ತ್ತ[5]ಯ್ಯಂಗಳುಮನಾ ಮಾರ್ಗದಿಂ ವಂದಿಸಿ ಭಟಾರರಲ್ಲಿಗೆ ವಂದು ಕುಳ್ಳಿರ್ದು ಧರ್ಮಮಂ ಕೇಳ್ದು ತದನಂತರಮಿರ್ದು ಭಟಾರಾ ಬಿನ್ನಪಂ ಕಿತ್ತಯ್ಯಂಗಳನಿಂದೆಮಗೆ ಕಾರುಣ್ಯಂಗೆಯ್ವುದಾವು ನಿಱಿಸಿ ಪಾನಿಗಟ್ಟಿ ಪುಣ್ಯಮಂ ನೆರಪಿಕೊಳ್ವಮೆಂದೊಡಂತೆ ಗೆಯ್ಯಿಮೆಂದಾ ನುಡಿಯಿಂ ಕಿ[5]ತ್ತ[5]ಯ್ಯಂಗಳ್ ಕೇಳ್ದು ಸಾಮಂತ ಮಹಾಸಾಮಂತರ್ಗೆ ಸ್ವಾಮಿಯುಪ್ಪೀ ಪೃಥ್ವೀಶ್ವರಂ ಬಂದೆನ್ನುಮನರ್ಚಿಸಿ ಬಂದಿಸಿ ನೀಚವೃತ್ತಿಯಿಂ ಕಿಂಕುರ್ವಾಣಂಗೆಯ್ದಪ್ಪನಹೋ ಆಶ್ಚರ್ಯಮಿದಾ ತಪದ ಧರ್ಮದ ಫಲಮಿಲ್ಲಿಯೆ ಪ್ರತ್ಯಕ್ಷಮಾಯ್ತಿನ್ನುಂ ಮುಂದೆ ಪಿರಿದಾಗದೆ ಮಾಣದೆಂದು ತನ್ನೊಳೆ ತಱಿಸಂದು ಮತ್ತಮಾ ದಿವಸಮುಪವಾಸಮಂ ಕೈಕೊಂಡರ್

ಇತ್ತಲ್ ಜಯವರ್ಮ ಮಹಾರಾಜಂ ಭಟಾರರುಮಂ ಕಿತ್ತಯ್ಯಂಗಳುಮಂ ಬಂದಿಸಿದುದಂ ಭಟಾರರಱಿಯದೆ ಕಿತ್ತಯ್ಯಂಗಳ್ಗೆ ಏಷಣಾಸಮಿತಿ ಮೊದಲಾಗೊಡೆಯ ಬ್ರತಂಗಳಂ ಮತ್ತಂ ಸಂಕ್ಷೇಪದಿಂ ಪೇೞ್ದು ಕಿತ್ತಯ್ಯಂಗಳಿರಾ ನಿಮಗೆ ಶ್ರಮಮಾದಪ್ಪುದು ದೇವರಂ ಬಂದಿಸಿ ಚರಿಗೆಗೆ ಪೊಱಮಡುವುದೆನೆ ಮತ್ತಂ ತಾವು ಕೊಂಡುಪವಾಸಮಂ ಗುರುಗಳ್ಗೆ ಪ್ರಕಟಿಸಿದನರಸಂ*ಜಯವರ್ಮ ಮಹಾರಾಜಂ

---

1. ಪತಿ (ಕಖಗ). ಪಥ (ಚ). ಪತಿ (ಚ). 2. + ದೇವ (ಕಖಗ). 3. ನೆ (ಖ). 4. + ದೇವರ (ಕಖಗ). 5. ಳ್ತ (ಕಗ). ಎಲ್ಲೆಡೆಯಲ್ಲೂ ಹೀಗೆಯೇ. *-* ಭಟಾರಾ ಇಂದೆಮ್ಮ (ಗ) ಮನೆಗೆ ಚರಿಗೆ ವರಲ್ವೇಳ್ಕುಂ ಕಿತ್ತಯ್ಯಂ (ಚಿಕ್ಕಯ್ಯಂ)ಗಳನೊಡಗೊಂಡು ಬಂದು ಪಕ್ಕಮಿರ್ದು ಪಾನಿಗಟ್ಟಿಸುವುದೆಂದಡೆ ಭಟಾರರೆಂದರಾವುಂ ತಪಂಬಡಿಸಲ್ವೇಡ ಕಿತ್ತಯ್ಯಂಗಳಂ ನೀಮೊಡಂಬಡೆದೊಡೊಡಗೊಂಡು ಪೋಪುದು (ಪೋಗಿಮೆಂ) ನಾಮುಂ ನೋಂತಿರ್ದುದಾಪ್ಪವಲ್ಲೆಂದೊಡರಸಂ

ಕೇಳ್ದು ಬಿನ್ನನೆ ಮೂಗಂ [1]ಮಾ[1]ಡಿ ಭಟಾರರುಮಂ ಕಿತ್ತಯ್ಯಂಗಳುಮಂ ಬಂದಿಸಿ ತನ್ನರಮನೆಗೆ ಪೋಗಿ ಮಹಾದೇವಿಗೆಂದನಿಂದೆನಗೆ ರಿಸಿಯ[2]ರಂ ನಿಱಿಸಿ[2] ಪುಣ್ಯಂಗೊಳ್ವ ಭಾಗ್ಯಮಿಲ್ಲೆಂದೊಡೆ ಮಹಾದೇವಿಯಂತಪ್ಪೊಡೆ ನಾಳೆಯಾಂ ನಿಱಿಸಿ ಪುಣ್ಯಮಂ ಕೈಕೊಳ್ವೆನೆಂದೊಡರಸನೆಂದೊಂ ನಿನಗಮೆನಗಂ ಸಮಭಾ[3]ಗಂ ಪುಣ್ಯಮೆಂದುಸಿರೆ[3] ನೀಮೇಕೆನಗಿಂದು ಸಮಭಾಗಮೀಯದಾ[4]ದಿರೀ[4]ಪುಣ್ಯಮನಾನಿಂದು ನಿಱಿಸಿ [5]ಕೈಕೊಳ್ವೆಂ[5] ನೀಂ ನಾಳೆ ನಿಱಿ[6]ಸೆಂದು[6] ನುಡಿದು ಬಸದಿಗೆ ಪೋಗಿ[7]ರೆ[7]ನ್ನ ಭಾಗ್ಯಮೇಂ ಕಿಡಿಸುಗುಮೆ ನಾಳೆ[8]ಯುಂ[8] ನಿಱಿಸಿ[9]ಯಾವಗಂ[9] ಪುಣ್ಯಮಂ ಕೈಕೊಳ್ವೆನೆಂ[10]ದರಸಂಗೆ[10] ಮಱುಮಾತುಗೊಟ್ಟು ಮಱುದಿವಸಂ ಧಾರಿಣಿ ಮಹಾದೇವಿಯುಯ್ನೂರ್ವರರಸಿಯರ್ಕಳುಂ ಪೆಂಡವಾಸದಗ್ಗಳದ ಸೂಳೆಯರ್ಕಳುಂ [11]ಬೆರಸು ಪೇಸರಿಗೞ್ತೆಗಳುಂ ಪಿಡಿಗಳುಂ ಸಿಬಿಗೆಗಳುಮನೇಱಿ ಸೀಗುರಿಗಳುಮಂ ಕೊಡೆಗಳುಮಂ[11] [12]ಪಿಡಿಯಿಸಿ[12] ಎಕ್ಕ ಮದ್ದಳೆಯ ಕೊಟಿಲ ಝಂಕಾರದ ಪಱೆಗಳ್ ಮುಂದೆ ಬಾಜಿಸುತ್ತಂ ಬ[13]ೞಿಯಂ[13] ಕಾಪಿನವರ್ ವರೆ ಮುಂದಣ ಮಾನಸರಂ ಪಡಿಯಱರ್ ತೊಲಗಿಸುತ್ತಂ [14]ಬರೆ[14] ವಿದ್ಯಾಧರಿಯರ್ಕಳ್ ಬರ್ಪಂತೆ ಬಂದು ಬಾಗಿಲ್ಮಾಡದ [15]ಪ್ರೊ[15]ಱಗಣ ದೆಸೆಯೊಳ್ ತಂತಮ್ಮ ವಾಹನಂಗಳಿಂದಿೞಿದು ಪೊಕ್ಕು ಬಸದಿಯಂ ಬಲಗೊಂಡು ಬಂದೊಳಗಂ ಪೊಕ್ಕು ದರ್ಶನ ವಂದನೆಗಳುಮಂ ಪೇೞ್ದೀಯರ್[16]ಪತ್ತಿ[16]ಯುಂ ಬಿಡಿಸಿ †ಗಂಧ ಪುಷ್ಪ ದೀಪ ಧೂಪಾ[17]ಕ್ಷತಂಗಳಿಂ ದೇವರನರ್ಚಿಸಿ[17] ಕ್ರಿಯಾ[18]ಪೂರ್ವಕಂ[18] ದೇವರಂ† ಬಂದಿಸಿ ಶಿವಗುಪ್ತಭಟ್ಟಾರರುಮನರ್ಚಿಸಿ ಗುರುಭಕ್ತಿಗೆಯ್ದು ಬಂದಿಸಿ ಶ್ರಾವಕ ಬ್ರತಂಗಳನೇೞಿಸಿಕೊಂಡು ಬಱಿಕಿಂತೆಂದಳ್ ಭಟ್ಟಾರಾ ಇಂದೆಮ್ಮಲ್ಲಿಗೆ ನೀಮುಂ ಕಿ[19]ತ್ತ[19]ಯ್ಯಂಗಳನೊಡಗೊಂಡು ಬಂದು ಪಕ್ಕದಿರ್ದು

---

ಕಿತ್ತಯ್ಯಂಗಳಲ್ಲಿಗೆ ಪೋಗಿ ಕಾಲಂ ಪಿಡಿಸಿ ಬಂದಿಸಿ ಇಂತೆಂದಂ ಕಿತ್ತಯ್ಯಾ ನೀಮೆಮ್ಮ ಮನೆಯೊಳ್ ಪಾರಿಸಲ್ವೇಳ್ಕುಮಿನಿತೊಂದನೆಮಗೆ ನೀವು ದಯೆಗೆಯ್ಯಲ್ವೇಳ್ಕುಮೆಂದೊಡೆ ಕಿತ್ತಯ್ಯಂಗಳನರಸಂ ಸಾಮಂತ ಮಹಾಸಾಮಂತರ್ಕಳಿಂ ಪರಿವೇಷ್ಟಿತನಾಗಿ ಕಾಲಂ ಪಿಡಿದು ಪೊಡೆವಟ್ಟಿರ್ದೊನಂ ಕಂಡಹೋ ತಪದ ಮಾಹಾತ್ಮ್ಯಮಿಂತುಟಾನೆಲ್ಲಿ ಪುಟ್ಟಿದನೆಲ್ಲಿ ಬಳೆದೆಂ ದೇಸಿಗನೆಂ ಬೈಕಂಗುಳಿಎನಿವಿರಿದು ಸಿರಿಯೆನಗೆಂತಾದುದಿಂತಪ್ಪ ಪರಮೇಶ್ವರಂ ಪೃಥ್ವೀಪತಿಯೆನ್ನ ಕಾಲ್ಗೆಱಗಿ ಪೊಡೆವಟ್ಟುಣಲ್ಬರವೇಳ್ಕುಮೆಂದು ಕಿಂಕುರುವಾಣುಗೆಯ್ದಪ್ಪನೀ ತಪದ ಫಲಮಿಂತುಟೆಂದು ಮಾಣ್ದೆನಪ್ಪೊಡೆ ಪಿರಿದುಂ ಫಲಮುಂಟೆಂದು ಮನದೊಳೆ ಬಗೆದಿಂತೆಂದರಿಂದೆಮಗುಣಲ್ ಮನಮಿಲ್ಲುಪವಾಸಂಗೆಯ್ದಪ್ಪೆವೆಂದು ಪರಿಚ್ಛೇದಿಸಿ ನುಡಿದೊಡೆ (ಘಚಛ). 'ಕಿತ್ತಯ್ಯ' ಎಂಬುದಕ್ಕೆ (ಛ)ದಲ್ಲಿ 'ಚಿಕ್ಕಯ್ಯ' ಎಂದು ಎಲ್ಲೆಡೆಯಲ್ಲೂ ಪಾಠವಿದೆ.

1. ಬಾ (ಘಚಛ). 2. ರಿಗೆ ಮಾಡಿ (ಘಚ). ರಿಗೆ ಊಡಿ (ಚ). 3. ಗ ಮೆಂದೊಡರಸಿ (ಘಚಛ). 4. ವಗಂ (ಕಖಗ), 5. ಪಡೆವೆಂ (ಘಚಛ). 6. ಸಿಮೆಂ (ಘಚಛ). 7. ಮೆ (ಘಚಛ). 8. ಯಾಂ (ಘಚ), ನಾಂ (ಛ). 9. (ಘಚಛ)ಗಳಲ್ಲಿಲ್ಲ. 10. ದುಭೂಪಾಳಂಗೆ (ಘಚಛ). 11. ಸಡೆಯ ಕೞ್ತೆಗಳ್ಮನೇಱಿ ಕೊಡೆ ಸೀಗುರಿಗಳ್ಮಂ ಪಿಡಿಯಿಸಿ (ಘ). ನಿಡಿಯ ಕೞ್ತೆಗಳ್ಮನೇಱಿ ಕೊಡೆ ಸೀಗುರಿಗಳ್ಮಂ ಪಿಡಿಯಿಸಿ (ಚ), ಸಡೆಗತ್ತೆಗಳ್ಮನೇಱಿ ಕೊಡೆ ಸೀಗುರಿಸಳ್ಮಂ ಪಿಡಿಯಿಸಿ (ಛ). 12. (ಕಖಗ)ಗಳಲ್ಲಿಲ್ಲ. 13. ಳಸಿಯುಂ (ಕಖಗ). 14. (ಕಖಗ)ಗಳಲ್ಲಿಲ್ಲ. 15. ಪ (ಕಖಗ). 16. ಪತಿ (ಖ), ಪಥೆ (ಗ), ಪತಿ (ಘಚ), ಗತಿ (ಚ). †-† ದೇವರನಷ್ಟವಿಧಾರ್ಚನೆಯಿಂದರ್ಚಿಸಿ ಕ್ರಿಯಾಸಹಿತಂ (ಚ). 17. ದಿಗಳಿನರ್ಚಿಸಿ (ಘಛ). 18. ಸಹಿತಂ (ಘಚ). 19. ಟ್ಟ (ಕಗಛ).

ಪಾ[1]ನಿಗಟ್ಟಿ ಮಾರ್ಗಮಂ ತೋಱಿ ಮಗುೞಿ ಬಿಜಯಂಗೆಯ್ಯೆವೇನೆ[1] ಕಿ[3]ತ್ತ[2]ಯ್ಯಂಗಳೀಂ ನೀಮೆ ಬೆಸಗೊಳ್ಳಿಮವರೊಂಬಟ್ಟೊಡಾಮೊಡಗೊಂಡು ಬರ್ಪೆಮೆಂದೊಡೆ ಧಾರಿಣೆ ಮಹಾದೇವಿ ಕಿತ್ತ್ರಯ್ಯಂಗಳಲ್ಲಿಗೆ ಪೋಗಿ ಕಾಲಂ ಪಿಡಿದು ವಂದಿಸಿ *ಇಂತೆಂದಳ್ ಕಿತ್ತ್ರಯ್ಯಾ ನಿಮಗಿಂದು ನಾ[3]ಮ್ ಪಾನಿಗಟ್ಟುವೆಮೆಮ್ಮ ಮನೆಗೆಟ್ತಿರವೇೞ್ಪುದೆಂದು ಕಾಲಂ ಪಿಡಿದು ಪೊಡೆವಟ್ಟಿರ್ದಾಗಳರಸಿಯಂ ಮೊಗಮಂ ನೋಡಿ ನೆಱೆಯೆ ತೊಟ್ಟುಟ್ಟು ಪಸದನಂಗೊಂಡಿರ್ದ ದೇವಗಣಿಕೆಯರನೆ ಪೋಲ್ವಯ್ನೂರ್ವರರಸಿಯರ್ಕಳಿಂದಂ ಸೂಳೆಯರ್ಕಳಿಂದಂ ಪರಿವೇಷ್ಟಿತೆಯಾಗಿರ್ದ* ಶಚೀಮಹಾದೇವಿಯೆನೆ ಪೋಲ್ವಂ ಧಾರಿಣೆ ಮಹಾದೇವಿಯೆನ್ನ ಕಾಲ್ಗೆಱಗಿ ಪೊಡೆವಟ್ಟಿರ್ದಳಿದೆಲ್ಲಮಿಾ ತಪದ ಫಲಮಿನ್ನುಂ ಮುಂದೆ ಪಿರಿದುಂಟೆಂದು ಬಗೆದರಸಿಗೆಂದರಬ್ಬಾ ಇಂದೆಮಗುಣಲ್ಕೆ ಬಗೆಯಿಲ್ಲುಪವಾಸಂಗೆಯ್ದಪ್ಪೆಮೆಂದು ಪರಿಚ್ಛೇಧಿಸಿ ನುಡಿದೊಡೆ ಬಿನ್ನನೆ ಮೊಗಂ [4]ಮಾಡಿ[4] ಭಟಾರರಂ ವಂದಿಸಿ ಪೋಗಿ[5]ಯರಸಂಗೆ[5] ಕಿತ್ತ್ರಯ್ಯಂಗಳಿಂದು†ಪವಾಸಂಗೆಯ್ದೊರೆಂದು ಪೇ[6]ೞ್ದಾಗಳ್[6] ಮತ್ತಿರುಳಿನ ಕರಣವೇಳೆಯೊಳ್ ವಜ್ರಸೇನನೆಂಬ ಮಂತ್ರಿಯರಸಂಗಿಂತೆಂದು ಬಿನ್ನಪಂ ಗೆಯ್ದಂ ದೇವಾ ನಾಳೆಯಾಂ ನಿಱಿಸಿ ಕಿತ್ತ್ರಯ್ಯಂಗಳ್ಗೆ ಪಾರಣೆಯಂ ಮಾಡುವೆನೆನೆ ಅಂತೆಗೆಯ್ಯೆಂದೊಡೆ ಮಱುದಿವಸಂ ಬಸದಿಗೆ ವಂದು[7] ಭಟ್ಟಾರಾ ಕಿತ್ತ್ರಯ್ಯಂಗಳನೆಮ್ಮಲ್ಲಿಗೊಡಗೊಂಡು [8]ಬಂದು ಚರಿಗೆದೋಱಿ ನೀಮುಂ ಬಿಜಯಂಗೆಯ್ಯೆವೇನೆ[8] ಕಿತ್ತ್ರಯ್ಯಂಗಳೊಡಂಬಟ್ಟೊಡೊಡಗೊಂಡು ಬರ್ಪೆಮವರನೊಡಂಬಡಿಸಿಮೆಂದೊಡೆ ಕಿತ್ತ್ರಯ್ಯಂಗಳಲ್ಲಿಗೆ ಪೋಗಿ ಕಿತ್ತ್ರಯ್ಯಾ ಇಂದೆಮ್ಮ ಮನೆಯೊಳ್ [9]ಪಾರಿ[9]ಸಲ್ವೇೞ್ಕುಮೆಂದು ಕಾಲಂ ಪಿಡಿದು ಪೊಡೆಮಟ್ಟಿರ್ದೋನಂ ನೋಡಿ 'ರಾಜೋ ವಾ ರಾಜ[10]ಮ[10]ತ್ರೋ ವಾ (?) ಎಂದು ಸಾಮಂತ ಮಹಾಸಾಮಂತರ್ಕಳಿಂ[11] ಪರಿವೇಷ್ಟಿತನಾಗಿರ್ದ ಮಂತ್ರಿಯೆನಗೆ ಪೊಡೆಮಟ್ಟನಿವೆಲ್ಲಂ ತಪದ ಮಹಾತ್ಮ್ಯಮಿನ್ನುಂ ಮುಂದೆ ಪಿರಿದುಂಟೆಂದು ಬಗೆದಿಂತೆಂದರಾಮಿಂದುಪವಾಸಂಗೆಯ್ದೆಮೆಂದೊಡಾತನೆನಗೆ ಪುಣ್ಯಮಿಲ್ಲಾಗದೆ ಎಂದು ನುಡಿದು ಭಟ್ಟಾರರಂ ವಂದಿಸಿ ಪೋದಂ ಮತ್ತಮಿರುಳಿನ ಕರಣ ವೇಳೆಯೊಳರ್ಹದ್ದಾಸನೆಂಬೊಂ ರಾಜಶ್ರೇಷ್ಠಿಯರಸಂಗೆ ಬಿನ್ನಪಂಗೆಯ್ದಂ ನಾಳೆಯಾಂ ಕಿತ್ತ್ರಯ್ಯಂಗಳ್ಗೆ ಪಾರಣೆಯಂ ಮಾಡುವೆನೆಂದೊಡರಸನಂತೆ ಗೆಯ್ಯಿಮೆಂದೊಡಾತನುಂ ಬಸದಿಗೆ ಪೋಗಿ ಭಟ್ಟಾರರಂ ವಂದಿಸಿ [12]ಕಿತ್ತ್ರಯ್ಯಂಗಳುಮಂ ವಂದಿಸಿ ಗುರುಗಳನುಮತದಿಂದೆಮ್ಮ ಮನೆಗೆ ಚರಿಗೆವರಲ್ವೇೞ್ಕುಮೆಂದು ನುಡಿದೊಡುಪವಾಸಂಗೆಯ್ದೆನೆಂದೊಡಾತನುಂ[12] ಭಟ್ಟಾರರಂ ವಂದಿಸಿ ಪೋದಂ

---

1. ನೆಗಟ್ಟಿಪುದೆಂದೊಡೆ ಭಟಾರರೆಂದರಾಮುಂ ತಪಂಬಡಿಸಿದೆವಿಂ (ಫಚಛ). 2. ಕ್ಕ (ಕಗ) : ಈ ಪ್ರತಿಗಳಲ್ಲಿ ಎಲ್ಲೆಡೆಯೂ ಹೀಗೆಯೇ. 3. ಮು (ಖಗ). *–* ತನ್ನಭಿಪ್ರಾಯಮನಱಿಪೆ ಕಿತ್ತ್ರಯ್ಯಂಗಳೆಂದರ್ (ಫಚಛ). 4. ಬಾ (ಕಛ). 5. (ಕಖಗ)ಗಳಲ್ಲಿಲ್ಲ. †ಪು. ೭೫–೮೩ (ಖ)ದಲ್ಲಿ ನಷ್ಟವಾಗಿದೆ. 6. ಳ್ದಿರ್ದರ್ (ಕಗ). +ನೇವರಂ ಬಂದಿಸಿ ಗುರುಗಳ್ಗೆ ಗುರುಭಕ್ತಿ ಗೆಯ್ದಂತೆಂದಂ (ಫಚಛ). 8. ಚರಿಗೆವರ್ಪುದೆಂದೊಡೆ (ಫಚಛ). 9. ಪರ (ಕಗ). 10. ಮಾ (ಫಚಛ). 11. + ಪರಿವಾರ ಜನಂಗಳಿಂ (ಫಚಛ). 12 ಭಟಾರಾ ಇಂದು ನೀಮೆಮ್ಮ ಮನೆಗೆ ಕಿತ್ತ್ರಯ್ಯಂಗಳನೊಡಗೊಂಡು ಬಂದು ಪಾರಣೆಯಂ ಮಾಡಿಸಿಮೆಂದು ಪೇಳ್ವುದೆ ಕಿತ್ತ್ರಯ್ಯಂಗಳಿಂದುಮೆಮಗುಪವಾಸಮೆಂದೊಡಾತನುಂ (ಫಚಛ).

ಇತ್ತ ನಂದಿಮಿತ್ರ ಕಿತ್ತಯ್ಯಂಗಳ್ಗೆ ಶ್ರಮಮಂ ಭಟ್ಟಾರರಱಿದು ಕಿತ್ತಯ್ಯಾ ಪಂಚನಮಸ್ಕಾರಮಂ ಮಾಣದಿರುಳುಂ ಪಗಲುಮೋದುತ್ತಮಿರಿಮೆಂದು ಕಲ್ಪಿಸಿದೊಡವರುಮಿರುಳಂ ಪಗಲುಮೋದುತ್ತಿರೆ ಮತ್ತಿತ್ತ ಇರುಳಿನೋಲಗದೊಳ್ ನೆರೆದಿರ್ದ ನೆರವಿಯೊಳರಸನುಂ ಮಹಾದೇವಿಯುಂ ಕಿತ್ತಯ್ಯಂಗಳ ತಪಮಂ ಗುಣಮುಮಂ ಪೊಗೞುತ್ತೆ ತಪಂಬಟ್ಟ ದಿವಸದಿಂ ತಗುಳ್ದಿಂದಿಂಗೆಯ್ದು ದಿವಸಮುಣ್ಬುದಿಲ್ಲ ಕುಡಿವುದಿಲ್ಲುಪವಾಸಂಗೆಯ್ದಿರ್ದರಾಮೆನಿತು ಕೀೞ್ ನುಡಿದೊ[1]ಡಂ ಚರಿಗೆಮಾಡ[1]ಲೊಲ್ಲರಿನ್ನವು ಸಾಹಸಮುಂ ಸತ್ವವುಮಾರ್ಗಮೊಳವೆ ಎಂದರಸನುಮರಸಿಯುಂ ಪೊಗೞ್ವುದಂ ಕೇಳ್ದು [2]ಯುವರಾಜ[2]ನೆರ್ದು ಬಿನ್ನಪಂಗೆಯ್ದು ದೇವಾ ಕಿತ್ತಯ್ಯಂಗಳ್ಗೆ ನಾಳೆಯಾಂ ಪಾರಣೆಯುಂ ಮಾಡಿಸುವೆನೆಂದೊಡರಸನಂತೆಗೆಯ್ಯೆಂದೊಡೆ ಮಱುದಿವಸಂ [3]ಯುವರಾಜಂ[3] ಮಹಾವಿಭೂತಿವೆರಸು ಬಸದಿಗೆ ಪೋಗಿ ದೇವರುಂ ಭಟ್ಟಾರರುಮನರ್ಚಿಸಿ ಬಂದಿಸಿ ಭಟಾರಾ ಕಿತ್ತಯ್ಯಂಗಳಿಂದೆಮ್ಮ ಮನೆಯೊಳ್ [4]ಪಾರಿ[4]ಸುವಂತಿ[5]ರೆ ಬೆಸಸಿಮೆನೆ ಕಿತ್ತಯ್ಯಂಗಳನೊಡಂಬಡಿಸಿ ನಿಱಿಸಿಮೆನೆ[5] ಕಿತ್ತಯ್ಯಂಗಳ ಕಾಲಂ ಪಿಡಿದು ಪೊಡೆಮಟ್ಟು ಕಿತ್ತಯ್ಯಾ ಎಮ್ಮ ಮನೆಯೊಳಿಂದು [6]ನೀಮುಂ[6] [7]ಪಾರಿ[7]ಸಲ್ವೇೞ್ಪುದೆಂದೊಡೆ ಕಿತ್ತಯ್ಯಂಗಳಾತನ ಶ್ರೀಯುಂ ವಿಭೂತಿಯುಂ [8]ತೇಜಮುಮಂ[8] ಕಂಡು ಇಂತಪ್ಪ [9]ಕ್ಷತ್ರಿಯ ಪುತ್ರಾದಿಗ[9]ಳೆಲ್ಲಮೆನಗೆಱಗಿ ಪೊಡೆಮಟ್ಟು ಕಿಂಕಕುಮಾರ್ಗಣಂಗೆಯ್ದಪ್ಪರುಣ್ಬುದರ್ಕೇನೀಗಳ್ ಸಂಕಟಮೀ ತಪದ ಫಲಮಿನ್ನುಂ ಮುಂದೆ ಪಿರಿದುಂಟೆಂದು ಬಗೆದಿಂದುಪವಾಸಂಗೆಯ್ದಪೆಂದು ಮಱುಮಾತುಗೊಟ್ಟೊಡೆ ವಿರಾಗ[10]ನಾಗಿ ಯುವರಾಜಂ ಭಟಾರರಂ ವಂದಿಸಿ ಪೋದನಿಂತಾಱುದಿವಸಂ ಪೋದ ಬೞಿಕ್ಕೇೞನೆಯ ದಿವಸದಂದು ನೇಸಱ್ ಮೂಡಿದೊಡೆ ಭಟಾರರಲ್ಲಿಗೆ [11]ನಂದಿಮಿತ್ರಂ[11] ವಂದು ಬಂದಿಸಿ ಇಂತೆಂದಂ ಭಟರಾ ಇನಿತು ಕಾಲಮುಂ[12]ಡುದು[12] ಸಾಲ್ಗುಮೆಮಗೆ ಯಾವಜ್ಜೀವಂ ಬಾಳ್ವನ್ನೆಗಮುಪವಾಸ ಪಚ್ಚಕ್ಖಾಣಂಗುಡುವುದೆಂದೊಡೆ ಭಟಾರರೆಂದರ್ ನೀಮುಂ ಮಹಾಪುರುಷ[13]ರಿರ್ ನಿಮ್ಮನ್ನರ್[13] ಧೈರ್ಯವಂತರುಂ ಸತ್ವವಂತರುಮಾರುಮಿಲ್ಲಂ ಇನಿತು ಕಾಲಂ ತಪಂಗೆಯ್ದಪ್ಪೆಮಗಪ್ಪೊಡಮಿನಿತು ಧೈರ್ಯಮುಂ ಸತ್ವಮುಮಿಲ್ಲೆಂದು ಗುರುಗಳ್ ಪೊಗೞ್ದೊಡೆ ಗುರುಗಳ ಪೊಗೞ್ತೆಗೆ ರಾಗಿಸಿ ಸಂತೋಸಂಬಟ್ಟಿರ್ದೊಡೆ ಭಟಾರರೆಂದರ್ ನಿಮಗಿಂದಿನ ದಿವಸದನಿತೆಯಾಯುಷ್ಯಮೆಂದು [14]ಪೇೞ್ದು[14] ಜಾವಜ್ಜೀವಂ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ನಿವೃತ್ತಿಗೆ[15]ಯ್ಯೆಂದು ಪಚ್ಚಕ್ಖಾಣಂಗೊಟ್ಟು[15] ಬಸದಿಯೊಳೊಂದು ಕೋ[16]ಣೆಯೊಳೀ ಎಡೆಯೊಳ್[16] [17]ನೀಮೊಂದು ಕೆಲದೊಳ್ ಮಗುೞ್ಚದೆ[17] ತಳರದೆ[18]

---

1. ಡಮುಣ (ಘಚಛ). 2. ಸಾಮಂತ ತಳಾಱನಪ್ಪ ಶ್ರಾವಕಂ (ಘಚಛ). 3. ಸಾಮಂತಂ (ಘಚಛ). 4. ಪರ (ಕಗ). 5. ರೊಡಗೊಂಡು ಬನ್ನಿಮೆಂದೊಡೆ ಕಿತ್ತಯ್ಯಂಗಳನೊಡಂಬಡಿಸಿ ದೊಡೊಡಗೊಂಡು ಬರ್ಪೆಮೆಂದೊಡೆ (ಘಚಛ). 6. ನಿಮ್ಮಡಿ (ಘಚಛ). 7. ಪರ (ಕಗ). 8. ಪ್ರಭುತ್ವಮುಮಂ (ಘಚಛ). 9. ಮಹಾಪುರುಷರ್ಕ (ಘಚಛ). 10. +ಚಿತ (ಘಚಛ). 11. (ಕಗ)ಗಳಲ್ಲಿಲ್ಲ. 12. ಡುಣಸು (ಕಗ). 13. ರೀ ನಿಮ್ಮಂತು (ಕಗ). 14. ಳ್ದೊಡೆ (ಕಗ). 15. ಯ್ದು ಪ್ರತ್ಯಾಖ್ಯಾನಂಗೊಂಡು (ಘಚಛ). 16. ಣದೆಸೆಯೊಳ್ (ಘಚಛ). 17. (ಘಚಛ) ಗಳಲ್ಲಿಲ್ಲ. 18. + ಮಸಗದೆ (ಘಚಛ).

ಕ್ಕೈಯುಂ ಕಾಲ್ಗಳುಮನುಡುಗದೆ ನೀಡದೆ ಬಾಟ್ಟನ್ನೆಗಂ ಪೆಟ್ಟಿರ್ದು ಪಂಚನಮಸ್ಕಾರಮಂ ಮನದೊಳೋದುತ್ತಿರಿಪೆಂದು ಕಲ್ಪಿಸಿ [1]ಪಟ್ಟಿರಿಸಿ[1] ಆರಾಧನೆಯನರ್ಚಿಸಿ ಭಟ್ಟಾರರಾರಾಧನೆಯುಂ ವಕ್ಖಾಣಿಸುವುದಂ ಕೇಳುತ್ತಿರ್ದಂ ಮತ್ತಿತ್ತ ಕಿತ್ತಯ್ಯಂಗಳ್ ಸಂನ್ಯಸನಂ ಗೆಯ್ದರೆಂಬು ಮಾತನರಸನಾದಿಯಾಗಿ ಪೊೞಲ ಜನಂಗಳೆಲ್ಲಂ ಕೇಳ್ದು ಪಿರಿದುಂ ಸಂಭ್ರಮಮಾಗಿಯರಸನುಂ ಮಹಾದೇವಿಯುಂ ಮಂತ್ರಿಯುಂ ರಾಜಶ್ರೇಷ್ಠಿಯುಂ [2]ಯುವರಾಜಂ[2] ಮೊದಲಾಗಿ ಪೊೞಲ ಜನಮೆಲ್ಲ[3]ಮಿರ್ಪೊತ್ತುಮ[3]ರ್ಚನೆಯುಮಂ ಕೊಂಡುಬಂದರ್ಚಿಸಿ [4]ಕಿೞಿದು ಬೇಗಮಿರ್ದಾರಾಧನೆಯುಂ ವಕ್ಖಾಣಿಸುವುದಂ[4] ಕೇಳ್ದು ಮಿಥ್ಯಾದೃಷ್ಟಿಗಳಪ್ಪವರ್ ಶ್ರಾವಕ ಬ್ರತಂಗಳಂ ಕೈಕೊಂಡರ್ ಶ್ರಾವಕರುಂ ದೃಢಸಮ್ಯಗ್ ದೃಷ್ಟಿಗಳಾಗಿ ಬಂದಿಸಿ ಪೋದರ್

ಇತ್ತ ನೇಸಱ್ ಪಟ್ಟೊಡೆ ಕಿತ್ತಯ್ಯಂಗಳ್ಗಾಸನ್ನಕಾಲಮಾದುದೆಂಬುದಂ ಭಟಾರರೞಿದಿಂತೆಂದರ್ ಕಿತ್ತಯ್ಯಾ ನಿಮಗೀಗಳ್ ಪ್ರಾಣಂ ಪೋಗಲ್ ಒಗೆದಪ್ಪುದು ದೇವರಂ [5]ಜಾಪಿಸುವುದು[5] ಪಂಚನಮಸ್ಕಾರ[6]ಮನೋ[6]ದುತ್ತಮುಚ್ಚಾರಿಸುವುದಂ ಕೇಳುತ್ತಮಿ[7]ರಿಪೆಂ[7]ದು ಕಲ್ಪಿಸಿ ಭಟ್ಟಾರರ್ ಪಂಚನಮಸ್ಕಾರಮಂ ಪಿರಿದು ಬೇಗಂ ಪೇೞೆ ಪ್ರಾಯೋಪಗಮನ[8]ದಿನೆಂತಂತೆ[8] ಶುಭಪರಿಣಾಮದಿಂ [9]ಸಮ್ಯಗ್[9] ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ ಮುಡಿಪಿ ಸೌಧರ್ಮಕಲ್ಪದೊಳೆರಡು ಸಾಗರೋಪಮಾಯುಷ್ಯಮನೊಡೆಯೊಂ ಕನಕಧ್ವಜನೆಂಬೊಂ ದೇವನಾಗಿ ಪುಟ್ಟಿಯವಧಿಜ್ಞಾನದಿಂ ತನ್ನ ಭ[10]ವಮನ[10]ಱಿದೀ ಶರೀರದಿಂದಮಿತಪ್ಪ ದಿವ್ಯಶರೀರಮುಂ ದೇವಲೋಕದೊಳಪ್ಪ ಸುಖಮೈಶ್ವರ್ಯಮುಮಾದುದೆಂದು ಮೂಱುಕೋಟಿ ಪರಿವಾರ ದೇವರ್ಕಳುಂ ಮೂಱು ಲಕ್ಕ ದೇವಿ[11]ಯರಪ್ಪ[11]ರಸಿಯರ್ಕಳುಂ ಗಣಿಕೆಯರ್ಕಳುಂ ಬೆರಸು ಸುರತ್ನಮಯಮಪ್ಪ ದಿವ್ಯವಿಮಾನಮುಂ ಘಂಟಾಜಾಳ ಮುಕ್ತಜಾಳ ಹೇಮಜಾಳಂಗಳಿಂದೊಪ್ಪುವ ವಿಮಾನಮನೇಱಿ ಮಹಾವಿಭೂತಿ[12]ಯಿಂ ತಗಳ್ದುರ[12]ಗಾಮರಂ (?) ಬೆರಸು ಪಾಡುತ್ತಂ[13] ಬರ್ಪನ್ನೆಗಮಿತ್ತ ವೈದಿಶಮೆಂಬ ಪೊೞಲೊಳ್ ನಂದಿಮಿತ್ರ ಕಿತ್ತಯ್ಯಂಗಳ್ ಮುಡಿಪಿದರೆಂಬುದಂ ಕೇಳ್ದರಸನುಂ ಮಹಾದೇವಿಯುಂ ಮಂತ್ರಿಯುಂ [14]ಪೆರ್ಗಡೆಯುಂ[14] ಮೊದಲಾಗಿ ಪೊೞಲೊಳಗುಳ್ಳ ಜನಮಿಲ್ಲಮರ್ಚನೆಗಳಂ ಕೊಂಡು ಬಂದರಸಂ ತಾಂ ಪಕ್ಕದಿ[15]ರ್ದು[15] ಕ್ಷಪಣಕನನುಯ್ವ ವಿಮಾನಮುಮಂ ಮತ್ತಂ ಶೋಭೆಗೆಂದು ಪಲವು ವಿಮಾನಂಗಳುಮ[16]ನೊಳ್ಳಿ[16]ದುಮಾಗಿ ಮಾಡಿಸಿ ಪಲವುಂ ನೇತ್ರದ ಪಟ್ [17]ವುಲ್ಲವಂಗಳ್[17] ಧ್ವಜಪತಾಕೆಗಳುಮ[18]ನೆತ್ತಿ[18]ಸಿ ಚಾತುರ್ವರ್ಣ ಶ್ರವಣ ಸಂಘ ಸಹಿತಂ ಪಟುಪಟಹ ತುಣವ ಭಂಭಾ ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ

---

1. (ಘಚಛ)ಗಳಲ್ಲಿಲ್ಲ. 2. ತಳಾಱನುಂ (ಘಚಛ). 3. ಂ ಪಗಲಪ್ಪನ್ನೆವರಮಿರ್ದಾರಾಧನೆಯುಂ (ಘಚಛ). 4. (ಘಚಛ)ಗಳಲ್ಲಿಲ್ಲ. 5. ಧ್ಯಾನಿಸುತ್ತಂ (ಘಚಛ). 6. ಮಂ ಮನದೊಳೋ (ಘಚಛ). 7. ರ್ಕೆ (ಕಗ). 8. ಮರಣದಿನಂತೆ (ಘಚಛ). 9. ಸಹಜ (ಕಗ). 10. ವಾಂತರಮನ (ಘಚಛ). 11. ಯರ್ಕಳುಮಪ್ಪ (ಘ). 12. ಯಿಂತಗುಳ್ವಾಗಾ (ಕಗ), ಪೆರಸುತಗುಳ್ದಗಾ (ಘಚ). 13. + ಆಡುತ್ತಂ (ಘಚಛ). 14. ಶ್ರೇಷ್ಠಿಯುಂ ತಳಾಱನುಂ (ಘಚಛ). 15. ಳ್ದು (ಕಗ). 16. ನೇಳಿ (ಕಗ). 17. ಯ (ಘಚಛ). 18. ನರ್ತಿ (ಕಗ).

ಶಂಖ ವಂಶ ವೀಣಾಸ್ವರಂಗಳೆಸೆಯೆ ಕಪಿವರರುಂ ಪೆಂಡವಾಸದೊಳ್ಪೆಂಡಿರ್ಕಳುಂ ವಿಮಾನಂಗಳ ಮುಂದಾಡುತ್ತುಂ ದಮ್ಮಮುಮಂ ಪೊನ್ನುಮಂ ಕೇಳಿ ಮಾಡಿ ಮುಂದೆ ಸೂಸುತ್ತ[1]ಮೊ[1]ಯ್ವುದಂ ಕನಕಧ್ವಜನೆಂಬ ದೇವಂ ಕಂಡೆನ್ನ ದೇಹಕ್ಕಿವರೆಲ್ಲಮಿನಿವಿರಿ ದರ್ಶನೆಯುಮಂ ಪೂಜೆಯುಮಂ [2]ವಿಭವಮುಂ ಪ್ರಭಾವನೆಯುಮಂ[2] ಮಾಡಿದಪ್ಪ ರೆಂದೊಡಾನೆನ್ನ ದೇಹಕ್ಕೆ ಮಾಡದಿರ್ಪೆನೆಯೆಂದು ಪಲವು ವಿಮಾನಂಗಳಂ ವಿಗುರ್ವಿಸಿ ಕ್ಷಪಣಕನ ವಿಮಾನದ ಮುಂದೆ ಬಳಸಿಯುಂ ಪೋಪಂತು ಮಾಡಿಯಾಕಾಶಮೆಲ್ಲಮಂ ವಿಮಾನಮಯಮಾಗೆ ವಿಗುರ್ವಿಸಿ ದೇವಲೋಕದ ಪಱೆಗಳಂ ಬಾಜಿಸುತ್ತುಂ ನಮೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತುಂ ದೇವರ್ಕಳ [3]ದೇವಿಯರ್ಕಳ್[3]ಸಹಿತಂ ಕ್ಷಪಣಕನ ವಿಮಾನದ ಮುಂ[4]ದೆ ಇಂತೆಂದು ಪೇೞ್ದಾಡಿ[4]ದಂ :

ಗಾಹೆ ॥ ಪೆಚ್ಛಹ ಪೆಚ್ಛಹ ಓದಣ ಮುಂಡಂ
ಅಚ್ಚರ ಮಜ್ಝಗಯಂ ರಮಣಿಜ್ಜಂ ।
ಜಂಜೇಣ ಮಂತೇಣ ಕಾರಣ ಯೇಣ
ಪಚ್ಚ ಇಯುವ್ವಂಹೋ ಇಣರೇಣ ॥

ಎಂದು [5]ಭಂದ ಭಂ[5]ದದಿಂ ಪೇ[6]ೞ್ದಾಡು[6]ವುದಂ ಕಂಡರಸಂ ಮೊದಲಾಗಿ ಪೊೞಲ ಜನವೆಲ್ಲಂ ಚೋದ್ಯಂಬಟ್ಟು ಬೆಱಗಾಗಿ ನೋಡುತ್ತಿರ್ದಿಂತೆಂದರಸಂ ಬೆಸಗೊಂಡಂ ನೀಮಾರ್ಗೇನೆಂಬಿರೆಲ್ಲಂ ಬಂದಿರಿಂತೇಕೆ ಪೇೞ್ದಾಡಿದಪ್ಪಿರೆಂದು ಬೆಸಗೊಂಡೊಡಾನಲ್ತೆ ನಂದಿಮಿತ್ರನಪ್ಪ ಕಿತ್ತಯ್ಯನೆನುಣಿಸಿಂಗೆಂದು ತಪಂಬಟ್ಟೇೞುದಿವಸಮುಪವಾಸಂ ಗೆಯ್ದು ಮುಡಿಪಿ ಸಂನ್ಯಸನಂಗೆಯ್ದು ಮುಡಿಪಿ ದೇವಲೋಕದೊಳ್ ಕನಕಧ್ವಜ ನೆಂಬೊಂ ದೇವನಾಗಿ ಪುಟ್ಟಿ ಎನ್ನ ದೇಹಮುಂ ಪೂಜಿಸಲುಂ ನಿಮಗೆನ್ನ ವಿಭವಮಂ ತೋಱಲ್ ಬಂದೆನೆಂದು ಪೇೞ್ದು ತನ್ನ ಶರೀರಮಂ ದಿವ್ಯಮಪ್ಪ ಗಂಧ ಪುಷ್ಪ ದೀಪ ಧೂಪಾಕ್ಷತೆಗಳಿಂದರ್ಚಿಸಿ ತನ್ನ ಗುರುಗಳಪ್ಪ ಶಿವಗುಪ್ತರೆಂಬಾಚಾರ್ಯರುಮಂ ಪೂಜಿಸಿ ನಿಮ್ಮ ಪ್ರಸಾದದಿಂದೆನಗಿನಿವಿರಿದು ಶ್ರೀಯುಂ ಮಹಾವಿಭೂತಿಯುಂ ಮೈಶ್ವರ್ಯಮುಂ ದೇವತ್ವಮುಮಾದುದೆಂದು ಪೇೞ್ದು ಬಂದಿಸಿ ತನ್ನ ದೇವಲೋಕಕ್ಕೆ ಪೋದನ್

ಇತ್ತಲರಸನುಮಿದೆಲ್ಲಮಂ ಕಂಡು ಸಂಸಾರ ಶರೀರ ಭೋಗ ವೈರಾಗ್ಯ ಪರಾಯಣನಾಗಿ ಶ್ರೀವರ್ಮನೆಂಬ ತನ್ನ ಪಿರಿಯ ಮಗಂಗೆ ರಾಜ್ಯ ಪಟ್ಟಂಗಟ್ಟಿ ಪಲಂಬರರಸುಮಕ್ಕಳುಂ ಮಹಾದೇವಿ ಮೊದಲಾಗಿ ಪಲಂಬರರಸಿಯರ್ಕಳುಂ ಪರಿವಾರದವರುಂ ಪೊೞಲ ಪಲಂಬರ್ ಜನಂಗಳೆಲ್ಲಂ ಬೆರಸು ಶಿವಗುಪ್ತ ಭಟ್ಟಾರರ ಪಕ್ಕದೆ ತಪಂಬಟ್ಟು ಸಮ್ಯಗ್ಜ್ಞಾನ ಚಾರಿತ್ರಂಗಳೊಳಗೊಳ್ಳಿತಾಗಿ ನೆಗೞ್ದು ಪಶ್ಚಾತ್ಕಾಲದೊಳ್ ಸಂನ್ಯಸನಂಗೆಯ್ದು ಮುಡಿಪಿಯನಿಬರುಂ ದೇವಲೋಕಕ್ಕೆ ವೋದರ್ ಮತ್ತಂ ಕನಕಧ್ವಜನೆಂಬ ದೇವಂ ಪಲಕಾಲಂ ದೇವಲೋಕದ ಸುಖಮ ನನುಭವಿಸಿ ಬಂದಿಲ್ಲಿ ನೀಂ ಸಂಪ್ರತಿ ಚಂದ್ರಗುಪ್ತನಾಗಿ ಪುಟ್ಟಿದೆಯೆಂದು ಸಮಾಧಿ

1. ಮು (ಘಚಛ). 2. (ಘಚಛ)ಗಳಲ್ಲಿಲ್ಲ. 3. (ಘಚಛ)ಗಳಲ್ಲಿಲ್ಲ. 4. ದಿರ್ದಿಂತೆಂದು ಪೇೞ್ದೋದಿ (ಘಚಛ). 5. ಚಂದ ಚಂ (ಗ), ನಾನಾ ಭಂ (ಘಚಛ). 6. ೞ್ದೋದು (ಘಚಛ).

ಗುಪ್ತ ಭಟ್ಟಾರರ್ ತನ್ನ ಭವಮಂ ಪೇೞ್ದೊಡಾದವಾನುಪೊಸೆದು ಸಂತೋಷಂ ಬಟ್ಟು ಭಟ್ಟಾರರಂ ವಂದಿಸಿ ತನ್ನರಮನೆಗೆ ಪೋಗಿ ಇಂತು ಸಂಪ್ರತಿ ಚಂದ್ರಗುಪ್ತ ಮಹಾರಾಜಂ ಪೃಥ್ವಿಯನೇಕಚ್ಛತ್ರಚ್ಛಾಯೆಯಿಂದವಾಳುತ್ತಮುಜ್ಜೇನಿಯೊಳ್ ಸುಖದಿಂದಿರ್ಪನ್ನೆಗಂ

ಇತ್ತ ದ್ವಾದಶಾಂಗ ಚತುರ್ದಶ ಪೂರ್ವಧಾರಿಗಳಪ್ಪ ಭದ್ರಬಾಹುಭಟ್ಟಾರರ್ ಪಿರಿದು ಋಷಿಸಮುದಾಯಂ ಬೆರಸು ಗ್ರಾಮನಗರಖೇಡಖರ್ವಡಮಡಂಬಪಟ್ಟಣದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೋರುಜ್ಜೇನಿಗೆ ವಂದಾ ಪೊೞಲ ಬಹಿರುದ್ಯಾನ ವನದೊಳಿರ್ದರದನರಸಂ ಕೇಳ್ದು [1]ಪರಿವಾರಸಹಿತಂ[1] ಪೋಗಿ ಭಟಾರರಂ ವಂದಿಸಿ ಸದ್ಧರ್ಮಂ ಕೇಳ್ದು ಶ್ರಾವಕ ಬ್ರತಂಗಳನೇಱಿಸಿಕೊಂಡು ವಂದಿಸಿ ತನ್ನರಮನೆಗೆ ಪೋದನಿತ್ತ ಭಟಾರರುಂ ಪಲವು ದಿವಸಮಾ ಪೊೞಲೊಳಿರೆ ಮತ್ತೊಂದು ದಿವಸಂ ಋಷಿಸಮುದಾಯಮೆಲ್ಲಮಂ ಚರಿಗೆ[2]ಪೊ[2]ಗಿಸುತ್ತಮೆಲ್ಲರುಮಂ ನಿಱಿಸಿ ತಾವೊರ್ವ[3]ರೆಯೊಂ[3]ದು ಮನೆಯಂ[4] ಪೊಕ್ಕಾಗಳಾ ಮನೆಯೊಳಾ[5]ರುಮಿಲ್ಲೊಸರಿಗೆ[5]ಯೊಳ್ ತೊಟ್ಟಿಲೊಳಿರ್ದವ್ಯಕ್ತ ಕಿಱುಗೂಸು ಬೋಳಹ ಬೋಳಹ ಭಟ್ಟಾರಾ ಎಂದತ್ತಾಗಳಾ ವಚನಮಂ ಭಟ್ಟಾರರ್ ಕೇಳ್ದು ದಿವ್ಯ ವಾಕ್ಯಮೆಂದಱಿದು ಕಾಲ ಪ್ರಮಾಣಮಂ ಬೆಸಗೊಂಡೊಡೆ ದ್ವಾದಶವರ್ಷಮೆಂದು ಪೇ[6]ೞ್ದಿತ್ತು[6] ಭಟ್ಟಾರರ್ ಕಾಲದೋಷದಿಂ ಪ್ರಜಾಪೀಡೆಯಾದಪ್ಪುದೆಂದಱಿದು ಕಾರುಣ್ಯ ಬುದ್ಧಿಯಿಂದಾಹಾರಮಂ ಕೊಳ್ಳದೆ [7]ಅಲಾಭಂ[7] ಮಾಡಿಯಂತೆ ಬಸದಿಗೆ ಪೋಗಿ ಗೋಚಾರ ನಿಯಮಂಗೆಯ್ದು ಬಟಿಕ್ಕೆ ರಿಸಿಯರ್ಕಳ್ಗೆಲ್ಲಂ ಬಟಿಯನಟ್ಟಿ ಬರಿಸಿ ಇಂತೆಂದರೀನಾಡೊಳ್ ಪನ್ನೆರಡು ವರುಷಂಬರೆಗಮನಾವೃಷ್ಟಿಯಾಗಿ ದುರ್ಭಿಕ್ಷಮಾದಪ್ಪುದೀನಾಡೊಳಗಿರ್ದ ರಿಸಿಯರ್ಕಳ್ಗೆಲ್ಲಂ ಬೇಗಂ ಬಟಿಯಟ್ಟಿ ಬರಿಸಿಂ ಪೋಪಂ ದಕ್ಷಿಣಾಪಥಕ್ಕೆಂದು ರಿಸಿಯರ್ಕಳ್ಗೆಲ್ಲಮಂ ಬಟಿಯನಟ್ಟಿದರಿತ್ತರಸನುಮಾ ದಿವಸದಿರುಳ್ ಪದಿನಾಱುಂ ಪೊಲ್ಲ ಕನಸುಗಳಂ ಕಂಡನವಾವುವೆಂದೊಡೆ: ಆದಿತ್ಯನಸ್ತಮಾನಕ್ಕೆ ಸಲ್ವುದುಮಂ ಕಲ್ಪವೃಕ್ಷದ [8]ಕೋಡು[8]ಡಿವುದುಮಂ ನೆಲಕ್ಕೆ ವರುತಿರ್ದ ವಿಮಾನಂ ಬಾರದೆಡೆಯಿಂದೆ ಮೇಗೆ ಮಗುೞ್ದುದುಮಂ ಪನ್ನೆರಡು ತಲೆಯ ಪಾವುಮಂ ಚಂದ್ರನೊಡೆದುದುಮಂ ಕಡು[9]ಗಡಿಯುವ[9]ಪ್ಪೆರಡಾನೆಗಳ್ ತಮ್ಮೊಳ್ [10]ಪೋರಲ್[10]ಸಾರ್ದು ಪೆಱಪಿಂಗಿ ಪೋದುದುಮಂ ಮಿಸಾಂಬುಟುಪುಮಂ ನೀರಿಲ್ಲದ ಕೆಱೆಯ ನಡುವುಮಂ ಪೊಗೆ [11]ಪೆರ್ಚಿ[11] ನೆಗೆದ ಕಾಟ್ಕಿರ್ಚುಮಂ ಸಿಂಹಾಸನದ ಮೇಗೇಱಿರ್ದ ಕೋಡಗಮುಮಂ ಪೊನ್ನತಳಿಗೆಯೊಳ್ ನಾಯ್ ತುಯ್ಯಲುಣ್ಬುದುಮಂ ಕೋಡಗವೇಱಿರ್ದ ಸೊರ್ಕಾನೆಯುಮಂ ಕಸಕುಪ್ಪೆಯೊಳ್ ತಾಮರೆ ಮೂಡಿದುದುಂ ಸಮುದ್ರಂ ಮೇರೆದಪ್ಪಿದುದುಮಂ ಬೆಳ್ತಟಿ[12] ಪೂಡಿದ ಪೊನ್ನ ರಥಮಂ ಬೆಳ್ಗಟ್ಟೆಯನರ

1. ಸಪರಿವಾರ ಬೆರಸು (ಕಗ). 2. ವ್ರ. (ಘಚ). 3. ರುಮೊಂ (ಕಗ). 4. + ಪೋಗಿ (ಕಗ). 5. ರುಮಿಲ್ಲಾಸರಿಗೆ (ಚ), ರೂ ಮಿಲ್ಲಶರಿಗೆ (ಛ). 6. ಳೆ (ಘಚಛ). 7. ಮುಟ್ಟುಪದಂ (ಘಚಛ). 8. ತುದಿಗೊಂಬು (ಘಚಛ). 9. ಗಲಿಗಳ (ಘಚಛ) 10. ಪೆಜ (ಕಗ). 11. ಸೊಣ್ಣ (ಘಚಛ). 12. ಗಳಲು (ಘಚಛ).

[1]ಸರ್ಕ[1]ಳೇಱುವುದುಮಂ—ಇಂತೀ ಪದಿನಾಱುಂ ಕನಸುಗಳಂ ಸಮ್ಯಗ್ದರ್ಶನ ಶುದ್ಧಿ ಮೊದಲಾಗೊಡೆಯ ಗುಣಂಗಳಿಂ ಕೂಡಿದ ಸಂಪ್ರತಿ ಚಂದ್ರಗುಪ್ತಮಹಾರಾಜಂ ಪೊಲ್ಲ ಕನಸುಗಳಂ ಕಂಡೆನೆಂದಂಜಿ ನೇಸಱ್ ಮೂಡಿದಾಗಳ್ ಭದ್ರಬಾಹು ಭಟ್ಟಾರರಲ್ಲಿಗೆ ಪೋಗಿ ವಂದಿಸಿ ತನ್ನ ಕಂಡ ಕನಸುಗಳಂ ಭಟಾರರ್ಗೆ ಪೇೞ್ದವಱ ಫಲಂಗಳಂ ಬೆಸಗೊಂಡೊಡೆ ಭಟಾರರಿಂತೆಂದು ಪೇೞಲ್ ತೊಡಗಿದರ್

ಆದಿತ್ಯನಸ್ತಮಾನಕ್ಕೆ ಸಲ್ವುದಂ ಕಂಡುದಱಿಂದೀ ಭರತ ಕ್ಷೇತ್ರದೊಳ್ ಚತುರ್ದಶ ಪೂರ್ವಧಾರಿಗಳುಮವಧಿಜ್ಞಾನಿಗಳುಮಿಲ್ಲಿಂದಿತ್ತಲಾಗರ್ ಕಲ್ಪವೃಕ್ಷದ [2]ಕೋಡುಡಿದುದುಮಂ[2] ಕಂಡುದಱಿಂದಿಂದಿನ ದಿವಸಂ ಕೞಿದೊಡೆ ಕುಲಬಲ ವಿಭವದಿಂ ಪಿರಿಯರಪ್ಪ [3]ಮಕುಟಬದ್ಧರ[3]ಪ್ಪರಸುಗಳ್ ತಪಂಬ[4]ಡುವರಲ್ಲ[4]ರ್ ನೆಲಕ್ಕೆ ವರುತ್ತಿರ್ದ ವಿಮಾನಮೊಡೆಯಿಂದಂ ಮೇಗೆ ಮಗುೞ್ದುದಂ ಕಂಡುದಱಿಂ ದೇವರ್ಕಳುಂ ವಿದ್ಯಾಧರರ್ಕಳುಮಿಲ್ಲಿಂದಿತ್ತೀ ಕ್ಷೇತ್ರಕ್ಕೆ ವಾರರ್ ಪನ್ನೆರಡು ತಲೆಯ ಪಾವಂ ಕಂಡುದಱಿಂದಿಲ್ಲಿಂ ತೊಟ್ಟೀ ನಾಡೊಳ್ ಪನ್ನೆರಡು ವರ್ಷಂಬರಂ ರೌದ್ರಪಸವಮಕ್ಕುಂ ಚಂದ್ರನೊಡೆದುದಂ ಕಂಡುದಱಿಂ ಸದ್ಧರ್ಮದ [5]ಮೊದಲ ಪೊರ್ದಿದ ಮಾರ್ಗದಿಂಬೆಳೆಯೊಳ್ ಪುಲ್ಗಳ್[5] ಪಲವಕ್ಕುಂ ಕದುಗಡಿಯುವಪ್ಪೆರಡಾನೆಗಳ್ ತಮ್ಮೊಳ್ [6]ಪೋರಲ್[6] ಸಾರ್ದು ಪೆಱಪಿಂಗುವುದಂ ಕಂಡುದಱಿಂ ಪ್ರಜೆಗಳ ಮೆಚ್ಚಿದಂತೆ ಮೞೆ ಕೊಳ್ಳವು ಮಂಡಲವರ್ಷಂಗಳಕ್ಕು ಮಿಾನಂಬುಱುವಂ ಕಂಡುದಱಿಂ ಮಿಾನಂಬುಱಿ ವಿನೊಳೋರನ್ನವು ಶಾಸ್ತ್ರಂಗಳುಮಂ[7]ಗ[7]ಬಾಹ್ಯಮಪ್ಪ ಚತುರ್ದಶ ವಿದ್ಯಾಸ್ಥಾನಂಗಳುಂ ಕುಂದಿಯುಪದೇಶ [8]ತನುಮಾತ್ರಮೆ[8] ಸಿಲ್ಕುಂ ನೀರಿಲ್ಲದ ಕೆಱೆಯ ನಡುವಂ ಕಂಡುದಱಿಂ ತೀರ್ಥಂಕರ ಚಕ್ರವರ್ತಿಗಳ ಪುಟ್ಟಿದ ಮಧ್ಯದೇಶದೊಳ್ [9]ಪಿನ್ನ[9] ನೆಗೞ್ತಿಯಾಗದು ಆ ಮಧ್ಯ ದೇಶಕ್ಕೆ ಸಂಬಂಧಿಯೀಗಾಹೆ :

ಪುವ್ವೇಣ ಅಂಗವಿಸಓ ದಕ್ಖಿಣದೋ ಜಾವಹೋ ಇ ಕೋಸಂಬೀ ।
ಅವರೇಣ ಜಾವ[10]ದೂಣಾ[10] (?) ಕುಣಾಳ ವಿಸಯೋಯ ಉತ್ತರದೋ ॥

ಎಂದು ಮಧ್ಯದೇಶ ಪ್ರಮಾಣಂ ಮತ್ತಂ ಪೊಗೆಯಿಂದಂ ಪೆರ್ಚಿ ನೆಗೆದ ಕಾೞ್ಕಿರ್ಚಂ ಕಂಡುದಱಿಂ ಧೂರ್ತರಪ್ಪ ಪೊಲ್ಲಲಿಂಗಿಗಳ ಪೆರ್ಚಕ್ಕುಂ ಮತ್ತಂ ದಯೆ ಮೊದಲಾಗೊಡೆಯ ಸದ್ಧರ್ಮಕ್ಕೆ ವಿರುದ್ಧಮಾಗಿ ನೆಗೞ್ವ ಪಿರಿದಪ್ಪ ಹಿಂಸಾದಿಗಳಂ ಗೆಯ್ವ ವೇದಾದಿಶಾಸ್ತ್ರಂಗಳ ಪೆರ್ಚಕ್ಕುಂ ಸಿಂಹಾಸನಮನೇಱಿರ್ದ ಕೋಡಗಮಂ ಕಂಡುದಱಿಂ ಕುಲಜರಲ್ಲದವರರಸುಗೆಯ್ವರ್ ಪೊನ್ನ ತಳಿಗೆಯೊಳ್ ನಾಯ್ ತುಯ್ಯಲ ನುಣ್ಬುದಂ ಕಂಡುದಱಿಂ ಪೊಲ್ಲಲಿಂಗಿಗಳರಸರ್ಕಳಿಂದಂ ಪೂಜಿಸೆಪಡುವರ್ ಕೋಡಗ ಮಾನೆಯನೇಱುವುದಂ ಕಂಡುದಱಿಂದಾದಮಾನುಂ ಶುದ್ಧ ಕುಲದೊಳ್ ಪುಟ್ಟಿದರಸುಮ[11]ಕ್ಕ[11]ಳುತ್ತಮ ಕುಲದೊಳಪ್ಪಭಿಮಾನಮಂ ತೋಱಿದು ಬಾೞ್ಕಾರಣ

1. ಸಮುಕ್ಕ (ಫಚಭ). 2. ತುದಿಗೊಂಬುಡಿದುದಂ (ಫಚಭ). 3. ಮಂಡಲಿಕ ಮಕುಟ ಬದ್ಧಾದಿಗಳ (ಫಚಭ). 4. ಡ (ಫಚಭ). 5. ಮಾರ್ಗಂ (ಫಚಭ). 6. ಪೆಱ (ಕಗ). 7. ಗಾಂಗ (ಫಭ). 8. ತನ್ಮಾತ್ರಮೆಯುಂ (ಫಚಭ). 9. ಧರ್ಮದ (ಫಚಭ). 10. ಮಾಣಾ (ಫಚಭ), ದೂಣ (ಕ). 11. ರ್ಕ್ಕ (ಫ).

ಮಾಗಿ ಕುಲಜರಲ್ಲದವರ್ಗಳಾಗಿ ಬಾಟ್ಟರ್ ಕಸಕುಪ್ಪೆಯೊಳ್ ತಾಮರೆ [1]ಮುಂಬಿ[1] ದುದು ಕಂಡುದಱಿಂ ದಯೆಯುಮುಪಶಮಮುಂ ಪರಿಗ್ರಹಪರಿತ್ಯಾಗಮುಂ ಸಮಾಧಿಯುಂ ಸತ್ಯಮುಂ ಶೌಚಮುಂ ಕ್ಷಮೆಯುಮೆಂದಿವು ಮೊದಲಾಗೊಡೆಯುವಱೊಳ್ ಕೂಡಿದ, ಮಿಕ್ಕ ಸದ್ಧರ್ಮ ಮಾರ್ಗಮುಂ ಧ್ರವ್ಯಪತಿಗಳುಮರಸುಮಕ್ಕಳುಂ ತಮ್ಮ ದ್ರವ್ಯಾದಿ ಮದದಿಂದಂ ತೊಱೆವರ್ ನೀಚಜಾತಿಗಳುಂ ಬಡವರುಂ ಸದ್ಧರ್ಮಮುಂ ಕೈಕೊಂಡು ನೆಗೞ್ವರ್ ಸಮು[2]ದ್ರಂ ಮೇರೆದಪ್ಪುವುದಂ[2] ಕಂಡುದಱಿಂದರಸುಮಕ್ಕಳ್ ತಮ್ಮ ಮರ್ಯಾದೆಯುಂ ಮಿಕ್ಕು ದ್ರವ್ಯಂ ಮೊದಲಾಗೊಡೆಯುವಱೊಳ್ ಲೋಭಿಷ್ಠರಪ್ಪರ್ ಒಳತಪ್ಪ ಸತ್ಯ ಶೌ[3]ಚ[3] ಚಾರಿತ್ರಮೆಂದಿವಱಿಂ ಕುಂದಿಯುಮಾನುಂ ನಿರ್ದಯರ್ಕಳಪ್ಪರ್ ಬೆಳ್ಗ[4]ಟ್ಟಿ[4] ಪೂಡಿದ ಪೊನ್ನರಥಮುಂ ಕಂಡುದಱಿಂದಂ ಸಮ್ಯಗ್ದರ್ಶನ ಜ್ಞಾನಚಾರಿತ್ರಂಗಳಿಂದಂ ಪವಿತ್ರಮಪ್ಪ ನಿರ್ಗ್ರಂಥಲಿಂಗಮಪ್ಪುದನ*ಱಿದೊಳ್ತಪ್ಪ [5]ತಪಮುಂ [6]ಕೈ[6]ಕೊಳೆಪಟ್ಟು[7]ಂ[7] ಪಿರಿದಪ್ಪ ಪುರುಷಕಾರಮುಂ ಸತ್ಯಮುಂ ಮನೋಬಲಮುಂ ವೀರ್ಯಮುಮೆಂದಿವಱಿಂದಂ ಕೂಡಿದ[8]ವರ್ಗಳಿಂ[8]ದಮೊಳ್ದರಪ್ಪ ತೀರ್ಥಕರ ಪರಮ ದೇವರ್ಕಳಿಂದಂ[9] ಚಕ್ರವ*ರ್ತಿಗಳಿಂದಂ[10] ಚರಮದೇಹಧಾರಿಗಳಿಂದಂ ನೆಗೞೆಪಟ್ಟುದನೊಳ್ತಪ್ಪ ಮೋಕ್ಷಮಾರ್ಗಮುಂ ಪೊರ್ದಿಯುಂ ವಿಷಯ ಸುಖಂಗಳೊಳ್ ಮೋಹಿತರ್ಕಳಾಗಿ ಕಿಡುವರ್ ಬೆಳ್ಗಟ್ಟಿಯನರಸರ್ಕಳೇಱುವುದಂ ಕಂಡುದಱಿಂದು ತ್ತಮ ಕುಲ[11]ದವರ್ಗಳ್ಗೆ[11]ಕುಲಜರಲ್ಲದವರೊಡನೆ ಮದುವೆ[12]ಯೊಳ್ ತೊಟ್ಟನಣ್ಪು[12]ಗಳಕ್ಕುಮೆಂದಿಂತು ಪದಿನಾಱುಂ ಕಂಡ ಕನಸುಗಳ ಫಲಂಗಳಂ ಸಂಪ್ರತಿ ಚಂದ್ರಗುಪ್ತ ಮಹಾರಾಜಂಗೆ ಭದ್ರಬಾಹು ಭಟಾರರ್ ಪೇೞ್ದು ಮತ್ತಮೀ ಕಲಿಯುಗ ಮಹಾರಾಜನ ಸ್ವರೂಪಮನಿಂತೆಂದು ಪೇೞಲ್ ತೊಡಗಿದರ್ :

ಹರಿಣಿ ॥ ಅನೃತವಚನೇ ನಿತ್ಯಾಭ್ಯಾಸಃ ಖಲೇಷು ವಿದಗ್ಧತಾ
ಗುಣವತಿಜನೇ ವೈರಾಬುದ್ಧಿಃ ಖಲೇಷ್ವತಿಗೌರವಂ ।
ಯತಿಷು ನಿಯತಂ ವಾಕ್ಪಾರುಷ್ಯಂ ವಿಪತ್ತಿಷು ಚ ಕ್ರಿಯಾ
ಕಲಿಯುಗ ಮಹಾರಾಜಾಸ್ಯೇತಾನಿ ರಾಜವಿಭೂತಯಃ ॥

ಕಾಲೇ ಸಂಪ್ರತಿವರ್ತತೇ ಕಲಿಯುಗೇ ಸತ್ಯಾ ನರಾ ದುರ್ಲಭಾ
ನಾನಾ ಚೋರಗಣಾ ಮುಷಂತಿ ಪೃಥಿವೀಮಾರ್ಯೋ ಜನಃ ಕ್ಷೀಯತೇ ।
ದೇವಾಶ್ಚ ಪ್ರಲಯಂಗತಾಃ ಕರಭ[13]ಪಲ್ಲಾಲ್ಯಂ[13]ಗತಾಃ ಪಾರ್ಥಿವಾಃ
ಪುತ್ರಸ್ಯಾಪಿ ನ ವಿಶ್ವಸಂತಿ ಪಿತರಃ ಕಷ್ಟಂ ಯುಗಂ ವರ್ತತೇ ॥

ನಿರ್ವೀರ್ಯಾ ಪೃಥಿವೀ ಗತೌಷಧಿರಸಾ ನೀಚಾ ಮಹತ್ವಂ ಗತಾಃ
ರಾಜಾನೋಽರ್ಥಪರಾಃ ಕುಧರ್ಮ ನಿರತಾ ವಿಪ್ರಾ ವಿಕರ್ಮಸ್ಥಿತಾಃ ।

---

1. ಪುಟ್ಟಿ (ಘಜಛ). 2. ದ್ರ ವೇಳೆ ತನ್ನ ಮರ್ಯಾದೆಯುಂ ಮಿಕ್ಕುವರಿದುದುಂ (ಕಗ). 3. ಚಾ ಚಾರ (ಛಥ). 4. ಳ್ಳಿಗಳಿಂ (ಘಜಛ), ತ್ತೆಯ (ಗ), ತ್ತೆ (ಕ). *-* (ಕ)ದಲ್ಲಿ ನಷ್ಟವಾಗಿದೆ. 5. ಪದ (ಗ). 6. (ಗ)ದಲ್ಲಿ ಇಲ್ಲ. 7. ದಂ (ಗ). 8. ಮಹಾಪುರುಷರ್ಕಳಿ (ಘಚ). 9. + ಸಕಲ (ಘ). 10. + ಬಲದೇವರ್ಕಳಿಂದಂ (ಘಚ). 11. ಜರಿಗೆ (ಕಗ). 12. ವೆಳ್ವಿಟ್ಟು ನಂಬು (ಕಗ). 13. ದ್ವೈಲೋಣಿಕ್ಯಂ (ಚ), ಪಲ್ಲಾಳ್ಯಂ (ಛ). ಈ ಪದ್ಯ (ಕಘಗ)ಗಳಲ್ಲಿಲ್ಲ.

ಭಾರ್ಯಾ ಭರ್ತರಿ ನೈವ ಬದ್ಧಹೃದಯಾ ಪುತ್ರಾಃ ಪಿತೃದ್ವೇಷಿಣಃ
ಇತ್ಯೇವಂ ಸಮುಪಸ್ಥಿತೇ ಕಲಿಯುಗೇ ಧನ್ಯಾ ವನಂ ಪ್ರಸ್ಥಿತಾಃ ॥

ಎಂದಿಂತು ಭಟ್ಟಾರರ್ ಪೇೞೆ ಸಂಪ್ರತಿ ಚಂದ್ರಗುಪ್ತಮಹಾರಾಜಂ ಕೇಳ್ದು ಮತ್ತಂದಿನ ದಿವಸಂ ಕೞಿದೊಡೆ ಮಂಡಳಿಕರ್ ಜಿನದೀಕ್ಷೆಯಂ ಕೈಕೊಳ್ಳರೆಂಬುದಂ ಕೇಳ್ದಾದಮಾನುಂ[1] ಭೀತನಾಗಿ ಸಿಂಹಸೇನನೆಂಬ ತನ್ನ ಪಿರಿಯ ಮಗಂಗೆ ರಾಜ್ಯ ಪಟ್ಟಂಗಟ್ಟಿ ಭದ್ರಬಾಹು ಭಟ್ಟಾರರ ಪಕ್ಕದೆ ಪಲಂಬರರಸುಮಕ್ಕಳ್ವೆರಸಾ ದಿವಸಮೆ ತಪಂಬಟ್ಟಂ

ಮತ್ತಿತ್ತ ಮಧ್ಯದೇಶದೊಳಿರ್ದ ರಿಸಿಯರ್ಕಳ್ಗೆಲ್ಲಂ ಬೞಿಯಟ್ಟಿ ಬರಿಸಿ ಭಟ್ಟಾರರಿಂತೆಂದರ್ ಪನ್ನೆರಡು ವರ್ಷಂಬರೆಗಮೀ ನಾಡೊಳನಾವೃಷ್ಟಿಯಾಗಿ ಮಹಾರೌದ್ರ ಪಸವಮಕ್ಕುಂ ಮಧ್ಯಮದೇಶಮೆಲ್ಲಂ ಪಾೞಕ್ಕುಮೀ ನಾಡೊಳಿರ್ದ ರಿಸಿಯರ್ಕಳ್ಗೆ ಬ್ರತಭಂಗಮಪ್ಪುದದೞಿಂ ಪೋಪಂ ದಕ್ಷಿಣಾಪಥಕ್ಕೆಂದಾಚಾರ್ಯರ್ಕಳ್ ಸಹಿತ [2]ಮಿಚ್ಛಾರ್[2]ಸಿರ ರಿಸಿಸಮುದಾಯ[3]ಮುಂ ಸಂಪ್ರತಿ ಚಂದ್ರಗುಪ್ತಮುನಿಯುಂ ಬೆರಸು ದಕ್ಷಿಣಾಪಥಕ್ಕೆ ಪೋದರಿತ್ತ ರಾಮಿಲಾಚಾರ್ಯರುಂ ಸ್ಥೂಲಾಚಾರ್ಯರುಂ *[ಸ್ಥೂಲಭದ್ರಾ] *ಚಾರ್ಯರುಮಿಂತೀ ಮೂವರಾಚಾರ್ಯರುಂ ಭಟಾರರೊಡನೆ ಪೋಗಲೊಲ್ಲದೆ ತಂತಮ್ಮ ಋಷಿಸಮುದಾಯಮುಂ ಬೆರಸು[3] ಸಿಂಧು ವಿಷಯಕ್ಕೆ ಪೋದರಿತ್ತ ಭಟ್ಟಾರರುಂ ಪಿರಿದು ಋಷಿಸಮುದಾಯಂ ಬೆರಸು ಗ್ರಾಮನಗರಖೇಡಖರ್ವಡಮಡಂಬಪಟ್ಟಣ ದ್ರೋಣಾಮುಖಂಗಳಂ ಕೞಿದು ಪೋಗಿ ಕ[4]ಬ್ಬ[4]ಪ್ಪು ನಾಡೆನೆಯ್ದಿ ಪೋಗುತ್ತಂ ಭದ್ರಬಾಹು ಭಟ್ಟಾರರ್ ತಮ್ಮಾಯುಷ್ಯಪ್ರಮಾಣಮಱಿದಾಮಿಲ್ಲಿ ಸಂನ್ಯಸನಂ ಗೆಯ್ದಪ್ಪೆವು ನೀಮೆಲ್ಲಂ ಪೋಗಿಮೆಂದು ತಮ್ಮ ಪಿರಿಯ ಶಿಷ್ಯರ್ ದಶಪೂರ್ವಧಾರಿಗಳ್ ವಿಶಾಖಾಚಾರ್ಯರೆಂಬೊರಲ್ಲಿಂ ಬೞಿಯಮಾರ್ಯ ಸುಹಸ್ತಿ[5]ಗಳು[5]ಮರ ಭದ್ರರುಂ ಸುಭದ್ರಮಿತ್ರರುಂ ಮಹಾ[6]ಗಿರಿ[6]ಯುಂ ಸುಮತಿಯುಂ ಮಹಾಮತಿಯುಂ [7]ವಿಶಾಖನಂದಿಯುಮೆಂದಿವರ್ಗಳೆಲ್ಲರುಮನಾಚಾರ್ಯರ್ ಮಾಡಿ ದ್ರವಿ[8]ೞ[8]ವಿಷಯಕ್ಕೆ ಪೋಗಿಮೆಂದು ವಿಶಾಖಾಚಾರ್ಯರೊಡನೆ ಎಣ್ಛಾಸಿರ್ವರ್ ರಿಸಿಯರನಟ್ಟಿದರ್ ಚಂದ್ರಗುಪ್ತಮುನಿಯುಮನಿವರೊಡನೆ ಪೋಗಿಮೆಂದು ಭಟ್ಟಾರರ್ ಕಿೞಿ ಪೋಗಲ್ವೇೞ್ದೊಡಾಮುಂ ಪೋಗಲೊಲ್ಲೆವು ನಿಮ್ಮಡಿಗಳ್ಗೆ ವಿನಯಂಗೆಯ್ಯುತ್ತಮಿರ್ದಪ್ಪೆಮೆಂದು ಪೋಗಲೊಲ್ಲದೆ ಪಕ್ಕದಿರ್ದರುೞಿದರೆಲ್ಲಂ ಪೋದರಿತ್ತ[9] ಭದ್ರಬಾಹುಭಟ್ಟಾರರ್ ಕ[10]ಬ್ಬ[10]ಪ್ಪು ನಾಡಡವಿಯ ಬೆಟ್ಟದ ಮೇಗ[11]ಣೇಕಸಱಿ[11]ಯ ಮೇಗಿ[12]ರ್ದು[12] ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಜಾವಜ್ಜೀವಂ ನಿವೃತ್ತಿಪೂರ್ವಕಂ ಸಂನ್ಯಸನಂಗೆಯ್ದರ್

---

1. + ಸಂಸಾರಕ್ಕೆ ಪೇಸಿ (ಫಚಭ). 2. ಮೆಣ್ಛಾ (ಫಚಭ). 3. (ಕಖಗ)ಗಳಲ್ಲಿಲ್ಲ. 4. ಬ್ಬ (ಫಭ), (ಚ)ದಲ್ಲಿ ತ್ರುಟಿತವಾಗಿದೆ. 5. ಗಣಾ (ಫಚಭ). 6. ರಿ ರುಷಿ (ಫಚಭ), ರಿಗಿರಿ (ಕಗ). *ವಿಶಾಖಾ (ಫಚ), ಶಾಖಾ (ಚ). 7. + ರಾಮಿಲ್ಲರುಂ ಪ್ರೋಷ್ಠಿಲ್ಲರುಂ (ಕಗ). 8. ಡ (ಕಗ), ೞ (ಫಚಭ). 9. + ಚಂದ್ರಗುಪ್ತ ಮುನಿಯುಪಷ್ಟೋಪವಾಸಂಗೆಯ್ದಿರ್ದರ್ (ಕಗ). 10. ಬ್ಬ (ಫಭ). 11. ಣೇಕಸಱಿ (ಕಗ), ಣೇಕಸಿಲೆ (ಫಭ), ಣೇಕಶಿಲೆ (ಚ). 12. ಳ್ದು (ಕಗ).

ಇತ್ತ ಚಂದ್ರಗುಪ್ತ ಮುನಿಯುಮುಪ್ಪೋಪವಾಸಂಗೆಯ್ದಿರ್ದೋರಂ ಭಟ್ಟಾರರೆಂದರಾ [1]ಮುಂ ನೋಂತಿರ್ಪೆವು ನೀಮುಂ ಚ[1]ರಿಗೆವುಗುವುದಲ್ತೆಯೆಂದೊಡೆ ಭಟ್ಟಾರರಾ ಊರಿಲ್ಲ ಕೇರಿಯಿಲ್ಲೀಯಡವಿಯೊಳಿಲ್ಲಿಗೆ ಚರಿಗೆ[2]ವುಗುವುದೆಂದೊಡೆ ಭಟ್ಟಾರರೆಂದರ್ ಕಾಂತಾರ ಭೈಕ್ಷಮೆಂಬುದಾಗಮದೊಳ್ ಪೇಟ್ದುದಾರಾನುಂ ಬಟ್ಟೆವೋಪರ್ ಬೀಡಂ ಬಿಟ್ಟಿರ್ದರ್ ನಿಱಿಸುವರಪ್ಪುದಱಿಂದೆ ಚರಿಗೆವುಗುವುದೆಂದೊಡೆ ಅಂತೆಗೆಯ್ವೆನೆಂದು ದೇವರಂ ಬಂದಿಸಿ ಚರಿಗೆವೊಕ್ಕಡವಿಯುಂ ತೊಟಲ್ವಲ್ಲಿಯೊಂದು ಮರದ ಪೊಟಲೊಳಿರ್ದು ಮಾಣಿಕದ ಮುತ್ತಿನ ಪಿಂಡುಗಂಕಣಮುಂ ತೊಟ್ಟ ಕೈಯಿಂದಂ ಪೊನ್ನ ಸಟ್ಟುಗಮಂ ತೀವಿ ಭೈಕ್ಷಮಂ ಪಿಡಿಯೆಂದು ನೀಡಿದ ಕೈಯನಿತನೆ ಕಂಡು ತೊಟಲ್ದಲಾಭಮಾಗಿ ತಮ್ಮಾವಾಸಕ್ಕೆ ಪೋದೊಡೆ ಭಟ್ಟಾರರ್ ನಿಲೆವಟ್ಟುದೆಯೆಂದು ಬೆಸಗೊಂಡೊಡವರುಂ ತಮ್ಮ ಕಂಡುದಂ ಪೇೞ್ದೊಡೆ ಬೇಸಱದೆ ದಿವಸಕ್ಕಂ ಚರಿಗೆವೊಗುವುದೆಂದು ಭಟ್ಟಾರರ್ ಕಲ್ಪಿಸಿದೊಡಂತೆಗೆಯ್ವೆಮೆಂದು ಮಱುದಿವಸಂ ಚರಿಗೆವೊಕ್ಕಡವಿಯುಂ ತೊಟಲ್ವಲ್ಲಿಯೊಂದು ಮರದ ಕೆೞಗೆ ಪೊನ್ನ ಮಡಕೆಯೊಳ್ ಬೋನಮನೊಡ್ಡಿ ನೆಱೆಯೆ ತೊಟ್ಟುಟ್ಟು ಮಂಗಳವಸದನಂಗೊಂಡು ದಿವ್ಯಸ್ತ್ರೀ ಬಂದು ನಿಱಿಸಿದೊಡೆ ಇಂತೆಂದರಬ್ಬಾ ನೀ[3]ನೊರ್ವಳೆಯೆ ಪೆಱರಾ[3]ರುಮಿ[4]ಲ್ಲಿಂತು[4] ರಿಸಿಯರ್ಕಳ್ಗೆ ನಿಲಲಾಗದೆಂದು ಪೇಟ್ದು ತಮ್ಮಿರ್ದೆಡೆಗೆ ವೋದೊಡೆ ಭಟ್ಟಾರರಿಂತೆಂದರ್ [5]ನಿ[5]ಲೆವಟ್ಟುದೆ ಎಂದು ಬೆಸಗೊಂಡೊಡವರಿಂತೆಂದರ್ ಒರ್ವಳ್ ದಿವ್ಯಸ್ತ್ರೀ ಸರ್ವಾಭರಣ ಭೂಷಿತೆಯೊಂದು ಮರದ ಕೆೞಗೆ ಬೋನಮನೊ[6]ಡ್ಡಿ[6]ರ್ದಿದಿರಂ ಬಂದು ನಿಱಿಸಿದೊ[7]ಡೊರ್ವಳೆ[7] ಪೆಱರಾರುಮಿಲ್ಲೆಂದೆನೆ ನಿಲ್ಲದೆ [8]ಬಂದೆ[8]ವೆಂದೊಡೊಳ್ಳಿತೆಯ್ದಿರೆಂದೊರಿಂತು ಪತ್ತು[9]ಪವಾಸಂಗೆಯ್ದು ಪನ್ನೊಂದನೆಯ ದಿವಸದಂದು ಚರಿಗೆವೊಕ್ಕಡವಿಯುಂ ತೊಟಲ್ವನ್ನೆಗಂ ಪಿರಿದೊಂದು ಪೊೞಲುಂ ಧವಳಾರಂಗಳುಂ ನೆಲೆಯ ಮಾಡಂ[10]ಗಳುಂ[10] ಸೂಳೆಗೇರಿಗಳುಂ ದೇವಾಲಯಂಗಳುಮಾನೆ ಕುದುರೆಗ[11]ಳುಂ[11] ಮಾನಸರ ಬರುವುಮಂ ಪೋಗುಮಂ ಕಂಡಿನಿತು ದಿವಸಮೀಮರಗಳ ಗಿ[12]ಡು[12]ಗಳ ಪೊದಱುಗಳ ಮಱೆಗಳೊಳೀ ಪೊೞಲಂ ಕಂಡೆಮಿಲ್ಲೆಂದು ಮನದೊಳ್ ಬಗೆದು ಪೊೞಲೊಳಗೆ ಚರಿಗೆವೊಕ್ಕಾಗಳೊರ್ವಳ್ ದಿವ್ಯಸ್ತ್ರೀ ಪರಿವಾರಸಹಿತಮಿದಿರಂ ಬಂದು ನಿಱಿಸಿ ತನ್ನ ಮಾಡಕ್ಕೊಡಗೊಂಡು ಪೋಗಿ ಕಾಲಂ ಕರ್ಚಿಯರ್ಚಿಸಿ ಗುರುಭಕ್ತಿಗೆಯ್ದು ವಂದಿಸಿಯಾದಮಾನುಂ ಭಕ್ತಿಯಿಂದಂ ದಿವ್ಯಾಹಾರಮಂ ಮಗುೞ್ ಮಗುೞ್ ಬಡ್ಡಿಸೆ [13]ಚರಿಗೆಮಾಡಿ[13] ಪರೆಸಿ ತಮ್ಮಾವಾಸಕ್ಕೆ ಪೋದೊಡೆ ಭಟ್ಟಾರರ್ ನಿಲೆವಟ್ಟುದೆಯೆಂದು ಬೆಸಗೊಂಡೊಡೆ ನಿಲೆವಟ್ಟುದೆಂದೊಡಲ್ಲಿ ನಿಂದಿರೆಂದು ಬೆಸಗೊಂಡೊಡಿಂತೆಂದರ್ ಭಟ್ಟಾರರಾ ಇನಿತು ದಿವಸಂ ಮರಂಗಳ ಪೊದಱುಗಳ ಮಱೆಗಳೊಳೀ ಪೊೞಲಂ ಕಂಡೆಮಿಲ್ಲೆಂದಿನಿಸಾನುಂ†

---

1. ರಿಂತು ದಿವಸಕ್ಕಂ ನಾಮುಂನೋನುವಿರ್ಚರಿಗೆ (ಕಗ). 2. ವುಗುವೆಮೆಂದು (ಘಚಛ). 3. ಮುವೊರ್ವರೆ ನಾಮುವೊರ್ವರೆ ಪೆಱರಾ (ಗ), ವೊರ್ವರೆಮಾಮುವೊರ್ವರೆ ಪೆಱಗಾ (ಘಛ). ವೊರ್ವರೆ ಮಾವೊರ್ವರೆ ಪೆಱಗಾ (ಚ). 4. ಲ್ಲಮೆ (ಕಗ). 5. ನೆಱೆ (ಘಚ), ನೆಲೆ (ಚ). 6. ಟ್ಟಿ (ಚ). 7. ದಿರ್ವರೆ (ಚಛ), ದಿರ್ವರುಮೆ (ಛ). 8. ಬಂದೆ (ಕ). 9. ದಿವಸಮುಂ (ಘಚಛ). 10. ಳ್ಗಂಗಡಿಗಳುಂ (ಘಚಛ). 11. ಳನೇಕ (ಚ). 12. ೦ (ಘಚಛ). 13. ಯುಂಡು (ಘಚಛ).
†ಪು. ೭೪-೮೩† (ಖ)ದಲ್ಲಿ ನಷ್ಟವಾಗಿದೆ.

ತಿಣ್ಣಂ ತೋಟಿಲ್ವಲ್ಲಿ ಪಿರಿದೊಂದು ಪೊೞಲಂ ಕಂಡು ಚರಿಗೆವೊಕ್ಕೊಡೊರ್ವಳ್ ದಿವ್ಯಸ್ತ್ರೀ ಪರಿವಾರಸಹಿತಮಿದಿರಂ ಬಂದು ನಿಱಿಸಿ ತನ್ನ ಮನೆಗೊಡಗೊಂಡುಪೋಗಿ ಕಾಲಂ ಕರ್ಚಿಯರ್ಚಿಸಿ ಗುರುಭಕ್ತಿಗೆಯ್ದು ವಂದಿಸಿಯಾದಮಾನುಂ ಭಕ್ತಿಯಿಂದಂ ದಿವ್ಯಾಹಾರಂಗಳುಂ ಬಡ್ಡಿಸೆ ಕ್ರಮಂ ಪೋಗೆ ಚರಿಗೆಮಾಡಿ ಪರಸಿ ಬಂದೆಮೆಂದು ಭಟ್ಟಾರರ್ಗೆ ಪೇೞ್ದೊಡೊಳ್ಳಿತ್ತಾಯಿತ್ತೆಂದು ಸಂತೊಂಸಂಬಟ್ಟಿರ್ದರಿಂತು ದಿವಸಕ್ಕಂ ಪೊೞಲ್ಗೆ ಪೋಗಿ ಚರಿಗೆ ಮಾಡುವರಿತ್ತ[1] ಭದ್ರಬಾಹು ಭಟ್ಟಾರರ್ ಮುನ್ನೆ ತಮ್ಮ ತಪಂಗೆಯ್ವಂದೆಲ್ಲಾ ಕಾಲಮುಮುಪವನೋದಯರ್ದು ಚರಿಗೆಮಾಡಿ ಪಸಿವಂ ಸೈರಿಸಿ ತಮ್ಮ ಮೆಯ್ಯಂ ಕ್ಷಯಕ್ಕೆ ತಂದು ಸಂನ್ಯಸನಂಗೆಯ್ದು ಪಲವು ದಿವಸದಿಂದಂ ಪಸಿವುಂ ನೀರೞ್ಕೆಯುಮಂ ಸೈರಿಸಿ ಶುಭಪರಿಣಾಮದಿಂದಂ ಸಮ್ಯಗ್ದರ್ಶನಜ್ಞಾನ ಚಾರಿತ್ರಂಗಳಂ ಸಾಧಿಸಿ ಮುಡಿಪಿ ಬ್ರಹ್ಮಕಲ್ಪದೊಳ್ ಪತ್ತು ಸಾಗರೋಪಮಾಯುಷ್ಯಮನೊಡೆಯೊಂ ಅಮಿತ ಕಾ[2]ತಿಯೆಂ[2]ಬೊಂ ದೇವನಾಗಿ ಪುಟ್ಟಿದೊಂ

ಚಂದ್ರಗುಪ್ತಮುನಿ[3]ಯುಂ ಭಟ್ಟಾರರ [3]ನಿಸಿದಿಗೆ[3]ಯಂ ಬಂದಿಸುತ್ತಮಾದೇವತೆ ಬೆಸಕೆಯ್ಯೆ ಚರಿಗೆ ಮಾಡಿ ತಪಂಗೆಯ್ಯುತ್ತಂ ಪನ್ನೆರಡು ವರುಷಂಬರೆಗಮಿಂತಿರ್ಪನ್ನೆಗಮಿತ್ತ [4]ತಿಮುೞಿನಾಟ್ಗೆ[4] ಪೋದ ಋಷಿಸಮುದಾಯಮೆಲ್ಲಂ ಪನ್ನೆರಡು ವರುಷಂಬರೆಗಂ ಸುಖ[5]ದೊಳಿ[5]ರ್ದು ನಿರುಪಸರ್ಗದಿಂ[6] ದರ್ಶನಜ್ಞಾನಚಾರಿತ್ರಂಗಳಂ ಪ್ರತಿಪಾಳಿಸಿ ಬಡಗನಾಡ ಪಸವು ತಿಳಿದುದೆಂಬುದನಾ ನಾಡಿಂದಂ ಬಂದರ್ ಪೇೞೆ ಕೇಳ್ದಱಿದು ಭಟ್ಟಾರರ ನಿ[7]ಸಿದಿಗೆ[7]ಯಂ ಬಂದಿಸಿ ಪೋಪಮೆಂದು ವಿಶಾಖಾಚಾರ್ಯರ್ ಮೊದಲಾಗೊಡೆಯ ಋಷಿಸಮುದಾಯಮೆಲ್ಲಂ ದಕ್ಷಿಣಾಪಥದಿಂದಂ ಬಂದು ಭಟ್ಟಾರರ ನಿ[7]ಸಿದಿಗೆ[7]ಯನೆಯ್ದುಗಳ್ ಚಂದ್ರಗುಪ್ತ ಮುನಿಯುಂ ರಿಸಿಯರ್ಕಳ ಬಕಮಂ ಕಂಡಿದಿರಂ [8]ಬಂದು[8] ಋಷಿಸಮುದಾಯಮೆಲ್ಲಮಂ ಬಂದಿಸಿದೊಡೆ ರಿಸಿಯರ್ಕಳಿಂತೆಂದು ಬಗೆದರೀಯಡವಿಯೊಳಿನ್ನೆಗಮಿವರ್ ಕಂದಮೂಲಫಲಂಗಳಂ ತಿಂದು ತೊೞಿಯ ಪಳ್ಳದ ನೀರ್ಗಳಂ ಕುಡಿದು ಪನ್ನೆರಡು ವರುಷಂಬರೆಗಮೆಂತು ಬರ್ದೊರೆಂದು ತಮ್ಮೊಳ್ ನುಡಿದು ಮತ್ತಂ ತಲೆನವಿರ್ ಬೆರೆದುದುಮಂ ಕಂಡಾರಪ್ಪೊಡಂ ಪ್ರತಿವಂದನೆಯಂ ಕೊ[9]ಟ್ಟುದಿ[9]ಲ್ಲ ಮತ್ತಾ ರಿಸಿಯರ್ಕಳನಿಬರುಮಾ ದಿವಸಮುಪವಾಸಂಗೆಯ್ದರ್ಚಿಸಿ ಕ್ರಿಯೆಗೆಯ್ದು ಭಟ್ಟಾರರ ನಿ[7]ಸಿದಿಗೆ[7]ಯಂ ಬಂದಿಸಿಯಾ ದಿವಸಮಲ್ಲಿ[10]ಯೆಕೆಂದು[10]ಮಱುದಿವಸಂ ಪೋಪಾಗಳ್ ಚಂದ್ರಗುಪ್ತ [11]ಮುನಿಗಳಿಂ[11]ದರ್ ಭಟಾರಾ ನಿನ್ನೆ [12]ಬಟ್ಟೆವಂದು[12]ಪವಾಸಂಗೆಯ್ದು ಸೇದೆ[13]ವಟ್ಟರಿಂ[13]ದಿನ ದಿವಸಮಿಲ್ಲಿರ್ದು ಚರಿಗೆವೊಕ್ಕು ಸೇದೆಯನಾಱಿಸಿ ನಾಳೆ ಪೋ[14]ಕೆಂ[14]ದೊಡೆ ಭಟ್ಟಾರರೆಂದರೂರಿಲ್ಲ ಕೇರಿಯಿಲ್ಲೆಲ್ಲಿ ಚರಿಗೆವುಗುವಮೆಂತು ಕೆಮ್ಮನೇಕೆಮ್ಮಂ ತಾಂಗಿದಪಿರೆಂದೊಡೆ[15] ಪಿರಿದೊಂದು

1 ಪೋಗಿಯುಣ್ಬರಿತ್ತ (ಫಚಭ). 2. ತನೆಂ (ಚಫ). 3. ಷಿದ್ದಿ (ಫಚಭ). 4. ದ್ರವಿಳನಾಳ್ಕೆ (ಫಚ). ದ್ರವಿಳನಾಡಿಂಗೆ (ಭ). 5. ಮಿ (ಫಚಭ). 6. + ಸಮ್ಯಕ್ (ಫಚ). 7. ಷಿದಿ (ಫಚಭ). 8. ಪೋಗಿ (ಫಚಭ). 9. ಟ್ಟರಿ (ಫಚಭ). 10. ರ್ದು (ಫಚಭ). 11. ಮಹಾ ಮುನಿಯರೆಂ (ಫಚಭ). 12. ನಾಮುಂ ಶ್ರಮಂ ಬಟ್ಟೆರು (ಕಖಗ). 13. ಗೆಟ್ಟಂದಿನ (ಕಖಗ), ಗೆಟ್ಟರೀ (ಫಚ). 14. ಗಮೆಂ (ಫ). 15. + ಭಟಾರಾ (ಫಚಭ).

ಪೊಲುಂಟು [1]ನೀಮುಂ[1] ಸಂಕ್ಲೇಶಂ [2]ಬಡದಿರಿಂ[2]ದಿನ ದಿವಸಮಿರ್ಕೆಂದೊಡನಿಬರು ಮೆಂದರಿಂದಿನ ದಿವಸಮುಪವಾಸಂಗೆಯ್ದು ಪ್ಪೊಡಮಿವ[3]ರೆಂಬುದನಿಂಬು[3]ಕೆಯ್ವೆಮೆಂದಿರ್ದೊಡೆ ಮಧ್ಯಾಹ್ನಮಪ್ಪಾಗಳ್ [4]ದೇವರಂ ಬಂದಿಸವೇಟ್ಕೊಡನಿಬರುಂ[4] ಬಂದಿಸಿ ಚಂದ್ರಗುಪ್ತಮುನಿಯ ಬಟಿಯಿಂ ಋಷಿಸಮುದಾಯಮೆಲ್ಲಂ ತಗುಳ್ದು ಕಿಱಿದಂತರಮಂ ಪೋಪನ್ನೆಗಂ ಪಿರಿದೊಂದು ಪೊಲಂ ಕಂಡು ಚರಿಗೆವೊಕ್ಕನಿಬರುಮಂ ನಿಱಿಸಿ ಕೆಲ ರಿಸಿಯರುಮಾಚಾರ್ಯರ್ಕಳುಂ ಬೆರಸು ತಾವೊಂದುಮನೆಯೊಳ್ ನಿಂದರಿಂತನಿಬರುಂ ದಿವ್ಯಾಹಾರಂಗಳುಂ ಕ್ರಮಂ ಪೋಗೆ ಚರಿಗೆಮಾಡಿ ತಮ್ಮಾವಾಸಕ್ಕೆ ಬಂದು ವಿಶಾಖಾಚಾರ್ಯರೆಂದರ್ ಬ್ರಹ್ಮಯ್ಯಾ ಕಾಲಂಕರ್ಚಲ್ ಗುಂಡಿಗೆಯಂ ಕೊಂಡು ಬನ್ನಿಮೆಂದೊಡೆ ಬ್ರಹ್ಮಯ್ಯನೆಂದಂ ಗುಂಡಿಗೆಯನಾಂಡ ಮನೆಯೊಳ್ ಮಱೆದು ಬಂದೆನೆನೆ ಬೇಗಂ ಪೋಗಿ ಕೊಂಡು ಬಾಯೆನೆ ಬ್ರಹ್ಮಯ್ಯಂ ಪೋಗಿ[5] ಪೊಲಿಡೆಯಂ ಕಾಣದಡವಿಯೆಲ್ಲಮಂ ತೊಟಲ್ದು [6]ನೋಡಿ[6] ಗುಂಡಿಗೆಯಂ ಕಾಣದತ್ತಮಿತ್ತಂ ನೋೞ್ಪನ್ನೆಗಮೊಂದು ಮರದ ತುತ್ತತುದಿಯೊಳಿರ್ದೆಟಲ್ವ ಗುಂಡಿಗೆಯಂ ಕಂಡು ಬಂದು ಗುರುಗಳ್ಗಿಂತೆಂದಂ ಭಟ್ಟಾರಾ [8]ನಾಮುಂ[8]ಡೆಡೆಯೊಳಾ ಪೊಲಿಲ್ಲ ನಮ್ಮುಂಡ ಮನೆಯುಮಿಲ್ಲ ಗುಂಡಿಗೆಯುಮೊಂದು ನಿಡಿಯ ಮರದ ತುತ್ತತುದಿಯೊಳಿರ್ದುದಾರಾನು ಮೇಱಲ್ ಬ[9]ಲ್ಲೊರ[9]ನಟ್ಟುಗೆಂಡೊಡನಿಬರುಂ ರಿಸಿಯರ್ಕಳೆಲ್ಲಂ ಚೋದ್ಯಂಬಟ್ಟು ನೋಡಲ್ಪೋಗಿ ಪೊಲಂ ಕಾಣದಡವಿಯೊಳ್ ನಿಡಿಯ ಮರದ ತುತ್ತತುದಿಯೊಳಿರ್ದೆಟಲ್ವ ಗುಂಡಿಗೆಯಂ ಕಂಡು ತೆಗೆಯಿಸಿಕೊಂಡು ಪೋಗಿ ಚಂದ್ರಗುಪ್ತಮುನಿ[10]ಯನನಿಬರುಂ ರಿಸಿಯರ್ಕಳ್ ನೆ[10]ರೆದಿಂತೆಂದರಾಮುಂ ನಿಮ್ಮನೀಯಡವಿ[11]ಯೊಳ್[11] ಕಂದಮೂಲಫಲಂಗಳಂ ತಿಂದು ಪಳ್ಳದ [12]ನೀರಂ[12] ಕುಡಿದು ಇನಿತು ಕಾಲಂ ಬ[13]ರ್ದಿ ರೆಂ[13]ದು ನಿಮ್ಮಂ ಬಗೆದು ಬಂದಿಸಿದೆಮಿಲ್ಲಿದರ್ಕೆ ನೀಮುಂ ಮನದೊಳೇವಂಗೊಳ್ಳದೆ ಕ್ಷಮಿಯಿಸಿಮೆಂದು ನುಡಿದು ವಂದಿಸಿ ಮತ್ತಮಿಂತೆಂದರ್ ನೀಮುಂ ದೇವತಾಧಿಷ್ಠಿತರಿರ್ ನಿಮಗೆ ದೇವತೆಗಳ್ ಬೆಸಕೆಯ್ವುವು ದೇವತೆಗಳ್ ಮಾಡಿದಾಹಾರಮಂ ನೀಮಿನ್ನೆಗಮುಂಡು ತಪಂಗೆಯ್ದಿರಿನ್ನುಣಲ್ವೇಡ ದೇವತೆಗಳ ಮಾಡಿದಾಹಾರಮಂ ರಿಸಿಯ[14]ರ್ಗೆ ಚರಿಗೆ ಮಾಡಲಾಗ[14]ದೆಂದು ಬಾರಿಸಿಯವರ್ಗೆ ಲೋಚುಗೆಯ್ದು ಬ್ರತಂಗಳನೇಱಿಸಿ ಪಡಿಕಮಣಂಬೇಟ್ಕೊಡಗೊಂಡುತ್ತರಾಪಥಕ್ಕೆ ಪಯಣಂಬೋಗಿ ಕತಿಪಯ ದಿವಸಂಗಳಿಂದಂ ಮಧ್ಯದೇಶಮನೆಯ್ದಿಯಾ ನಾಡೊಳಾ ಋಷಿಸಮುದಾಯಮೆಲ್ಲಂ ನಿರುಪಸರ್ಗಮಿರ್ದತ್ತು.

ಮತ್ತಿತ್ತ ರಾಮಿಲಾಚಾರ್ಯರುಂ ಸ್ಥೂಲಾಚಾರ್ಯರುಂ ಸ್ಥೂಲಭದ್ರಾಚಾರ್ಯರುಮಂತು ಮೂವರುಂ ಸಿಂಧು ವಿಷಯಕ್ಕೆ ತಂತಮ್ಮ ಋಷಿಸಮುದಾಯಂ ಬೆರಸು

1. ನಾವುಂ (ಕಖ). (ಘಚಛ)ಗಳಲ್ಲಿಲ್ಲ. 2. ಬೇಡಿಂ (ಘಚಛ). 3. ರಿಂಬು (ಖ), (ಗ)ದಲ್ಲಿಲ್ಲ. 4. (ಘಚಛ)ಗಳಲಿಲ್ಲ. 5. + ನೋಳ್ಪನ್ನೆಗಂ (ಘಚಛ). 6. (ಘಚಛ)ಗಳಲ್ಲಿಲ್ಲ. 7. + ಮುಗುಳ್ದು (ಚ). 8. ನಮ್ಮುಂ (ಚಛ), ಬ್ಲಾತ (ಕಖಗ). 10. ಯನನಿತು ರುಷಿಸಮುದಾಯಂ ನೆ (ಘಚಛ). 11. ಯ (ಚ). 12. ತೊಱೆಯ ನೀರ್ಗಳಂ (ಘಛ), ಕೊಳ್ಳದ ತೊಱೆಯ ನೀರಂ (ಚ). 13. ದ್ವಿರೆ (ಖ). (ಗ)ದಲ್ಲಿ ನಷ್ಟವಾಗಿದೆ. 14. ಕಳುಗಾಲ್ಪಾರರ (ಘಚಛ).

ಪೋದೊಡಾ ನಾಡೊಳ್ ಮಾನಸರ್ ಮಾನಸರಂ ತಿಂಬಂತುಟಪ್ಪ ಮಹಾಘೋ[1]ರಂ[1] ಪಸವಾದೊಡಲ್ಲಿಯ ಶ್ರಾವಕರೆಲ್ಲಂ ನೆರೆದು ರಿಸಿಯರಲ್ಲಿಗೆ ವೋಗಿ ಇಂತೆಂದರ್ ಭಟಾ[2]ರಾ ಲ[2]ವಟುಗಳ (?) ಕೈಯಲ್ ಪಗಲುಣ[3]ಲುಮಡಲುಂ ಪೆಱಲಾಗ[3] ಮೆಲ್ಲಾ ಯ್ದೆಱಿದು ಕೊಂಡುಂ[4]ಬ[4]ರ್ ಲೋಗರೆಲ್ಲಮವರ ಭಯಕ್ಕೆ ಪಗಲಡುಗೆಯುಂ ಬಿಸು ಟ್ಟಿರುಳಟ್ಟುಣಲ್ ತಗುಳ್ದರದಱಿಂ ನೀಮುಮಿಂದಿತ್ತಿರುಳ್ ಭೈಕ್ಷಭಾಜನಂಗಳಂ ಕೊಂಡು ಪೋಗಿ ಶ್ರಾವಕರ ಮನೆಗಳಂ ತೊೞಲ್ದು ಭೈಕ್ಷಂ ಬೇಡಿಕೊಂಡು ಕೊಟಿನಿರುಳ್ ತಂದಿಟ್ಟು ಪಗುಲುಣ್ಬುದೆಂದೊಡಂತೆ ಗೆಯ್ವೆಮೆಂದು ಇರುಳ್ ತೊೞಲ್ದು ಭೈಕ್ಷಮಂ ತಂದು ಮಡಗಿಟ್ಟು ಪಗಲುಣ್ಬೊರಾದರಿಂತೀ ಪಾಂಗಿನೊಳ್ ಕಾಲಂ ಸಲೆ ಮತ್ತೊಂದು ದಿವಸವೊರ್ವ ನಿಗ್ಗ್ರಂಥ[5]ಯತಿ[5] ಭೈಕ್ಷಭಾಜನಮಂ ಕೊಂಡು ಶ್ರಾವಕರ ಮನೆಗಳನಿರುಳ್ ಭೈಕ್ಷ ಬೇಡಿ ತೊೞಲುತ್ತಂ ಪೋಪರೊಂದು ಮನೆಯಂ ಪೊಕ್ಕು ಭೈಕ್ಷಮಂ ಬೇಡಿದೊಡೊರ್ವಳ್ ಪೊಸ ಶ್ರಾವಕಿ [6]ಬಸಿರ್ಪೆಂಡತಿ[6] ವೇ[7]ಳಾ ಸ್ವಾಮಿನಿಯೆಂಬೊಳ್ ಕ[8]ರ್ದಿಂ[8]ಗ[9]ಳಿರುಳೊಳ್[9] ಕಟ್ಟಲೆಯೊಳ್ ನಿಗ್ಗ್ರಂಥಮಪ್ಪ[10] ರೂಪಂ[11] ಕಂಡು ಬೆರ್ಚಿದೊಡಾಕೆಗೆ ಬಸಿಱಿೞಿದತ್ತದಂ ಕಂಡು ಶ್ರಾವಕರೆಲ್ಲಂ ನೆರೆದು ರಿಸಿಯರಲ್ಲಿಗೆ ವೋಗಿ ಇಂತೆಂದರ್ ಭಟ್ಟಾರಾ ಕಾಲಮಪ್ಪೊಡೆ ಕೆಟ್ಟತೊಳ್ಳಿತ್ತಪ್ಪ ಕಾಲಮಾದಂದು ಪ್ರಾಯಶ್ಚಿತ್ತಂಗೊಂಡು ನಿಮ್ಮ ತಪಂಗಳೊಳ್ ನಿಲ್ಲಿ[13]ಮಾಗಳೀ ಪಸವು ಕೞಿ[12]ವನ್ನೆಗಂ[12] ನೀಮುಮೆಡದ ಕೈಯನೆೞಲಿಕ್ಕಿಯರ್ದ್ಧಗಪ್ಪಡಮನೆಡದ ಮುಯ್ಪಿನಮೇ [13]ಗಿಕ್ಕಿ[13] ಒಳಗೆ ನಿಗ್ಗ್ರಂಥಮಪ್ಪ ರೂಪಂ ತಾಳ್ದಿ ಬಲದ ಕೈಯೊಳ್ ಭೈಕ್ಷದ ಭಾಜನಮಂ ಪಿಡಿದು ತೊೞಲ್ದು ಭೈಕ್ಷಮಂ ಬೇಡಿ ಮಡಗಿಟ್ಟು ಪಗ[14]ಲುಣ್ಣಿ ಮೆಂ[14]ದೊಡವರ್ಗಳುಮಂತೆ ಗೆಯ್ವೆಮೆಂದವರ ಪೇೞ್ದ ಪಾಂಗಿನೊಳ್ ನೆಗೞ್ದು ಪಸವಂ ನೀಗಿ ಕಾಲಮೊಳ್ಳಿತ್ತಾದೊಡೆ ರಾಮಿಲಾಚಾರ್ಯರುಂ ಸ್ಥೂಲಾಚಾರ್ಯರುಂ ಸ್ಥೂಲ ಭದ್ರಾಚಾರ್ಯರುಮಂತು ಮೂವರುಂ ತಂತಮ್ಮ ಋಷಿಸಮುದಾಯಂ ಬೆರಸು ವಿಹಾರಿಸುತ್ತ ಮಧ್ಯದೇಶಕ್ಕೆ ರಿಸಿಯರ್ಕಳಿರ್ದಲ್ಲಿಗೆ ಬಂದೊಡೆ ವಿಶಾಖಾಚಾರ್ಯರ್ ಮೊದಲಾಗೊಡೆಯ ಆಚಾರ್ಯರ್ಕಳವರನಿಂತೆಂದರ್ ನೀಮೆಲ್ಲಮರ್ಧಗಪ್ಪಡಮಂ ಬಿಸುಟ್ಟು ನಿಗ್ಗ್ರಂಥರೂಪುಮಂ ಕೈಕೊಂಡು ಬ್ರತಂಗಳನೇಱಿಸಿ ಪ್ರಾಯಶ್ಚಿತ್ತಂ ಗೊಂಡು ಪಡಿಕಮಣಂಗೇಳ್ದು ತಪದೊಳ್ ನಿಲ್ಲಿಮೆಂದೊಡಂತೆಗೆಯ್ವೆಮೆಂದು ರಾಮಿ ಲಾಚಾರ್ಯರುಂ ಸ್ಥೂಲಾಚಾರ್ಯರುಂ[15] ತಂತಮ್ಮ ಋಷಿಸಮುದಾಯಂ ಬೆರಸು ವಿಶಾಖಾಚಾರ್ಯರ ಪಕ್ಕದೆ ಅರ್ಧಗಪ್ಪಡಮಂ ಬಿಸುಟ್ಟು ಪಡಿಕಮಣಂಗೇಳ್ದು [16]ಪ್ರಾಯಶ್ಚಿತ್ತಂಗೊಂಡು ಯಥೋಕ್ತಮಪ್ಪ ಚಾರಿತ್ರದೊಳ್ ನಿಂದರ್ ಸ್ಥೂಲ

1. ರಮಪ್ಪ (ಘಚಛ). 2. ರಾ ಅ (ಖ), ರಕ ರಾಲ (ಛ). 3. ಲಾರದು (ಘಚಛ). 4. ರುಂ (ಖ). 5. ರುಷಿಯರ್ (ಘಚಛ). 6. (ಘಚಛ)ಗಳಲ್ಲಿಲ್ಲ. 7. ಮೇ (ಕಗ). 8. ಳ್ದಿಂ (ಘಚಛ). 9. ಳೊಳ್ ಇರುಳ್ ಕಡು (ಘಚಛ). 10. + ಯತಿ (ಘಚಛ). 11. + ತೊಟ್ಟಿನೆ (ಘಚಛ). 12. ವನ್ನೆಗಂ (ಕಖಗ). 13. ಗೆಳಲಿಕ್ಕಿ (ಘಚಛ). 14. ಲಿರ್ಪುದೆಂ (ಘಛ). ಲಾಣ್ಬುದೆಂ (ಚ). 15. + ಸ್ಥೂಲಭದ್ರಾಚಾರ್ಯರುಂ (ಕಖ). 16. + ತಪದೊಳ್ ನಿಂದು (ಕಗಚ).

ಭದ್ರಾಚಾರ್ಯರ್ ಮೊದಲಾಗಿ ಕೆಲಂಬರ್ ಕೊಳಲೊಲ್ಲದವರ್ [1]ಜಿನಕಲ್ಪಂ ಸ್ಥವಿ[ರಕಲ್ಪ][1]ಮೆಂದೆರಡು ಭೇದಂ ಮಾಡಿ ಅರ್ಧಗಪ್ಪಡದ ತೀರ್ಥಮಂ ನೆಗೞ್ಚಿದರ್

ಇಂತರ್ಧಗಪ್ಪಡದ ತೀರ್ಥ ಪಾರಂಪರ್ಯದಿಂದಂ ಸುರಠಮೆಂಬುದು ನಾಡಲ್ಲಿ ವ[2]ಳಭಿ[2]ಯೆಂಬುದು ಪೊೞಲದನಾಳ್ವೊಂ ವಪ್ರಪಾ[3]ಳ[3]ನೆಂಬೊರಸನ ರಾಜ್ಯಂ ಬರೆಗಮರ್ಧಗಪ್ಪಡದ ತೀರ್ಥಂ ನೆಗೞ್ದಿತ್ತು ಮತ್ತಂ ವಪ್ರಪಾಳನೆಂಬರಸಂ ಮಿಥ್ಯಾದೃಷ್ಟಿಯಾತನ ಮಹಾದೇವಿ [4]ಸ್ವಾ[4]ಮಿನಿಯೆಂಬೊಳರ್ಧಗಪ್ಪಡದ ತೀರ್ಥದ ತಪಸ್ವಿಯರ ಶ್ರಾವಕಿಯಾಗಿ ಇಂತು ಕಾಲಂ ಸಲೆ ಮತ್ತೊಂದು ದಿವಸಂ ನಡುವಗಲರಸನುಂ ಮಹಾದೇವಿಯುಮಿಂತಿರ್ವರುಂ ಪ್ರಾಸಾದದ ಮೇಗಿರ್ದು ಗವಾಕ್ಷ ಜಾಳಾಂತರಂಗಳಿಂದಂ ದಿಶಾವಲೋಕನಂ ಗೆಯ್ಯುತ್ತಿರ್ಪನ್ನೆಗಮರ್ಧಗಪ್ಪಡದ ಸಂಘಂ ಭೈಕ್ಷಂ ಕಾರಣಮಾಗಿಯುರಮನೆಯಂ ಪುಗುವುದನರಸಂ ಕಂಡರಸಿಯುನಿಂತೆಂದನೆಲೆ ಮಹಾದೇವಿ ಈ ನಿನ್ನ[5]ರ್ಧಗಪ್ಪಡದ ಯತಿಯರ [6]ಧರ್ಮ[6]ಮೊಳ್ಳಿತ[7]ಲ್ತಿ[7]ವರುಟ್ಟಿರುಮಲ್ಲ[8]ರ್ ಬತ್ತ[8]ಲೆಗರುಮಲ್ಲರೆಂದು ನುಡಿದು ಮತ್ತೊಂದು ದಿವಸಮರ್ಧಗಪ್ಪಡದ ಸಂಘಮನರಸಂ ಬಟ್ಟೆಯಟ್ಟಿ ವರಿಸಿ ಇಂತೆಂದಂ ನೀಮರ್ಧಗಪ್ಪಡಮಂ ಬಿಸುಟ್ಟು ನಿರ್ಗ್ರಂಥಮಪ್ಪರಿಸಿರೂಪಂ ಕೈಕೊಂಡು[9]ಬಟ[9]ಯೆ ತಪಂಗೆಯ್ವುದೆಂದೊಡವರೊಲ್ಲದಿರ್ದೊಡರಸಂ ಮತ್ತಮಿಂತೆಂದಂ ನಿರ್ಗ್ರಂಥಮಪ್ಪ ರೂಪಂ ಕೈಕೊ[10]ಳಲೊಲ್ಲಿ[10]ರಪ್ಪೊಡರ್ಧಗಪ್ಪಡಮಂ ಬಿಸುಟ್ಟು [11]ಪಟಿಯಂ ಸ[11]ಯ್ಯುಟ್ಟುಕೊಂಡಿರಿಮೆಂದೊಡಂತೆ ಗೆಯ್ವೆಮೆಂದಾ ದಿವಸಂ ತಗುಳ್ದು ಬಡಗನಾಡವರ್ ವಪ್ರಪಾಳನ ರಾಜ್ಯದೊಳರ್ಧಗಪ್ಪಡಮಂ ಬಿಸುಟ್ಟು ಕಚ್ಚೆಗಟ್ಟದೆ ಸಯ್ಯುಡುವರುಂ ಕುಱು[12]ವಡೆವಂ ಪೊ[12]ದೆವರುಮಾದೊರಲ್ಲಿಂದಿತ್ತ ಕಂಬ[13]ಳ[13]ತೀರ್ಥವೆಂಬುದಾದುದವರುಂ ಶ್ವೇತಪಟರೆಂಬೊರಾದರ್ ದಕ್ಷಿಣಾಪಥದೊಳ್ ಸಾ[14]ಮ[14]ಳಿಪುತ್ರನೆಂಬರಸನ[15]ಪ್ಪನವರಯೆ[15] ಸಂತತಿ[16]ಯು[16] ಶ್ವೇತಭಿಕ್ಷುಜಾಪುಲಿ ಸಂಘಕ್ಕೆ ಮೊದಲಿಗನಾದಂ

ಮತ್ತಿತ್ತ ಸಂಪ್ರತಿ ಚಂದ್ರಗುಪ್ತಮುನಿಯುಮುಗ್ರೋಗ್ರ ತಪಶ್ಚರಣಂಗೆಯ್ದು [17]ಸಂನ್ಯಸನವಿಧಾನದಿಂದಂ ಪರಮಶುದ್ಧಸಹಜ ರತ್ನತ್ರಯಮಮಂ ಸಾಧಿಸಿ[17] ಮುಡಿಪಿ ಬ್ರಹ್ಮಕಲ್ಪದೊಳ್ ಪತ್ತು ಸಾಗರೋಪಮಾಯುಷ್ಯಮನೊಡೆಯೊಂ ಶ್ರೀ[18]ಧ[18]ರನೆಂಬೊಂ ದೇವನಾಗಿ ಪುಟ್ಟಿದೊನಿಂತಿದು ಭದ್ರಬಾಹುಭಟಾರರ ಕಥೆ *ಪೇೞ್ದುದು

---

1. ಜಿನಕಲ್ಪಸ್ಥಂ ಸ್ಥವಿತರಪ್ಪೆ (ಕ), ಜಿನಕಲ್ಪಂ ಸ್ಥವಿತರಪ್ಪ (ಖಗ), ಜಿನಕಲ್ಪ (ಘಛ). ಜಿನಕಲ್ಪದಿಂ (ಚ). 2. ಳಂಬಿ (ಕಖಗ). 3. ಪ (ಘ). ಮುಂದಕ್ಕೂ ಈ ಪ್ರತಿಗಳಲ್ಲಿ ಹೀಗೆಯೇ. 4. ವಿಶ್ವಾ (ಕಖಗ). 5. + ಯ (ಕಗ). 6. ರ್ಧ (ಖ). 7. ಲ್ಲಿ (ಕಖಗಘ). 8. ರ್ಚೆ (ಘಛ). 9. ಪಾಳಿ (ಘಚ). 10. ಳ್ಳ (ಘಚಛ). 11. ಪಳಿಯೆಸ (ಗ), ಪಾಳಿಯಿಸಿ (ಘ), ಪಾಳಿಯುಸ (ಛ), (ಚ)ದಲ್ಲಿ ನಷ್ಟವಾಗಿದೆ. 12. ವಡಂಬೊ (ಕಗ), ಕಡಂಬೊ (ಖ). 'ಕುಱುವಡಿಯುಂ ಪೊದೆವರು' ಎಂದು ಸರಿಯಾದ ಪಾಠವಿರಬಹುದೆ ? 13. ಳ (ಕಖಗ), ಲ (ಚ). 14. ವೆ (ಘಚ). 15. ಮಗನಪ್ಪನಾತನ (ಘಚಛ), ಪ್ಪನವರೆಯೆ (ಖಗ). 16. (ಘಚಛ)ಗಳಲ್ಲಿಲ್ಲ. 17. ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸಂನ್ಯಸನಂಗೆಯ್ದು ಸಮಾಧಿಮರಣದಿಂ (ಘಚಛ). 18. ವ. (ಚ). * ಯುಂ ಕೇಳ್ದು ಪೇಳ್ದರು (ಪೆರರ್), ಸಂನ್ಯಸನಂ ಗೆಯ್ವೊರೆಲ್ಲಂ, ಭದ್ರಬಾಹು ಭಟಾರರಂ ಮನದೊಳ್ (ಘಚಛ).

ಪೆಱರುಂ ಸಂನ್ಯಸನಂ†ಗೆಯ್ದೊರೆಲ್ಲಂ ಭದ್ರಬಾಹುಭಟಾರಕರ ಮನದೆ* ಬಗೆದವರಂತು ಪಸಿವು ನೀರೞ್ಕೆ ಶೀತಮುಷ್ಣದಂಸಮಸಕಾದಿ ಪರೀಷಹಂಗಳಂ ಸೈರಿಸಿ ಪರಮ ಶುದ್ಧರತ್ನತ್ರಯಮಂ ಸಾಧಿಸಿದರಂತೆ[1] ಸಂನ್ಯಸನಂ† ಗೆಯ್ದ ಭವ್ಯರ್ಕಳುಂ ಪಸಿವುಂ ನೀರೞ್ಕೆ ಮೊದಲಾಗೊಡೆಯ ಪರೀಷಹಂಗಳಂ ಸೈರಿಸಿ ಸಮಾಧಿಮರಣದಿಂ[2] ಮುಡಿಪಿ [3]ಪರಮಶುದ್ಧ ಸಹಜ ರತ್ನತ್ರಯಂಗಳಂ ಸಾಧಿಸಿ[3] ಸ್ವರ್ಗಾಪವರ್ಗ ಸುಖಂಗ[4]ಳನೆಯ್ದುಗೆ[4]

---

*ಯುಂ ಕೇಳ್ದು ಪೇೞ್ದರು (ಪೆರರ್), ಸಂನ್ಯಸನಂ ಗೆಯ್ವೊರೆಲ್ಲಂ ಭದ್ರಬಾಹು ಭಟಾರರಂ ಮನದೊಳ್ (ಘಚಛ) †-† (ಕಗ)ಗಳಲ್ಲಿಲ್ಲ. 1. ಸುತ್ತಂ ತಮ್ಮ ಕಾರ್ಯಮಂ ಸಾಧಿಸಿ ಸಂದರಂತೆ (ಘಚಛ). 6. + ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಪಾರಿಧಿಸಿ (ಳಸಾಧಿಸಿ) (ಘಚಛ). 3. (ಘಚಛ)ಗಳಲ್ಲಿಲ್ಲ. 4. ಳನೆಯ್ದುಗೆಂಬುದು (ಕಗ), ಳಂ ನೆಗೞ್ಗೆ (ಛ).

ಪೋಗಿ ಅಡವಿಯೊಳ್ ಮೃಗಂಗಳನಱಸುತ್ತಂ ತೊೞಲ್ವರೆನ್ನೆಗಮುಭಯಘೋಷ ಭಟಾರ ರಾಯತಿಯಿಂ ತೊಟ್ಟ[1]ನೆ[1] ಸರ್ವಾಂಗಮಲಧಾರಿಗಳೊಂದು ಶಿಲಾತಳದ ಮೇಗಿರ್ದಾಗಮುಮಂ ಪರಿವಿಡಿಗೆಯ್ಯುತ್ತುಮರ್ಥಮಂ ಭಾವಿಸುತ್ತಂ ಸ್ವಾಧ್ಯಾಯದೊಳ್ ತಗುಳ್ದಿರ್ದೋರಂ ಸಂಛನ್ನಮಪ್ಪಡವಿಯ ಮಱೆಯೊಳ್ ಗೆಂಟಱಿಂದಂ ಲಲಿತಘಟೆ ಕಂಡ ಪೂರ್ವಮಿದೊಂದು ಕರಿಯ ಮೃಗಮಿದೆಂದು ಬಗೆದು ಶ್ರೀವರ್ಧನ ಕುಮಾರಂ ಮೊದಲಾಗನಿಬರುಂ ಬಿಲ್ಗಳನೇಱಿಸಿ ಕಿರುವಾ[2]ಯೊಳಂಬನಿಟ್ಟು ಸೆಳೆಂದಂ ತೆಗೆದಿಸುವನ್ನೆಗಮನಿಬರ ಬಿಲ್ಗಳುಂ ಬಿಲ್ಗಳುಂ ಮುಱಿದುದವರ್ಗಳನಿಬರುಂ ಪೆಱಗಣ್ಗುರುಳ್ದು ಬಿೞ್ದೊಡಿದು ಹಾಹಾಕೋದ್ಯಂ ಸಾರೆ ಪೋಗಿ ನೋೞ್ಪಮೆಂದು ಪೋಪನ್ನೆಗಂ ಋಷಿಯರ ರೂಪಂ ಕಂಡಿವರ್ ಋಷಿಯರ್ ಮೃಗಮಲ್ತೆಂದು ಸಾರೆ ಪೋಗಿ ಅವರುಪಶಮಮುಮಂ ತಪಮುಮಂ ಕಂಡನಿಬರ್ಗ್ಗುಪಶಮಮಾಗಿ ಕುಳ್ಳಿರ್ದು ಧರ್ಮಮಂ ಪೇೞಿಂ ಭಟ್ಟಾರಾ ಎಂದು ಬೆಸಗೊಂಡೊಡೆ ಭಟ್ಟಾರರಿಂತೆಂದು ಪೇೞಲ್ ತೊಡಗಿದರ್

ಗಾಹೆ ॥ ಸೋ ಧಮ್ಮೋ ಜತ್ಥ ದಯಾ ಸೋ ವಿ ತಓ ವಿಸಯಣಿಗ್ಗಹೋ ಜತ್ಥ ।
ದಸಅಟ್ಠದೋಸರಹಿಓ ಸೋ ದೇವೋ ಣತ್ಥಿ ಸಂದೇಹೋ ॥

ಎಂದಿಂತು ಜೀವಂಗಳಂ ಕೊಲ್ಲದುದೆ ಧರ್ಮಂ ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದಯ್ದುಮಿಂದ್ರಿಯಂಗಳಂ ಗೆಲ್ದು ಇರ್ಪತ್ತೆರಡು ಪರೀಷಹಂಗಳಂ ಸೈರಿಸಿ ಯಮ ನಿಯಮ ಸ್ವಾಧ್ಯಾಯ ಧ್ಯಾನಾನು[3]ಷ್ಠಾನಪರಾಯಣ[3]ರಾಗಿ ತಪಂಗೆಯ್ವ ರಿಸಿಯರ್ಕಳ್ ತಪಸ್ವಿಯರ್ ಪಸಿವು ನೀರೞ್ಕೆ ಮೊದಲಾಗೊಡೆಯ ಪದಿನೆಂಟು ದೋಷಂಗಳನಿಲ್ಲದೊಂ ಪರಮಾತ್ಮನೆಂದಿಂತು ಪೇೞ್ದು ಮತ್ತಮಿಂತೆಂದರ್

**ಗಾಹೆ** ॥ ಪಾವೇಣ ಣಿಯತಿರಿಯಂ ಗುಮ್ಮ ಇ ಧಮ್ಮೇಣ ದೇವಲೋಗಂ ತು ।
ಮಿಸ್ಸೇಣ ಮಾಣುಸತ್ತಂ ದೋಣ್ಹಂ ಪಿ ಖಯೇಣ ಣಿವ್ವಾಣಂ ॥

ಎಂಬುದಂ ಪಾಪಂಗೆಯ್ದುವರುಂ ಬೇಂಟೆಯಾಡುವರುಂ ಮಧುಮದ್ಯಮಾಂಸಂಗಳಂ ಸೇವಿಸುವರುಂ ಬಾಲವಧೆ ಸ್ತ್ರೀವಧೆ ಗೋವಧೆ ಬ್ರಾಹ್ಮಣವಧೆ ಋಷಿವಧೆಯುಂ[4]ದೀ ಪಂಚಮಹಾಪಾತಕಂಗಳಂ ಗೆಯ್ದ[4]ವರುಮಗಮ್ಯಾಗಮನಮಪೇಯಪೇಯಮಭಕ್ಷ್ಯಾಭಕ್ಷ್ಯಂ ಮೊದಲಾಗೊಡೆಯ ಪೊಲ್ಲಮೆಗಳೊಳ್ ನೆಗೞ್ದು ಘೋರಮುಂ ಪಿರಿಯವುಮಪ್ಪ . ಪಾಪಂಗಳಂ ಗೆಯ್ದೇೞನೆಯ ನರಕದೊಳ್ ಮೂವತ್ತುಮೂಱು ಸಾಗರೋ*ಪಮಾಯುಷ್ಯಮನೊಡೆಯರ್ ನಾರಕರಾಗಿ ಪುಟ್ಟಿ ಛೇದನ ಭೇದನ [5]ಪೂರಣ ಚೂರಣ ಪೀಡನ ಬಂಧನಂಗಳುಮಂ[5] ಮಱುಟ್ಟಿಗೆಯೊಳಿಟ್ಟು ತೆಗಪುವುದುಂ ಕೊಂತಂಗಳಿಂದಮಿಟ್ಟಿಗಳಿಂದಂ ಕರು[6]ಳ್ಗಳಂ ಸೋರೆ[6] ಕುತ್ತುವುದುಂ ಚಕ್ರಂಗಳಿಂದಂ [7]ತಲೆ[7]ಯಂ ಮೊಕ್ಕನೆವೋಗಿಡುವುದುಂ ಮರಂಗಳಂ ಪೋೞ್ವಂತೆ ಕರಗಸಂಗಳಿಂದ

---

1. ಲಕೆ (ಘಚಛ). 2. + ೞ (ಘಚಛ). 3. ಷ್ಠ (ಕಖಗ). 4. ದಿವ್ಯ ಮೊದಲಾಗೊಡೆಯ ಪಲವು ಪಾಪಂಗಳಂ ಮಾಡಿ (ಘಚಛ). *ಪು. ೯೧–೯೩* (ಚ)ದಲ್ಲಿ ನಷ್ಟವಾಗಿದೆ. 5. ದಹನ ತಾಪನ ಮರಣ ಪೀಡನ ಬಂಧನಂಗಳಂ ಪುಟಂಗಳೊಳಿಟ್ಟು (ಘಚಛ). 6. ಳ್ ಸುರಿಯೆ (ಘಚಛ). 7. ತಲೆ (ಕಖಗ).

ಮುದ್ದಂ [1]ಪಿಡಿದು[1] ಪೋಬ್ಬುದುಮೆಂದಿವು ಮೊದಲಾಗೊಡೆಯ [2]ದುಃಖಂಗಳಂ ಕಣ್ಣೆ ಮೊಯಿಕ್ಕುವನಿತು ಪೊತ್ತಿಪ್ಪೊಡಮುಸಿರ್‌ [3]ಪತ್ತಿ[3]ಲ್ಲದೆ ದುಃಖಂಗಳನನುಭವಿಸು ವ[4]ರ್ ಮತ್ತೊಯ್ಯ[4]ನೆ ಪಾಪಂಗಳಂ ಗೆಯ್ದವರಾನೆಯುಂ ಸಿಂಹಮುಂ ಪುಲಿಯುಂ ಕರಡಿಯುಂ ಪುಲ್ಲೆಯುಂ ಮೊಲನುಂ ಪಂದಿಯುಂ ತೋಳನುಂ [5]ಸೀ[5]ನಾಯುಂ [6]ಮತ್ತಮೊಬ್ಬುಕೞ್ತೆಯುಂ ಪಶುವುಮೆಮ್ಮೆಯುಂ ಕುದುರೆನಾಯೊಟ್ಟೆಯುಮುಡುವುಂ ಪಾವುಮಿಲಿಯುಂ ಬೆಕ್ಕುಮೊಂತಿಯುಂ ಕಪ್ಪೆಯುಂ ಮುಂಗುರಿಯುಂ[6] ಮೊದಲಾಗೊಡೆಯ [7]ಸ್ಥಲಚರಂಗಳುಂ[7] ಮೀನುಂ ಮೊಸಳೆಯುಂ ನೆಗಬುಮಾವೆಯುಂ ಮಕರಮುಂ ತಿಮಿತಿಮಿಂಗಿಳಂ ಮೊದಲಾಗೊಡೆಯ ಜಲಚರಂಗಳುಂ ಕಾಗೆ ಗೂಗೆ ಪದ್ದು ಚಕೋರಂ ಹಂಸೆ [8]ಕು[8]ಕ್ಕು ಗಿಳಿ[9] ಪುರುಳಿ [10]ಪೆಂಗುರು[10] ಕಾರಂಡಮಾಂಪೆ ಮೊದಲಾಗೊಡೆಯ ಗಗನಚರಂ [11]ಪಂಚೇಂದ್ರಿಯಂ[11]ಗಳುಮಾಗಿ ಮತ್ತಮೇಕೇಂದ್ರಿಯ ದ್ವೀಂದ್ರಿಯ ತ್ರೀಂದ್ರಿಯ ಚತುರಿಂದ್ರಿಯಂಗಳಾಗಿ ತಿರಿಕಗತಿಯೊಳ್‌ ಪುಟ್ಟಿ ಜೀವಂಗಳಿಂತು ಮಾಡಿದ ಪಾಪದ ಫಲಂಗಳಿಂದಂ ದುಃಖಂಗಳನೆಯ್ದುಗುಂ ॥ವಾಕ್ಯ॥ ಮಿಸ್ಸೇಣ ಮಾಣುಸತ್ತಮೆಂಬುದು ಪುಣ್ಯಪಾಪಂಗಳೆರಡುಮುಂ ನೆಗೞ್ವರ್ ಮನುಷ್ಯಗತಿಯೊಳ್‌ ಪುಟ್ಟಿ ಮುಂಗೆಯ್ದ ಪಾಪಕರ್ಮದುದಯದಿಂದಂ ಶಾರೀರ ಮಾನಸಾಗಂತುಕ ಸಹಜಮಪ್ಪ ದುಃಖಂಗ[12]ಳುಮ[12]ನಿಷ್ಟ ಸಂಯೋಗಮಿಷ್ಟವಿಯೋಗಮುಂ [13]ರಾ[13]ಗಶೋಕಂಗಳುಂ ದಾರಿದ್ರ್ಯಮೆಂದಿವು ಮೊದಲಾಗೊಡೆಯ ಪಲುಂದಮಪ್ಪ ದುಃಖಂಗಳನೆಯ್ದಿ ಮತ್ತಮಾ ಜೀವಂಗಳ್‌ ಶುಭಕರ್ಮದುದಯದಿಂದಂ ಶ್ರೀಯುಂ ಸಂಪತ್ತುಂ ವಿಭವಮುಂ ಐಶ್ವರ್ಯಮುಮಾರೋಗ್ಯಶರೀರಂಗಳುಮಾಗಿ ಪುತ್ರ ಮಿತ್ರ ಕಳತ್ರ ಸ್ವಜನ ಬಂಧುವರ್ಗದೊಳ್‌ ಕೂಡಿ ಸುಖಂ ಬಾೞ್ವುದುಮಕ್ಕುಮಿಂತು

ಶ್ಲೋಕಂ ॥ ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ ।
ಚಕ್ರವತ್‌ ಪರಿವರ್ತಂತೇ ದುಃಖಾನಿ ಚ ಸುಖಾನಿ ಚ ॥

ಇಂತು ಮನುಷ್ಯಗತಿಯೊಳ್‌ ಪುಟ್ಟಿ ಸೂೞ್‌ ಸೂೞೊಳೆ ಸುಖದುಃಖಂಗಳಂ ಜೀವಂಗಳನುಭವಿಸುಗುಮಂತೆ ಗವ್ವಾ[?] ಧಮ್ಮೇಣ ದೇವಲೋಯಮ್ಮಿ ಎಂಬುದುಂ ಕೇವಳಮೆ ಧರ್ಮಂಗೆಯ್ದವರ್‌ ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತಾರಣಾಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಮಲ್ಲಿಂ ಮೇಗಣ ಸುದರ್ಶನಾಮೋಘ ಸುಪ್ರಬುದ್ಧ ಯಶೋಧರ ಸುಭದ್ರ ಸುವಿಶಾಲ ಸುಮನಸ ಸೌಮನಸ [14]ಪ್ರೀತಿಂಕರ[14]ಮೆಂಬ ನವಗ್ರೈವೇಯಕಂಗಳೊಳಮಲ್ಲಿಂ ಮೇಗಣ ಲಚ್ಚಿ[15]ಮಹಾಲಚ್ಚಿ[15] ಮಾಳಿನಿ ವೈರೆ ವೈರೋಚನೆ ಸೋಮೆ ಸೋಮರೂಪೆ ಅಂಕೆ

1. ಬರಿಯ (ಘಚ). 2. + ಘೋರ (ಘಚ). 3. ಪನಿಕ (ಘ), ಪತಿ (ಛ). 4. ರೊಯ್ಯ (ಘಚ). 5. ಸೀ (ಘಛ). 6. (ಗಕ)ಗಳಲ್ಲಿಲ್ಲ. 7. ಅಡವಿ ಮೃಗಂಗಳುಂ (ಖಘಛ). 8. ಕೊ (ಘಛ). 9. + ಬಕಂ (ಘಛ). 10. ಪಿಂಗುರಿ (ಘಛ). 11. (ಘಛ)ಗಳಲ್ಲಿಲ್ಲ. 12. ಳ್ (ಘ). 13. ರೋ (ಗಘಛ). 14. ಸಂಪ್ರತಿಕ (ಘಛ). 15. ಲಚ್ಚಣಿ (ಛ).

[1]ಪಳಿಕೆ[1] ಅಯಿಬ್ಬೆಯೆಂಬ ನವಾನುದ್ದಿಸಗಳೊಳಮಲ್ಲಿಂ ಪೋಗಿ ವಿಜಯ ವೈಜಯಂತ ಜಯಂತಾಪರಾಜಿತ ಸರ್ವಾರ್ಥಸಿದ್ಧಿಯೆಂದಿಂತು ಪಂಚಾನುತ್ತರಂಗಳೊಳಮೆರಡು ಘಳಿಗೆಯಿಂದೊಳಗೆ ಪಾಸಿನ ಪೊರೆಯೊಳ್ ಪುಟ್ಟಿ ಇಂದ್ರಪ್ರತೀಂದ್ರ ಸಾಮಾನಿಕ ತ್ರಯಸ್ತ್ರಿಂಶ ಪಾರಿಷದಾತ್ಮರಕ್ಷ ಲೋಕಪಾಲಾಹಮಿಂದ್ರತ್ವಮೆಂದೀ ಮಹರ್ಧಿಕ ದೇವರಾಗಿ ಅಣಿಮಾ ಮಹಿಮಾ ಲಘಿಮಾ ಪ್ರಾಪ್ತಿಪ್ರಾಗಲ್ಭ್ಯ[2] ಈಶಿತ್ವ ವಶಿತ್ವ ಕಾಮರೂಪಿತ್ವಮೆಂದೀ ಅಷ್ಟಗುಣೈಶ್ವರ್ಯಂಗಳೊಳ್ ಕೂಡಿ ಅತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿತ್ವಮುಂ ಸುಗಂಧಮಪ್ಪ ಶ್ವಾಸನಿಶ್ವಾಸಂಗ[3]ಳು[3]ಮನೊಡೆಯರಾಗಿ ಆಯುಷ್ಯಾಂತಂ ಬರೆಗಂ ನವಯೌವನರಾಗಿ ಮುಪ್ಪುಮಪಮೃತ್ಯು ಮೂತ್ರ ಪುರೀಷಂಗಳುಂ [4]ಗಂಡ[4]ಕಕ್ಷಾ ಕುಕ್ಷಿಪ್ರದೇಶಂಗಳ ರೋಮಂಗಳುಂ ರೋಗ ಶೋಕ ದುಃಖಂಗಳುಂ ರಸ ರುಧಿರ ಮಾಂಸ ಮೇದೋಸ್ಥಿ ಮಜ್ಜ ಶುಕ್ಲಮೆಂದಿಂತು ಸಪ್ತ ಧಾತುಗ[5]ಳುಮೆಂ[5]ದಿವು ಮೊದಲಾಗೊಡೆಯುವಿಲ್ಲದೋರ್ ಸಹಜಮಪ್ಪ ಕಟಕ ಕಟಿಸೂತ್ರ ಕುಂಡಲಾಭರಣಂ ಮೊದಲಾಗೊಡೆಯ ಪದಿನಾಱುಮಾಭರಣಂಗಳಂ ತೊಟ್ಟು ದಿವ್ಯ ವಸ್ತ್ರಂಗಳನುಟ್ಟಾದಿತ್ಯನ ತೇಜದಿಂದಗ್ಗಳಮಪ್ಪ ತೇಜದೊರಾಗಿ ಕಣ್ಣೆವೆಯಿಕ್ಕುವನಿತು ಪೊಳ್ತುಪ್ಪೊಡಂ ದುಃಖಮಿಲ್ಲದೋರೆರಡು ಸಾಗರೋಪಮಂ ಮೊದಲಾಗಿ ಮೂವತ್ತುಮೂಱು ಸಾಗರೋಪಮಂಬರೆಗಮಾಯುಷ್ಯಮನೊಡೆಯರಾಗಿ ಆಟ ಪಾಟ ವಿನೋದಂಗಳಿಂದಂ [6]ದೇವಿಯರ[6]ಪ್ಸರಸಿಯರ್ಕಳೊಡನೆ ಪಲಕಾಲಂ ದಿವ್ಯಸುಖಮನನುಭವಿಸಿ ಆಯುಷ್ಯಾಂತದೊಳಿಂತಿಲ್ಲಿ ಮನುಷ್ಯಗತಿಯೊಳ್ ಕುರುವಂಶ [7]ಭೋಜವಂಶಮಿಕ್ಷ್ವಾಕುವಂಶ ನಾಥವಂಶ ಹರಿವಂಶಮುಗ್ರವಂಶಂ ಸೂರ್ಯವಂಶ ಸೋಮವಂಶ[7] ಮಯೂರವಂಶ ನಂದವಂಶ[7]ಮೆಂದಿವು ಮೊದಲಾಗೊಡೆಯ ಉತ್ತಮಕುಲದೊಳ್ ಶ್ರಾವಕರ ಬಸಿಱೊಳ್ ಪುಟ್ಟಿ ಪೂರ್ವಕೋಟಿ ಪರಮಾಯುಷ್ಯಮನೊಡೆಯರಾಗಿ* ಅತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿತ್ವದೊಳ್ ಕೂಡಿ ಏಕಚ್ಛತ್ರಚ್ಛಾಯೆಯಿಂದಂ ಪೃಥ್ವಿಯೆಲ್ಲಮನಾಳ್ದು ಪಶ್ಚಾತ್ಕಾಲದೊಳೇನಾನುಮೊಂದು ವೈರಾಗ್ಯಕಾರಣಮಾಗಿ ಮಗಂಗೆ ರಾಜ್ಯಪಟ್ಟಂಗಟ್ಟಿ ಬಾಹ್ಯಾಭ್ಯಂತರ ಪರಿಗ್ರಹಂಗಳೆಲ್ಲಮಂ ತೊಱೆದಲ್ಲರೊಳ್ ನಿಶ್ಶಲ್ಯಂಗೆಯ್ದು ತಪಂಬಟ್ಟು ಘೋರವೀರತಪಶ್ಚರಣಂಗೆಯ್ದು ಉತ್ಕೃಷ್ಟದಿಂದಂ ಮೂಱು ಭವಂಗಳೊಳ್ ಮಧ್ಯಮದಿಂದಮಯ್ದು ಭವಂಗಳೊಳ್ ಕನಿಷ್ಠದಿಂದೇೞು ಭವಂಗಳೊಳಗೆ ಅಷ್ಟವಿಧ ಕರ್ಮಂಗಳಂ ಕಿಡಿಸಿ[8] ಮೋಕ್ಷಮನೆಯ್ದುವರ್ ದೋಣ್ಣಂಪಿ ಖಯೇಣ ಣಿವ್ವಾಣಂ ಎಂದು ತಪದಿಂದಂ ಶುಭಾಶುಭ ಕರ್ಮಮೆಂದಿರ್ತೆಱದ ಕರ್ಮದ ಕೇಡಿನಿಂದಂ ಮೋಕ್ಷಮನೆಯ್ದುವರಂತಪ್ಪ ಮೋಕ್ಷಮೆಂತೆಂದೊಡೆ ಜಾತಿಜರಾಮರಣಂಗಳುಂ ಭಯಮುಮನಿಷ್ಟ ಸಂಯೋಗಮುಮಿಷ್ಟವಿಯೋಗಮುಮಂ ಶಾರೀರಮಾನಸಾಗಂತುಕ ಸಹಜಮಪ್ಪ

---

1. ಪಳಿಕೆ (ಕ). ವಳಿಂಕೆ (ಘಛ). 2. ಕಾಮ್ಯ (ಘಛ). 3. ಳ್ಕ (ಸ). 4. ಗಡ್ಡಮುಂ (ಕಖಗ). ಗಂಡ (ಘ). 5. ಳ್ಮಂ (ಘಛ). 6. ಗಣಿಕೆಯರ (ಘ). ದೇವಗಣಿಕೆಯರ (ಛ). 7. (ಘಛ)ಗಳಲ್ಲಿಲ್ಲ. * ಪು ೯೧-೯೩ * (ಚ)ದಲ್ಲಿ ನಷ್ಟವಾಗಿದೆ. 8. + ಸಮ್ಯಗ್ ದರ್ಶನಜ್ಞಾನ ಚಾರಿತ್ರಂಗಳಂ ಸಾಧಿಸಿ (ಘಚಛ).

ದುಃಖಗಳುಂ ಆಹಾರ ಭಯ ಮೈಥುನ ಪರಿಗ್ರಹಂಗಳುಂ ವಾತ ಪಿತ್ತ ಶ್ಲೇಷ್ಮ ಕಾಸ ಶ್ವಾಸ ಜ್ವರಾರುಚಿ ಛರ್ದ್ಯತಿಸಾರಾಕ್ಷಿ ಕುಕ್ಷಿವೇದನಾಸ್ಫೋಟಕ ಶೂಲ ಭಗಂದರ ಕುಷ್ಠ ಕ್ಷಯ ಗಂಡ ಶಿರೋವೇದನೆಯುಮೆಂದಿವು ಮೊದಲಾಗೊಡೆಯ ಅಯ್ದು ಕೋಟಿಯುಂ ಮಱುವತ್ತೆಂಟು ಲಕ್ಕೆಯುಂ ತೊಂಬತ್ತೊಂಬಯ್ ಸಾಸಿರ[1]ದ ಅಯ್ನೂ[1]ಱೆಣ್ಬ[2]ತ್ತು ನಾಲ್ಕು ವ್ಯಾಧಿಗಳುಂ ಕ್ರೋಧ ಮಾನ ಮಾಯಾ [3]ಲೋ[3]ಭಂಗಳುಂ ರಾಗದ್ವೇಷ ಮೋಹಂಗಳೆ [4]ಮುಗುಟ್ಟು ಮುಗುಟ್ಟು[4] ಬರವುಂ ಶೋಕ[5]ಮೆಂದಿವು[5] ಮೊದಲಾಗೊಡೆಯ ದುಃಖಂಗಳನಿಲ್ಲದುದನುಪಮಾರಹಿತಮಪ್ಪುದನಳವಿಯಿಲ್ಲದುದನಾವಕಾಲಮುಂ ಕಿಡದುದಂ ಪಾಪದಿಂ ಪೊರೆಯದುದಂ ಸುಖಮನೊಡೆ[6]ತ[6]ಪ್ಪುದಂ ಶಿವಂ [7]ತಾನಾದುದನಂ[7]ತಪ್ಪ ಮೋಕ್ಷಸುಖಮನೆಯ್ದಿ ಅನಂತಜ್ಞಾನ ಅನಂತದರ್ಶನ ಅನಂತವೀರ್ಯ ಅನಂತಸುಖಮೆಂಬ ಅನಂತಚತುಷ್ಟಯದೊಳ್ ಕೂಡಿ ಲೋಕಾಲೋಕಮನೆಲ್ಲಮನೊಮ್ಮೊದಲೆ ಕಾಣುತ್ತ ಮಱೆಯುತ್ತು[8]ಮನಂತಕಾಲ ಮೋಕ್ಷದೊಳಿರ್ಪರೆಂಬುದುಮಂ ಅಭಯಘೋಷ ಭಟಾರರ್ ಲಲಿತಘಟೆಗೆ ಧರ್ಮಶ್ರವಣಂಗೆಯ್ಯೆ ಕೇಳ್ದು

ಶ್ರೀವ[9]ರ್ಧನಂ[9] ಮೊದಲಾಗಿ ಅನಿಬರುಂ ಪಶ್ಚಾತ್ತಾಪಮಾಗೆ ಪಂಚಮಹಾಪಾತಕರೆಮುಂ ಪೊಲ್ಲಕೆಯ್ದುಮುಂ ಭಟ್ಟಾರರಂ [10]ಕೊಂದೆಮುಮ[10]ಪರ್[11]ತಪದ ಮಾಹಾತ್ಮ್ಯದಿಂದಂ ಬರ್ದುಂಕಿದರೆಂದನಿಬರುಂ ಮನದೆ ಬಗೆದೀ ಗೆಯ್ದ ಪಾಪಮಿಂತಲ್ಲದೆ ಪಿಂಗದಿವರ ಕಾಲಡಿಗಳನೆಮ್ಮ ತಲೆಗಳೆಂಬ ತಾಮರೆಯ ಪೂಗಳಿಂದರ್ಚಿಸಿದೊಡಲ್ಲದೆ ಪಾಪಂ ಪಿಂಗದೆಂದು ಬಗೆದು ಕೈದುಗಳತ್ತ ಕೈಯಂ ನೀಡಲ್ ಬಗೆವನ್ನೆಗಂ ಭಟ್ಟಾರರ್ ವಾರಿಸಿದರಂತು ಬಗೆಯಲ್ವೇಡೆಂದೊಡೆ ಶ್ರೀವರ್ಧನಕುಮಾರ ನಾಮೇನಂ ಬಗೆದುಮೆಂದೊಡೆ ನೀಮುಂ ನಿಮ್ಮ ತಲೆಗಳನರಿದೆಮ್ಮ ಕಾಲಡಿಗಳನರ್ಚಿಸು[12]ವಮೆಂ[12]ದು ಬಗೆದಿರೆಂದೊಡಿಂತು ಮನದೆ ಬಗೆದುದನಾರಾನುಮಱಿ[13]ವ[13]ರೊಳರೆ ಎಂದನಿಬರುಂ ಚೋದ್ಯಂಬಟ್ಟು ಭಟ್ಟಾರರ್ಗೆಱಗಿ ಪೊಡೆವ[14]ಟ್ಟು[14] ಶ್ರೀವರ್ಧನ ಕುಮಾರನೆಂದಂ ಭಟ್ಟಾರಾ ನಿಮ್ಮಡಿಯನೆಮ್ಮ ತಲೆಗಳಿಂದರ್ಚಿಸ[15]ದಾಗಳೆಮ್ಮ [16]ಗೆಯ್ದ[16] ಪಾಪಮೆಂತು ಕಿಡುಗು[17]ಮೆಂದೊಡಾ ಪಾಂಗಿನಿಂ ಕಿಡದೆನೆಯುಂ[17] ತಪ್ಪೊಡೆ ದೀಕ್ಷೆಯಂ ದಯೆಗೆಯ್ಯಿಮೆಂದೊಡೆ ಭಟಾರರೆಂದರೊಳ್ಳಿತ್ತಂ ಬಗೆದಿರ್ ನಿಮಗೆಲ್ಲರ್ಗಂ ಕಿಱಿದೆಯಾಯುಷ್ಯಮೆಂದೊಡೆ

ಶ್ರೀವರ್ಧನ ಕುಮಾರನ ತಮ್ಮಂ ಮೂವತ್ತಿರ್ವರಿಂ ಕಿಱಿಯೊಂ ನಂದಿಮಿತ್ರ[18]ನೆಂಬೊಂ ಭಟಾರರ ಮಾತಂ ಕೇ[19]ಳ್ದು ನಕ್ಕಂತೆಂದ[19]ನಾವೆಲ್ಲಂ ಕೂಸು

---

1. ದೈನೂ (ಫಚಢ). 2. ಳ್ಪ (ಫಚ). ಪ್ಪ (ಚ). 3. ಲಾ (ಕಖಗ). 4. (ಫಚಢ)ಗಳಲ್ಲಿಲ್ಲ. 5. ಮುಮಾದ ಬಾಧೆಗಳ್ ಇಂತಿವು (ಕಖಗ). 6. ರು (ಖ). 7. ದೆಯಾದುದಂ (ಕಖಗ). 8. + ಮನಂತಸುಖಮುಮನಂತವೀರ್ಯಮನೊಡೆಯರಾಗಿ (ಕಖಗ). + ಮಷ್ಟಗುಣಸಮೇತರಾಗಿ (ಫಚಢ). 9. ಧರ್ಮಾನ ಕುಮಾರಂ (ಫಚ). ರ್ಧ ಕುಮಾರಂ (ಚ). 10. ಕೊಲಲೊಡರ್ಚಿದೆವಿ (ಫಚಢ). 11. + ತಮ್ಮ (ಫಚಢ). 12. ವೆಮೆಂ (ಕಗ). ವೆನೆಂ (ಖ). ವೆಮೆಂ (ಫಢ). 13. ದ (ಕಖಗ). 14. ಟ್ಟಿರಲ್ಲಿ (ಕಖಗ). 15. + ರ್ಚಿಸಿ (ಕಖಗ). 16. ಬಗೆದ (ಫಚಢ). 17. ವೆಂ (ಕಖಗ). 18. + ಕುಮಾರ (ಫಚಢ). 19. ಳ್ದಂತಪ್ಪೊಡೆ ಭಟಾರಾ (ಫಚಢ).

ಗ[1]ಳೆಮುಂ[1] ನವಯೌವನ[2]ರೆಮುಂ[2] ತೇಜದೊಳಂ [3]ಸತ್ವದೊಳಂ[3] ಬಲಪರಾಕ್ರಮದೊಳಂ ಕೂಡಿದೆಮೆಮಗೆಲ್ಲರ್ಗ್ಗಂ ಕಿಱಿದೆಯಾಯುಷ್ಯಮೆಂಬುದನೆಂತು ನಂಬಲಕ್ಕುಮೆಂದೊಡೆ ಭಟಾರರೆಂದರ್ ನೀನೇಕೆ ನಕ್ಕಪ್ಪೆಯುಮ್ಮಾ ನಿಮಗೆಲ್ಲರ್ಗ್ಗಮಿಪ್ಪತ್ತೊಂದು ದಿವಸಮಾಯುಷ್ಯಂ ನೀರದೆಸೆಯಿಂ[4]ದಂ ನಿಮಗೆ[4] ಸಾವಕ್ಕುಮೆಂದೊಡೆ ಶ್ರೀವರ್ಧನ ಕುಮಾರನೆಂದಂ ಭಟಾರಾ [5]ಎ[5]ಮಗಿಪ್ಪತ್ತೊಂದು ದಿವಸಮಾಯುಷ್ಯಮೆಂಬುದರ್ಕೆ ಸಾಭಿಜ್ಞಾನಮೇನೆಂದು ಬೆಸಗೊಂಡೊಡೆ ಭಟಾರರೆಂದರ್ ನೀ[6]ವಿಾಗಳ್[6] ಪೊೞಲ್ಗೆ [7]ಪೋಪಾಗಳ್[7] ನಿಮ[8]ಗೆರೞ್ಕಾ[8]ಳಿಂಗ ನಾಗಂಗಳ್ ಪೆಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತಂ ಬಂದೊಡೆ ನೀ[9]ಪೊದಱಿಯು[9]ವಂ ಬಗ್ಗಿಸಿದೊಡದೃಶ್ಯಂಗಳಾಗಿ ಪೋಕುಮಿದೊಂದು ಸಾಭಿಜ್ಞಾನಂ ಮತ್ತಂತೆ ಪೋಪಾಗಳೊಂದು ಕಿಱುಗೂಸು [10]ಕೋ[10]ಲಂ ಪಿಡಿದು ನಿಮ್ಮಂ ಬಡಿಯ್ವಲ್ಕೆಂದು ಬಂದೊಡದಱ[11]ಕೆಯ್ತ[11]ಮಂ ಕಂಡು ನೀಮುಂ ನಕ್ಕೊಡೆ ನಿಮ್ಮ ನೋಡೆನೋಡೆ ಭಯಂಕರಮಪ್ಪ ಪಿರಿದೊಂದು ಬೇತಾಳರೂಪಂ ಕೈಕೊಂಡಾಕಾಶಂಬರೆಗಂ ಬಳೆದದೃಶ್ಯಮಕ್ಕುಮಿದೊಂದು ಸಾಭಿಜ್ಞಾನಂ ಮತ್ತಂತೆ ಪೋಪನ್ನೆಗಂ ತೋಱಿ ತೀವುಗುಮಿದೊಂದು ಸಾಭಿಜ್ಞಾನಂ ಮತ್ತಮಿಂದಿನಿರುಳ್ ನಿಮ್ಮ ತಾಯ್ ನಿಮ್ಮ ಮೂವತ್ತಿರ್ವರುಮಂ ರಾಕ್ಷಸಂ ನುಂಗಿ ತಿಂಬುದಂ ಕನಸು[12]ಗಂಡು ಪೇೞ್ಗು[12]ಮಿದೊಂದು ಸಾಭಿಜ್ಞಾನಮೆಂದು[13] ಪೇೞ್ದೊಡೆ

ಅನಿಬರುಂ ಭಟಾರರಂ ಬಂದಿಸಿ ತಮ್ಮ ಪೊೞಲ್ಗೆವೋಪಾಗಳ್ ಭಟಾರರ್ ಪೇೞ್ದುದೆಲ್ಲಮಂ ಪೇೞ್ದ ಪಾಂಗಿನೊಳೆ ಬಟ್ಟೆಯೊಳ್ ಪೋಗುತ್ತುಂ ಕಂಡು ಪ್ರತ್ಯಕ್ಷಮಾಗಿ ಮತ್ತಿರುಳ್ ತಮ್ಮ ಮೂವತ್ತಿರ್ವರುಮಂ ರಾಕ್ಷಸಂ ನುಂಗಿದುದಂ ತಾಯ್ ಕನಸುಗಂಡುದಂ ತಮಗೆ ನೇಸರ್ಮೂಡೆ ಪೇೞ್ದೊಡೆ ನಂಬುಗೆಯಾಗಿ ಉಬ್ಬೆಗಂ [14]ಬ[14]ಟ್ಟಿಂತಿರ್ಪನ್ನೆಗಂ ವರ್ಧಮಾನ ಭಟ್ಟಾರರ ತೀರ್ಥಂ ವಿಹಾರಿಸುತ್ತಂ ಕೌಶಂಬಿಗೆ ವಂದೊಡೆ ಲಲಿತಘಟೆ ಪಿರಿದರ್ಚನೆಯುಂ ಕೊಂಡುಪೋಗಿ ಭಟಾರರನರ್ಚಿಸಿ ಬಂದಿಸಿ ಧರ್ಮಶ್ರವಣಾನಂತರ[15]ಮಿಂತೆಂದು ವರ್ಧಮಾನ ಭಟ್ಟಾರರಂ ಬೆಸಗೊಂಡಂ ಭಟಾರಾ ಎಮಗಾಯುಷ್ಯಮೆನಿತುಂಟೆಂ[16]ದು ಬೆಸಗೊಂಡೊ[16]ಡೆ ಭಟಾರರೆಂದರ್ ನಿಮಗನಿಬರ್ಗಂ ಕಿಱಿದೆ ಆಯುಷ್ಯಮೆಂದು ಪೇೞ್ದೊಡಾ[17]ಮೇನೋ[17] ಭವ್ಯರೆಮೊ ಅಭವ್ಯರೆಮೊ [18]ಎಂದು ಬೆಸಗೊಂಡೊಡೆ[18] ನೀಮೆಲ್ಲಂ ಭವ್ಯರಿರ್ ಭವ್ಯರಿರಾದೊಡಂ [19]ಪರಮ ಶುದ್ಧ ಸಹಜ[19]ದರ್ಶನಜ್ಞಾನಚಾರಿತ್ರಂಗಳಂ ಕೈಕೊಂಡು ನೆಗೞ್ದೊಡಲ್ಲದೆ ಮೋಕ್ಷಮಾಗದೆಂ[20]ತು[20] ಸ್ವರ್ಣಪಾಷಾಣದೊಳ್ ಸುವರ್ಣಮುಂಟಾಗಿಯುಂ ದಹನ

---

1. ಳೆಂ (ಖಘಚ), ಳುಂ (ಗ). 2. ರೆಂ (ಘಚ), ದೊಳಂ (ಛ). 3. (ಘಚಛ)ಗಳಲ್ಲಿಲ್ಲ. 4. (ಘಚಛ)ಗಳಲ್ಲಿಲ್ಲ. 5. ನ (ಕಖಗ). 6. ಮುಂಮಗುಳ್ದು (ಘಚಛ). 7. ಗುತ್ತಂ (ಖ), ಗುತ್ತಮಿರೆ (ಘಚಛ). 8. ಗಿದಿರನೇಳುಕಾ (ಘಚ), ಗಿದಿರೇಳುಕಾ. 9. ಮೆಳಱಿಮ (ಘ). ಮೆಲ್ಲಱಿಯದ (ಛ). 10. ಕಾ (ಸ–ಚ). 11. ರ್ಕೆಯು (ಕಖಗ). 12. ಗಾಣ್ಬುಂ (ಘಚಛ). 13. + ಭಟಾರರ್ ಪೇೞ್ದರ್(ಕಖಗ). 14. ಪು (ಘಚ). 15. + ಂ ಲಲಿತಘಟೆ ಶ್ರೀವರ್ಧಮಾನ ಭಟ್ಟಾರಕರನಿಂ (ಘಚಛ). 16. ದೊ (ಘಚಛ). 17. ಮುಂ (ಘಚಛ). 18. ಪೇೞಿಮೆನೆ (ಚ). ಎಂದೊಡೆ (ಘಚ). 19. ಸಮ್ಯಗ್ (ಚ). 20. ದು (ಕಖಗ).

ತಾಪನ ಪಿಂಡಿಬದ್ಧನಾದಿ ಕ್ರಿಯೆ[1][ವೆ]ೞ[1]ದನ್ನೆಗಂ ಪೂಣ್ಯಾಗದಂತೆ ತಪದಿಂದಲ್ಲದೆ ಮೋಕ್ಷಮಾಗದೆಂ[2]ದು ಪೇೞ್ದೊಡನಿಬರುಂ[2] ವರ್ಧಮಾನ ಭಟ್ಟಾರರ್ಗ್ಗೆ ಶಿಷ್ಯರಾಗಿ ತಪಂಬಟ್ಟು ಪಂಚಮಹಾವ್ರತಂಗಳನೇಱಿಸಿಕೊಂಡು ಪ್ರಾಯೋಪಗಮನದ [3]ಮರಣದ[3] ವಿಧಾನಮಂ ಬೆಸಗೊಂಡೊಡೆ ಭಟಾರರಿಂತೆಂದು ಪೇೞ್ದರ್ :

> **ಶ್ಲೋಕ** ॥ ಸ್ಥಿತಸ್ಯ ವಾ ನಿಷಣ್ಣಸ್ಯ ಯಾವತ್ ಸುಪ್ತಸ್ಯ ವಾ ಪುನಃ ।
> ಸರ್ವಾಭೀಷ್ಟಪರಿತ್ಯಾಗಃ ಪ್ರಾಯೋಪಗಮನಂ ಸ್ಮೃತಂ ॥

ಇಂತುಟಾ ಪ್ರಾಯೋಪಗಮನದ ಲಕ್ಷಣಮೆಂದು ಭಟಾರರ್ ವಕ್ಕಾಣಿಸಿ ಪೇೞೆ ಕೇಳ್ದಱಿದು

ಲಲಿತಘಟೆಯನಿಬರು ಭಟಾರರ ಪಕ್ಕದೆ ಚತುರ್ವಿಧಮಪ್ಪಾಹಾರಮುಮಂ ಶರೀರಮುಮಂ ಯಾವಜ್ಜೀವಂ[4] ತೊಱೆದು ಭಟಾರರಂ ಬಂಧಿಸಿ ಪೋಗೆ [5]ವಿಶಾಳೆಯೆಂಬ ತೊಱೆಯ[5] ತಡಿಯೊಳ[6]ನಿಬರುಮೇಕಪಾರ್ಶ್ವದೊಳ್[6]ಪಟ್ಟಿರ್ದ್ದು ಕೈಯುಮಂ ಕಾಲುಮನಾ[7]ಡಿ[7]ಸದೊಂದು ಕೆಲದಿಂದೊಂದು ಕೆಲಕ್ಕೆ ಮಗುೞದೆ ಕುಳ್ಳಿರದೆ ನಿಂದಿರದೆ ನುಡಿಯದೆ ಕೆಲಂಗಳಂ ನೋಡದಿಂತು ಪ್ರಾಯೋಪಗಮನಂಗೆಯ್ದು ಪದಿನಯ್ದು ದಿವಸಂ ಮೆಯ್ಯಂ ತೊಱೆದಿರ್ದೋರನ್ನೆಗಂ ಪೇೞೆ ಪಿರಿದೊಂದು ಮೞೆ ಕೊಂಡು ಪೂರಂ ಬಂದವರನೆೞೆದುಕೊಂಡು ಪೋಗಿ ಪಿರಿದೊಂದು ಮಡುವಿನೊಳಿಕ್ಕಿದೊಡೆ ನೀರೊಳಗಿರ್ದ್ದು ಮೋಹಿಸದ ಬುದ್ಧಿಯನೊಡೆಯರಾ ದೇವರಂ ಚಿಂತಿಸುತ್ತಂ ಪಂಚನಮಸ್ಕಾರಮಂ ಮನದೊಳುಚ್ಚರಿಸುತ್ತಂ ಶುಭಧ್ಯಾನದೊಳ್ ಪರಿಣತರಾಗಿ [9]ದರ್ಶನಜ್ಞಾನಚಾರಿತ್ರಂಗಳನಾರಾಧಿಸಿ[9] ಮುಡಿಪಿ[10]ಅಯ್ವರ್[10]ವರುಂ ವೈಜಯಂತವೆಂಬ ಪಂಚಾಣುತ್ತರೆಯೊಳುತ್ಕೃಷ್ಟಮಪ್ಪ ಮೂವತ್ತುಮೂಱುಸಾಗರೋಪಮಾಯುಷ್ಯಮನೊಡೆಯೊರೇಕಹಸ್ತಪ್ರಮಾಣ[11]ಶ್ವೇತ[11]ವರ್ಣದೊಳಹಮಿಂದ್ರ ದೇವರಾಗಿ ಪುಟ್ಟಿದರ್

ಮತ್ತೆ ಪೆಱರುಂ ರತ್ನತ್ರಯಂಗಳನಾರಾಧಿಸುವಾರಾಧಕರ್ಕಳುಂ ಲಲಿತಘಟೆಯುಂ ಮನದೊಳ್ ಬಗೆದು ಚತುರ್ವಿಧಮಪ್ಪುಪಸರ್ಗಮುಂ ಪಸಿವು ನೀರೞ್ಕೆ ಮೊದಲಾಗೊಡೆಯುವಿಪ್ಪತ್ತೆರಡು ಪರೀಷಹಂಗ[12]ಳಂ[12] ಸೈರಿಸಿ ಶುಭಪರಿಣಾಮದಿಂ ಸಮ್ಯಗ್ದರ್ಶನಜ್ಞಾನಚಾರಿತ್ರಂಗಳ[13]ನಾರಾ[13]ಧಿಸಿ,[14] ಸ್ವರ್ಗಾಪವರ್ಗಸುಖಂಗಳನೆಯ್ದುಗೆ

1. ವಿರ (ಕಖಗ), ವಿಱ (ಘ). ವಿಱ (ಚಛ). 2. ಬುದುಂ (ಘಚಛ). 3. (ಘಚಛ) ಗಳಲ್ಲಿಲ್ಲ. 4 + ಬರೆಗಂ (ಘಚಛ). 5. ಜಗ್ನೆಯ (ಘಚಛ). 6. ಯುಥ್ವರ್ವರುಮೊಂದುಕೆಲದೊಳ್ (ಘಚಛ). 7. ಟಿ (ಛ). 8. +ಂ (ಚಛ). 9. ರತ್ನತ್ರಯಮಂ ಸಾಧಿಸಿ ಸಮಾಧಿ ವಿಧಿಯಿಂ (ಚ). 10. ಮೂವತ್ತಿ (ಘಚಛ). 11. ಶ್ವೇತ (ಕ). 12. ಳ್ಗಂ (ಘಛ), ಉಮಾ (ಚ). 13. ಳಂ ಸಾ (ಘಚಛ). 14. +ಮಂಬಿಱ (ಚ).

# (೮) ಧರ್ಮಘೋಷ ಭಟ್ಟಾರರ ಕಥೆ

ಧರ್ಮಘೋಷ ಭಟಾರರ ಕಥೆಯಂ ಪೇೞ್ವೆಂ :

ಗಾಹೆ॥ ಚಂಪಾ ಎ ಮಾಸಖವಣಂ ಕರಿತ್ತು ಗಂಗಾತಟಮ್ಮಿ ತಣ್ಹಾಎ ।
ಘೋರಾಏ ಧಮ್ಮಘೋಸೋ ಪಡಿವಣ್ಣೋ ಉತ್ತಮಂ ಅಟ್ಠಂ ॥

[ಚಂಪಾಎ—ಚಂಪೆಯೆಂಬ ಪೊೞಲೊಳ್, ಮಾಸಖವಣಂ ಕರಿತ್ತು—ಮಾಸೋಪವಾಸಂಗೆಯ್ದು, ಗಂಗಾತಟಮ್ಮಿ—ಗಂಗಾಮಹಾನದಿಯ ತಡಿಯೊಳ್, ತಣ್ಹಾಎ—ನೀರೞ್ಕೆಯಿಂದಂ, ಘೋರಾಎ—ಅದಮಾಸಂಕಡಿದಪ್ಪುದಱಿಂದಂ, ಧಮ್ಮಘೋಸೋ—ಧರ್ಮಘೋಷನೆಂಬ ಭಟ್ಟಾರಕಂ. ಪಡಿವಣ್ಣೋ—ಪೊರ್ದಿದೊಂ, ಉತ್ತಮಂ ಅಟ್ಠಂ—ಮಿಕ್ಕ ದರ್ಶನಜ್ಞಾನಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ [1]ಕೌಶಂಬಿ[1]ಯೆಂಬುದು ನಾಡಲ್ಲಿ ವಾರಣಾಸಿಯೆಂಬುದು ಪೊೞಲದನಾಳ್ವೊಂ ಕೀರ್ತಿಧರನೆಂಬೊನರಸನಾತನ[2] ಮಹಾದೇವಿ[3]ಯರ್ಕಳ್ ಅರತಿ ರತಿಯೆಂಬೊರಾ[3] ಇರ್ವರ್ಗ್ಗಂ ಮ[4]ಕ್ಕ[4]ಳ್ ಧರ್ಮಘೋಷನುಂ ಧರ್ಮಕೀರ್ತಿಯುಮೆಂಬೊರಂತವರ್ಗಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಿರ್ಪನ್ನೆಗಂ ಮತ್ತೊಂದು ದಿವಸಂ [5]ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ[5] ವಿಹಾರಿಸುತ್ತಂ ಬರ್ಪೊರಾ ವಾರಣಾಸಿಗೆ ವಂದು ಬಹಿರುದ್ಯಾನ ವನದೊಳ್ ಸ್ಫಟಿಕಶಿಲಾತಲದ ಮೇಗೆ ಪಂಥಾತಿಚಾರ ನಿಯಮಂಗೆ[6]ಯ್ದಿರ್ದ[6] [7]ಗುಣೋತ್ತಮರೆಂಬ ಭಟಾರರಂ[7] ವನಕ್ರೀಡೆಗೆವೋದ ಧರ್ಮಘೋಷನುಂ ಧರ್ಮಕೀರ್ತಿ ಕುಮಾರನುಂ ಕಂಡು ಬಂದಿಸಿ ಭಟಾರಾ ಎಮಗೆ ಧರ್ಮಮಂ ಪೇೞಿಮೆಂದೊಡೆ ಭಟಾರರಿಂತೆಂದು ಧರ್ಮಮಂ ಪೇೞ್ದರ್ :

ವೃತ್ತ॥ ಕೋ ಧರ್ಮಪ್ರವರೋ ದಯಾತ್ಮಸುಭಗಃ ಕಃ ಸ್ಯಾನ್ನರಃ ಪಂಡಿತಃ ।
ಕಾ ಯೋಷಿದ್ವಶಗಾ ಕಲಿಷ್ಕಯತಿ (?) ಜೇತ್ ಕ್ರೋಧೋಽಶುಭಸ್ಯೋದಯಃ ॥

ಕಾಽಲಕ್ಷ್ಮೀರವಿಚಾರಕಾರ್ಯಘಟನಾ ಕಿಂ ಮಿತ್ರಮಾತ್ಮಾಽಽತ್ಮನಃ ।
ಕಿಂ ಸೌಖ್ಯಂ ಭುವಿ ಶಾಸ್ತ್ರವಾಚನಮತಿಃ ಕಾ ವಾ ಗತಿರ್ನಿವೃತಿಃ ॥

ಸಮ್ಯಕ್ತ್ವೋತ್ತಮಹಸ್ತಿ ಮಸ್ತಕಗತಃ ಸುಜ್ಞಾನಕೇತುವ್ರಜೋ ।
ನಾನಾಶೀಲಗುಣವ್ರತೋರುಪೃತನಃ ಸ್ವಾಧ್ಯಾಯಶಂಖಧ್ವನಿಃ ॥

ಭಾಸ್ವತ್ಸಂವರ ಭೂರಿಚಾರುಕವಚೋ ನಾತೀವ ತೀಕ್ಷ್ಣಾಯುಧಃ ।
ಸೇವ್ಯೋ ಧರ್ಮಮಹಾನೃಪೋ ಬುಧಭಟೈಃ ಸ್ವರ್ಮೋಕ್ಷನೃತ್ತಿಪ್ರದಃ ॥

---

1. ಕಾಶಿ (ಘಚಛ). 2. + ರಸಿ (ಘಚಛ). 3. ಯೆಂಬೊಳಾ (ಘಚಛ). 4. ಕ್ಕರ್ (ಘ). 5. ಗುಣೋತ್ತಮ ಭಟಾರರೆಂಬ ದಿವ್ಯಜ್ಞಾನಿಗಳು ನಾನಾ ದೇಶಂಗಳಂ (ಚ). 6. ಯಿದುೞಲ್ದ (ಕ) ಗೆಯಿದಿಳ್ದ (ಖ). 7. (ಚ)ದಲ್ಲಿ ಇಲ್ಲ.

ತೃಷೆಯುಂ ಪಿಂಗಿಸುವುದೆಂದೊಡೆ ಭಟಾರರಾವೊಲ್ಲೆವಬ್ಬಾ ಕುಡಿಯಲ್ಕಾಗದೆಂದೊಡೆ ಗಂಗಾದೇವತೆ ಪೂರ್ವವಿದೇಹಕ್ಕೆ ಪೋಗಿ ಸೀಮಂಧರ ತೀರ್ಥಂಕರ ಪರಮ ದೇವರಂ ಕಂಡು ಬಂದಿಸಿ ಇಂತೆಂದು ಬೆಸಗೊಂಡಳ್

ಭಟಾರಾ ಒರ್ವರ್ ಋಷಿಯರ್ ನೀರೞ್ಕೆಯಿಂದಂ ಕರಂ ಸೇದೆಗೆಟ್ಟು ಬಸಮೞಿದಿರ್ದೋರಂ ಕಂಡು ಪಿರಿದೊಂದು ಪೊನ್ನಕರಗಮಂ ತೆಕ್ಕನೆ ತೀವಿಯಾದಮಾನುಂ ತಣ್ಣಿದುವುಂ ಕಮ್ಮಿದುವುಮಪ್ಪ ನೀರ್ಗಳಂ ಪೊ[1]ೞ್ತು[1]ದೊಳ್ ಕೊಂಡು ಪೋಗಿ ಕುಡಿಯಲೆಱೆ[2]ಯೆಂ ಕೊಳ್ದ[2]ರಿಲ್ಲೆಂದೊಡೆ ಭಟಾರರೆಂದರ್ ಪ್ರಾಸುಕಮಾದೊಡಂ ಪೊ[3]ೞ್ತುದೊ[3]ಳ್ ತಂದೊಡಂ ದೇವರ್ಕ್ಕಳ ದೇವಿಯರ್ಕಳ ಕೈಯೊಳ್ ಋಷಿಯರ್ಕ್ಕಳ್ಗ್ಗುಣಲುಂ ಕುಡಿಯಲುಂ ತಗದು ನಿಮಗೆ ಸಮ್ಯಕ್ತ್ವಮುಂ ಪೂಜೆಯುಂ ಋಷಿಯರ್ಕಳ್ಗೆ ಪ್ರಾತಿಹಾರ್ಯಮುಂ ಗೆಯ್ವುದುಂ ನಿಮ್ಮ[4]ಭಿಪ್ರಾಯ[4]ಮಿನಿತೆಯೆಂದು ಪೇೞ್ದೊಡೆ ತೀರ್ಥಂಕರ ಪರಮದೇವರ ಮಾತಂ ಕೇಳ್ದು ಬೇಗಂ[5] ಗಂಗಾದೇವತೆ ಧರ್ಮಘೋಷ ಭಟ್ಟಾರರ್ಗ್ಗೆ ತಣ್ಣಿತಪ್ಪ ಗಾಳಿಯುಂ ಸುಗಂಧ ಜಲವರ್ಷಮುಮಂ ಮಾಡಿದೊಡಾಪ್ಯಾಯನಮಾಗಿ ಶುಕ್ಲಧ್ಯಾನಮಂ ಧ್ಯಾನಿಸಿ[6] ಘಾತಿಕರ್ಮಂಗಳ ಕಿಡಿಸಿ[7] ಕೇವಲಜ್ಞಾನಿಯಾದೊಡೆ ಚತುರ್ವಿಧಮಪ್ಪ ದೇವನಿಕಾಯಂ ಬಂದರ್ಚಿಸಿ ಪೂಜಿಸಿ ಪೋದೊಡವರುಂ ಬೞಿಕ್ಕ ಘಾತಿಕರ್ಮಂಗಳಂ ಕಿಡಿಸಿ[7] ಮೋಕ್ಷಕ್ಕೆ ವೋದರ್

ಮತ್ತಮವರಿಂ ಕಿಱಿಯರ್ ಧರ್ಮಕೀರ್ತಿ ಭಟಾರರ್ [8]ಪೆಱತೊಂದು ತುಱು ಪಟ್ಟಿಗೆ ಪೋದೊಡಾ[8] ತುಱುಪಟ್ಟಿಯುಮಲ್ಲಿಂದೆರ್ದು ಪೆಱತೊಂದು ದೆಸೆಗೆ ನಾಡೆ ಗೆಂಟುಪೋದೊಡೆ ನಿರಾಶೆಯಾಗಿ ಪಸಿವುಂ ನೀರೞ್ಕೆಯಿಂದಂ ಬಾ[9]ಧಿ[9]ಸೆ ಪಟ್ಟೊರಾಗಿ [10]ಸೇದೆಗೆಟ್ಟು[10] ಬಸಮೞಿದು ಶುಭಪರಿಣಾಮಕ್ಕೆ ಸಂದೋರಂ ಮುನ್ನಿನ ದೇವತೆ ಕಂಡೞಿದು ಪ್ರತಿಬೋಧಿಸಲ್ ತಗುಳ್ದವರಂ ತಿಳಿಪಲಾಱದೆ ಮತ್ತೆ ಪೂರ್ವವಿದೇಹಕ್ಕೆ ಪೋಗಿ ಸೀಮಂಧರ ತೀರ್ಥಂಕರ ಪರಸ್ವಾಮಿಯುಂ ಕಂಡು ಪೊಡೆವಟ್ಟು ಅವರ ಸಮಾವಸ್ಥೆಯೆಲ್ಲಮಂ ಭಟಾರರ್ಗ್ಗೆ ಪೇೞ್ದು ಸಮಾಧಿಸಂಧಾನೋಪಾಯಮಂ ಬೆಸಗೊಂಡೊಡೆ ಸರ್ವಜ್ಞರಿಂತೆಂದು ಪೇೞ್ದರಾಸನ್ನ ಭವ್ಯರ್ ಮೂಱನೆಯ ಭವದೊಳ್ ಮೋಕ್ಷಕ್ಕೆವೋಪರೆಂದು ಸೀಮಂಧರ ತೀರ್ಥಂಕರ ಪರಮದೇವರ್ ಪೇೞ್ದರೆಂಬುದಂ ಕೇಳ್ದಾಗಡೆ ಅಶುಭಪರಿಣಾಮುಮಂ ತೊಱೆದು ನೀಗಿ ಶುಭಪರಿಣಾಮದೊಳ್ ಕೂಡಿ ಸಮಾಧಿಯುನೊಡೆಯರಪ್ಪರ್ ನೀಂ ಬೇಗಂ ಪೋಗಿ ಪ್ರತಿಬೋಧಿಸೆಂದು [11]ಪೇೞ್ದೊಡೆ ಗಂಗಾದೇವತೆಯುಂತೆಗೆಯ್ವೆನೆಂದು ಪೊಡೆವಟ್ಟು ಪೋಗಿ ಆ ರಿಸಿಯ[12]ರನೆಯ್ದಿ ಇಂ[12]ತೆಂದಳ್ ಭಟಾರಾ ನೀಮಿಾ ಭವದಿಂ ತೊಟ್ಟು ಮೂಱನೆಯ ಭವದೊಳ್

---

1. ಳ್ತುಱೊ (ಘಚಛ). 2. ಯಲ್ ಪೋದೊಡೊಲ್ದ (ಘಚ), ಯಲ್ ಪೋದೊಡೆ ಕುಡಿದ (ಚ), ಯೆಕೊಲ್ದ (ಖ). 3. ಳ್ತುಱೊ (ಘಚಛ). 4. ಗೆಯ್ವುಧರ್ಮ (ಘಚಛ). 5. +ಬಂದು (ಘಚಛ). 6. +ಸಮ್ಯಗ್ ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ (ಘಚಛ). 7. (ಘಚಛ)ಗಳಲ್ಲಿಲ್ಲ. 8. ಪೇಳ್ದಂತೆಯೊಂದು (ಘ), ಪೇಳ್ದಂತೊಂದು (ಚ), ಪೇಳ್ದಂತೆ ಬಂದು (ಛ) ; 9. ರಿ (ಚ), ದಿ (ಛ). 10. ದೆಸೆಗಡೆ (ಛ). 11. +ಗಣಧರ ದೇವರ್ (ಘಚಛ). 12. ಗ್ಗೆಂ (ಘಚಛ).

ಕರ್ಮಕ್ಷಯಂಗೆಯ್ದು ಕೇವಳಜ್ಞಾನಿಗಳಾಗಿ ಮೋಕ್ಷಕ್ಕೆ ಪೋದಪರೆಂದು ಸೀಮಂಧರ ತೀರ್ಥಕರ ಪರಮದೇವರ್ ಪೇೞ್ದರೆಂದೊಡಾ ಮಾತಂ ಧರ್ಮಕೀರ್ತಿ [1]ಭಟಾರರ್[1] ಕೇಳ್ದು ಉನ್ಮಾರ್ಗ[2]ದಿಂದಂ[2] ಮನಮಂ ಪಡುಗಿ ಸನ್ಮಾರ್ಗದೊಳ್ ನಿಱಿಸಿ :

ಗಾಹೆ ॥ ಹಾ ದುಟ್ಠು ಕಯಂ ಹಾ ದುಟ್ಠು ಕಾರಿಯಂ ಹಾ ದುಟ್ಠು ಅಣುಮೋದಿಯಂ ।
ಜೇವೋ ಅಂತೋ ಅಂತೋ ದಜ್ಝಇ ಪಚ್ಚತಾವೇಣ ವೇವಂತೋ ॥

ಎಂದು ಪೊಲ್ಲದಂ ಬಗೆದೆನೆಂದು ತನ್ನಂ ತಾಂ ಪೞಿಯುತ್ತಂ ಸೀಮಂಧರ ಸ್ವಾಮಿಗಳ ನಾಮಗ್ರಹಣಂ[3]ಗೊಂಡಾಗಳ್[3] ಶುಭಪರಿಣಾಮದಿಂ ಓಂಗಿ ಶುಭಶುದ್ಧ ಪರಿಣಾಮದೊಳ್ ಕೂಡಿ ಮಿಕ್ಕ ರತ್ನತ್ರಯಂಗಳನಾರಾಧಿಸಿ ಪದಿನಾಱನೆಯ ಕಲ್ಪದೊಳ್ ಉತ್ಕೃಷ್ಟಮಪ್ಪ ಇರ್ಪತ್ತೆರಡು ಸಾಗರೋಪಮಾಯುಷ್ಯಮನೊಡೆಯೊನಚ್ಯುತೇಂದ್ರನಾಗಿ ಪುಟ್ಟಿದಂ

ಮತ್ತಂ ಪೆಱರುಮಾರಾಧಕರಪ್ಪವರ್ಗಳ್ ಧರ್ಮಘೋಷ ಭಟಾರರಂ ಮನದೊಳ್ ಬಗೆದು ಪಸಿವುಂ ನೀರೞ್ಕೆ ಮೊದಲಾಗೊಡೆಯ ಪರೀಷಹಂಗಳಂ ಸೈರಿಸಿ ಸಮ್ಯಗ್ ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗಸುಖಂಗಳನೆಯ್ದುಗೆ

1. ರಿಸಿಯರ್ (ಕಖಗ). 2. ಕ್ಕೆ ಸಂದ (ಘಚಛ). 3. ಗೊಳಲೊಡನ (ಘಚಛ).

# (೯) ಸಿರಿದಿಣ್ಣನೆಂಬ ಭಟ್ಟಾರರ ಕಥೆ

ಸಿರಿದಿಣ್ಣ [1]ಭಟಾರರ[1] ಕಥೆಯಂ ಪೇೞ್ವೆಂ :

ಗಾಹೆ ॥ ಸೀದೇಣ ಪುವ್ವವೇರಿಯ ದೇವೇಣ ವಿಗುವ್ವಿದೇಣ ಘೋರೇಣ ।
ಸಂಸಿತ್ತೋ ಸಿರಿದಿಣ್ಣೋ ಪಡಿವಣ್ಣೋ ಉತ್ತಮಂ ಅಟ್ಠಂ ॥

[ಸೀದೇಣ—ಆಯ್ಕುಲಿಂದಂ, ಪುವ್ವವೇರಿಯ ದೇವೇಣ—ಮುನ್ನಿನ ಭವದ ಪಗೆವನಪ್ಪ ದೇವನಿಂದಂ. ವಿಗುವ್ವಿದೇಣ—ವಿಗುರ್ವಿಸೆಪಟ್ಟುದಱಿಂದಂ, ಘೋರೇಣ—ಅವಮಾನುಂ ಕಡಿದಪ್ಪುದಱಿಂದಂ. ಸಂಸಿತ್ತೋ—ತಳಿಯಪಟ್ಟೊನಾಗಿ, ಸಿರಿದಿಣ್ಣೋ—ಸಿರಿದಿಣ್ಣನೆಂಬ ಭಟ್ಟಾರಕಂ, ಪಡಿವಣ್ಣೋ—ಪೊ[2]ರ್ದಿ[2]ದೊಂ. ಉತ್ತಮಂ ಅಟ್ಠಂ—ಮಿಕ್ಕ ದರ್ಶನಜ್ಞಾನಚಾರಿತ್ರಾರಾಧನೆಯುಮಂ]

ಅದೆಂತೆಂದೊಡೆ :

ಈ ಜಂಬೂ ದ್ವೀಪದ ಭರತಕ್ಷೇತ್ರದೊ[3]ಳಂಗವೆ[3]ಂಬುದು ನಾಡಲ್ಲಿ [4]ಚಂಪಾ[4] ನಗರಮೆಂಬುದು ಪೊೞಲದನಾಳ್ವೊನಧಿಗತ ಸಮ್ಯಗ್‍ದೃಷ್ಟಿಶ್ರಾವಕಂ ಸಿಂಹರಥನೆಂಬೊನರಸಂ ಮತ್ತಿತ್ತ ಮಗಧೆಯೆಂಬುದು ನಾಡಲ್ಲಿ ಸಾಕೇತ[5]ಮೆಂಬುದ[5]ದನಾಳ್ವೊಂ [6]ಶ್ರಾವಕಂ ಸು[7]ಮಂತ್ರ[7]ನೆಂಬೊನರಸಂ ಮತ್ತಿತ್ತ ಮಂಗಳಾವತಿಯೆಂಬುದು ನಾಡಲ್ಲಿ [8]ಇ[8]ಳಾಪಟ್ಟಣಮೆಂಬುದು ಪೊೞಲದನಾಳ್ವೊನಧಿಗತ ಸಮ್ಯಗ್ ದೃಷ್ಟಿ ಶ್ರಾವಕಂ ಜಿತಶತ್ರುವೆಂಬೊನರಸನಾತನರಸಿ ಇಳಾಮಹಾದೇವಿಯೆಂಬೊಳಾ [9]ಅರಸನ ದಾದಿ[9] ವಿನಯಮತಿಯೆಂಬೊಳಿಂತವರ್ಗಳಿಷ್ಟ ವಿಷಯ ಕಾಮಭೋಗಂಗಳನನುಭವಿಸುತ್ತಂ ಕಾಲಂ ಸಲೆ[10] ಫಾಲ್ಗುನ[11] ನಂದೀಶ್ವರಂ ಬಂದೊಡೆ ಮೂವರುಂ ಮಂಡಲಿಕರುಂ ತಂತಮ್ಮ ಪೊೞಲ್ಗಳೊಳೆಂಟು ದಿವಸಮುಮ[12]ಭಟ್ಟಾರಕರ್ಗೆ[12] ಮಹಾಮಹಿಮೆಗಳಂ ಮಾಡಲ್‍ತೊಡಗಿದರಿತ್ತ ಜಿತಶತ್ರುವುಂ ತನ್ನ ಪೊೞಲೊ[13]ಳೆಂಟು ದಿವಸಂ ಜಿನ[13]ಮಹಾಮಹಿಮೆಯುಮಂ ಮಾಡಲ್ ತೊಡಗಿದನಾತನ ದಾದಿ ವಿನಯಮತಿಯೆಂಬೊಳ್ ಗುಜ್ಜಿ ವಿರಳದಂತೆ ಅವಮಾನುಂ ವಿರೂಪೆ ಪೇ[14]ಸಪ[14]ಡುವಳ್ ನೋಡಿದ ಜನಕ್ಕೆ [15]ಭಯಮುಮಂ[15] ಪಡೆವೊಳ್ ನಾ[16]ಣಿಸೆ[16]ಪಡುವೊಳಂತಪ್ಪಾಕೆ ಅರಸನೊಡನೆ ಜಿನಮಹಾಮಹಿಮೆಯುಮಂ ನೋಡಲ್ ಪೋಪಾಗಳರಸನೆಂದೊನವ್ವಾ ನೀ[17]ಮುಂ[17] ಮಹಿಮೆಗೆ ಬರಲ್ವೇಡ ನಿಮ್ಮಂ ಕಂಡು ಮಹಿಮೆಗೆ ವಂದ ನೆರವಿಯುಂ

1. ನೆಂಬ ರುಷಿಯರ (ಘಚಛ). 2. ಳ್ದಿ (ಕಖಗ). 3. ಳ್ ಗಂಗೆಯೆಂ (ಕಖಗ). 4. ಪಂಚಾ (ಛ). 5. ಪುರಮು (ಘಚ). 6. + ನಧಿಗಮಸಮ್ಯಗ್ ದೃಷ್ಟಿ (ಘಚ). 7. ಮತಿ (ಘಚಛ). 8. ವಿ (ಘಚ), ಐೞ (ಛ). 9. ಇವರ್ಗಗ್ಗಂ ಮಗಳ್ (ಕಖಗ). 10. + ಮತ್ತೊಂದು ದಿವಸಂ (ಘಚಛ). 11. + ಮಾಸದ (ಘಚಛ). 12. ತ್ತರಮೋಕ್ಷರಂಗೆ (ಚ). 13. ಳಷ್ಟಾಹ್ನಿಕ (ಘಚಛ). 14. ವರ್ಷ (ಕ). 15. ನಗೆಯುಂ (ಘಚಛ). 16. ಣ್ದೆ (ಖಗ). ಣ್ಚಿ (ಘಚಛ). 17. ವು. (ಕಖಗ).

ಜುಗಂ ಪೇಸುಗುವುದುಂಗಳಮುಂಗುವುದಱಿಂ ನೀಮುಂ ಮನೆಯೊಳಿರಿಮೆಂದಿರಿಸಿ ತಾನುಂ ಸಹಸ್ರಕೂಟವೆಂಬ ಚೈತ್ಯಾಲಯಕ್ಕೆ ಮಹಾಮಹಿಮೆಯಂ ಮಾಡಲ್ ಪೋದನ್

ಇತ್ತ ದಾದಿಯುಂ ಮಗನ ಮಾಡುವ ಮಹಾಮಹಿಮೆಯುಂ ನೋಡಲ್ ಪೆತ್ತೆ ನಿಲ್ಲೆಂದುಬ್ಬೆಗಂಬಟ್ಟು ತನ್ನಂ ತಾಂ ಪೞಿದು ನಂದೀಶ್ವರದೆಂಟು ದಿವಸ[1]ಮಭಿಷೇಕ ಮುಮರ್ಚನೆಯುಮುಪ್ಪೋಪವಾಸಮುಮಂ[1] ಮಾಡಿ ದೇವರಂ ಬಂದಿಸುತ್ತಂ ಪೂಜಿಸುತ್ತಿರ್ದಳಿತ್ತ ರಸನುಮೆಂಟು ದಿವಸಂ ಮಹಾಮಹಿಮೆಯುಮಭಿಷೇಕಮುಮಂ ಮಾಡಿ ಸಮೆಯಿಸಿದ ಬೞಿಕ್ಕೆ ದಾದಿಗೆ ಬೞಿಯಟ್ಟಿವರಿಸಿ ಇಂತೆಂದನಬ್ಬಾ ನೀಮಿಂತೇಕೆ ಕರಂ ಬಡಪಟ್ಟಿರ್ದಿರೆಂದೊಡೆ ದಾದಿಯಿಂತೆಂದಳ್ ಮಗನೆ ಎಂಟು ದಿವಸಮುಪವಾಸಂ ಗೆಯ್ದು ಮನೆಯೊಳ್ ದೇವರ್ಗ್ಗಭಿಷೇಕಮುಂ ಪೂಜೆಯುಮಂ ಮಾಡಿ[2]ಸುತ್ತಿರ್ದೆನೆಂದೊಡೆ[2] ಅದಂ ಕೇಳ್ದು ದಮಾನುಮರಸನೊಸೆದು ಬಡವಾದುದುಮಂ ಕಂಡು ಕರುಣಿಸಿ ಅಬ್ಬಾ ನಿಮಗೊಸೆದೆಂ ವರಮಂ ಬೇಡಿಕೊಳ್ಳಿಮೆಂದೊಡಾಕೆಯಿಂತೆಂದಳ್ ಮಗನೆ ನೀನೆನಗೊಸೆದೆಯಪ್ಪೊಡೆನಗೆಂದು ಮತ್ತಮೆಂಟು ದಿವಸಂ ದೇವರ್ಗ್ಗೆ ಮಹಾಮಹಿಮೆಯುಂ ಮಾಡೆಂದು ಪೇೞ್ದೊಡಂತೆಗೆಯ್ವೆನೆಂದರಸಂ ದಾದಿ ಕಾರಣಮಾಗಿ ಮತ್ತಮೆಂಟುದಿವಸಂ ಮಹಾಮಹಿಮೆಯುಂ ಮಾಡಲ್ ತೊಡಂಗಿದೊಡನ್ನ ಮಹಾ ಮಹಿಮೆಯೊಳಿಂತುಣ್ಬೆನೆಂದು ಪಾರಿಸದೆ ಮತ್ತಮುಪ್ಪೋಪವಾಸಂಗೆಯ್ದು ಪಾರಣೆಯ ದಿವಸದಂದಾಕೆಯ ಶ್ರಮಮುಮಂ ಸೇದೆಯುಮಂ ಹಿಮವಂತಪರ್ವತದ[3] ಪದ್ಮಮೆಂಬ ಕೊಳದೊಳ್ ವಸಿಯಿಸಿರ್ದ ಶ್ರೀಯಾದೇವತೆ ಕಂಡಱಿದು ತನ್ನ ಪರಿವಾರಸಹಿತಂ ವಿಮಾನಂಗಳನೇಱಿ ಮಹಾವಿಭೂತಿಯಿಂ ಬಂದು ಸ್ವರ್ಣಪೀಠದೊಳ್ ದಾದಿಯನಿರಿಸಿ ಸುಗಂಧೋದಕಂಗಳಿಂ ತೀವಿದ ಸುವರ್ಣಕಲಶಗಳಿಂದಮಭಿಷೇಕಂಗೆಯ್ದು ಸಮೇರು ಮಂದಾರ ಸಂತಾನಕ ಪಾರಿ[4]ಯಾತ್ರಕಮೆಂ[4]ಬ ಪೂಗಳಂ ಸುರಿದು ಕಮ್ಮಿತಪ್ಪ ತಂಬೆಲರ್ ವೀಸಿ ದೇವದುಂದುಭಿಗಳಂ ಬಾಜಿಸಿ[5] ಶ್ರೀಯಾದೇವತೆ ತನ್ನಾವಾಸಕ್ಕೆ ಪೋದಳ್

ಇತ್ತ ದಾದಿಯುಂ ಶ್ರೀಯಾದೇವತೆಯ ವಿಭೂತಿಯುಮಂ ಕಂಡು ನಿದಾನಂಗೆಯ್ದು ಕೆಲವುದಿವಸದಿಂ ಕಾಲಂಗೆಯ್ದು ಜಂಬೂದ್ವೀಪದ ಹಿಮವಂತ ಪರ್ವತದ ಪದ್ಮ ಮೆಂಬ ಕೊಳದೊಳ್ ಶ್ರೀಯಾದೇವತೆಯಾಗಿ ಪುಟ್ಟಿ [6]ಇ[6]ಣಾಪಟ್ಟಣಕೆ ಬಂದಾ ಪೊೞಲ ಜನಂಗಳೆಲ್ಲಮಿರುಳ್ ಕನಸಿನೊಳಾಂ ಶ್ರೀಯಾದೇವತೆಯೆಂ ನಿಮ್ಮ ಪೊೞಲ ಮಂದನನಗೆ [7]ಶ್ರೀವಿಹಾರಮಂ[7] ಮಾಡಿ ಎನ್ನ ಪ್ರತಿಮೆಯನಿಟ್ಟು ಪೂಜಿಸುತ್ತುಮೋಲಗಿಸುತ್ತುಮಿರಿಮಾನುಂ ನಿಮಗೆ ಬೇಡಿದ ವರಮನೀವೆನೆಂದು ಕನಸಿನೊಳ್ ತೋಱಿದೊಡೆ ಪೊೞಲ ಜನಮೆಲ್ಲಂ ನೆರೆದು [8]ಶ್ರೀವಿಹಾರಮಂ[8] ಮಾಡಿ ಶ್ರೀಯಾದೇವತೆಯ ಪ್ರತಿಮೆಯುಮಂ ಸ್ಥಾಪಿಸಿ ಮಹಿಮೆಯುಮಂ ಮಾಡುತ್ತಂ ಪೂಜಿಸುತ್ತಮೋಲಗಿಸುತ್ತ

1. + ಬಂದಿರ್ದೆನೆಂದುದು (ಫಚ). + ಬಂದಿಸುತ್ತಿರ್ದನೆಂದು ಪೇೞೆ (ಫ). 2. ನೋಂದು (ಕಖಗ). 3. + ದೆಸೆಗೆ (ಫಘ). 4. ಜಾತಂಗಳಿಂ (ಫಚಘ). 5. + ಪೂಜಿಸಿ (ಫಘ). 6. ಪ (ಫಘ). 7. ನಿಮ್ಮಾರಮಂ (ಫಚಘ). 8. ಮುಪ್ಪೋಪವಾಸಂ ಗೆಯ್ದು ಮನೆಯೊಳೆಂಟು ದಿವಸ ಮುನ್ನ ಹಣಮುಮನರ್ಚನೆಯುಮಂ (ಕಖಗ).

ವಿಪ್ರುದಂ ಕಂಡಿಳಾಮುಹಾದೇವಿ ಅಪುತ್ರಿಕೆ ಮಕ್ಕಳಂ ಬೇಡಿ ಪನ್ನೆರಡು ವರುಷಂ ಬ[1]ರೆಗಂ ನಿಚ್ಚಲುಂ ಶ್ರೀವಿಹಾರಕ್ಕೆ[1] ವೋಗಿ ಶ್ರೀಯಾದೇವತೆಯನರ್ಚಿಸುತ್ತುಂ ಪೂಜಿಸುತ್ತುಂ ಮಹಾಮಹಿಮೆಯುಂ ಮಾಡುತ್ತುಂ ಆಡುತ್ತುಂ ಪಾಡುತ್ತುಮೋಲಗಿಸುತ್ತುಮಿರೆಯುದಂ ಕಂಡಱಿದು ಶ್ರೀಯಾದೇವತೆ ಪೂರ್ವವಿದೇಹಕ್ಕೆ ಪೋಗಿ ಸ್ವಯಂಪ್ರಭರೆಂಬ ತೀರ್ಥಕರ ಪರಮದೇವರಂ ಕಂಡೆಱಗಿ ಪೊಡೆಮಟ್ಟಿಂತೆಂದು ಬೆಸಗೊಂಡಳ್ ಭಟಾರಾ ಎನ್ನ ಪೊಬಲೊಳಿರ್ಪ ಇಳಾಮಹಾದೇವಿಗೆ ಮಕ್ಕ[2]ಳೇ ನಕ್ಕುಮೊ[2] ಎಂದು ಬೆಸಗೊಂಡೊಡೆ ಭಟಾರರಿಂತೆಂದರ್ ಸ್ವರ್ಗದಿಂದ ಬೞ್ಚಿ ಬಂದಿಲ್ಲಿ ಒರ್ವ ದೇವಂ ಇಳಾಮಹಾದೇವಿಗೆ ಮಗನಾಗಿ ಪುಟ್ಟುಗುಮೆಂದೊಡದಂ ಕೇಳ್ದು ಭಟ್ಟಾರಗ್ಗೆಱಗಿ ಪೊಡೆಮಟ್ಟು ಇಳಾಪಟ್ಟಣಕ್ಕೆ ಪೋಗಿ [3]ಇ[3]ಳಾಮಹಾದೇವಿಗೆ ಕನಸಿನೊಳಿಂತೆಂದು ಪೇೞ್ದಳಿಳಾಮಹಾದೇವಿ ನಿನಗೆನ್ನ ಪ್ರಸಾದದೆ ಸೌಧರ್ಮಕಲ್ಪದೊಳ್ ಮೇಘಮಾಲಮೆಂಬ ವಿಮಾನದಿಂ ಬೞ್ಚಿ ವರ್ಧಮಾನನೆಂಬ ದೇವಂ ಬಂದು ನಿನಗೆ ಮಗನಾಗಿ ಪುಟ್ಟುಗುಮೆಂದು ಶ್ರೀಯಾದೇವತೆ ಪೇೞ್ದೊಡಿಳಾ ಮಹಾದೇವಿಯಾದಮಾನುಂ ಸಂತಸಂಬಟ್ಟಿರ್ದು ಕೆಲವು ದಿವಸದಿಂ ಗರ್ಭಮಾಗಿ ನವಮಾಸಂ ನೆಱೆದು ಮಗನಂ ಪೆತ್ತೊಡೆ ಶ್ರೀಯಾದೇವತೆ ಮಗನಂ ಕೊಟ್ಟಳೆಂದಾ ಕೂಸಿಂಗೆ ತಾಯುಂ ತಂದೆಯುಂ ನಂಟರುಮೆಲ್ಲಂ ನೆರೆದು ಸಿರಿದಿಣ್ಣನೆಂದು ಪೆಸರನಿಟ್ಟರ್

ಆತನುಂ ಶುಕ್ಲಪಕ್ಷದ ಚಂದ್ರನಂತೆ ಕ್ರಮಕ್ರಮದಿಂ [4]ಬ[4]ಳೆದು ನವಯೌವನನುಂ ಸರ್ವಕಳಾಕುಶಳನುಮಾಗಿರ್ಪನ್ನೆಗಮಿತ್ತ ಸಾಕೇತಪುರಾಧಿಪತಿಯ[5]ಪ್ಪ[5] ಸು[6]ಮಂತನೆಂ[6]ಬರಸನ ಮಗಳ್ ಸುಮತಿಯೆಂಬೊಳಾಕೆಯ ಸ್ವಯಂವರಕ್ಕರಸುಮಕ್ಕಳೆಲ್ಲಂ ನೆರೆದಿರ್ದಲ್ಲಿಗೆ ಸಿರಿದಿಣ್ಣಂಗಂ ಬೞಿಯಟ್ಟಿ ಬರಿಸಿದೊಡೆ ಸ್ವಯಂಬರದೊಳ್ ಸುಮತಿ [7]ಎಲ್ಲರುಂ[7] ನೋಡಿಯಾರುಮಂ ಮೆಚ್ಚದೆ ಸಿರಿದಿಣ್ಣಂಗೆ ಮಾಲೆಸೂಡಿದೊಡೆ ಮದುವೆಯಾಗಿ ಕೆಲವು ದಿವಸಮಲ್ಲಿರ್ದು ಮಾವನವರಂ ಬೆಸಗೊಂಡಿಳಾಪಟ್ಟಣಕ್ಕೆ [8]ವೋಪೆಮೆಂದೊಡಾತಂ ತನ್ನ ಮಗಳಪ್ಪ ಸುಮತಿಗೆ[8] ಬೞಿವೞಿಗೊಟ್ಟು ಮಗಳೊಡನೆ ಮಾಚಾಳನಪ್ಪ ಗಿಳಿಯುಮನಟ್ಟಿದೊಡವರ್ಗಳುಂ ಕತಿಪಯ ದಿವಸಂಗಳಿಂದಿಳಾಪಟ್ಟಣ[9]ಕ್ಕೆ ಪೋಗಿ[9] ಸುಖದಿಂದಿರೆ

ಮತ್ತೊಂದು ದಿವಸಂ ಗಿಳಿಯಂ ಸಾಕ್ಷಿಮಾಡಿ ಇರ್ವರುಂ ಚದುರಂಗ ಮಾಡುತ್ತಿರೆ [10]ಅರಸಿಯರಸನಂ ಗೆಲ್ದೊಡೆ ಗಿಳಿ ನೆಲದೊಳೆರಡು ಬರೆಯಂ ಬರೆಗುಮರಸನರಸಿಯಂ ಗೆಲ್ದೊಡೆ ಒಂದೆ ಬರೆಯಂ[10] ಬರೆಗುಮಿಂತು ಪಿರಿದುಂ ಬೇಗಮಾಡಿ ಅರಸನರಸಿಯಂ ಗೆಲ್ದೊಡೆರಡು ಬರೆಯಂ [11]ತೆಗೆದು[11]ದನರಸಂ ಕಂಡು ಕಡುಮುಳಿ

1. ರಂ ನಿಚ್ಚನಿಚ್ಚಂ ಸಿರಿಪುರಕ್ಕೆ (ಘಛ). 2. ಳಕ್ಕುಮೊ ಆಗದೊ (ಘಚಛ). 3. ಇರುಳೇ (ಘಚಛ). 4. ಬೆ (ಕಖಗ). 5. ಪ್ಪಾತಂ (ಕಖಗ). 6. ಮತಿಯೆಂ (ಘಚಛ). 7. + ಸಮಸ್ತ ರಾಜಪುತ್ರರಂ (ಛ). 8. ಪೋಪಮೆಂದೊಡಂ ಸುಮಂತಂ ಮಗಳ್ಗೆ (ಕಖಗ). 9. ಮನೆಯ್ದಿ (ಘಚಛ). 10. ಯರಸಿಯುರಸನಂ ಗೆಲ್ದಡೆ ನೆಲದೊಳೊಂದು ಬರೆಯಂ ಬರೆಗುಮರಸನನರಸಿ ಗೆಲ್ದೊಡೆರಡು ಬರೆಯಂ (ಘ). ಯರಸಿಯನರಸಂ ಗೆಲ್ದೊಡೆ ನೆಲದೊಳೊಂದು ಬರೆಯಂ ಬರೆಗು ಮರಸನನರಸಿ ಗೆಲ್ದೊಡೆರಡು ಬರೆಯುಂ (ಚಛ) ; ಬರೆಯಂ ಎಂಬುದಕ್ಕೆ (ಖಗ)ಗಳಲ್ಲಿ ಗರೆಯಂ ಎಂದು ಪಾಠ. 11. ತೇವು (ಘಛ).

# (೧೦) ವೃಷಭಸೇನ ಭಟ್ಟಾರರ ಕಥೆ

ವೃಷಭಸೇನ ಭಟ್ಟಾರರ ಕಥೆಯಂ ಪೇೞ್ವೆಂ :

**ಗಾಹೆ ॥** ಉಣ್ಹಂ ವಾದಂ ಉಣ್ಹಂ ಸಿಳಾತಳಂ ಆದವಂ ಚ ಆತಿ ಉಣ್ಹಂ ।
ಸಹಿಊಣ ಉಸಹಸೇಣೋ ಪಡಿವಣ್ಣೋ ಉತ್ತಮಂ ಅಟ್ಠಂ ॥

[ಉಣ್ಹಂ ವಾದಂ—ಬಿಸಿದಪ್ಪ ಗಾಳಿಯುಮಂ, ಉಣ್ಹಂ—ಬಿಸಿದಪ್ಪುದಂ, ಸಿಳಾತಳಂ—[1]ಯೋಗಪೀಠದ[1] ಸಿಲೆಯ ಮೇಗುಮಂ, ಆದವಂ ಚ—ಬಿಸಿಲುಮಂ, ಆತಿ ಉಣ್ಹಂ—ಆದಂ ಬಿಸಿದಪ್ಪುದಂ, ಸಹಿಊಣ—ಲೇಸಾಗಿ ಸೈರಿಸಿ, ಉಸಹಸೇಣೋ—ವೃಷಭಸೇನರೆಂಬ ಮುನಿ, ಪಡಿವಣ್ಣೋ—ಪ್ರೊ[2]ರ್ದಿ[2]ದೊಂ, ಉತ್ತಮಂ ಅಟ್ಠಂ—ಮಿಕ್ಕ ದರ್ಶನಜ್ಞಾನಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳವಂತಿಯೆಂಬುದು ನಾಡಲ್ಲಿ ಉಜ್ಜೇನಿಯೆಂಬುದು ಪೊೞಲದನಾಳ್ವೊಂ ಪ್ರದ್ಯೋತನೆಂಬರಸನಾತನ ಮಹಾದೇವಿ ಜ್ಯೋತಿರ್ಮಾಲೆಯೆಂಬೊಳಂತವರ್ಗಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಂ ಕಾಲಂ ಸಲೆ ಮತ್ತೊಂದು ದಿವಸಮರಸಂ ಕಾಡಾನೆಯಂ ಪಿಡಿಯಲ್ವೇಡಿ[3]ಯಾ[3]ನೆಯನೇಱಿ ಅಡವಿಗೆವೋದೊಡದು ಮದವಿಹ್ವಳಿತನಾಗಿ ಮೆಯ್ಯಱಿಯದೆ ದಿಶಾಪಟ್ಟಂ ಗೊಂ[4]ಡೊಂದೆಸೆಗೆ ಕೊಂಡೋಡಿ [5]ದಂಡಕಾ[5]ರಣ್ಯ[6]ಮಪ್ಪ[6]ಡವಿಯ ನಡುವೆ [7]ತನ್ನ ಬೇಗದಿಂ[7] ಪರಿಯೆ ನಾಡೆಯಂತರಂಬೋದೊಡೊಂದು ಮರದಡ್ಡ[8]ಬಿ[8]ರ್ದ ಕೊಂಬಂ ಕಂಡರಸಂ ಪಿಡಿದು [9]ನೇ[9]ಲ್ದಿರ್ದೊನಾನೆಯುಂ ಪೆಱತೊಂದು ದೆಸೆಗೆ ಪೋ[10]ಯ್ತಂತ[10]ರಸನುಂ ಮರದಿಂದಿೞಿದು ನಾಡ ಬಟ್ಟೆಯೊಳ್ ತಗುಳ್ದು ಅಡವಿಯುಂ ಪೊಱಮಟ್ಟು ಬಂದೊಂದು ಪೇಡಮೆಂಬೂರನೆಯ್ದುಯದಱ ಸಾರೆಯೊಂದು ಕೆಯ್ಯಂ[11]ಟದಱ ಸಾರೆಯೊಳ್ ಬಾವಿಯುಂ[11]ಟದಱ ತಡಿಯೊಳ್ ಬಂದು ಕುಳ್ಳಿರ್ದು ಪಸಿವಿನಿಂದಂ ತೃಷೆಯಿಂದಂ [12]ಪಥ[12]ಶ್ರಮದಿಂದಾದಮಾನುಂ ಸೇದೆಗೆಟ್ಟು ಬಂಬಳಂ ಬಾಡಿರ್ಪನ್ನೆಗಮ್

ಅಪ್ಪೂರ ಗಾವುಂಡಂ ಜಿನಪಾದಿಕನೆಂಬೊನಾತನ ಗಾವುಂಡಿ ಜಿನಮತಿಯೆಂಬೊಳಾಯಿರ್ವರ್ಗ್ಗಂ ಮಗಳ್ ಜಿನದತ್ತೆಯೆಂಬೊಳತ್ಯಂತ ರೂಪಲಾವಣ್ಯ ಸೌಭಾಗ್ಯ ಕಾಂತಿ[13]ಯು[13]ಮೆಂದಿವನೊಡೆಯೊಳ್ ನೀರಂ ತರಲ್ಕೆಂದು ಬಾವಿಗೆ

---

1. (ಘಚಛ)ಗಳಲ್ಲಿಲ್ಲ. 2. ಳ್ದಿ (ಕಖಗ). 3. ಸೋರ್ಕಾ (ಘಚಛ). 4. ಡೊಂದು (ಕಖಗ). 5. ದೊಡದು ಅ (ಖ). 6. ಮೆಂಬ (ಘಚಛ). 7. (ಘಚಛ)ಗಳಲ್ಲಿಲ್ಲ. 8. ಬಿ (ಘಚ). ಬಿ (ಛ). 9. ನ (ಖಚ). 10. ದಪಂ ಅ (ಕಗ), ದಪಂತ (ಖ). 11. ಬಾವಿಯುಮುಂ (ಘಚ). ಬಾವಿಯು ಮೆಂಬುದುಂ (ಛ). 12. ಬಟ್ಟೆಯ (ಘಚ), (ಛ)ದಲ್ಲಿಲ್ಲ. 13. ಯೌವನ (ಘಚಛ).

ವ್ರೋ[1]ದಾ[1]ಕೆಯು[2]ಂ ಕಂಡರಸನೆಲೆ[2] ಕೂಸೆ ನೀ[3]ರಂ ಕು[3]ಡಿ[4]ಯಲೆಱೆಯಾ ಎಂದೊಡಂತೆಗೆಯ್ವೆನೆಂದಾತನ ರೂಪುಂ ಗಾಡಿಯುಂ ತೇಜಮುಂ ಲಾವಣ್ಯಮುಮಂ ಕಂಡಾಟಿಸಿ ನೀರಂ ನೀಡಿಕೊಂಡು ಬಂದು[4] ಕುಡಿಯಲೆಱೆಯೆ ಕುಡಿಯೆ [5]ಕು[5]ದಿಯೆ ಕರಗದ ದಾರೆಯುಮನು[6]ಗಿದುಕೊಂಡೊಡ[7]ರಸನಾಕೆಯ ಮೊಗಮಂ ನೋಡಿ ಸಕ್ಕೇಕೆ ಕಾಡುವಾ ಕೂಸೆ ಕಾಡದೆ ಕುಡಿಯಲೆಱೆಯಾ ಎಂದೊಡಾಕೆಯುಂ ಕುಡಿಯಲ್ಕೆಱೆದು ತನ್ನ ಮನೆಗೆವೋಗಿ ತನ್ನ ತಂದೆಗಿಂತೆಂದಳಮ್ಮಾ ಊರ ಪೊಱಗಣ ಬಾವಿಯೊಳೊರ್ವಂ ಮಹಾಪುರುಷಂ ಬಂದಿ[7]ರ್ದೊ[7]ನಾತನಂ ನೀಮೊಡಗೊಂಡು ಮನೆಗೆ ಬನ್ನಿಮೆಂದೊಡಂತೆಗೆಯ್ವೆನೆಂದಾತನುಂ ಪೋಗಿಯೊಡಗೊಂಡು ಬಂದಾತನ ಶ್ರಮಂ ಪೋಗೆ ದಿವ್ಯಮಪ್ಪಾಹಾರಮನೂಡಿ[8]ರ್ದ[8]ನ್

ಅನ್ನೆಗಮರಸನ[9]ರಿವಕ್ಷೋಯುಂ ನೋಡುತ್ತಂ ಪೆಜ್ಜೆಗಳಿಂದಂ ತಂತ್ರಮೆಲ್ಲಂ ಬಂದರಸನಲ್ಲಿಗೆ ವಂದೊನೆಯುಂದೂರೊಳಗೆಲ್ಲಮುಱಿಸಿ ಬೆಸಗೊಂಡವರರಸನಂ ಕಂಡೆರಗಿ ಪೊಡೆವಡುವುದುಮಂ ಜೀಯ ಮಹಾಪ್ರಸಾದಮೆಂಬುದುಮಂ ಗಾವುಂಡಂ ಕಂಡೀ ಈತನರಸನೆಂದಱಿದಗ್ಗಳಂ ಪ್ರತಿಪತ್ತಿಯುಂ ಗೌರವಮುಮಂ ಮಾಡಿದೊಡರಸಂ ತನ್ನ ಪೆರ್ಗಡೆಗಳಿಂದಂ ಕೂಸ ಬೇಡಿ ಪೆತ್ತು ಮದುವೆನಿಂದಾಕೆಗೆ ಮಹಾದೇವಿಪಟ್ಟಂಗಟ್ಟಿ ತನ್ನ ಪೊೞಲ್ಗೆ ವೋಗಿ ಕರುಮಾಡಮಂ ಬಳಸಿಯು ಮಿರ್ದಂತಃಪುರದೊಳಗೊಂದೊಳ್ಳಿತಪ್ಪ ಮಾಡಮಂ ಕೊಟ್ಟಿರಿಸಿ ಎಲ್ಲಾ ಅರಸಿಯರ್ಕಳುಮನುೞಿದು ಜಿನದತ್ತೆಗಾಸಕ್ತನಾಗಿ ಪಲಕಾಲಮಾಕೆಯೊಳಿಷ್ಟವಿಷಯಕಾಮ ಭೋಗಂಗಳನನುಭವಿಸುತ್ತಿರ್ಪನ್ನೆಗಮೊಂದು ದಿವಸಮಡವಿಯ ಸೊರ್ಕಿದಾನೆ [10]ಗಣಿಯಾನೆ[10]ಗಳ್ವೆರಸು ಬಂದು [11]ಬಾವಿ[11]ಯಂ ಪೊಕ್ಕೊಡೆ ಪಿರಿದುಂ ಕಳಕಳಮಾಗಿ ಅರಸಂಗಱಿಪಿದೊಡರಸನುಂ ಕೇಳ್ದು ಕುರಿಪದಿಂ ಪೊಱಮಟ್ಟು ಕಾಡಾನೆಯುಂ ಕಟ್ಟಿಸಲೆಂದು [11]ಬಾವಿ[11]ಗೆ ಪೋದೊನಾ ಪ್ರಸ್ತಾವದೊಳ್ ಜಿನದತ್ತೆ ಪಸದನಂ [12]ಗೊಂಡಿ[12]ರ್ದಾಕೆ ಎನ್ನಂ ಬಿಸುಟ್ಟರಸಂ ಪೋದೊನೆಂದು ಮಱೆದು ನುಡಿವುದು ಮದಸನಾಕೆಯನೊಡಗೊಂಡು ಪೋಗದುದಂ ಕಂಡರಸಿಯರ್ಕಳೆಲ್ಲಂ ಸಂತೋಸಮಾಗಿ ಇನ್ನೆಮಗಮರಸಂ [13]ಸೂಳುಂ ಪಾಲಿಯು[13]ಮನೀಗುಮೆಂದು ರಾಗಿಸಿ ನುಡಿವ ಮಾತುಗಳಂ ಜಿನದತ್ತೆ ಕೇಳ್ದು ಕಿನಿಸಿ [14]ಇನ್ನಾತ[14]ನೆನಗೆ ಬಾೞ್ತೆಯ[15]ಲ್ಲನೆಂ[15]ದು ತನ್ನ ಮಾಡದಿಂ ಪೊಱಮಟ್ಟು ಪೆಱತೊಂದು ಪ್ರಾಸಾದದೊಳ್ ಪೋಗಿ[16]ರ್ದೊ[16]ಳ್

ಅನ್ನೆಗಮಿತ್ತರಸನಾನೆಯುಂ ಕಟ್ಟಿಸಿ ಜಿನದತ್ತೆಯ ಮಾಡಕ್ಕೆ ವೋಗಿ ಅರಸಿಯುಂ ಕಾಣದೆಲ್ಲಿರ್ದಳೆಂದು ಬೆಸಗೊಂಡೊಡೊರ್ವನಿಂತೆಂದಂ ನೀಮೊಡಗೊಂಡು ಪೋದಿ

1. ದದಾ (ಕಗ), ದೊದಾ (ಖ). 2. ನರಸಂ ಕಂಡೀಂ (ಘಚಛ). 3. ರ್ಗು (ಘಚಛ). 4. (ಕಖಗ)ಗಳಲ್ಲಿಲ್ಲ. 5. ಗು (ಘಚಛ). 6. ದುಗಿದಾಗಳ (ಘಚಛ). 7. ಕ್ರೊ (ಖ). 8. ಯಿಕ್ಕೆ (ಖ). 9. + ಪೋದ (ಘಚಛ). 10. ಗಳು ಕರಿಣ (ಘಚಛ). 11. 'ಬಾರಿ' ಎಂದಿರಬಹುದೆ ? 12. ಗೊಳುತ್ತಿ (ಘಚಛ). 13. ಸೂಳುಂಪಾಳಿಯುಂ (ಕಗ), ಸೂಳುಂ ಪಾಳಿಯುಂ (ಖ), ಸೂಳುಂಪಾಳಿಯ (ಘಚಛ). 14. ತಾ (ಘಚಛ). 15. ಲ್ಲೆಂ (ಘಚಛ). 16. ಕ್ರೊ (ಖ).

ರಿಲ್ಲಿಂದರಸಿ ಮುಳಿದು ಪುರುಷ ವ್ರತಮಂ [1]ಕೊಂಡು ತಪಸ್ವಿನಿಯಾಗಿ ಪೆಱತೊಂದು ಮಾಡದೊಳಿರ್ದೊಳೆಂದು ಪೇೞ್ದೊಡಾ ಮಾತನರಸಂ ಕೇಳ್ದಾಗಮಾನುಂ ಮುಳಿದಿಂತಪ್ಪ ವ್ರತಮುಂ ತಪಮುಮೆನ್ನಲ್ಲಿ ಕೂಡದೆಂದು ನುಡಿದಾಕೆಯುಂ ಬೆಳ್ಕಡೊಳ್ ಮಸಣದೊಳ್ ಕೊಂಡುಪೋಗಿಕ್ಕಿಮೆಂದಾಳ್ಗಳ್ಗೆ ಬೆಸನಂ ಪೇೞ್ದೊಡವರುಮಂತೆ ಗೆಯ್ವೆಮೆಂದರಸಿಯನೊಡಗೊಂಡುಪೋಗಿ ಮಸಣದೊಳೊಂಬತ್ತು ತಿಂಗಳ ಗರ್ಭಿಣಿಯುಂ ಪೋ[2]ತ್ತು[2] ಪೋಗಿಯಾಕೆಯನಲ್ಲಿಕ್ಕಿ ಇಂತೆಂದರಬ್ಬಾ ಎಮಗೇನುಂ ದೋಷ[3]ಮುಂ ಪಾಪಮು[3]ಮಿಲ್ಲ ಕ್ಷಮಿಯಿಸಿಮರಸನ ಬೆಸನೊಳ್ ತಂದಿಕ್ಕಿದೆಮೆಂದು ನುಡಿದು ಪೋದರನ್ನೆಗಮಾ ಇರುಳೊಳರಸಿ ಬೆಸಲೆಯಾಗಿ ಮಗನಂ ಪೆತ್ತೊಳ್

ಇತ್ತರಸನುಮಾ ಇರುಳೊಳ್ ಶ್ವೇತವೃಷಭನಂ ಕನಸಿನೊಳ್ ಕಂಡು ಪೊತ್ತು[4]ಱ[4]ನೋಲಗ[5]ದೊಳ್ ಆಸ್ಥಾನದ[5] ನಡುವೆ ಸಿಂಹಾಸನಮಸ್ತಕಸ್ಥಿತನಾಗಿ ತನ್ನ ಕಂಡ ಕನಸಂ ಮಂತ್ರಿಗೆ ಪೇೞ್ದೊಡೆ ಮಂತ್ರಿಯುಮಿಂತೆಂದು ಕನಸಿನ ಫಲಮನರಸಂಗೆ ಪೇೞ್ದಂ ದೇವಾ ನಿಮಗಿಂದು ಪುತ್ರಲಾಭಮಾದುದೆಂದು ಪೇೞ್ದೊಡದಂ ಕೇಳ್ದರಸಿಯರ್ಕಳೊ[6]ಳಗಾರ್ವ್ವ[6]ಸಲೆಯಾಗಿ ಮಗನಂ ಪೆತ್ತ[7]ಳೆಂದಾ[7]ರಯ್ದು ಬನ್ನಿಮೆಂದು ಪಡಿಯಱರ್ಗೆ ಬೆಸವೇೞ್ದೊಡವರ್ ರಾಣಿ[8]ವಾಸಕ್ಕೆ ಪೋಗಿ ಅರಸಿಯರ್ಕಳೆಲ್ಲರುಮಂ ಬೇಱೆವೇಱೆ ನಿಮ[9]ಗಂ[9] ಪುಟ್ಟಿದನೆ ಎಂದು ಬೆಸಗೊಂಡೊಡವರ್ಗಳನಿಬರುಮಿಂತೆಂದರೆಮಗೆ ಸೌಭಾಗ್ಯಮಿಲ್ಲದವರ್ಗೆ ಭರ್ತಾರನ ದೆಸೆಯಿಂದಪ್ಪ ಸೂಟುಂ ಪಾಟಿಯುಮಿಲ್ಲದೋರ್ಗೆ ಬಸಿಱುಂ ಮಗನುಮೆಂತಕ್ಕುಂ ನೀಮಾರಾನುಂ ಸೌಭಾಗ್ಯಮುಳ್ಳೋರಲ್ಲಿ ಬಸಿಱುಂ ಮಗನುಮನಾರಯ್ಯಿಮೆಮ್ಮಲ್ಲಿ ಏನನಾರಯ್ವಿರೆಂದು ನುಡಿದೊಡವರ್ಗ್ಗಳುಂ ಶ್ಮಶಾನಕ್ಕೆ ಪೋಗಿ ಜಿನದತ್ತೆ ಬೆಸಲೆಯಾಗಿ ಮಗನಂ ಪೆತ್ತಿರ್ದೊಳಂ ಕಂಡರಸಂಗೆ ಪೋಗಿ ಇಂತೆಂದರ್ ದೇವಾ ಶ್ಮಶಾನದೊಳ್ ಜಿನದ[10]ತ್ತೆಯೆಂಬರಸಿ[10] ಬೆಸಲೆಯಾಗಿ ಮಗನಂ ಪೆತ್ತಿರ್ದ[11]ಳೆಂ[11]ದು ಪೇೞ್ದೊಡದಂ ಕೇಳ್ದರಸಂ ಕೂಸುಮನರಸಿಯುಮನೊಡಗೊಂಡು ಬನ್ನಿಮೆಂದು ತರಿಸಿ ಮನ್ನೆ[12]ನಂದ[12]ದೊಳಿರಿಸಿ ಕನಸಿನೊಳ್ ವೃಷಭನಂ ಕಂಡುದಱಿಂದಾ ಕೂಸಿಂಗೆ ವೃಷಭಸೇನನೆಂದು ಪೆಸರನಿಟ್ಟರಸಿಯುಂ ದಾನಸನ್ಮಾನಾದಿಗಳಿಂ ಪೂಜಿಸಿಯಾಕೆಯೊಳಿಷ್ಟ ವಿಷಯ ಕಾಮಭೋಗಂಗಳನನುಭವಿಸುತ್ತಮಿರೆ

ವೃಷಭಸೇನ ಕುಮಾರನುಮೆಂಟು ವರುಷದ ಪ್ರಾಯದಾತನಾಗಿರ್ಪನ್ನೆಗ[13]ಮೊಂದುದಿವಸ[13]ಮರಸಂ ತಪಂಬಡುವ ಬಗೆಯಿಂದಂ ವೃಷಭಸೇನ ಕುಮಾರಂ[14]ಗಿಂ[14]ತೆಂದು ಮಗನೆ ನಿನಗೆ ಪಟ್ಟಂಗಟ್ಟಲ್ ಬಗೆದ[15]ಪ್ಪೆ[15]ನೆಂದೊಡಾತನಿಂತೆಂ[16]ದನಯ್ಯಾ[16]

---

1. + ಕೈ (ಘಚಛ). 2. ತ್ತು (ಛ). 3. (ಘಚಛ)ಗಳಲ್ಲಿಲ್ಲ. 4. ಎ (ಘ). 5. ದೊಳಾಸಭೆಯ (ಘಚ), ಸಾಲೆಯ (ಛ). 6. ಳಾರ್ವ್ವೆ (ಘ), ಳಾರ್ವೆ (ಛ). ಳೆಲ್ಲರುಮಂ ನೋಡಿಯಾರ್ವೆ (ಚ). 7. ರೆಂಬುದನಾ (ಘಚಛ). 8. + ಯ (ಘ), + ಯಾ (ಛ). 9. ಗೆ (ಘ), ಗೆನಗಂ (ಚಛ). 10. ತ್ತರಸಿಯರ್ (ಘಚಛ). 11. ರೆಂ (ಘಚಛ). 12. ನ ಮಾಡ (ಘಛ). 13. (ಘಚಛ)ಗಳಲ್ಲಿಲ್ಲ. 14. ರನಂ ಕರೆದಿಂ (ಘಚಛ). 15. ಪೆ (ಘಚಛ). 16. ದಂ ದೇವಾ (ಘಚಛ).

ಎನಗೆ ನೀ[1]ಮುಂ[1] [2]ರಾಜ್ಯಪಟ್ಟಂಗಟ್ಟಿದ[3]ಪಿ[3]ರೊ ಮೋಕ್ಷಪಟ್ಟಂಗಟ್ಟಿದಪಿ[3]ರೊ ಎಂ[4]ದು ತಂದೆಯುಂ ಬೆಸಗೊಂಡೊ[4]ಡೆ ಮಗನೆ ನಿನಗೆ ಮನುಷ್ಯರಾಜ್ಯಪಟ್ಟಂಗಟ್ಟಿದಪ್ಪೆ [5]ನೆಂಬುದುಂ[5] ದೇವಾ ರಾಜ್ಯಪಟ್ಟ[6]ಬಂಧನ[6]ಮುಂ ಮೋಕ್ಷ[7]ಸುಖ[7] ರಾಜ್ಯಪಟ್ಟ [8]ಬಂಧನ[8]ಮುಮೆಂತೆನೆ [9]ಮೋಕ್ಷಸುಖರಾಜ್ಯಪಟ್ಟಮುಂ[9] ತಪಂಗೆಯ್ವಂಗೆ ಕಟ್ಟುವು ದೆಂದೊಡಂತಪ್ಪೊಡೆ ಮನುಷ್ಯರಾಜ್ಯಪಟ್ಟಮನೊಲ್ಲೆನೆನಗೆ ಮೋಕ್ಷರಾಜ್ಯಪಟ್ಟಂಗಟ್ಟಿ ಮೆಂದು ನುಡಿದೊಡರಸನೆಂದಂ ಮಗನೆ ನೀನಿನ್ನುಂ ಕೂಸ[10]ನ್ನೈ ಬಾಲಪದ್ದ[10]ಯುನ್ನೆಗಂ ಬಳೆದರಸುಗೆಯ್ದುಮ್ಮ ವಿಷಯ ಕಾಮಭೋಗಂಗಳನನುಭವಿಸು[11]ತ್ತಂ[11] ಬೞಿಕ್ಕೆ ಪಶ್ಚಾತ್ಕಾಲದೊಳ್ ತಪಂಬಡುವುದೆಂದೊಡೆ ಕುಮಾರನಿಂತೆಂದನನ್ನೆಗಂ ಸಾವರೊ ಬಾಳ್ವರೊ ಎಂತಱಿಯಲಕ್ಕುಂ ಮನುಷ್ಯರ ಬಾ[12]ಳುಂ[12]

ಕಂದ ॥ ಪನಿಪುಲ್ಲ ಮುಗಿಲ ಸಂಜೆಯ
ಕನಸಿನ ಸುರ[13]ಧನುವ ನೆಗೆದ ನೊರೆಗಳ ತೆಱನಂ
ತನಿತುಂ[13] ನಿಲ್ಲವು [14]ಬಗೆವೊಡೆ[14]
ಮನು[15]ಜ[15]ರ [16]ಯೌವನಮುಮರ್ಥಮುಂ[16] ಬಾಳ್ಕೆಗಳುಂ

ಶ್ಲೋಕ ॥ ಭೋಗಸ್ತೃಷ್ಣಾಗ್ನಿಸಂವೃದ್ಧ್ಯೈ ದೀಪನಿಯೋ ಪನೋಪಮಃ ।
ಏಭಿಃ ಸ್ತ್ರೀವೃದ್ಧತೃಷ್ಣಾಗ್ನಿಶಾಂತ್ಯೈ ಚಿಂತ್ಯಮಿಹಾಪರಂ ।

ಗಾಹೆ ॥ ಸಣ್ಣಂ ಪಾ ಬದರಂ ತಂ ಮಜ್ಜಂ ವಿಮುತ್ತ್ವಾಣಂ ಮುತ್ತಿಪಹಂ ।
ಅ[17]ಮಿಸಾ[17]ದುಂ (?)ಭೋಗಸುಹಲೋಹವಿರದೋ ಮೋಕ್ಖೇಮದಿಂ ಕುಜ್ಜಾ ॥

ಆರ್ಯೆ ॥ ಯದ್ಯಪಿ ನಿಷೇವ್ಯಮಾಣಾ ಮನಸ್ಸಂತುಷ್ಟಿಕಾರಕಾ ವಿಷಯಾಃ ।
ಕಿಂಪಾಕಫಲಾಶನವದ್ಭವಂತಿ ಪಶ್ಚಾದತಿದುರಂತಾಃ ॥

ಎಂಬುದಱಿಂ ಭೋಗಂಗ[18]ಳುಂ ಕಿಂಪಾಕಫಳದೊಳೋರನ್ನ[18]ವದು ಕಾರಣದಿಂ ರಾಜ್ಯದೊಳಪ್ಪ ಭೋಗಸುಖಂಗಳನೊಲ್ಲೆಂ ಜಾತಿಜರಾಮರಣಗಳಿಂದ[19]ಪ್ಪ ಬಾಧೆ ಯಿ[19]ನಗಲ್ದ ಶಾಶ್ವತಮಪ್ಪ ಮೋಕ್ಷಸುಖಮನೆ ಬೇಟ್ಪೆನೆಂದು ತಱಿಸಂದು ನುಡಿ ದೊಡರಸಂ ಜ್ಯೋತಿರ್ಮಾಲೆಯುಂಬರೆಸಿಯು ಮಗಂ ವಸುಪಾಳನೆಂ[20]ಬೊಂಗೆ[20] ರಾಜ್ಯಪಟ್ಟಂಗಟ್ಟಿ ತಂದಮಕ್ಕಳಿರ್ವರುಮಲ್ಲರೊಳಂ ನಿಶ್ಶಲ್ಯಂಗೆಯ್ದು ಬಾಹ್ಯಾ ಭ್ಯಂತರ ಪರಿಗ್ರಹ ಪರಿತ್ಯಾಗಂಗೆಯ್ದು ಗುಣಧರರೆಂಬಾಚಾರ್ಯರ ಪಕ್ಕದೆ [21]ದೀಕ್ಷೆಯಂ ಕೈಕೊಂಡು[21] ಪನ್ನೆರಡು ವರುಷಂಬರೆಗಂ ಗುರುಗಳನಗಲದಿರ್ದಾಗಮಂಗಳೆಲ್ಲಮಂ

1. ಪು (ಘಚಛ). 2. + ಮನುಷ್ಯ (ಘಚಛ). 3. ಪ (ಕಗ). 4. ದೊ (ಘಚಛ). 5. (ಘಚಛ)ಗಳಲ್ಲಿಲ್ಲ. 6. ಬೇಡ (ಕಖಗ). 7. (ಘಚಛ)ಗಳಲ್ಲಿಲ್ಲ. 8. (ಕಖಗ)ಗಳಲ್ಲಿಲ್ಲ. 9. (ಕಖಗ)ಗಳಲ್ಲಿಲ್ಲ. 10. ವೈ ಬಾಳವದ್ದ (ಖ), ನ್ನೈ ಬಾಲಕನೆ (ಘಚ). ನೆಯುಬ್ಬಾಳಕನೆ (ಛ). 11. ದಿಂ (ಘಚಛ). 12. ಳಂ (ಘಚಛ). 13. ಚಾಪದ ಪನದಿ ಲಹರಿಕಾ ನಿಕರದವೊಲನಿಸುಂ (ಘಚ). ಚಾಪದ ಪನದಿ ಲಹರಿಕಾನಿಲದವೊಲನಿಸುಂ (ಛ). 14. (ಕಖಗ)ಗಳಲ್ಲಿಲ್ಲ. 15. ಷ್ಯ (ಖ). 16. ಧನಮುಂ ಯೌವನಮು ವಿದ್ಯೆಯುಂ (ಕಗ), ಯೌವನಮುಂ ಅರ್ಥಮುಂ (ಖ), ಜೌವನ ಮುಮರ್ಥಮುಂ (ಘಚಛ). 17. ನಿಸ್ಸಾ (ಕಖಗ). 18. ಳ್ಗಳ್ಕ್ಕ ಕಡುಗುಂ ಮೋಕ್ಷಫಲದೆನಿಳೋರನ್ನ ವಲ್ಲ (ಘಚಛ). 19. (ಘಚಛ)ಗಳಲ್ಲಿಲ್ಲ. 20. ಬ ಕುಮಾರಂಗೆ (ಕಖಗ). 21. ತಪಂಬಟ್ಟು (ಘಚಛ).

ಕಲ್ತು ಭಟಾರರೆಂ ಬೆಸಗೊಂಡವರೆನುಮತದಿಂ ವೃಷಭಸೇನಮುನಿಯುಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೊರ್ ವತ್ಸೆಯೆಂಬುದು ನಾಡೊಳ್ ಕೌಶಂಬಿಯೆಂಬ ಪೊಱಲ್ಗೆ ವಂದದಱ ಸಾರೆ [1]ಉ[1]ದಯಾವತ [2]ಪರ್ವತ[2]ಮೆಂಬ ಪರ್ವತಮುಂಟದಱ ಮೇಗೆ ವೃಷಭಸೇನ ಭಟಾರರ್[3] ನಾಲ್ಕು ತಿಂಗಳುಮಾತ[3]ಪಸ್ಥಿತಯೋಗಮುಮಂ ಕೈಕೊಂಡು ದಿವಸಕ್ಕ ಕಲ್ಮಿಲೆನಿಲೆ ಪೊಱಲವರ್ಗಳ್ ಕಂಡನಿಬರುಂ [4]ಶ್ರಾವಕಭಕ್ತರುಂ[4] ಬೆಸಕೆಯ್ವರು[5] ಮಾದರ್

ಮತ್ತಾ ಪೊಱಲೊಳ್ ಬುದ್ಧ[6]ಜ[6]ನೆಂಬೊನುಪಾಸಕನಾತಂ ಋಷಿಯರೊಳಪ್ಪ ಮಾತ್ಸರ್ಯಂ ಕಾರಣಮಾಗಿ ಭಟಾರರ್ ಚರಿಗೆವೋದರೆನ್ನೆಗಂ ಪಿಂದೆ ಪಾಪಕರ್ಮಂ ಯೋಗಶಿಲೆಯ ಮೇಗುಮಂ ಕೆಳಗುಮಂ ಬಳಸಿಯುಂ ಪಲವುಂ ಪಿರಿಯವುಮಪ್ಪ ತಱಿಯ ಪುಳ್ಳಿಗಳಂ ಕಡಿದೊಟ್ಟಿ ಕಿಚ್ಚನಿಕ್ಕಿ ಸುಟ್ಟು ಕಿಚ್ಚಿನ ಬಣ್ಣದಂತಾಗಿ ಸಿಲೆಯುಂ ಮಾಡಿ ಕೆಂಡಂಗಳನೊಂದು ಕೆಲಂ ಸಾರ್ಚಿ ಪೋದನನ್ನೆಗಂ ಭಟಾರರ್ ಚರಿಗೆ ವೋಗಿ ಬರ್ಪೊರ್ ಧಗದ್ಧಗಿಸುತ್ತಿರ್ದ ಕಿಚ್ಚಿನ ಬಣ್ಣದಂತಪ್ಪ ಕೆಚ್ಚನಾಗಿ[7]ರ್ದ[7] ಸಿಲೆಯುಂ ಕಂಡೆಮಗಿನಿತೆಯಾಯುಷ್ಯಮೆಂದಱಿದು ಕ್ರಿಯೆಗೆಯ್ದು ಚತುರ್ವಿಧಮಪ್ಪಾಹಾರಮುಂ ಶರೀರಮುಮಂ ಜಾವಜ್ಜೀವಂ ತೊಱೆದು ಕಾಯ್ದಿರ್ದ ಯೋಗಪೀತಮನೇಱಿ ಕಾಯೋತ್ಸರ್ಗಂಗೆಯ್ದು ಜ್ಯೇಷ್ಠ ಮಾಸದ ಬಿಸಿಲುಂ ಝಳಮುಂ ಬೆಂಕೆಯುಂ ಕಿಚ್ಚುಮಂ ಸೈರಿಸಿ ನೀರೊಳಗಿರ್ಪಂತಿರ್ದು ಶುಕ್ಲಧ್ಯಾನಮಂ ಧ್ಯಾನಿಸಿ ಎಂಟು ಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ವೋದರ್ [9]ಮತ್ತೆ ಪ್ರದ್ಯೋತನೆಂಬ ಋಷಿ ಸಮ್ಯಗ್ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ ಸ್ವರ್ಗದೊಳ್ ಪುಟ್ಟಿದಂ[9]

ಮತ್ತಂ ಪೆಱರುಮಾರಾನುಂ ಸಹಜರತ್ನತ್ರಯಮನಾರಾಧಿಸುತ್ತಿರ್ದ ಭವ್ಯರ್ಕಳ್ ವೃಷಭಸೇನ ಭಟಾರರಂ ಮನದೊಳ್ ಬಗೆದು ಝಳಮುಂ ಬೆಂಕೆಯುಮಂ ದಾಹಮುಮುಷ್ಣಮುಂ ಶೀತಮುಂ ವಾತಮುಂ [10]ಬೇ[10]ನೆಯುಂ ಪಸಿವುಂ ನೀರಳ್ಕೆ ಮೊದಲಾಗೊಡೆಯುವಿಪ್ಪತ್ತೆರಡು ಪರೀಷಹಂಗಳಂ ಸೈರಿಸಿ ಶುಭಪರಿಣಾಮದಿಂ ಸಮ್ಯಗ್ದರ್ಶನಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗಸುಖಂಗಳನೆಯ್ದುಗೆ

---

1.–2. (ಘಚಢ)ಗಳಲ್ಲಿಲ್ಲ. 3. ರ್ ನಾಲ್ಕು ತಿಂಗಳುಮಾತಾಪನಸ್ಥಿತ (ಕಖಗ), ರಾತಪಸ್ಥಿತ (ಘಢ). 4. (ಘಚಢ)ಗಳಲ್ಲಿಲ್ಲ. 5. + ಂ ಶ್ರಾವಕರು (ಘಚಢ). 6. ಜನ (ಘಚಢ). 7. ರ್ದ (ಖ). 8. + ಸಮ್ಯಗ್ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ (ಘಚಢ). 9. (ಕಖಗ)ಗಳಲ್ಲಿಲ್ಲ. 18. ವೇದ (ಘಚಢ).

# (೧೧) ಕಾರ್ತಿಕ ಋಷಿಯ ಕಥೆ

ಅಗ್ನಿರಾಜನ ಮಗನಪ್ಪ ಸ್ವಾಮಿ ಕಾರ್ತಿಕ ಋಷಿಯ ಕಥೆಯಂ ಪೇೞ್ವೆಂ :

**ಗಾಹೆ** ॥ [1]ರೋಹೇದಯಮ್ಮಿ[1] ಸತ್ತೀಏಹದೋ ಕೋಂಚೇಣ ಅಗ್ಗಿದಯಿದೋ ವಿ ।
ತವ್ವೇದಣಮಧಿಯಾಸಿಯ ಪಡಿವಣ್ಣೋ ಉತ್ತಮಂ ಅಟ್ಠಂ ॥

[ರೋಹೇದಯಮ್ಮಿ—[1]*ರೋಹೇ*ದಕಮೆಂಬ ಪೊೞಲೊಳ್. ಸತ್ತೀಏ ಹದೋ—ಶಕ್ತಿಯೆಂಬಾಯುಧದಿಂದಿಱಿಯೆ ಪಟ್ಟೊನಾಗಿ. ಕೋಂಚೇಣ—ಕ್ರೌಂಚನೆಂಬರೆಸಿನಿಂದಂ. ಅಗ್ಗಿದಯಿದೋ ವಿ—ಅಗ್ನಿರಾ[2]ಜನ ಕಾದಲಿಸ[2]ಪಡುವ ಮಗಂ. ತವ್ವೇದಣಂ—ಆ ವೇದನೆಯಂ. ಅಧಿಯಾಸಿಯ—ಲೇಸಾಗಿ ಸೈರಿಸಿ. ಪಡಿವಣ್ಣೋ—ಪೊ[3]ರ್ದಿ[3]ದೊಂ. ಉತ್ತಮಂ ಅಟ್ಠಂ—ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಲಾಳವಿಷಯದೊಳ್ ಕೃತ್ತಿಕಾಪುರಮೆಂಬುದು ಪೊೞಲದನಾಳ್ವೊನಗ್ನಿರಾಜನೆಂಬರಸನಾತನ ಮಹಾದೇವಿ ವೀರಮತಿಯೆಂಬೊಳಾಯಿರ್ವರ್ಗ್ಗಂ ಮಕ್ಕಳ್ ಬಂಧುಮತಿ ಶಿವಸೇನೆ ಶ್ರೀಮತಿ ಸ್ವಯಂಪ್ರಭೆ ಲಕ್ಷ್ಮೀಮತಿ ಕೃತ್ತಿಕೆಯೆಂದಿಂತಱುವರ್ ಪೆಣ್ಗೂಸುಗಳಂತವರ್ಗ್ಗಳಿಷ್ಟ ವಿಷಯಕಾಮಭೋಗಂಗಳನನುಭವಿಸುತ್ತುಂ ಕಾಲಂ ಸಲೆ ಮತ್ತೊಂದು ದಿವಸಂ ಫಾಲ್ಗುಣಮಾಸದ ನಂದೀಶ್ವರದಂದಱುವರುಂ ಕೂಸುಗಳುಪವಾಸಂಗೆಯ್ದು ಬಸದಿಗರ್ಚನೆಯಂ ಕೊಂಡುಪೋಗಿ ದೇವರನರ್ಚಿಸಿ ನಂದೀಶ್ವರಂಗೆಯ್ದು ಬಂದಿಸಿ ರಿಸಿಯರ್ಕಳುಮಂ ಗುರುಪರಿವಿಡಿಯಿಂ ವಂದಿಸಿ ವ್ರತಂಗಳನೇಱಿಸಿಕೊಂಡು ಸಿದ್ಧಶೇಷೆಯಂ ಕೊಂಡುಬಂದು ತಾಯ್ಗಂ ತಂದೆಗಂ ಕೊಟ್ಟು ಪೋಪಾಗಳರಸಂ ಕಿಱಿಯ ಮಗಳಪ್ಪ ಕೃತ್ತಿಕೆಯ ರೂಪುಂ ತೇಜಮುಂ ಗಾಡಿಯುಮಂ ಕಂಡಾ[4]ಕೆಗಾಟಿಸಿ[4] ಸಾಮಂತ ಮಹಾಸಾಮಂತರ್ಕಳ್ಗಂ ಪರಿವಾರಕ್ಕಂ ಮಂತ್ರಿವರ್ಗಕ್ಕಂ ವೀರಮತಿ ಮಹಾದೇವಿಗಮೆಲ್ಲ ಸಮ[5]ಯ[5]ಗಳ್ಗಂ ಬೞಿಯಟ್ಟಿ ಬರಿಸಿಯರಸನಿಂತೆಂದನೆನ್ನಾಳ್ವ ಮಂಡಳಂಗಳೊಳ್ ಪುಟ್ಟಿ[6]ದ ಲೇಸ[6]ಪ್ಪ ವಸ್ತುವಾರ್ಗಕ್ಕುಮೆಂದು ಬೆಸಗೊಂಡೊಡವರ್ಗ್ಗಳೆಲ್ಲಮಿಂತೆಂದರೊಳ್ಳಿತಪ್ಪಾನೆಯುಂ ಕುದುರೆಯುಂ ಮುತ್ತುಂ ಮಾಣಿಕಮುಂ ಸ್ತ್ರೀರತ್ನಮುಂ ಮೊದಲಾಗೊಳ್ಳಿತಪ್ಪ ವಸ್ತುಗಳ

---

1. ಮಹೋದಾಃ ಓ (ಕಖಗ). *ಮಹೋ (ಕಗ). ಮಾಹೋ (ಖ). 2. ಜನ ಕಾಲದಲ್ಲಿನ (ಕಗ). ಜನಕಾಲವಲ್ಲಿಸಿಸ (ಖ). ಜಂ ಕಾದಲಿಸೆ (ಘಚಛ). 3. ಳ್ದಿ (ಕಖಗ). 4. ಕಣ್ಣಾಗಿ (ಖ). 5. ಯಂ (ಖ). 6. ದೊಳ್ಳಿತ (ಘಚಛ). 7. ಱ (ಘಚಛ).

ವಸ್ತುವೆಲ್ಲಂ ಪೃಥ್ವಿಯುಮಾಳ್ವೊಂಗಕ್ಕುಮೆಂದು ಪೇೞ್ದೊಡರಸಂ ಮಂತ್ರಿಮಹತ್ತರರುಮಂ ಬೆಸಗೊಂಡೊಡೆ ಮಂತ್ರಿಮಹತ್ತರರೆಂದ[1]ರಾ[1]ವ ವಸ್ತು [2]ಪೇೞಿಂ[2] ಪೇೞ್ದೊಡೆ ತಕ್ಕು[3]ದು ತಗ[3]ದುದುಮನಱಿಯಲಕ್ಕುಮೆಂದೊಡರಸನಿಂತೆಂದನಿವರೆಲ್ಲ[4]ರ[4] ಪೇ[5]ೞ್ದಂತು ಪೇೞ್ವರೆಲ್ಲರೊ[5]ಡಂಬ[6]ಡುವರಲ್ಲ[6]ರ್ ಬಹುಪ್ರಳಾಪಿಗಳಿವರಂ ಪೊೞಲಿಂದ[7]ಟ್ಟಿ ಕಳೆಯಿಮೆಂದಟ್ಟಿ ಕಳೆದುೞಿದರೆಲ್ಲರುಮಂ ಬೆಸಗೊಂಡೊಡನಿಬರುಮೊಡಂಬಟ್ಟೊಳ್ಳಿತ್ತಪ್ಪ ವಸ್ತು ನಿನಗಕ್ಕುಮೆಂದೊಡೆ ಅರಸನೆನಗಕ್ಕುಂ ಬಲಮೆಂದು ಮೂಱು ಸೂೞ್ವರು ಸಾಕ್ಷಿ ನುಡಿದೊಡಂಬಡಿಸಿ ವೀರಮತಿ ಮಹಾದೇವಿಯುಮಂ ಬೇಡಿ ಕೃತ್ತಿಕೆಯುಮಪ್ಪ ಕಿಱಿಯ ಮಗಳಂ ಮದುವೆನಿಂದೊನಾ ದಿವಸಮೆ ವೀರಮತಿ ಮಹಾದೇವಿಯುಂ ಬ್ರಹ್ಮಚರ್ಯ ವ್ರತಮಂ ಕೈಕೊಂಡು ನೆಗೞ್ದಳ್

ಮತ್ತೆ ಕೃತ್ತಿಕೆಗೆ ನವಮಾಸಂ ಗರ್ಭ[8]ಮಾ[8]ದಂದು [9]ಸರವಣ[9]ಮೆಂಬುದ್ಯಾನವನದೊಳಗಣ [10]ಸರವಣ[10]ಮೆಂಬ ಬಾವಿಯೊಳ್ ಜಲಕ್ರೀಡೆಯಾಡಲ್ ಬಯಕೆಯಾದುದೆಂದರಸಂಗಱಿಪಿದೊಡರಸನನುಮತದಿಂ ಜಲಕ್ರೀಡೆಯಾಡಿ ಮಗನಂ ಪೆತ್ತೊಡಾತಂಗೆ ಸ್ವಾಮಿ ಕಾರ್ತಿಕನೆಂದು ಪೆಸರನಿಟ್ಟರ್ ಮತ್ತಾತನಿಂ ಬೞಿಯುಂ ಪೆಣ್ಗೂಸಮಂ [11]ಪೆತ್ತೊಡೆ[11] ಆಕೆಗೆ ವೀರ[12]ಶ್ರೀ[12]ಯೆಂದು ಪೆಸರನಿಟ್ಟು ಬಳೆದೊಡಾಕೆಯುಂ [13]ಕೋಗ[13]ಳಿಯಂ ನಾಳ್ವ ಕ್ರೌಂಚನೆಂಬರಸಂಗೆ ಕೊಟ್ಟರಿಂತು ಕಾಲಂ ಸಲೆ [14]ಮತ್ತಿತ್ತ ನವ[14] ಮೊದಲಾಗೊಡೆಯ ತಮ್ಮಂದಿರಪ್ಪ ಕುಮಾರರೊಡನೆ ಸ್ವಾಮಿ ಕಾರ್ತಿಕಂ ಬಳೆದು ಪದಿನಾಱು ವರುಷದ ಪ್ರಾಯಮಾದಂದು ಮತ್ತೊಂದು ದಿವಸಮನಿಬರುಂ ಕುಮಾರರ್ಕಳುದ್ಯಾನವನಕ್ಕೆ ವನಕ್ರೀಡೆಯಾಡಲ್ ಪೋಗಿಯಾಡುತ್ತಿರ್ಪನ್ನೆಗಮೆಲ್ಲಾ ಕುಮಾರರ್ಕಳ್ಗಂ ತಾಯ್ತಂದೆಯಜ್ಜರ್ಕಳ ಮನೆಯಿಂದಂ ಪೊಸಲುಮುಡಲುಂ ತುಡಲುಂ ಪೂವುಂ ತಂಬುಲಮುಂ ತಿಂ[15]ಬ[15]ಡಂಗಳುಂ ಬಂದುವು ಸ್ವಾಮಿ ಕಾರ್ತಿಕಂಗಾರುಮಟ್ಟದಿರ್ದೊಡೆ ಮನದೊಳ್ ಬೞಲ್ದೊನಾಗಿ ವನಕ್ರೀಡೆಯನಾಡಿ ಮನೆಗೆ ವಂದು ತಾಯನಿಂತೆಂದನಬ್ಬಾ ನಿಮ್ಮ ತಂದೆಯುಮಪ್ಪೆಮ್ಮಜ್ಜನೊಳನೊ ಇಲ್ಲಿಯೊ ಎಂದು ಬೆಸಗೊಂಡೊಡೆ ತಾಯ್ ಮನದೊಳ್ ಬೞಲ್ದೊಳಾಗಿ ಏನಂ ಪೇೞ್ವೆಂ ಮಗನೆ ನಿನಗೆ ತಂದೆಯುಮಪ್ಪಾತನೆನಗಂ ತಂದೆಯೆಂದು ಪೇೞ್ದೊಡದಂ ಕೇಳ್ದು [16]ಅದುವೆ[16] ವೈರಾಗ್ಯ ಕಾರಣಮಾಗಿ ಶ್ರೀ[17]ವ[17]ರೆಂಬಾಚಾರ್ಯರ ಪಕ್ಕದೆ ತಪಂಬಟ್ಟಾಗಮಂಗಳೆಲ್ಲಮಂ ಕಲ್ತು ಗುರುಗಳಂ ಬೆಸಗೊಂಡವರನುಮತದಿಂ[18]ದೇಕ ವಿಹಾರಿಯಾಗಿ[18] ಗ್ರಾಮನಗರಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ತೆಂಕನಾಡ ಕಿಷ್ಕಿಂಧೆ

---

1. ರದಾ (ಘಚಥ). 2. ಕೇಳಿಂ (ಖ). 3. ತಾ (ಖ). 4. ರ್. (ಘಚಥ). 5. ಳ್ದಂತೆ ಪೇಳ್ದರಿಲ್ಲೊ (ಘಚಥ). 6. ಡ (ಖಘಚಥ). 7. + ಪೊಳ್ಬ (ಘಥ). 8. ರ್ಭಂ ನೆಱೆ (ಘಥ). 9. ಸರವ್ರಣ (ಕ), ಸರವನ (ಘಚ), ಸುರವನ (ಚ). 10. ಶರವೇಣು (ಘಚಥ). 11. ಪೆಳ್ದೊಡೆ (ಕಗ). ಪೊತ್ತೊಳ್ (ಘ). 12. ಸ್ತ್ರೀ (ಕಖಗ). 13. ಕೊಗು (ಘಚಥ). 14. ಮತ್ತಿನವರ್ (ಕಖಗ). 15. ಬಿ (ಖ), ಬಂ (ಚ). 16. ಸಂಸಾರಕ್ಕೆ ಪೇಸಿ (ಘಚಥ). 17. ಧ (ಘಚ). 18. (ಘಚಥ)ಗಳಲ್ಲಿಲ್ಲ.

ಮೆಂಬ [1]ಪುರ್ವಪ[1]ಮನೆಯ್ದಿ ಯುಂಡ ಮೇಗೆ ರಾತ್ರಿ ಪ್ರತಿಮಾಯೋಗಂ [2]ಗೆಯ್ದೊಡಾ[2] ಇರುಳ್ ಬಿದಿರೊಂದು ಮುಟ್ ಕೊಂಡು ದುಯ್ಯು ಮಳೆಯುಮಂ ಕರ್ಚಿ ಕಳೆದು ಪಾಟಾಗಮೆಂಬ ಮಡುವಂ ನೀರ್ ಪೊಕ್ಕಾಗಳಾ ಮಡುವಿನ ನೀರ್ ಸರ್ವೌಷಧಿ ಯಪ್ಪುದೊಡಂಬಲ್ಲಿಯ ನೀರಂ ಮಿಂದವರ್ಗೆಲ್ಲಾ ವ್ಯಾಧಿಯುಂ ಕಿಡುವುವಾದುದಲ್ಲಿಂ ತೊಡಗಿ ದಕ್ಷಿಣಾಪಥದೊಳದು ತೀರ್ಥಮಾಯ್ತು

ಮತ್ತೆ ಸ್ವಾಮಿ ಕಾರ್ತ್ತಿಕ[3]ಋಷಿ[3]ಯುಂ ವಿಹಾರಿಸುತ್ತಂ ಬಂದು ಕೋಗಳಿಯ ನೆಯ್ದಿ ಯಲ್ಲಿಯ ಬಸದಿಯೊಳ್ ಪಂಥಾತಿಚಾರ ನಿಯಮಂಗೆಯ್ದು ದೇವರಂ ಬಂದಿಸಿ ಮಧ್ಯಾಹ್ನದಾಗಳ್ ಚರಿಗೆವೊಕ್ಕು ಚಾತುರ್ವರ್ಣ್ಯದ ಮನೆಗಳುಮಂ[4] ತೊೞಲುತ್ತಂ ಬಂದರಮನೆಯುಮಂ ಪೊಕ್ಕಾಗಳಾ ಪ್ರಸ್ತಾವದೊಳ್ ಕರುಮಾಡದ ಮೇಗಣ ನೆಲೆಯೊಳಿರ್ದ ವೀರಶ್ರೀ ಮಹಾದೇವಿಯರಸನ ತಲೆಯಂ ರನ್ನ ಕೊಡೆಯ ಮೇಲಿಟ್ಟು ಗುಱಿಸುತ್ತಿರ್ದ್ದಾಕೆ ಭಟಾರರ ಬರವಂ ಕಂಡೞಿದೆಮ್ಮಣ್ಣಂಗಳಪ್ಪ ಭಟಾರರ್ ಚರಿಗೆವಂದರ್ಪ್ಪರೆಂದು ಮ[5]ಱಲುಂದಿದ[5]ರಸನ ತಲೆಯಂ ಕಟ್ಟಿಗೊಂದಾಧಾರಮನಿಟ್ಟು ನಿಱಿಸಲೆಂದು ಕರುಮಾಡದಿಂದಿೞಿದು ಬರುತರ್ಪನ್ನೆಗಂ ಭಟಾರರ್ ಮಂದರಮನೆಯಂಗಣಮಂ ಪೊಕ್ಕು ಮಗುೞ್ದು ಪೋಗಿ ಬಾಗಿಲ್ಮಾ[6]ಡಮನೆಯ್ದಿದಾ[6]ಗಳರಸಿ ಪೆಱಗಣಿಂ ಪರಿತಂದು ಬಂದು ಮುಂದೆ ನಿಂದು ಕೈಗಳಂ ಮುಗಿದೆಱಗಿ ನಿಲ್ಕೆ ಭಟಾರಾ ಎಂದು ನಿಱಿಸಿದೊಡೆ ಭಟಾರರೆಂದರಪ್ಪಾ ಮನೆಯಂ ಪೊಕ್ಕು ಬಂದೆಮಿನ್ನೆಮಗೆ ನಿಲಲಾಗದೆಂದೊಡರಸಿಯಿಂತೆಂದಳ್ ಭಟಾರಾ ನೀಮೆನಗೆ ದಯೆಗೆಯ್ದು ಮೋಕ್ಷಂ ನೀಲಲ್ವೇೞ್ಕುಮೆಂದು ಪೋಗಲೀಯದೆ ಕಾಲಂ ಪಿಡಿದು ತಾಂಗುತ್ತಿರ್ಪನ್ನೆಗಮ್

ಇತ್ತಲರಸನೆೞ್ಚೆತ್ತು ದೆಸೆಗಳಂ ನೋಡಿಯರಸಿಯುಮಂ ಕಾಣದ[7]ರ[7]ಸಿಯೆಲ್ಲಿರ್ದ್ದೊಳೆಂದು ಕೆಲದವರಂ ಬೆಸಗೊಂಡೊಡವರೆಂದರರಸಿಯೊರ್ವ [8]ಶ್ರ[8]ವಣಂ ಬಂದೊಡಾತನಂ ಕಂಡು ಕರುಮಾಡದಿಂದಿೞಿದು ಪರಿದು ಬೞಿಯಂ ತಗುಳ್ದು ಬಾಗಿಲ್ ಮಾಡದಲ್ಲಿ ಸವಣನೊಡನಾ ಪೋರುತ್ತಿರ್ಪ್ಪಳ್ ನೋಡಿಮೆಂದರಸಂಗೆ ತೋಱಿದೊಡರಸಂ ಕಂಡೆನ್ನನಗಲ್ದು [9]ನಿಚ್ಚಲೀ[9] ಸವಣನಲ್ಲಿಗೆ ಪರಿ[10]ವ[10]ಳೆಂದು ಕಿನಿಸಿ ಕರುಮಾಡದಿಂದಿೞಿದು ರಿಸಿಯಿರ್ದಲ್ಲಿಗೆವೋಗಿ ಶಕ್ತಿಯೆಂಬಾಯುಧದಿಂದುರಮನುರ್ಚಿಪೋಗಿಟ್ಟು ರಿಸಿಯುಮಂ ತಲೆನವಿರಂ ಪಿಡಿ[11]ದು ದೞದೞನೆ[11]ೞೆದುಕೊಂಡು ಬಂದು

ಸ್ವಾಮಿ ಕಾರ್ತ್ತಿಕರುಷಿಯುಂ ಕ್ಷಮೆಯುಮಂ ಭಾವಿಸಿ ನೆತ್ತರೊಕ್ಕು ಬಸಮೞಿದು ಬೇಸಗೆಯ ಕಡುವಿಸಿಲಿಂದಂ ಝಳದಿಂದಂ ಬೆಂಕೆಯಿಂದಂ ನೀರೞ್ಕೆಯುಮಧಿಕಮಾಗಿ ಕಣ್ಣ[12]ನೊಳೊ[12]ಳ್ಳಿತ್ತು ಸಮಾಧಿಯಕ್ಕುಮೆಂದು ಮನದೊಳ್ ಬಗೆದಿರ್ದ್ದನನ್ನೆಗಂ ತನ್ನಕ್ಕನಪ್ಪ ವೀರಮತಿ ಮಹಾದೇವಿ ಬ್ರಹ್ಮಚರ್ಯವ್ರತಮಂ ಕೊಂಡು

1. ಪುರ (ಛ). 2. ನಿಂದೊಡಾ (ಘಚಛ). 3. ಮುನಿ (ಘಚಛ). 4. + ತೊೞಲ್ದು (ಕಗ). 5. ಱಿದು ನಿದ್ರೆಗೈದ (ಘಚಛ). 6. ಡದ ಮನೆಯುಮನೆಯ್ದುವದಾ (ಘಚಛ). 7. ಅ (ಕಖಗ). 8. ಶ್ರ (ಕಖಗ). 9. ನಿಚ್ಚಲೆ (ಘ), ನಿಚ್ಚಲು (ಛ), (ಚ)ದಲ್ಲಿಲ್ಲ. 10. ವ (ಘಚಛ). 11. ದೆ (ಘಚಛ). 12. ಣ್ಣಾ ದೊಡೊ (ಘಚಛ).

ಕಾಲಂ ಗೆಯ್ದು ವ್ಯಂತರದೇವತೆಯಾಗಿ ಪುಟ್ಟಿ[1]ದಾ[1]ಕೆಗಾಸನಕಂಪಮಾಗಿಯುಱಿದು ಬಂದು ಭಟಾರರಾ ಬೆಸನೇನಿವರೆಲ್ಲರುಮಂ ಕೊಂದ[2]ಪ್ಪೆನೇ[2]ದೊಡೆ ಭಟಾರರೆಂದರೆಂತೇ[3]ನುಂ ಬೇ[3]ಡ ನೀನೆಮ್ಮಂ ಪಣ್ಣೆನೆಡೆಗೆ ಕೊಂಡುಪೋಗೆಂದೊಡೆ ದೇವತೆ ನವಿಲರೂಪಿನಿಂದೆತ್ತಿಕೊಂಡು ಬೆನ್ನೊಳಿಟ್ಟು ಕೋಗಳಿಯ ಮೂಡಣ ದೆಸೆಯ ಪರ್ವತದ ಕೊಳದ ತಡಿಯೊಳ್ ಲತಾಮಂಟಪದೊಳಿರಿಸಿ ಪೋದೊಡೆ ಬೆಟ್ಟದ ಮೇಗಣಿಂ [4]ಪಾಯ್ತ[4]ರ್ಪ ನಿರ್ಝರಶೀ[5]ಕ[5]ರಂಗಳಿಂ ಮೆಯ್ಗಾಪ್ಯಾಯನಮಾಗಿ ಸಂನ್ಯಸನಂಗೆಯ್ದು ಶುಭಪರಿಣಾಮದಿಂ ಮುಡಿಪಿ[6] ಸರ್ವಾರ್ಥಸಿದ್ಧಿಯೊಳ್ ಮೂವತ್ತುಮೂಱು ಸಾಗರೋಪಮಾಯುಷ್ಯಮನೊಡೆಯೊನಹಮಿಂದ್ರನಾಗಿ ಪುಟ್ಟಿದೊಂ

ಮತ್ತಿತ್ತ ಭಟಾರರ ತಂಗೆಯಪ್ಪ ವೀರಶ್ರೀಯುಂ ಹಾ ಭಟಾರ ಎಂದಿರುಳುಂ ಪಗಲುಂ ಪಲವು ದಿವಸಮೊಂದೆ ಪಾಂಗಿನೊಳ್ ಪ್ರಳಾಪಿಸಿ ದುಃಖಿಂಗೆಯ್ಯೆ ಅರಸನು ಮಾಕೆಗೆ ಕಡು[7]ನಲ್ಲನಪ್ಪುದಱಿಂದಾದಮಾನುಮುಬ್ಬೆಗಂ ಬಟ್ಟಿ[8]ರ್ದಂ[8]ತೆಂದನಾರೊರ್ವರರಸಿಯುಬ್ಬೆಯುಂ ಪಂಬಿಗ್ಗಿಸಿ ದುಃಖಮುಂ ಮಱೆಯಿಸುವೊರವ[9]ಗೊರ್ಪಗೆ[9]ಯುಂ ಮಾಡುವನೆಂದು ಪೊಱಲೊಳಗೆ ಗೋಸಣೆಯುಂ ತೊಱಲ್ಚಿದೊಡದಂ ಕೇಳ್ದು [10]ಲೋ[10]ಗರ್ ಪಗರಣಿಗರಾಗಿ ಎನಿತಾನುಂ ತೆಱದ ರೂಪುಗಳಂ ಕೈಕೊಂಡು ಮರಮೊಗಂಗಳನಿಟ್ಟು ಬಂದು ಮುಂದೆ ಆಡಿಯುಂ ಪಾಡಿಯುಂ ನಗಿಸಿಯುಮೆಂತುಮಱ್ಕಿ[11]ಮಱ್ಗ[11]ದಿರ್ದೊಡೊರ್ವಂ ಕರಿಯ ಕಚ್ಚುಟಮನುಟ್ಟು ಮೆಯ್ಯೆಲ್ಲಂ ಮಸಿಯುಂ ಪೂಸಿ ಬೋಳಿದಲೆವೆರಸು ಬಾಯೊಳ್ ಕವಡಿಕೆಗಳಂ ಪಲ್ಗಳಂತೆಮಾಡಿ ಕುಂಚಮುಂ ಗುಂಡಿಗೆಯುಮಂ ಪಿಡಿದು ಬರ್ಪೊನನರಸಂ ಕಂಡಿತೆಂದನೆಲೆಯರಸಿ ನಿನ್ನ ಸಹೋದರಂಗಳಪ್ಪ ಭಟಾರರಾ ಬರ್ಪೊರೆಯೆಂದು ಪೇೞ್ದಾಗಳಿಲ್ಲಿರ್ದರೆಂದೆೞ್ದು ನೋಡಿ ಕಾಣದಾ ರೂಪಂ ಕಂಡು ನಕ್ಕು ದುಃಖಮಂ ಮಱೆದೊಳಾಗಳಾ ನಗಿಸಿದ ಪಗರಣಿಗಂಗೆ ಪಿರಿದು ಕಸವರಮನಿತ್ತೊನಂದಿಂದಿತ್ತ ಬಾದು[12]ಬ್ಬೆ[12]ಯ ಪರ್ವಮುಂ ಪಗರಣದಾಟಪಾಟಮುಮಾದುವು ಮತ್ತೆ ಸ್ವಾಮಿ ಕಾರ್ತ್ತಿಕ ಋಷಿಯರ್ ಮುಡುಪಿದಲ್ಲಿಯವರ ತಂಗೆಯಪ್ಪ ವೀರಶ್ರೀ ಬಸದಿಯುಂ ಮಾಡಿ[13]ದೊಡಂದಿಂದಿತ್ತ[13] ಸ್ವಾಮಿಯೆಂಬ ತೀರ್ಥಮಾಯ್ತು ಮತ್ತಿತ್ತ ಕೃತ್ತಿಕೆಯೆಂಬ ಪೊಱಲನಾಳ್ವಗ್ನಿರಾಜನೆಂಬರಸಂ ತನ್ನ ಮಗಳಂ ತಾನೆ ಕೊಂಡು ಮೊಱೆಯಿಱಿದನಪ್ಪುದಱಿಂದಲ್ಲಿಯ ಜನಮುಂ

**ಶ್ಲೋಕ** ॥ ರಾಜ್ಞಿ ಧರ್ಮಿಣಿ ಧರ್ಮಿಷ್ಠಾಃ ಪಾಪೇ ಪಾಪಸಮಾಶ್ರಿತಾಃ ।
ರಾಜಾನಮನುವರ್ತಂತೇ ಯಥಾ ರಾಜಾ ತಥಾ ಪ್ರಜಾಃ ॥

---

1. ಟ್ಟಿದಮಾ (ಕಖಗ). 2. ಪೆಂಬೆಸಸಿಮಂ (ಘಙಛ). 3. ನುಮಂ ಬಗೆಯಲ್ವೇ (ಘಙಛ). 4. ಪಾಱುತ (ಘ). 5. ಪ (ಘಙ). 6. + ಸಮ್ಯಗ್ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ (ಘಙಛ). 7. + ಗೊಱ (ಘಙಛ). 8. ಶ್ದಂ (ಖ). 9. ಗ್ಗಾಸೆ (ಘಙಛ). 10. ರೋ (ಘಙ). 11. ಮಾಱ (ಕಖಗ). 12. ಂಬೆ (ಕಖಗ). 13. + ಸಿ ಪ್ರತಿಮೆಯುಮಂ ಸ್ವಾಮಿ ಕಾರ್ತ್ತಿಕಋಷಿಯ ರೂಪಂ ಮಾಡಿಸಿ ದೇವಸದೇವಸಕ್ಕಮರ್ಚನಾವೃತ್ತಿಕರ್ಮಮಂದಿಂದಿತ್ತ (ಘಙಛ).

ಎಂದರಸನಂ ಕಂಡು ಪೊಡೆವಟ್ಟುಬಂದು ನೆಗ[1]ಟಲ್[1] ತಗಳ್ದಾ ಪೊೞಲ್ಗೆ [2]ಬೋಗಂ[2]ಕಾರೋಹಣಮೆಂಬುದು ಪೆಸರ[3]ಟ್ಟಿರ್ದುದು[3] ಸ್ವಾಮಿ ಕಾರ್ತ್ತಿಕ ಋಷಿಯ ಕಥೆ ಮತ್ತೆ ಪೇೞ್ದುಂ ಪರಮ ಸಹಜ ರತ್ನತ್ರಯಂಗಳನಾರಾಧಿಸುವವರ್ಗ್ಗಳ್ ಸ್ವಾಮಿ ಕಾರ್ತ್ತಿಕ ಋಷಿಯರಂ ಮನದೊಳ್ ಬಗೆದೇೞುಂ ಪುಣ್ಣುಂ ವ್ಯಾಧಿಯುಮಂ ಪಸಿವು ನೀರಟ್ಟೆ ಶೀತವಾತೋಷ್ಣಂಗ[4]ಳುಮಂ [5]ಸೈರಿಸಿ[5] ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

---

1. ಳ್ತೆ (ಘಚಛ). 2. ಲೋಕ (ಘಚಛ). 3. ಟ್ಟುನಿಟ್ಟು (ಕಖಗ). 4. ಳ್ಗಂ (ಘ). 5. + ಸಮ್ಯಗ್ಜ್ಞಾನದರ್ಶನಚಾರಿತ್ರಂಗಳಂ ಸಾಧಿಸಿ (ಘಛ). + ಮುನಿಷ (ಚ).

# (೧೨) ಅಭಯಘೋಷರೆಂಬ ಮುನಿಯ ಕಥೆ

ಅಭಯಘೋಷರೆಂಬ ಮುನಿಯ ಕಥೆಯಂ ಪೇೞ್ವೆಂ :

**ಗಾಹೆ** ॥ ಕಾಕಂದಿ ಅಭಯಘೋಸೋ ವಿ ಚಂಡವೇಗೇಣ ಛಿಣ್ಣ ಸವ್ವಂಗೋ ।
ತವ್ವೇದಣಮಧಿಯಾಸಿಯ ಪಡಿವಣ್ಣೋ ಉತ್ತಮಂ ಅಟ್ಠಂ ॥

[ಕಾಕಂದಿ—ಕಾಕಂದಿಯೆಂಬ ಪೊೞಲೊಳ್, ಅಭಯಘೋಸೋ ವಿ—ಅಭಯಘೋಷರೆಂಬ ರಿಸಿಯುಂ, ಚಂಡವೇಗೇಣ—ಚಂಡವೇಗನೆಂಬೊನರಸನಿಂದಂ, ಛಿಣ್ಣ ಸವ್ವಂಗೊ—ಕೊಱೆಯೆಪಟ್ಟೆಲ್ಲಾ ಮೆಯ್ಯನೊಡೆಯನಾಗಿ, ತವ್ವೇದಣಂ—ಆ ವೇದನೆಯುಂ, ಅಧಿಯಾಸಿಯ—ಲೇಸಾಗಿ ಸೈರಿಸಿ, ಪಡಿವಣ್ಣೋ—ಪೊ[1]ರ್ದಿ[1]ದೊಂ, ಉತ್ತಮಂ ಅಟ್ಠಂ—ಮಿಕ್ಕ ದರ್ಶನಜ್ಞಾನಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತ ಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ಕಾಕಂ[2]ದಿ[2]ಯೆಂಬುದು ಪೊೞಲದನಾಳ್ವೊನಭಯಘೋಷನೆಂಬೊರಸನಾತನ [3]ಮಹಾದೇವಿ[3] ಅಭಯಮತಿಯೆಂಬೊಳಂತವರ್ಗ್ಗಳಿಷ್ಟ ವಿಷಯ ಕಾಮಭೋಗಂಗಳನನುಭವಿಸುತ್ತಂ ಕಾಲಂ ಸಲೆ ಮತ್ತೊಂದು ದಿವಸಮರಸಂ [4]ಪೊಱಮಟ್ಟು[4] ಪೊಱಪೊೞಲ ಶೋಭೆಯುಂ ಕೊೞಲ್ಗ ನೋಡುತ್ತಿರ್ಪನ್ನೆಗಮೊರ್ವ ವಿಂಗುಲಿ[5]ಗ[5]ನೊಂದಾಮೆಯುಂ ಬಾೞೆವಾೞೆ [6]ನಾಲ್ಕು ಕಾಲಂಕಟ್ಟಿ[6] ಬಳ್ಳಿಯಂ ಕೊರಲೊ[7]ಳ್ ತಗುಳ್ಚಿ ಪೆಗಲೆ ಪಿಡಿದುಕೊಂಡು ಪೊೞಲ್ಗಿದಿರಂ ಬರ್ಪ್ಪೊನನರಸಂ ಕಂಡು ತನ್ನ ಬಿನ್ನಣಮಂ [8]ನೆರೆದ ನೆರವಿಗೆ[8] ಮೆಱೆಯಲ್ವೇಡಿ ಗೆಂಟಱಿಂ ಚಕ್ರದಿಂ ನಾಲ್ಕು ಕಾಲುಮನೊ ಮೊದಲೆ ಪಱಿಯಿಟ್ಟೊಡೆ ವಿಂಗುಲಿಗಂ ಪ್ರಾಣಮುಳ್ಳಂತಿರಾಮೆಯುಂ ತನ್ನ ಮನೆಗೆ ಕೊಂಡು ಪೋದೊಡಾ ಇರುಳೊಳಾಮೆ ಪಿರಿದು ವೇದನೆಯಿಂದಂ ಸಮೆದು ಸತ್ತಾ ಪೊೞಲೊಳಭಯಘೋಷ ನೃಪತಿಗಭಯಮತಿ ಮಹಾದೇವಿಗಂ ಚಂಡವೇಗನೆಂಬ ಮಗನಾಗಿ ಪುಟ್ಟಿದನಂತವರ್ಗ್ಗಳಿಷ್ಟ ವಿಷಯ ಕಾಮ ಭೋಗ ಸುಖಂಗಳನನುಭವಿಸು[9]ತ್ತಿರ್ಪನ್ನೆಗವ[9]

ಮತ್ತೊಂದು ದಿವಸಮರಸನುಮರಸಿಯುಂ ಕರುಮಾಡದ ಮೇಗಣ ನೆಲೆಯೊಳ್ ಭೋಗೋಪಭೋಗ ಸುಖಂಗಳನನುಭವಿಸುತ್ತಂ ವಿನೋದದಿಂದಿರ್ಪ್ಪನ್ನೆಗಂ ಚಂದ್ರ ಗ್ರಹಣಮಾದುದನರಸಂ ಕಂಡನಿತ್ಯಮಂ ಭಾವಿಸಿಯದುವೆ ವೈರಾಗ್ಯಕ್ಕೆ ಕಾರಣಮಾಗಿ ಚಂಡವೇಗನೆಂಬ ಮಗಂಗೆ ರಾಜ್ಯ[10]ಪಟ್ಟಂಗಟ್ಟಿ[10] ಬಾಹ್ಯಾಭ್ಯಂತರ ಪರಿಗ್ರಹ

---

1. ಳ್ದಿ (ಕಖಗ). 2. ಬಿ (ಖ). 3. ಭಾರ್ಯೆ (ಖಗ). 4. (ಘಚಛ)ಗಳಲ್ಲಿಲ್ಲ. 5. ಣ (ಖಘಚಛ). 6. + ಪಿಡಿದು (ಘಚಛ). 7. ಯೊಂದು ಕೈಯೊ (ಕಖಗ). 8. (ಕಖಗ)ಗಳಲ್ಲಿಲ್ಲ. 9. ತ್ತಂ ಪಲಕಾಲಂ ಸಲೆ (ಘಚಛ). 10. ಮಂ ಕೊಟ್ಟು (ಘಚಛ).

[1]ಪರಿತ್ಯಾಗಂಗೆಯ್ದು[1] ನಂದನರೆಂಬಾಚಾರ್ಯರ ಪಕ್ಕದೆ ತಪಂಬಟ್ಟು ಪನ್ನೆರಡು ವರುಷಮವರೊಡನಿರ್ದ್ದೆಲ್ಲಾ ಪೂರ್ವಾಂಗ[2]ಳುಮಂ[2] ಕಲ್ತು ಗುರುಗಳಂ ಬೆಸಗೊಂಡವರನುಮತದಿಂದೇಕವಿಹಾರಿಯಾಗಿ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪ್ಪೋರ್ ತಮ್ಮ ಮುನ್ನಿನ ಕಾಕಂದಿಯೆಂಬ ಪೊೞಲ್ಗೆ ವಂದುದ್ಯಾನವನದೊಳ್ ವೀರಾಸನ[3]ದಿ[ರ್ದೊ][3]ರನ್ನೆಗಂ ಮುನ್ನಿನಯುಷ್ಟ ಜೀವನವರ ಮಗನಪ್ಪ ಚಂಡವೇಗಂ ಕರುಮಾಡದ ಮೇಗಣ ನೆಲೆಯೊಳಿರ್ದು [4]ನೋಟಂಕ್ಕೆ ಗಂಟು ಪೋಗೆ[4] ಚಕ್ರಮನಿಟ್ಟೊಡಾ ಚಕ್ರಂ ವಂದು ರಿಷಿಯರೆರಡುಕೆಯ್ಯುಂ ಕಾಲ್ಗಳುಮುಮಂ ಮೊಕ್ಕನೆ ಪೋಗೆ ಕೊಂಡೊಡೆ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಜಾವಜ್ಜೀವಂ ನಿವೃತ್ತಿಗೆಯ್ದು ವೇದನೆಯುಮಂ ಸೈರಿಸಿ ಶುಭಪರಿಣಾಮದಿಂ [5]ರತ್ನತ್ರಯಮಂ[5] ಸಾಧಿಸಿ ಪದಿನಾಲ್ಕನೆಯ ಪ್ರಾಣತಮೆಂಬ ಕಲ್ಪದೊಳಿರ್ಪ[6]ತ್ತು[6] ಸಾಗರೋಪಮಾಯುಷ್ಯಮನೊಡೆಯೊನಿಂದ್ರನಾಗಿ ಪುಟ್ಟಿದೊಂ

ಮತ್ತೆ ಪೆಱರು[7]ಮಾರಾಧಕರುಂ ರತ್ನತ್ರಯಮನಾರಾಧಿಸುತ್ತಿರ್ದ[7] ಭವ್ಯರ್ಕ್ಕಳ್ ಭಯಘೋಷ ಭಟಾರರಂ ಮನದೆ ಬಗೆದು ಪಸಿವುಂ ತೃಷ್ಣೆಯುಮುೞುಂ ವ್ಯಾಧಿಯುಂ ಶೀತವಾತೋಷ್ಣಂಗಳುಮೆಂದಿವು ಮೊದಲಾಗೊಡೆಯ ದುಃಖಂಗಳಂ ಸೈರಿಸಿ [8]ಪರಮ ಶುದ್ಧ ಸಮ್ಯಗ್ ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ[8] ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

1. ಂಗಳಂ ತೊಱೆದು (ಫ). 2. ಳ್ಳಂ (ಕಗ). ಳಂ (ಫ). 3. ದಿರ್ದೊ (ಕಖಗ), ದಿನಿರ್ದ (ಘಚ), ದೋರ್ದ (ಫ). 4. ವಿನೋದದಿಂ ಗೆಂಟಱೊಳು (ಘಚ). (ಫ)ದಲ್ಲಿ ನಷ್ಟ. 5. ಮುಂದಿಟ್ಟು ಸಮ್ಯಗ್ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ (ಘಚಛ). 6. ತ್ತೆರಡು (ಫ). 7. ಂ ರತ್ನತ್ರಯಂಗಳಂ ಆರಾಧಿಸುತ್ತಿರ್ದ (ಘಚನ). 8. ಸಮಾಧಿಮರಣದಿಂ ಮುಡಿಪಿ (ಘಚಛ).

# (೧೩) ವಿದ್ಯುಚ್ಚೋರನೆಂಬ ರಿಸಿಯ ಕಥೆ

ವಿದ್ಯುಚ್ಚೋರನೆಂಬ ರಿಸಿಯ ಕಥೆಯಂ ಪೇೞ್ವೆಂ :

**ಗಾಹೆ** ॥ ದಂಸೇಹಿಯ ಮಸಕೇಹಿ ಯ ಖಜ್ಜಂತೋ ವೇದಣಂ ಪರಮಘೋರಂ ।
ವಿಜ್ಜುಚ್ಚೋರೋ ಅಧಿಯಾಸಿಯ ಪಡಿವಣ್ಣೋ ಉತ್ತಮಂ ಅಟ್ಠಂ ॥

[ದಂಸೇಹಿಯ—ಚಿಕ್ಕುಟುಗಳಿಂದಂ, ಮಸಕೇಹಿ ಯ—ಗುಂಗುಱುಗಳಿಂದಂ, ಖಜ್ಜಂತೋ—ತಿನೆಪಡುರ್ದೊನಾಗಿ, ವೇದಣಂ—ವೇದನೆಯುಂ, ಪರಮಘೋರಂ—ಅಪಮಾನುಂ ಕಡಿದಪ್ಪುದಂ. ವಿಜ್ಜುಚ್ಚೋರೋ—ವಿದ್ಯುಚ್ಚೋರನೆಂಬ ರಿಸಿ, ಅಧಿಯಾಸಿಯ—ಲೇಸಾಗಿ ಸೈರಿಸಿ, ಪಡಿವಣ್ಣೋ—ಪೊರ್ದಿ[1]ದೊಂ, ಉತ್ತಮಂ ಅಟ್ಠಂ—ಮಿಕ್ಕ ದರ್ಶನಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತ ಕ್ಷೇತ್ರದೊಳ್ ವಿದೇಹಮೆಂಬುದು ನಾಡಲ್ಲಿ ಮಿಥಿಳೆಯೆಂಬುದು ಪೊೞಲದನಾಳ್ವೊಂ ಪದ್ಮರ[2]ಥ[2]ನೆಂಬೊನರಸ[3]ನ[3] ಸಂತತಿಯಿಂ ಬಂದ ವಾಮರಥನೆಂಬೊರಸನಾತನ ಮಹಾದೇವಿ ಬಂಧುಮತಿಯೆಂಬೊಳಂತವರ್ಗ್ಗೆಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತಾ ಪೊೞ[4]ಲ್ಗೆ ಯಮ[4]ದಂಡನೆಂಬೊಂ ತಳಾಱಂ ಮತ್ತಲ್ಲಿ ಇರ್ಪ್ಪೊಂ ವಿದ್ಯುಚ್ಚೋರನೆಂಬೊಂ ಕಳ್ಳನಾತಂ ಜೃಂಭಿನಿ ಸ್ತಂಭಿನಿ ಮೋಹಿನಿ ಸ[5]ರ್ಷಪಿ[5] ತಾಳೋದ್ಘಾಟಿನಿ ವಿದ್ಯಾಮಂತ್ರ[6] ಚೂರ್ಣ ಯೋಗ ಘುಟಿಕಾಂಜನಮೆಂದಿವು ಮೊದಲಾಗೊಡೆಯ ತಸ್ಕರಶಾಸ್ತ್ರಂಗಳೊಳಾದಮಾನುಂ ಕುಶಲನಂತಪ್ಪ ಕಳ್ಳಂ ಪೊೞಲ ಕಸವರಂಗಳ ನಿರುಳ್ ಕ[7]ಳ್ದು[7] ಪೊೞಲ್ಗೆ ನಾಡೆಯಂತರದೊಳೊಂದು ಪರ್ವತಮುಂಟಲ್ಲಿ ಪಿರಿದೊಂದು ಗುಹೆಯುಂಟದಱೊಳಗೆ [8]ಕಳ್ದ[8] ಕಸವರಂಗಳೆಲ್ಲಮಂ ಪೂೞ್ದಿಟ್ಟು ಗುಹೆಯ ಬಾಗಿಲಂ ಪಿರಿದೊಂದು ಶಿಲೆಯಿಂ ತಂದಿಟ್ಟು ಮುಚ್ಚಿ ಬಂದು ಪಗಲೆಲ್ಲಂ ಪಾೞ್ದೇಗುಲದೊಳಂಜನಮನೆಚ್ಚಿ ತಾಂ ತೊನ್ನನಾಗಿ ಮುರುಂಟಿದ ಕೈಯುಂ ಕಾಲುಂ ಬೆರಸು ಮೂಗೊಳಗರ್ದು[9] ರಸಿಗೆ ಸುರಿಯೆ ನೊಣವುಗಳ್ ಮುಸುಱ[10]ಕೊಂಡು[10] ತಿನೆ [11]ಪೇಸಿದ[11]ನಾಗಿ ಲೋಗರ ಮನೆಗಳೊಳ್ ಭೈಕ್ಷಮಂ ಬೇಡಿ ಮನೆಮನೆಯುಂ ತೊೞಲ್ದು ತನ್ನ [12]ತೊನ್ನುಗೊಂಡಿರ್ಪುದನೞಿಪುತ್ತುಮಿಂತು ಪಗಲೆಲ್ಲಮಿರ್ದಿರುಳಪ್ಪಾಗಳ್ ದಿವ್ಯಮಪ್ಪ ತನ್ನ ಸ್ವಾಭಾವಿಕಮಪ್ಪ ಮುನ್ನಿನ ರೂಪಂ ಕೈಕೊಂಡು

1. ರ್ದ್ದ (ಕಖಗ). 2. ಪರ (ಘ). 3. + ನಾತ (ಘಚ). 4. ಲ ಕಾವ್ರೊಂ ಜವ (ಘಚಛ). 5. ರ್ಷಪ (ಖ), ರಿಷಪ (ಘಚ), ರಿಷ ಪಾ (ಛ). 6. + ಯಂತ್ರ (ಘಚಛ). 7. ರ್ದು (ಚ). 8. ಕಳ್ದು ತಂದು (ಘಚ), ಕಳ್ದು ಕಳ್ದು ತಂದ (ಚ). 9. ಸೂರೊಳಗಿರ್ದು (ಕಖಗ). 10. ಕಡಿಯೆ (ಕಖಗ). 11. ದೇಸಿಗ (ಘಚಛ). 12. ಮಱೆಯಿಸುತ್ತುಂ (ಕಗ), ಮಱಿಯುತ್ತಂ(ಖ).

[1]ಬಂದಪಾ ವಿದ್ಯಾಧರ[1]ಕರಣದಿಂ ಲಂಘಿಸಿ ಪೋಪ್ಪುದಂ ಯಮದಂಡಂ ಗೆಂಟ್ರ ಜೋಳವರ್ಪ ಕಂಡಿವನೆ ಕಳ್ಳನೆಂದು ನಿಶ್ಚಯಿಸಿ ಪಿಡಿದರಮನೆಗೆ ಪುಯ್ಯಲಿಡೆಯುಂತೆ ಕೊಂಡುಪೋ[2]ಗಿಯು[2]ರಸಂಗೆ ಕಳ್ಳನಂ ತಂದೆ[3]ನೆಂದು ತೋಱೆ[3] ಈತಂ ಕಳ್ಳನೆಂದರಸಂಗೆ ಪೇೞ್ದೊಡೆ ತೊನ್ನನಿಂತೆಂದಂ

ದೇವಾ ನಾಂ ಕಳ್ಳನಲ್ಲದುದರ್ಕೆ ಪೊಟ್ಟಲೆಲ್ಲಮುಱಿಗುಂ ಕಳ್ಳನನಾರಯ್ಯು ಆಱಿದೆನ್ನಂ ತನ್ನ ಸಾವಿಗಂಜಿ ಬಡವನಂ ದೇಸಿಗನಂ ಪೊಟ್ಟಲೊಳ್ ಬೈಕೆಂದೆ ದುಂಡು ಬಾಟ್ಯನಂ ಪಿಡಿದುಕೊಂಡು ಬಂದು ಕೊ[4]ಲಿಸಿ[4]ದಪ್ಪನೆಂದೊಡೆ ತಳಾಱಂ ಕಳ್ಳನನಾರಯ್ಯ ಶಾಸ್ತ್ರಂಗಳೊಳಾದಮಾನಂ ಕುಶಲನಪ್ಪುದಱಿಂದರಸಂಗಿಂತೆಂದ ನೀತಂ ತನ್ನ ರೂಪುಗರೆದಿರುಳ್ ಪೊಟ್ಟಲೆಲ್ಲಮಂ ಕಳ್ದು ದಿವಸಕ್ಕೀ ಪಾಂಗಿನೊಳ್ ತೊನ್ನನಾಗಿಪ್ಪೊಂ ನೀಮುಂ ನಂಬದಾಗಳ್ ಪ್ರತ್ಯ[5]ಯಮಂ[5] ಮಾಡಿ ತೋರ್ಪೆನೆಂದಾಗಳ್ ಪ್ರತಿಘುಟಿಕಾಂಜನಂಗಳಂ ತೊನ್ನನ ಕಣ್ಣಿನೊಳಿಟ್ಟೊಡೆ ದಿವ್ಯಮಪ್ಪ ತನ್ನ ಮುನ್ನಿನ ರೂಪಾ[6]ಗಿ[ರ್ದ]ಂತೆಂದನೀ[5]ತಂ ಘುಟಿಕಾಂಜನ ಕುಹಕಂ ಇಂದ್ರಜಾಲಂಗಳಂ ಬಲ್ಲೊನಪ್ಪುದಱಿಂದೆಲ್ಲಾ ರೂಪುಗಳಂ ಮಾಡಲ್ ಬಲ್ಲೊನೆಂದೊಡೆ ತಳಾಱನೆಂದಂ ಪೆಱರ್ಗೆ ಮಾಡೀ ಪ್ರತ್ಯಯಮಂ ತೋರ್ಪೆನೆಂದರಸನನುಮತದಿಂದರಸಿಯರ ಸೂಳೆಯರ ಕಣ್ಗಳೊಳ್ ಘುಟಿಕಾಂಜನಂಗಳನೆಟ್ಟೊಡನಿಬರುಂ ತೊನ್ನೆಯರಾಗಿಪ್ಪರನ್ನೆಗಂ /

ಮತ್ತಂ ಬೞಿಕ್ಕೆ ಪ್ರತಿಘುಟಿಕಾಂಜನಂಗಳನೆಟ್ಟೊಡೆ ಸ್ವಾಭಾವಿಕಮಪ್ಪ ತಮ್ಮ ಮುನ್ನಿನ ರೂಪುಗಳಂ ಕೈಕೊಂಡಿರ್ದೊರಾಗಳರಸಂಗೆ ನಂಬುಗೆಯಾಗಿ ನೆಟ್ಟನಿವಂ ಕಳ್ಳನಪ್ಪನೀತನಂ ದಂಡಿಸೆಂದು ಯಮದಂಡಂಗೆ ಬೆಸವೇೞ್ದೊಡಾತನಂತೆ ಗೆಯ್ವೆನೆಂದಾತನಂ ತನ್ನ ಮನೆಗೊಡಗೊಂಡು ಪೋಗಿ ಮಾಘಮಾಸದಿರುಳ್ ಕಡುಸೀತದೊಳ್ ಘೋರಮಪ್ಪ[7] ಮೂವತ್ತೆರಡು ದಂಡಣೆಗಳಿಂ ನೀಡುಂ ದಂಡಿಸೆಯುನಿತುಮಂ ಬಾೞ್ವಾೞ್ ಅವಗ್ಗಿಸದೆ ಸೈರಿಸಿ[8]ಯುಂ[8] ಕಳ್ಳನಲ್ಲೆನಪ್ಪೋಂ ಬಲ್ಲಾಳ್ತನದಿಂದೆನ್ನಂ [9]ತಳಾಱಂ[9] ಕೊಂದಪ್ಪನೆಂದುಮೊಳಱೆ ಪುಯ್ಯಲಿಡೆ ತಳಾಱಂಗೆ ಕಳ್ಳನೀತನಲ್ಲೆಂಬುದೊಂದು ನಂಬುಗೆಯಾಗೆ ನೇಸಱ್ ಮೂ[10]ಡೆಯು[10]ದಮನೆಗೆ ಪೋಗಿ ಅರಸಂಗಿಂತೆಂದು ಬಿನ್ನಪಂಗೆಯ್ದಂ.

ದೇವಾ ಮೂವತ್ತೆರಡು ಘೋರಮಪ್ಪ ದಂಡಣೆಗಳಿಂದಂ ಕಳ್ಳನಂ ದಂಡಿಸಿ ನೋಡಿದೆನಾತನಮೋಘಂ ಕಳ್ಳನಲ್ಲೆನ್ನಂ ದೇವರ್ ಮೆಚ್ಚುಕೆಯ್ವುದೆಂದೊಡರಸಂ ಶ್ಮಶಾನದ ಸೂಲದೊಳ್ ಯಮದಂಡನನಿಕ್ಕಿಮೆಂದಾ[11]ಳ್ಗಳ್ಗೆ[11] ಬೆಸವೇೞ್ದೊಡವರು ಮಾತನಂ ಶ್ಮಶಾನಕ್ಕೆೞೆದುಕೊಂಡು ಪೋಗಿ ಪಕ್ಕಂ ಬಿಸಿದು ಸೂಲದೊಳಿಕ್ಕುವಾಗಳವರೊಡಪ್ಪೋಗಿ ತೊನ್ನಂ ರೂಪಪರಾವರ್ತನಂಗೆಯ್ದು ತನ್ನ ಸ್ವಾಭಾವಿಕಮಪ್ಪ

---

1. ವಿದ್ಯುಚ್ಚೋರಂ ವಿದ್ಯುತ್ (ಕಖಗ). 2. ವರನ್ನೆಗಮ (ಕಖಗ). 3. + ತೊನ್ನನಂ (ಘ). ತೊನ್ನನಂ (ಙ). 4. ಸಲ್ ಬಗೆ (ಘಙಛ) 5. ಕ್ಷಂ (ಘಙಛ). 6. ರ್ಪ್ಯಂತೆಂದಾ (ಕಖಗ), ದರ್ದಂ ಕಂಡಿಲೆಯಿ (ಘಙಛ). 7. + ಕಳ್ಳನಂ (ಕಖಗ). 8. ಯಾಂ (ಘಙಛ). 9. (ಘಙಛ)ಗಳಲ್ಲಿಲ್ಲ. 10. ಡುವುದುಮ (ಘಙಛ). 11. ಗಳ್ (ಕಖಗ).

ವಿದ್ಯುಚ್ಚೋರನಪ್ಪ ಬಿಮ್ಮಗೋಪಂ ಕೈಕೊಂಡು ಸೂಲದೊಳಕ್ಕಲೀಯಂದೆ ಅದ[1]ಮಾಗಿರ್ದ[1]ರಸನ ಕಾಪಿನವರ್ಗನೆಂದನೆಲೆಯಣ್ಣಗಳಿರಾ ನೀಮೀತನಂ ಕೊಂದಿರೀತನಂ ಸೂಲದೊಳಿಕ್ಕೆ ಪಟ್ಟನಾಗಿ ಸತ್ತಪನೆಂದವರೊಳ್ ನುಡಿದು ತಳಾಱನನಿಂತೆಂದ ನೆಲೆ ಗಳಾ ಯಮದಂಡಾ ನೀನುಮೆನ್ನನುಂ ಕಿಱಿಯಂದೊರ್ವರುಪಾಧ್ಯಾಯರ ಪಕ್ಕದೊಳೋದುವಂದು ನಂದನವನದೊಳಗೆ ನೀನೆನ್ನ ಪುಣ್ಬ ಪ್ರತಿಜ್ಞೆಯಂ ನೆನೆ[2]ದವೊಂದು ದೋಷಮಿಲ್ಲದೆ ನಿನ್ನಂ ಕೊಲಿಸಿದೆನೊ ಕೊಲಿಸೆನೊ ಪೂಣ್ದ ಪ್ರತಿಜ್ಞೆಯಂ ನೆನೆವಯೋ ನೆನೆಯೆಯೊ ಎನೆ ಯಮದಂಡನೊಳ್ಳಿತ್ತಾಗಿ ನೆನೆದೆನೆಂದೊಡೆ[2] ವಿದ್ಯುಚ್ಚೋರನಿಂತೆಂದಂ ಮತ್ತೀಗಳ್ ನೀನೇನ್ ಸತ್ತೆಯೊ ಸಾಯೆಯೊ ಮ[3]ತ್ತೇನೊ[3] ಎಂದಾಗಳ್ ಯಮದಂಡನೆಂದಂ ದೇವಾ ನೀಂ ಗೆಲ್ದೆಯಾಂ ಸೋಲ್ತೆ[4]ನುಂ ಸತ್ತೆನು ಮೆಂದಿರ್ವರ್ ಪದಿರಿನಿಂ[4] ನುಡಿವ ಸೂಟ್ಮಾತುಗಳಂ ಕಾಪಿನವರುಂ ಪೊಱಲ ಜನಮುಂ ಕೇಳ್ದು ಚೋದ್ಯಂಬಟ್ಟು ಬೆಱಗಾಗಿರ್ದೊಡೆ ವಿದ್ಯುಚ್ಚೋರಂ ಕಾಪಿನವರನಿಂತೆಂದ ನೆನ್ನುಮನೀತನುಮನರಸನಲ್ಲಿಗೆ ಕೊಂಡುಪೋಗಿಮರಸನ ಮುಂದೀತಂಗಮೆನಗಂ ಮಾತುಂಟಲ್ಲಿ ನುಡಿದ ಬೞಿಕ್ಕರಸನೀತನಂ ಮೆಚ್ಚುಕೆಯ್ಗೆ [5]ಎಂತುಂ ಕೊಲವೇಟ್ಪೊಡಂ[5] ಮೂಱು ಸೂಟ್ ಬೆಸಗೊಂಡಲ್ಲದೆ ಕೊಲಲಾಗದೆಂದು ನೀತಿಶಾಸ್ತ್ರದೊಳ್ ಪೇೞ್ದುದಱಿಂದೆಮ್ಮಿರ್ವರುಮನರಮನೆಗೆ ಕೊಂಡುಪೋಗಿ ಅರಸಂಗೆ ತೋಱಿಮೆಂದೊಡಾ ಕಾಪಿನವರಿರ್ವರುಮನರಸನಲ್ಲಿಗೆ ಕೊಂಡುಪೋಗಿ ಇಂತೆಂದು ಬಿನ್ನಪಂಗೆಯ್ದರ್ ದೇವಾ ಈತಂ ಯಮದಂಡನಂ ಕೊಲಲೀಯದೆ ಬಾರಿಸಿದನೆಂದು ವಿದ್ಯುಚ್ಚೋರನಂ ತೋಱೆ ನುಡಿದೊಡರಸನೇಕೆ ನೀಂ ಬಾರಿಸಿದೆಯೆಂದು ಬೆಸಗೊಂಡೊಡೆ ವಿದ್ಯುಚ್ಚೋರನೆಂದಂ

ಯಮದಂಡಂಗೇನುಂ ಪೊಲ್ಲಮೆಯುಂ [6]ದೋಷ[6]ಮುಮಿಲ್ಲ ನಿಮ್ಮ ದೇವತಾರಕ್ಷಿತಮಪ್ಪ ಸರ್ವರುಜಾಪಹಾರಮೆಂಬುದು ಮೊದಲಾಗಿ ಪೊಱಲ[7] ಕಸವರಮನಿರುಳ್ ರೂಪಿನೊಳ್ ಕಳ್ದು ಪಗಲೆಲ್ಲಂ ತೊನ್ನನಾಗಿ ಪಾೞ್ದೇಗುಲದೊ[8]ಳಿರ್ಪೆ[8]ನಪ್ಪೊಡೆನ್ನಂ ಕೊಲ್ಲಿಮೀತಂಗೇನುಂ ದೋಷಮಿಲ್ಲೆಂದೊಡರಸನೆಂದನಾ ಕಳ್ದ ಕಸವರಮನೆಲ್ಲಮನೇಗೆಯ್ದೆಯೆಂದು ಬೆಸಗೊಂಡೊಡನಾತನಿಂತೆಂದಂ ಮುನ್ನಿರ್ದ್ದ ಪತ್ತುಸಾಸಿರ ದೀನಾರ[9]ಮನ್ನ ನೂಂಗೆ ಬಿಂ[10]ಮಾದುದು[10]ಬಿಱಿದು[11]ವೆಲ್ಲ[ಂ]ವಣ್ಣ[ಂ]ಪಳಿಯದಿ[11]ರ್ದುದೆಂದೊಡರಸಂ ವಿದ್ಯುಚ್ಚೋರನಂ ಹಾರಮಂ ಕೊಂಡು ಬಾ ಪೊಱಲವಗ್ಗರಂ ಕಸವರಮಂ ಮಱಗದೆಱ್ಲೆಯುಂ ತೋಱೆಂದಾತನೊಡನೆ ಪೊಱಲ ಜನಮುಮನಟ್ಟೆ ಕಾಪ್ಪವರಸು ಪೋಗಿ ಪೊಱಲ್ಗೆ ನಾಡೆಯಂತರದೊಳ್ ಬಿರಿದೊಂದು ಪರ್ವತಮುಂಟಲ್ಲಿ

---

1. ಮಾಗಿಳ್ದ (ಕಖಗ). ಬಿರ್ದು (ಘಚ). 2. ವೊ ಎನೆ ಜವದಂಡನೊಳ್ಳಿತ್ತಾಗಿ ನೆನೆವೆನೆಂದೆಂದ (ಘಚಛ). 3. ತ್ತೆನ್ನ ಪೂಣ್ದಪ್ರತಿಜ್ಞೆ ಸಂದುದೊ ಸಲ್ಲದೊ ನಿನ್ನಂ ಕೊಲಿಸಿದೆನೊ ಕೊಲಿಸೆನೊ (ಘಚಛ). 4. ನೊಡಂತಿರ್ದರುಂ (ಘಚಛ). 5. ಯಾಂತುಂ ಕೊಲವೇಳ್ಪೊಡಂ (ಚಛ), ಯಂತಂ ಕೊಲಲ್ ಪೇಳ್ದರಂ (ಘ). 6. ಪಾಪ (ಘಚಛ). 7. + ಜನಂಗಳ (ಘಚಛ). 8. ಳಿರ್ದಿರ್ಪುದು (ಚ). 9. ಮನೆ (ಘಚಛ). 10. ಂ ಮಾಡಿದೆನು (ಘಚಛ). 11. ದೆಲ್ಲನಣ್ಣವಳಿಯದಿ (ಕಗ), ದಲ್ಲಮಣ್ಣ ಮಱಿಯಲಿ (ಘಚಛ).

ಯೊಂದು ವಿಸ್ತೀರ್ಣ ಗುಹೆಯುಂಟದಱ ಬಾಗಿಲಂ ಮುಚ್ಚಿರ್ದ ಪಿರಿಯ ಸಿಲೆಯುಂ ಕಳೆದದಱೊಳಗೆ ಪೊಕ್ಕು ಹಾರಮಂ ಕೊಂಡು *ಪೊೞಲ ಜ[1]ನಮೆಲ್ಲಮನೆಂದುಂ ನಿಮ್ಮ ನಿಮ್ಮ ಕಸವರಮುಮ್ಮುದನಾರೆಯ್ದು[1] ಪಲ್ಲಟಿಸಲೀಯದೆ ನೋಡಿಕೊಳ್ಳಿಮೆಂದು ತೋಱಿದೊಡವರುಂ ತಂತಮ್ಮ [2]ಕಸವರಮನೆಲ್ಲಮನಾರೆ[2]ಯ್ದು ಕೊಂಡರ್ ಮತ್ತೆ ವಿದ್ಯುಚ್ಚೋರನುಂ ಹಾರಮಂ ಕೊಂಡು* ಪೋಗಿಯರಸಂಗೊಪ್ಪಿಸಿದೊಡರಸನಿಂತೆಂದು ವಿದ್ಯುಚ್ಚೋರನಂ ಬೆಸಗೊಂಡಂ ಮಾಘಮಾಸದಿರು[3]ಳಿನ[3] ಸೀತದೊಳ್ ನಾಲ್ಕು ಜಾವಮುಂ ಮೂವತ್ತೆರಡುಂ ಘೋರಮಪ್ಪ ದಂಡಣೆಯುಮನೆಂತು ಸೈರಿಸಿದೆಯೆಂದೊಡಾತನಿಂತೆಂದರಸಂಗೆ ಪೇೞ್ಗುಂ

ದೇವಾ ಒಂದು ದಿವಸಂ ಸಹಸ್ರಕೂಟ ಚೈತ್ಯಾಲಯಕ್ಕೆ ಕಿಱಿಯಂದೆನ್ನ ನೋಡಿಸುವೋಜರುಮಾನುಂ ಪೋಗೆ [4]ಓಜಂ[4] ದೇವರಂ ಬಂದಿಸುವನ್ನೆಗಂ ಚರಿತ ಪುರಾಣಂಗಳಂ ವಕ್ಖಾಣಿಸುತ್ತಿರ್ದ ಶಿವಗುಪ್ತರೆಂಬಾಚಾರ್ಯರ ಪಕ್ಕದೆ ಕುಳ್ಳಿರ್ದು ವಕ್ಖಾಣೆಯಂ ಕೇಳುತ್ತಿರ್ಪನ್ನೆಗಂ ನರಕವ್ಯಾವರ್ಣನೆ[5]ಯುಮಂ[5] ಭಟಾರರಿಂತೆಂದು ಪೇೞ್ದುದಂ ಕೇಳ್ದೆಂ ವ್ರತಶೀಲ[6]ಚಾರಿತ್ರ ಗುಣಂಗಳನಿಲ್ಲದವರುಂ[6] ಜೀವಂಗಳಂ ಕೊಲ್ವರುಂ ಬೇಂಟೆಯಾಡುವರುಂ ರಾಗದ್ವೇಷ ಲೋಭಂ ಕಾರಣಮಾಗಿ ಪುಸಿ ನುಡಿದು ಜೀವಂಗಳ್ಗೆ ಸಂತಾಪ[7]ಮುಂ ವಧೆಯು[7]ಮಂ ಮಾಡಿಸು[8]ವರುಮಱಿದಿ[8]ಗೊಳ್ವರುಂ ಕಳ್ವರುಂ ಪೆರರ ಪೆಂಡಿರೊಳ್ ಮಱಿವಾಟ್ಟಿರುವಪರಿಮಿತ ಪರಿಗ್ರಹಮಂ ನೆರಪುವರುಂ ಮತ್ತಂ ಮಧುಮದ್ಯಮಾಂಸಂಗಳುಮನುಯ್ದು ಪಾಲ್ಮರದ ಪಣ್ಗಳುಮಪ್ಪೆಲೆಂಬೆಯುಮಂ[9] ಸಣ್ಣಂಬಿನ ಪೂವುಮೆಂದಿವು ಸೇವಿಸುವರುಂ ಮ[10]ತ್ತಮಮೋಘ[10]ಮಪೇಯಮಪೇಯಮಭಕ್ಷ್ಯ[11]ಮೆಂದಿವಱೊಳ್ ನೆಗೞ್ವರುಂ ಪಂಚ ಮಹಾಪಾತಕಂಗ[12]ಳಂ ಗೆಯ್ದೋರುಮಿವರೆಲ್ಲಂ[12] ನಿವೃತ್ತಿ ಪರಿಣಾಮಮಿಲ್ಲದೆ ಕಾಲಂಗೆಯ್ದೇೞಿಂ ನರಕಂಗಳೊಳ್ ಪುಟ್ಟಿ ದುಃಖಂಗಳನೆಯ್ದುವರ್

ಗಾಹೆ ॥ ಅಚ್ಚಿಣಿಮೀಲಣ ಮೆತ್ತಂ ಣತ್ಥಿ ಸುಹಂ ದುಕ್ಖಮೇವ ಅಣುಬದ್ಧಂ ।
ಣರಯೇ ಣೇರಯಿಯಾಣಂ ಅಹಣ್ಣಿಸಂ ಪಚ್ಚಮಾಣಾಣಂ ॥

ವೃ ॥ ಕರಜ ನಿಪೀಡಿತ ತೀಕ್ಷ್ಣ ಶಲಾಕಾ
ಕ್ರಕಚ ವಿಪಾಟಿತ ಭಿನ್ನ ಶರೀರಾಃ ।
ನರಕ ಭವೇ ನಿವಸಾ ವಿಪಮಂತೇ
ಚಿರಮಪಿ ತೇ ಕ್ಷಣ ರಮಣ ಸುಖಾದಾಃ ॥

ಮತ್ತಂ

*–* (ಕಗ) ಪ್ರತಿಗಳಲ್ಲಿಲ್ಲ. 1. ನಂಗಳೆಲ್ಲಿಂಯುಂ ಕಸವರಮುಂ (ಘಚಛ). 2. ವಮ (ಘಚಛ). 3. ಆ (ಕಚಗ). 4. (ಘಚಛ)ಗಳಲ್ಲಿಲ್ಲ. 5. ಯುಮೆಯುಂ (ಘಚಛ). 6. ಗುಣಂಗಳಿಲ್ಲದ (ಕಚಗ). 7. ಮುಮವಮಾಪತ್ತು (ಘಚಛ). 8. ಮಾಡಿ (ಕಗ). 9. + ಜೇನೆಯ್ಯುಂ (ಘಚಛ). 10. ತ್ತಂಗಮ್ಯಾಗಮ್ಯ (ಘಚ). 11. + ವಾಚ್ಯಾವಾಚ್ಯ (ಘಚಛ). 12. ಳ್ ಮೊದಲಾಗೊಳವು ಪಲತೆಱದ ಪಾಪದ ಫಲದಿಂದೆಯ್ದುವರೆಲ್ಲಂ (ಘಚಛ).

ಪ್ಪರ್ಣತ್ರಯಪ್ಪುಕ್ಕುಮಮಂ ಪಿಂಗಿಸಿ ನಿಶ್ಶಂಕಾದ್ಯಷ್ಟ ಗುಣಂಗಳಿಂ ಕೂಡಿದ ಶುದ್ಧಮಪ್ಪ ಸಮ್ಯಕ್ತ್ವಪೂರ್ವಕಂ ವ್ರತಂಗಳನೇ[1]ಱಿಸಿ[1]ಕೊಂಡು ಮತ್ತೆ ನರಕಂಗಳ ದುಃಖಂಗಳಂ ಕೇಳ್ದವಱ ಶತಸಹಸ್ರ ಭಾಗಕ್ಕೆಪ್ಪೊಡಮಿಗ ದುಃಖ[2]ಮಿಲ್ಲೆಂದು[2] ಮನದೊಳ್ ಬಗೆದು ಮೂವತ್ತೆರಡುಂ ದಂಡಣೆಗಳಂ ಸೈರಿಸಿದೆನೆಂದೊಡರಸಂ ಕೇಳ್ದು ನಿನಗೊಸೆದೆಂ ಬೇಡಿಕೊಳ್ ನಿನ್ನ ಬೇಡಿದುದೆಲ್ಲಮಂ ಕುಡುವೆನೆಂದೊಡೆ ಪೇಱ[3]ತೇ[3]ನುಮನೊಲ್ಲೆ ನೆನ್ನ ಕೊಲಿಯುನಪ್ಪ ಯಮದಂಡಂಗೆ ಕ್ಷಮಿಯಿ[4]ಸುವುದನೆ ಬೇಡಿದೆ[4]ನೆಂದೊಡರಸ ನಿಂತೆಂದು ಬೆಸಗೊಂಡಂ ಯಮದಂ[5]ಡಂ ನಿನಗೆಂತು ಕೊಲಿಯುನಾದಂ[5] ಮತ್ತೆ ನೀಂ ಶ್ರಾವಕ ವ್ರತಂಗಳಂ ಕೈಕೊಂಡೆಯಪ್ಪೊಡೇ[6]ಕೆ ಕ[6]ಳ್ವೆಯೆಂದು ಬೆಸಗೊಂಡೊಡಾತ ನಿಂತೆಂದಂ ಯಮದಂಡನೆನಗೆ ಕೊಲಿಯುನಪ್ಪುದುಮಂ ನಿಮ್ಮ ಪೊಱಲ ಕಸವರಮಂ ಕಳ್ದುದಕ್ಕೆ ಕಾರಣಮುಮಂ ಪೇೞ್ವೆಂ ಕೇಳರಸಾ ಎಂದು ವಿದ್ಯುಚ್ಚೋರನಿಂತೆಂದು ಪೇೞಲ್ತೊಡಂಗಿದಂ

ಈ ಜಂಬೂದ್ವೀಪದ ಭರತ ಕ್ಷೇತ್ರದೊಳ್ ತಿಲಕಮನೆ ಪೋಲ್ವುದು ದಕ್ಷಿಣಾ ಪಥದೊಳಾಭೀರಮೆಂಬುದು ನಾಡಲ್ಲಿ [7]ವರ್ಣೆ[7]ಯೆಂಬ ತೊಱೆ[8]ಯಾ[8] ತಡಿಯೊಳ್ ವೇಣಾತಟಮೆಂಬುದು ಪೊಱ[9]ಲದು ಪೊಱಲ ಗುಣಂಗಳಿನಾ[9]ದಮಾನುಂ ರಮ್ಯ ಮಪ್ಪುದು ಸ್ವರ್ಗಮನೆ ಪೋಲ್ವುದದನಾಳ್ವೊಂ ಜಿತಶತ್ರುವೆಂಬೊನರಸನಾತನ ಮಹಾದೇವಿ ವಿಜಯಮತಿ[10]ಯೆಂಬೊಳಾ ಇರ್ವರ್ಗ್ಗಂ ಮಗನೆನಾಂ ವಿದ್ಯುಚ್ಚೋರ ನೆಂಬೆಂ ಮತ್ತಾ ಪೊಱಲೊ[11]ಳ್ ಯಮಪಾಶನೆಂಬೊಂ ತಳಾಱ[11]ನಾತನ ಪೆಂಡತಿ [12]ನಿಜಗುಣದೇವತೆ[12]ಯೆಂಬೊಳಾ ಇರ್ವರ್ಗ್ಗಂ ಮಗನೀತಂ ಯಮದಂಡನೆಂಬೊಂ ಮತ್ತಾವಿ[13]ರ್ವಮುಂ ಸಮಾನವಯಸರೆಮಯ್ದಾಱು ವರ್ಷದ ಪ್ರಾಯದಂದು ಶ್ರಾವಕನಪ್ಪ ಸಿದ್ಧಾರ್ಥನೆಂಬುಪಾಧ್ಯಾಯನ ಪಕ್ಕದೆ ಇರ್ವರುಮನೋದಲಿಟ್ಟೊ ಡೇೞಿಂಟು ವರುಷದೊಳಗೆ ವ್ಯಾಕರಣಂ ಪ್ರಮಾಣಂ ಛಂದಮಲಕಾರಂ ನಿಘಂಟು ಕಾವ್ಯಂ ನಾಟಕಂ ಸಾಮುದ್ರಿಕಂ ವಾತ್ಸ್ಯಾಯನಂ ಶಾಲಿಹೋತ್ರಂ ಪಾಲಕಾಪ್ಯಂ [14]ಚಾಣಕ್ಯಂ ವೈದ್ಯಂ[14] ಮೊದಲಾಗೊಡೆಯ ಶಾಸ್ತ್ರಂಗಳನೆಲ್ಲಮನಿರ್ವರುಂ ಕಲ್ತು ಬೞಿಕ್ಕೀತಂ ತಳಾಱನ ಮಗನಪ್ಪುದಱಿಂ ತನಗೆ ತಕ್ಕ ಕಳ್ಳರನಾ[15]ರಯ್ವ ತೆಱನಂ ಪೇೞ್ವ ಸುರಖಮೆಂಬೋದಂ ಕಲ್ತೊನಾನುಂ[15] ಕಳ್ವುಪಾಯಮಂ ಪೇೞ್ವ ಕರಪಟ ಶಾಸ್ತ್ರಮಂ ಕಲ್ತೆನಿಂತೆಮಗನ್ಯೋನ್ಯ ಪ್ರೀತಿಯಿಂದಂ ಕಾಲಂ ಸಲೆ

1. + ಕೈ (ಕಖಗ). 2. ಮಲ್ತೆಂ (ಘಛ), ೦ ದುಃಖಮಲ್ತೆಂ (ಛ). 3. ದೇ (ಖ). 4. ಸಿಂ ನಿಮ್ಮಡಿಯುದನೆ ಬೇಡಿಕೊಂಡೆ (ಘಚಛ). 5. ಡಂಗಂ ನಿಂಗಮೆಂತುಕೊಲಿಯಾಯ್ತು (ಘಚಛ). 6. ಕೇ (ಕಗ), ಕ (ಖ). 7. ವೇರ್ಣೆ (ಖ), ವೆಂಣ್ಣೆ (ಘಚಛ). 8. ಯ (ಕಖಗ), ದಱ (ಚ). 9. ಲಾ (ಘಚಛ). 10. + ಮಹಾದೇವಿ (ಕಖಗ). 11. ೞ ತಳಾಱಂ ಜವದಂಡಪಾಶನೆಂಬೊ (ಘಚಛ). 12. ನಿಜಯ ಗುಣದೇವತೆ (ಖ), ಜಗುಣೆ (ಘಚಛ). 13. ರ್ವರುಂ (ಕಗ). ಬ್ಬರೊಂ (ಘಛ). 14. ನರವೈದ್ಯಂ ಮಂತ್ರವಾದಂ ಜ್ಯೋತಿಷಂ (ಘಚಛ). 15. ರೈದುದಂ ಪೇೞ್ವ ಸುರಂಬುಮೆಂಬೋದಂ ಕಲ್ತನಾಂ (ಘ). ರಯ್ವುದಂ ಪೇೞ್ವಸುರಂಖಮೆಂಬೋದಂ ಕಲ್ತನಾಂ (ಚಛ).

ಮತ್ತೊಂದು ದಿವಸಮಿರ್ವರುಂ ವನಕ್ರೀಡೆಯಾಡಲೆಂ[1]ದಿಂ[1]ದ್ರೋಪಮಮೆಂಬ ವನಕ್ಕೆ ಪೋಗಿಯಲ್ಲಿಯಶೋಕ ಪುನ್ನಾಗ ವಕುಳ ತಿಳಕ ತಮಾಳ ಚಂಪಕ ಕ್ರಮುಕ ನಾಳಿಕೇರ ಖರ್ಜೂರ ಜಂಬು ಜಂಬೀರ ಪನಸ ದಾಡಿಮ ಕದಳೀ ದ್ರಾಕ್ಷಾ ಸಹಕಾರಂ ಮೊದಲಾಗೊಡೆಯ ಪಲವುಂ ತೆಱದ ವೃಕ್ಷಜಾತಿಗಳಿಂದಂ ಕಿಕ್ಕಿಱಿಗಿಱಿದಿರ್ದ ನಂದನವನದೊಳಿರ್ವ[2]ರುಮುಳಿಸೆಂ[ಡನಾ]ಡುತ್ತಿ[ರೆ] ಲೋಕ [ನ][2] ವಿದ್ಯೆಯನೀತಂ ಕಲ್ತನಪ್ಪುದಱಿಂದೆಲ್ಲಿಯುಮಳಿದೊಡಂ ಕಾಣಲಾಗದೀತನಂ ನೀಡುಂ ಪಱಿ ಕಾಣದೆ ದಸೆಗೆಟ್ಟು ಬೇಸತ್ತನಿಂತೆಂದನಕ್ಕುಂ ಮಗನೆ ನೀಂ ತಳಾಱ ನಪ್ಪುದು ನಿನ್ನ ಕಾಪಿನೊಳ್ ಕಳ್ದು ನಿನ್ನಂ [3]ಕೊಲಿಸ[3]ದಾಗಳೇನಾಯ್ತೆಂದು ನುಡಿದೊಡೀತನುಮಿಂತೆಂದನಕ್ಕುಂ ಮಗನೆ [4]ನೀನೆನ್ನ ತಳಾಱು[4]ಗೆಯ್ವಂದು ಕಳ್ದೊಡೆ ನಿನ್ನಂ ಪಿಡಿದುಮಡಿಯೆ ಕಟ್ಟಿ ಕಳ್ಳರ ದಂಡಣೆಯಿಂ ದಂಡಿಸದಾಗಳೇನಾಯ್ತೆಂದು ನುಡಿದೊಡೀ ನುಡಿಯುಂ ಮಱೆಯಲ್ವೇಡೆಂದಿರ್ವರುಮೋರೊರ್ವರಂ ಮೂದಲಿಸಿ ಪ್ರತಿಜ್ಞೆಗೆಯ್ದು ಕೆಲಕಾಲದಿಂದೆನ್ನ ತಂದೆಯೆನಗೆ ರಾಜ್ಯಪಟ್ಟಂಗಟ್ಟಿ ಶ್ರುತಸಾಗರ ರೆಂಬ ಭಟ್ಟಾರರ ಪಕ್ಕದೆ ತಪಂಬಟ್ಟನೀತನ ತಂದೆಯುಂ ತನ್ನ ಸಂತಾನಮನೀತಂಗೆ ಕೊಟ್ಟರಸನೊಡನೆ ತಪಂಬಟ್ಟಂ ಮತ್ತಾನುಂ ರಾಜ್ಯಂಗೆಯ್ಯುತ್ತಿರೆ ಈತನುಮಾ ಪೊೞಲೊಳ್ ತಳಾಱಂಗೆಯ್ಯುತ್ತಿರ್ಕುಮಿಂತು ಸುಖದೊಳಿರ್ಪನ್ನೆಗಂ ಕಾಲಂ ಸಲೆ ಮತ್ತೊಂದು ದಿವಸಮೀತಂ ತನ್ನ ಮನದೊಳಿಂತೆಂದು ಬಗೆ[5]ದ[5]ನೆನ್ನರಸಂಗೆ ಕಳ್ಳ ನಾನುಮಾ ಪೊೞಲೊಳ್ ತಳಾ[6]ಱುಗೆಯ್ವೆನದು ಕಜ್ಜಮೊ[6]ಳ್ಳಿತ್ತಲ್ಲೆಂದೆನಗಂಜಿ ನಾಡಂ [7]ಬಿಟ್ಟು[7] ಬಂದು ನಿಮಗಾಳಾದನೀತನೆನ್ನಾಳ್ವ ನಾಡೆಂಟುದೆಸೆಯ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳೊಳಾ ರಯ್ದೊಯುಂ ಕಾಣದೆ ಪರಮಂಡಲಂಗಳೊಳಮಾರಯ್ದೊಯುಂ ಕಾಣದಿಲ್ಲಿಗಾರಯ್ಯ ಲಟ್ಟಿದೊಡೆ ಚರಪುರುಷರಾರಯ್ದು ಕಂಡು ಬಂದೆನಗಿಂತೆಂದು ಪೇೞ್ದರ್

ದೇವಾ ಮಿಥಿಳೆಯೆಂಬ ಪೊೞಲದನಾಳ್ವೊಂ ವಾಮರಥನೆಂಬರಸಂಗೆ ಯಮ ದಂಡಂ ಪೋಗಿಯಾಳಾಗಿ ಪೊೞಲ ಕಾಪಂಬೆತ್ತು ತ[8]ಳಾಱ[8]ನಾಗಿ ಸುಖದೊಳಿರ್ದೊ ನೆಂದು ಪೇೞ್ದೊಡಾ ಮಾತನಾಂ ಕೇಳ್ದು ಪುರುಷೋತ್ತಮನೆಂಬ ಮಂತ್ರಿಗೆ ಮಿಥಿಳೆ ಯೆಂಬ ಪೊೞಲ್ಗಾನಾರುಮಱಿಯದಂತಿರೆ ಪೋಗಿ ಯಮದಂಡನ[9]ನೊ[9]ಡಗೊಂಡು ಬಂದಪೆನೆಂದು ಪೇೞ್ದು ವಜ್ರಸೇನನೆಂಬ ಪೆರ್ಗಡೆಯುಂ ಕರೆಯಿಸಿ ಆನೊಂದು ಮನೆ ವಾೞ್ತೆಗೆ ಪೋಗಿ ಬಂದಪೆನೆನ್ನ ಬರ್ಪನ್ನೆಗಂ ರಾಜ್ಯಮಂ ಪ್ರತಿಪಾಲಿಸುತ್ತಿರೆಂದು ಕಲ್ಪಿಸಿ ಸಮಸ್ತ ರಾಜ್ಯಭಾರಮಂ ಸಮರ್ಪಿಸಿ ಅರ್ಧರಾತ್ರದಾಗಳ್ ಕಪ್ಪಡಮಂ ಪೞಿದುಟ್ಟು ಬೞಿಕಾರುಮಱಿಯಲೀಯದೊರ್ವನೆ ಪೊಱಮಟ್ಟು ಬಂದೀಪೊೞಲಂ ಪೊಕ್ಕು ಪ್ರತಿಜ್ಞೆ ಕಾರಣಮಾಗಿ ಕಸವರಮಂ ಕಳ್ದೀತನಂ ಕೊಲಿಸುವಂತು

1. ದು ಇಂದಿಂ (ಕಖಗ). 2. ರುಂ ಮುಳಿಸೆಂಡೆಯಾಡುತ್ತಿರೆ ಲೋಕ (ಕಗ). ರುಂ ಮುಳಿಸಿಂದಿರಾಡುತ್ತಿರೆ ಲೋಕ (ಖ). ರು ಮು ಮುಳಿಸುಟ್ಟಿಲೋಡುತ್ತಿ (ಘ). ರು ಮುಳಿಸುಟ್ಟಿ ಲಾಡುತ್ತಿ (ಚಛ). 3. ಕೊಲಿಸಿ (ಕಗ). 4. ನಿನ್ನನೆನ್ನ ತಳಾಱಿಕೆ (ಘಚಛ). 5. ದ (ಕಖಗ). 6. ಱನೇ (ಘಚಛ). 7. ಬಿಸುಟ್ಟು (ಘಚಛ). 8. ಳವರ (ಚ). 9. ನಾರಯ್ದು (ಘಚಛ).

ಮಾಡಿದನಿದು ಕಳ್ದುದರ್ಕೆ ಕಾರಣಮಿಾತನುಮೆನಗೀ ಪಾಂಗಿನೊಳ್ [1]ಬಿತ್ತ[1]ನೆಂದು ಪೇೞ್ದು ಮತ್ತಮಿಂತೆಂದಂ ನಿಮ್ಮ ದೇವತಾ[2]ಧಿಷ್ಠಿ[2]ತಮಪ್ಪ ಸರ್ವರುಜಾಪಹಾರ ಮೆಂಬ ಹಾರಮಧಿಗಮ ಸಮ್ಯಗ್ದೃಷ್ಟಿಯೆನಪ್ಪುದಱಿಂದೆನ್ನ ಕೆಯ್ಗೆ ವಂದುದಱಿಂದ ಮಿಥ್ಯಾದೃಷ್ಟಿಗಳ ಕೆಯ್ಗೆ ಪಾರದಂದೊಡರಸಂ ತನ್ನ ಸಭೆಯೊಳಿರ್ದ ನೆರವಿಗೆಲ್ಲಂ ಹಾರಂ ಬಂದ ತೆಱನನಿಂತೆಂದು ಪೇೞಲ್ ತೊಡಗಿದೊಂ

ಧನ್ವಂ[3]ತರಿ[3] ವಿಶ್ವಾನುಲೋಮರ್ಕಳ್ [4]ಕಥೆ[4]ಯುಂ ಮೊದಲಿಂ ತಗುಳ್ದು ಪೇೞುತ್ತಮಿಂತೆಂದನೆಮ್ಮ ಸಂತತಿಯ ಪದ್ಮರಥನೆಂಬರಸನೊಂದು ದಿವಸಂ ವಾಸುಪೂಜ್ಯತೀರ್ಥಕರ ಪರಮದೇವರಂ ಬಂದಿಸಲ್ ಪೋಗುತ್ತಿರ್ದೊನನಸೆಯೊಳಚ್ಯುತೇಂದ್ರನುಂ ವಿಶ್ವಾನುಲೋಮ[5]ಚರ[5]ನಪ್ಪ ವಾಹನದೇವನುಮಿಂತಿರ್ವರುಂ ಕಂಡು ಅಚ್ಯುತೇಂದ್ರ ವಾಹನದೇವನನಿಂತೆಂದನೀತಂ [6]ಅ[6]ಧರ್ಮಿಯಿಂದೆ ಧರ್ಮಮಂ ಕೆಯ್ಕೊಂಡು ವಾಸುಪೂಜ್ಯತೀರ್ಥಕರ ಪರಮದೇವರಂ ಬಂದಿಸಿದಲ್ಲದುಣ್ಣೆನೆಂದಾಗ್ರಹಂಗೊಂಡು ಚಂಪಾನಗರಕ್ಕೆ ಪೋದಪ್ಪನೀತನಂ ಪೋಗಲೀಯದೆ ಮಗುೞ್ಚಲಾರ್ಪೊಡೆ ಮಗುೞ್ಚೆಂದು ನುಡಿದೊಡೆ ವಾಹನದೇವನುಂ ತನ್ನಾರ್ಪ ತೆಱದಿಂದೆಲ್ಲಮಿಸುತಾನುಂ ತೆಱದುಪಸರ್ಗಂ ಗೆಯ್ದು ಮಗುೞ್ಚಲಾಱದೆ ಬೇಸತ್ತುೞಿದೊಡೆ ಅಚ್ಯುತೇಂದ್ರಂ ಪದ್ಮರಥಂಗೊಸೆದು ತನ್ನ ತೊಟ್ಟ ಸರ್ವರುಜಾಪಹಾರಮೆಂಬ ಹಾರಮನಾತನ ಕೊರಲೊಳ್ ತಾ[7]ನೆ ಕಟ್ಟಿ[7] ಪೊಗೞ್ದು ಪೂಜಿಸಿಪೋದೊನಿಂತೀ ಪಾಂಗಿನೊಳೆಮಗೀ ಹಾರಂ ಸಂತತಿಯಿಂ ಬಂದುದೆಂದು ಪೇೞ್ದಿರ್ದ ತದನಂತರಂ

ಇರ್ವ[8]ರ್ ಪರಿವೊಟ್ಟೆ[8]ಯುಮರೋಲೆಯುಂ ಕೊಂಡು ಬಂದರಸನ ಮನೆಯ ಬಾಗಿಲೊಳ್ ನಿಂದು ಪಡಿಯಱಂಗೆ ಪೇೞ್ದೊಡೆ ಪಡಿಯಱಂ ತಮ್ಮರಸಂಗೆ ಪೇೞ್ದೊಡರಸನನುಮತದಿಂದರಮನೆಯುಂ ಪೊಕ್ಕಾಸ್ಥಾನಮಂಟಪದೊಳಿರ್ದ ವಿದ್ಯುಚ್ಚೋರನಂ ಕಂಡು[9] ಪೊಡೆವಟ್ಟಾತನ ಮುಂದೋಲೆಯನಿಕ್ಕಿದಾಗಳ್ ಸಂಧಿವಿಗ್ರಹಿ ಓಲೆಯುಂ ಕೊಂಡರಸನ ಮುಂದಿಂತೆಂದು ಬಾಚಿಸಿದಂ[10] ವಿದ್ಯುಚ್ಚೋರ ಪರಮಸ್ವಾಮಿಗೆ ಮಂತ್ರಿ ಪುರುಷೋತ್ತಮನುಂ ಪೆರ್ಗಡೆ ವಜ್ರಸೇನನುಂ ಸಾಷ್ಟಾಂಗಮೆಱಗಿ ಪೊಡೆವಟ್ಟು ಕಾರ್ಯಮಂ ಬಿನ್ನವಿ[11]ಪ್ಪರ್ ತಾ[11]ಮುಂ ಪಲವು ದಿವಸಂ ಪೋಗಿರ್ದರ್ ಪೆಱ[12]ತ್ತ[12]ಣ ಮನೆವಾೞ್ತೆಯುಂ ಮಱೆದಿರ್ದರ್ ತಾವಿಲ್ಲದೆ ರಾಜ್ಯ[13]ಮುಂ ಪ್ರತಿಪಾಲಿಸುವೊರಾರುಮಿ[14]ಲ್ಲೀಯೋ[14]ಲೆಯುಂ [15]ಕಾಣಲೊಡಂ[15] ತಡೆಯದೆ ಪೊಱಮಟ್ಟು ಬೇಗಂ ಬರ್ಕೆಂದು ಬಾಚಿಸಿದುದಂ ವಾಮರಥಂ ಕೇಳ್ದು ಮುನ್ನೀತನ ಪೇೞ್ದುದುಮೋಲೆಯುಂ ಮಾತುಮೊಂದಾದುದೆಂದು ಸಂದೇಹಮಿಲ್ಲದಾಗಳ್ ನಂಬಿ ಈತಂ

---

1. ಕಳೆಯ (ಘಚಛ). 2. ರಕ್ಷಿ (ಘಚಛ). 3. ಕ್ರಿ (ಕಖಗ). 4. ಡೆ (ಘ). 5. (ಕಖ)ಗಳ್ಲಿಲ್ಲ. (ಚ)ದಲ್ಲಿ ತ್ರುಟಿತ. 6. ನವಲ (ಘಚಛ). 7. ನಿಕ್ಕ (ಕಖ). 8. ರೊಟ್ಟೆಯನೋಜ (ಘಚಛ). 9. + ಸಾಷ್ಟಾಂಗಮೆಱಗಿ (ಘಚಛ). 10. +ಸ್ವಸ್ತಿಶ್ರೀಮತ್ (ಘಚಛ). 11. ಕ್ಕೆ ಮತ್ತಪ್ಪುದಾ ಆ (ಕಗ). 12. ಗ (ಘಚಛ). 13. +ತಂತ್ರ (ಘಚಛ). 14. ಲ್ಲೆಂದೋ (ಕಖಗ). 15. ಕಂಡಾಕಡೆ (ಘಚಛ).

ಮಂಡಳಿಕನೆಂದಱಿದು ತನ್ನ ಸಿಂಹಾಸನದೊಳೋರಂತಪ್ಪಾಸನಮ[1]ನಿಕ್ಕಲ್ವೇೞ್ದು ರಿಸಿ ಇಂತೆಂದನಿನ್ನ[1] ತಂಗೆಯ ಮಗನಪ್ಪ ಸೋದರಮಾವನಪ್ಪ ನಿನಗೆನ್ನ ಮಕ್ಕಳಂ ಶ್ರೀಮತಿ ವಸುಮತಿ ಗುಣಮತಿ ಸುಲೋಚನೆ ಸುಪ್ರಭೆ ಸುಕಾಂತೆ ಸುಶೀಲೆ ಮನೋಹರಿಯೆಂಬೆಣ್ಬರುಂ ಕನ್ನೆಯರತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯರ್ ನವಯೌವನೆಯರಕ್ಷ[2]ರಾಲೇಖ್ಯ[2] ಗಣಿತ ಗಾಂಧರ್ವ[3] ನೃತ್ಯ[4] ಚಿತ್ರಕರ್ಮ ಪತ್ರಚ್ಛೇದ್ಯಮೆಂದಿನ್ನವು ಮೊದಲಾಗೊಡೆಯ ಚತುಷ್ಷಷ್ಟಿ ಕಲೆಗಳೊಳಾದಮಾನುಂ ಕುಶಲೆಯರ್ ಪರಮಂಡಳಿಕರ್ ಪಲರ್ ಪಾಗುಡಂಗಳುಮೋಲೆಗಳುಂ ಪೆರ್ಗಡೆಗ[5]ಳುಮ[5]ನವರತಂ ಕೂಸುಗಳುಂ ಬೇಡಿ ಯಟ್ಟುತ್ತಿರ್ಪರವರೆಲ್ಲರುಮಂ ನಾಂ ಮೆಚ್ಚದೆ ಕುಡದಿ[6]ನ್ನೆಗಮಿಂತಿರ್ದವರ್ಗಳಂ ತಾಂಗಿ ರ್ದೆನೀ ಕನ್ಯಾರತ್ನಂಗಳೆ ನೀನೆ ಯೋಗ್ಯನಪ್ಪ ನಿನಗೆಣ್ಬರುಮಂ ಕೊಟ್ಟೆನ್ ಮದುವೆಯಂ ಮಾಡಿಕೊಳ್ಳೆಂದೊಡರಸನಿಂತೆಂದನೆನಗೊರ್ವಳ್ಗೆ ಬೇಂಟಂಗೊಂಡಿರ್ದಪನವರಂ ಕೊಂಡೇ ನೆಂದೊಡರಸನಾರ್ಗೆ ಬೇಂಟಂಗೊಂಡಿರ್ದಯೆಂದು ಬೆಸಗೊಂಡೊಡೆ ಮುಕ್ತಿಶ್ರೀ ಯೆಂಬೊಳ್ ಪೆಂಡತಿಗೆ ಬೇಂಟಂಗೊಂಡಿ[7]ರ್ದೆ[7]ನಾಕೆಯುಂ ಮದುವೆ ನಿಲಲ್ವೇೞ್ಕು ಮೆಂದು ಪರಿಚ್ಛೇದಿಸಿ ನುಡಿದು ಮತ್ತಮಿಂತೆಂದನೆನ್ನ ಕೆಳೆಯನೆನಗೊಪ್ಪಿಸಲ್ವೇೞ್ಕು ಮೆಂದೊಡರಸನ[8]ಮೊಪ್ಪಿಸಿದೆನೆಂದೊಡೆ ಅರಸನಂ[8] ಬೀೞ್ಕೊಂಡು ಯಮದಂಡ ಪುರಸ್ಸರಮಿರ್ವರುಮೊಟ್ಟೆಯನೇಱಿ ತುರಿಪದಿಂ ಕತಿಪಯ ದಿವಸಂಗಳಿಂ ಪೋದನಪುರ ಮನೆಯ್ದಿ ಪೊಱಪೊೞಲೊಳಿರ್ದು ಪೇೞ್ದಟ್ಟಿ ಪುರಶೋಭೆಯುಂ ಮಾಡಿಸಿ ಮಂತ್ರಿ ಮಹತ್ತರ ಪರಿವಾರ ಸಾಮಂತ [10]ಮಹಾಸಾಮಂತರುಂ[10] ಪಂಡವಾಸದ ಸೂಳೆಯರುಂ [11]ಪೊೞಲ ಜನಮೆಲ್ಲಮಿದಿರಂ ಬಂದು ಕಂಡು ಪೊಡೆವಟ್ಟು ಸೇಸೆಗಳನಿಕ್ಕಿದ ಬೞಿಕ್ಕೆ ಪಟ್ಟವರ್ಧನಮನಿರ್ವರುಮೇಱಿ ಬೆಳ್ಗೊಡೆ ಮೊದಲಾಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ ಪಂಚಮಹಾಶಬ್ದಂಗಳುಂ ಬದ್ದವಣದ ಪಱೆ[12]ಗ[12]ಳುಂ ಬಾಜಿಸೆ ಅರಮನೆಯಂ ಪೊಕ್ಕು ಮಱುದಿವಸಮಾಸ್ಥಾನಮಂಡಪದೊಳ್ ಸಿಂಹಾಸನಮಸ್ತಕ ಸ್ಥಿತನಾಗಿ ಸಾಮಂತ ಮಹಾಸಾಮಂತರ್ಕಳಂ ಮಂತ್ರಿಮಹತ್ತರ ಪುರೋಹಿತ ಪರಿವಾರದವರ್ಗಳಮರಸಿಯರ್ಕಳಂ ಬರ್ಪೇೞ್ದಟ್ಟಿ ಬರಿಸಿ ಇಂತೆಂದು ನುಡಿದನಾನೀ ಸಂಸಾರದೊಳಪ್ಪ ಭೋಗೋಪಭೋಗಂಗಳ್ಗೆ ಪೇಸಿ ವಿರಕ್ತನಾಗಿ ತಪಂಬಡಲ್ ಬಗೆದಪ್ಪೆನೆಂದೊಡೆನಿಬರುಂ ನೆರೆದಿಂತೆಂದರಿನ್ನುಮಾಪುದು ಕಾಲಂ ತಪಂಬಡಲಿನ್ನುಂ ನೀಂ ಕೂಸನಪ್ಪ ನವಯೌವನನಪ್ಪ ಕೆಲಕಾಲಮರಸುಗೆಯ್ದು ಪಶ್ಚಾತ್ಕಾಲ ದೊಳ್ ತಪಂಬಡಲಕ್ಕುಮೆಂದೊಡರಸನಿಂತೆಂದನೆಂತೞಿಯಲಕ್ಕುಮನ್ನೆಗಂ ಸಾವರೊ ಬಾೞ್ವರೊ ಎಂದೀ ಪ್ರಸ್ತುತಂಗಳನವಗ್ರಾಡಿ ಪೇೞಲ್ ತೊಡಂಗಿದಂ ❀

1. ನೇೞ್ಕಲ್ವೇೞ್ದಿಂತೆಂದು ನೀನೆನ್ನ (ಘಚಛ). 2. ರ ಲೆಕ್ಕ (ಕಗ). 3. + ಗೀತ (ಘಚಛ). 4. + ವಾದ್ಯ (ಘಚಛ). 5. ಳ್ಮ (ಘಚಛ). 6. ಳ್ದನನ್ನೆ (ಕಖಗ). 7. ಳ್ದೆ (ಖ). 8. ಸನೊಪ್ಪಿಸು [illegible] (ಘಚಛ). 9. + ನಗರ (ಘಚಛ). 10. (ಕಖಗ)ಗಳಲ್ಲಿಲ್ಲ. 11. + ಪೊಱ (ಕಖಗ). 12. ಳ್ಮಂ (ಘಚಛ).

**ಶ್ಲೋಕ** ॥ ಬಿಂಬಿಃರ ಬಿಂದು ಸಂಕಾಶಮಾಯುಃ ಸಂಸಾರವರ್ತಿನಾಂ ।
ಆಖಂಡಲಧನುಷ್ಕಾಂಡಸನ್ನಿಭಂ ರೂಪಯೌವನಂ ॥

**ವೃ** ॥ ರೂಪಂ ಯೌವನಮಾಯುರಕ್ಷಕ ವಿಷಯಾ ಭೋಗೋಪಭೋಗಾ ವಪುಃ
ವೀರ್ಯಂ ಸ್ವೇಷ್ಟ ಸಮಾಗಮೋ ವಸುಮತಿಃ ಸೌಭಾಗ್ಯ ಭಾಗ್ಯೋದಯೋ ।
ಯೇಽನಿತ್ಯಾಃ ಸ್ಫುಟಮಾತ್ಮನಃ ಸಮುದಿತಾ ಜ್ಞಾನೇಕ್ಷಿಣಾಂ (?) ಭೂಭೃತಾಂ
ಶೇಷಾ ಇತ್ಯನುಚಿಂತಯಂತು ಸುಧಿಯಃ ಸರ್ವೇ ಸದಾಽನಿತ್ಯತಾಂ ॥

ಯದಿ ಜಾತಿಜರಾಮರಣಂ ನ ಭವೇತ್ ಯದಿ ಚೇಷ್ಟವಿಯೋಗಭಯಂ ನ ಭವೇತ್ ।
ಯದಿ ಸರ್ವಮನಿತ್ಯಮಿದಂ ನ ಭವೇತ್ ಇಹ ಜನ್ಮನಿ ಕಸ್ಯ ರತಿರ್ನ ಭವೇತ್ ॥

ಆದಱಿಂ ಮಾನಸರ ರೂಪುಂ ಯೌವನಮುಂ ತೇಜಮುಂ ಲಾವಣ್ಯಮುಂ ಸೌಭಾಗ್ಯಮುಂ ಆಯುಷ್ಯಮುಂ ಶ್ರೀಯುಂ ಸಂಪತ್ತುಂ [1]ವಿಭವಮುಂ[1] ನಲ್ಮೆಯುಂ ಎಂದಿವು ಮೊದಲಾಗೊಡೆಯುವನಿತ್ಯಂಗಳ್ ಮತ್ತಂ ಮೆಯ್ಯೊಳ್ಳಿತ್ತೆಯೆಂದೊಡದುವುಂ ತೆನಿಂತುಟೆ

**ಗಾಹೆ** ॥ ಏದಂ ಸರೀರಮಸುಚಿಂ ಣಿಚ್ಚಂ ಕಲಿ ಕಲುಸ ಭಾಜಣಮಚೋಕ್ಖಂ ।
ಅಂತೋ[2]ಬಾಹಿರದಿಟ್ಠ[2] (?) ಸಕ್ಕಿಬ್ಬಿಸ ಭರಿದಂ ತು ಅಮೇಜ್ಝಪುರಂ

ರಸಮಜ್ಜ ಮಾಂಸ ಸೋಣಿದಪ್ಪುಪ್ಪುಸ ಕಾಲಿಜ್ಜ ಸೇಮ್ಭ ಸೀಹಾಣಂ
ಬಿಡಜಾಲ ಅಟ್ಠಿ ಸಕಲ (?) ಚಮ್ಮಾಣದ್ಧಂ (?) ಸರೀರಪುರಂ ॥

ಅಟ್ಠಿಹಿ ಛಣ್ಣಂ ಣಾಳಿಹಿ ಬದ್ಧ ಕಲಿಮಲಭರಿದಂ ಕಿಮಿಕುಲಪುಣ್ಣಂ ।
ಮಾಂಸವಿಲಿತ್ತಂ ತಯಪಡಿಛಣ್ಣಂ ಸರೀರಪುರಂತಂ ಸಂತತಮಚೋಕ್ಖಂ ॥

ಏದಾರಿಸೇ ಸರೀರೇ ದುಗ್ಗಂಧೇ ಕುಣಿಮಪೂತಿವಿ ಯಚೋಕ್ಖೇ ।
ಸಡಣಪಡಣಾಯ ಸಾರೇ ರಾಗಂ ಣ ಕರೇಂತಿ ಸಪ್ಪುರಿಸಾ ॥

ಛಾಯೇವ ಸಕದಕ್ಕಖ್ಖುಂ ಅಣುಯಾದಿ ಕಾರಗಂ ಣ ಸೇಸಂ । (?)
ಪಲಾಯಿದುಂ ದುಸ್ಸಕ್ಕಂ ಅಣ್ಣತ್ಥ ಜಿಣಸಾಸಣೇ ॥ (?)

**ಶ್ಲೋಕ** ॥ ದುರ್ಗಂಧೇ ದುರ್ಧರೇ ದುಃಖೇ ದುಃಸ್ವಭಾವೇ ಚ ನಶ್ವರೇ ।
ದುರ್ವಿಲೋಕೇ ವೃಥಾ ಕಾಯೇ ಕಿಂತು ಜ್ಞಾನಿ ತವಾಗ್ರಹಃ ॥

ಅಚ್ಛೇದೋಽನಂತ ಸೌಖ್ಯೋಽಹಂ ವೇತ್ತಾ ಪೂರ್ವೋ ನಿರಂಜನಃ ।
ಸರ್ವದುಃಖಾಕರಂ ದೇಹಂ ತ್ಯಜಾಮ್ಯೇತತ್ ಪರಿಸ್ಫುಟಂ ॥*

**ವೃ** ॥ ಜಾತಿಕ್ಷ್ಮಾಜತತೇ (?) ಕೃತಾಂತ ಕುಪಿತಕ್ರೂರೋರು ದುಃಖಾಪದೇ ।
ವ್ಯಾಧಿ ವ್ಯಾಧಭಯೇ ದುರಂತದುರಿತ ಸ್ಫೂರ್ಜದ್ದವಾಗ್ನಿಚ್ಛದೇ ॥
ನಿಸ್ತ್ರಾಣಸ್ಯ ವಿಚೇತಸೋ ದೃಢತೃಷಾ ದುಃಖಾಕುಳಸ್ಯಾಂಗಿನೋ ।
ಜೈನಂ ಶಾಸನಮೇಕಮೇವ ಶರಣಂ ಜನ್ಮಾಟವೀಸಂಕಟೇ ॥

1. ಬಲ್ಮೆಯುಂ (ಫಘ). (ಚ)ದಲ್ಲಿ ತ್ರುಟಿತ. 2. ಭಾಯಗ ದಿಟ್ಠ (ಕಖಗ), ಅಜ್ಝಾದಿಸದ್ದ (ಘಚಛ). * (ಘಚಛ)ಗಳಲ್ಲಿಲ್ಲ.

ಅದೆಱಿಂ

ವೃ ॥ ಯಾವತ್ ಸ್ವಸ್ಥಮಿದಂ ಶರೀರಮರುಜಂ ಯಾವಜ್ಜರಾದೂರತಃ ।
ಯಾವಚ್ಚೇಂದ್ರಿಯಶಕ್ತಿರಪ್ರತಿಹತಾ ಯಾವತ್ ಕ್ಷಯೋ ನಾಯುಷಃ ॥
ಆತ್ಮಶ್ರೇಯಸಿ ತಾವದೇವ ವಿದುಷಾ ಕಾರ್ಯಃ ಪ್ರಯತ್ನೋ ಮಹಾನ್ ।
ಪ್ರೋದ್ದೀಪ್ತೇ ಭವನೇ ತು ಕೂಪಖನನಂ ಪ್ರತ್ಯುದ್ಯಮಃ ಕೀದೃಶಃ ॥

ಎಂದಿನ್ತು ಮೊದಲಾಗೊಡೆಯವನೋದಿಯದರ್ಥಮುಮಂ ನೆರವಿಗೆಲ್ಲಂ ವಖ್ಯಾಣಿಸಿ ಪೇೞ್ದು ಮತ್ತ[1]ಮಿಂ[1]ತೆಂದಂ

ಕಂ ॥ ಆನಾ[2]ಳ್ದ[2]ನಾಳ್ದಳಿವರೆನ
ಗೇನಾನುಮನಱಿಮ[3]ಮಱೆಯುಮಱದಾಂ[3] ನುಡಿದೆಂ ।
ದೇನಾನುಮೇವಮುಳ್ಳೊಡ
ಮಾ ನುಡಿಯಂ ಮಱೆಯಿಮೆಲ್ಲ[4]ಮಿ[4] ನಿಶ್ಶಲ್ಯಂ

ಗಾಹೆ ॥ ಖಮ್ಮಾಮಿ ಸವ್ವಜೀವಾಣಂ ಸವ್ವೇ ಜೀವಾ ಖಮಂತು ಮೇ ।
ಮೇತ್ತೀ ಮೇ ಸವ್ವಭೂದೇಸು ವೇರಂ ಮಜ್ಝ ಣ ಕೇಣಚಿ ॥

ಎಂದೆಲ್ಲರುಮಂ ಕ್ಷಮೆಗೊಳಿಸಿ ನಿಶ್ಶಲ್ಯಂಗೆಯ್ದು ವಿದ್ಯುದಂಗನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ರಾಜ್ಯಾಭಿಷೇಕಂ ಗೆಯ್ದಾತನಂ ಪಿಡಿದು ನೀಮೆಲ್ಲಂ ಸುಖಂಬಾೞಿಮೆಂದು ಕಲ್ಪಿಸಿ ಯುವರಾಜಂಗಂ ಪೊೞಲ ತಳಾಱಿಕೆಯುಮಂ ಕೊಟ್ಟು ಮಂಗಳ ವಸದನಂಗೊಂಡು ಪಟ್ಟವರ್ಧನಮನೇಱಿ ಸತಿಯರ್ [5]ಸಂಗಡಂ ಬರೆ[5] ಪೆಂಡವಾಸದ ಸೂಳೆಯರಿರ್ಬರ್ [6]ಪೆ[6]ಱಗೇಱಿ ಕೆಲದೊಳಂ ಚಾಮರಂಗಳನಿಕ್ಕುತ್ತುಂ ಬರೆ ಬೆಳ್ಗೊಡೆಗಳುಂ ಪಾಳಿ[7]ಧ್ವಜಂಗಳುಂ [8]ತಱಿಸೆವಟಿಯಿಗೆಗಳುಂ[8] ಚಂದ್ರಾದಿತ್ಯರ್ಕಳುಂ ಸಿಂಹ ವ್ಯಾಘ್ರ ಮಕರ ಮತ್ಸ್ಯಂ[9]ಗಳೆಂ[9]ದಿನ್ತು ಮೊದಲಾಗೊಡೆಯ ರಾಜಚಿಹ್ನಂಗಳ್ ಮುಂದೆ ಪರಿಯೆ ಪಂಚಮಹಾಶಬ್ದಂಗಳುಂ ಬದ್ದವಣದ ಪಱೆಗಳುಂ ಬಾಜಿಸೆ ವಂದಿ ಮಾಗಧ ಯಾಚಕಪ್ರಭೃತಿ[10]ಗಳ್ಗಂ ದೀನಾನಾಥಾಂಧರ್ಕಳ್ಗಂ ತುಷ್ಟಿದಾನಮಂ [11]ಕೊ[11]ಡುತ್ತಂ ಪೋಗಿ ಸಹಸ್ರಕೂಟ ಚೈತ್ಯಾಲಯಮನೆಯ್ದಿ ಪಟ್ಟವರ್ಧನ ದಿಂದಿೞಿದು ಬಸದಿಯಂ ತ್ರಿಃಪ್ರದಕ್ಷಿಣಂಗೆಯ್ದು ದೇವರಂ [12]ವಂ[12]ದಿಸಿ ಗುಣಧರ ರೆಂಬಾಚಾರ್ಯರಂ ಗುರುಭಕ್ತಿಗೆಯ್ದು ವಂದಿಸಿ ಇಂತೆಂದು ಭಟಾರಾ ಸಂಸಾರಮೆಂಬ ಸಮುದ್ರದೊಳ್ ಮುೞುಗುತ್ತಿರ್ದೆನ್ನಂ ಮುೞುಗಲೀಯದೆತ್ತಿಮೆನಗೆ ದೀಕ್ಷೆಯುಂ ಪ್ರಸಾದಂಗೆಯ್ಯಿಮೆಂದು ನುಡಿದೊಡಂಬಡಿಸಿ [13]ಸಾ[13]ಸಿರ್ವರರಸುಮಕ್ಕಳ್ವೆರಸು ಕಟಕ ಕಟಿಸೂತ್ರ ಕುಂಡಲಾಭರಣಾದಿಗಳಂ ಕಳೆದು ಬಾಹ್ಯಾಭ್ಯಂತರ ಪರಿಗ್ರಹ ಮೆಲ್ಲಮಂ ತೊಱೆದು ಗುಣಧರ ಭಟ್ಟಾರರ ಪಕ್ಕದೆ ತಪಂಬಟ್ಟಂ ಮತ್ತೆ ದೇವಗಣಿಕೆಯ

1. ಮಂದಸನಿಂ (ಘಚಛ). 2. ಳ್ದ (ಕಖಗ). 3. ಮಱದೆ (ಕಖಗ). 4. ಮಿಂದು (ಕಖಗ). 5. ಸತ್ತೆಸಂಗಡ (ಕ). ಸತ್ತೆಸಂಗಡ (ಖಗ). 6. ಪೊ (ಕಗ). 7. + ಕೇತನ (ಘಚಛ). 8. (ಘಚಛ)ಗಳಿಲ್ಲ. 9. ಧ್ವಜಂಗಳಿಂ (ಘಚಛ). 10. + ಜನಂ (ಘಚಛ). 11. ಕು (ಚ). 12. ನಿವೇ (ಕಗ). 13. ನಿಘಾರ್ (ಚ).

ಯುರನೆ ಪೋಲ್ವ [1]ಸೌಂದರಿ[1] ಮಹಾದೇವಿ ಮೊದಲಾ[2]ಗೆಯ್ದೂರ್ವರರಸಿಯರ್ಕಳ್ ಗುಣಧರ ಭಟಾರರೆ ಗುರುಗಳಾಗೆ ತಮ್ಮತ್ತೆವಿರಪ್ಪ ವಿಜಯಮತಿ ಕಂತಿಯರ್ ಕಂತಿಯರಾಗೆ ತಪಂಬಟ್ಟು ಗಿಡಿಗಿಡಿಜಂತ್ರ [೦] ಮ[3]ಳಿಮಿಳಿ[3]ನೇತ್ರವಾಗೆ ಘೋರವೀರ ತಪಶ್ಚರಣದೊಳ್ ನೆಗೞುತ್ತಿರ್ದರ್

ಇತ್ತ ವಿದ್ಯುಚ್ಚೋರ ಮುನಿಯುಂ ಪನ್ನೆರಡು ವರ್ಷಂಬರೆಗಂ ಗುರುಗಳ ನಗಲದೆ ದ್ವಾದಶಾಂಗ ಚತುರ್ದಶ ಪೂರ್ವಮಪ್ಪಾಗಮಮೆಲ್ಲಮಂ ಕಲ್ತುಗ್ರೋಗ್ರ ತಪಶ್ಚರಣದೊಳ್ ನೆಗೞುತ್ತುಮಾಚಾರ್ಯರಾಗಿ ಅಯ್ನೂರ್ವರ್ [4]ಶಿಷ್ಯರ್ಕಳ್[4]ವೆರಸು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಪೋಗಿ ಪೂರ್ವದೇಶದೊಳ್ [5]ಖಾಳಿಮಂಡಳ[5]ಮೆಂಬ ನಾಡೊಳ್ ತಾ[6]ಮ್ರಲಿಪ್ತಿಯೆಂ[6]ಬ ಪೊೞಲ ಪೊಱವೊೞಲನೆಯ್ದೆ ದರೆಗಳಲ್ಲಿ [7]ವರಾಂಗನಾ[7]ಯಿಯೆಂ[8]ಬೊಳುಗ್ರ[8] ದೇವತೆಗೞ್ದಿಂಗ[9]ಳಱುದಿಂಗಳ್ಗೆಲ್ಲಾ ಕಾಲಮುಂ[9] ಜಾತ್ರೆಯುಪ್ಪುದಾ ಜಾತ್ರೆ[10]ಗೆ ನಾಡೆಯು[10]ಪ್ಪುದುಯುಂದು ಬಂದು ನೆರೆದು ಜಾತ್ರೆಯುಂ ಮಾಡೆ ದುರ್ಗಾದೇವತೆ ರಿಸಿಯರ ಬರವಂ ಗೞ್ಗೞಿಸಿ[11]ಇರ್ದು ಕಂಡ್ಡಿದಿರಂ ಪೋಗಿ[11] ಇಂತೆಂದಳೆನ್ನ ಜಾತ್ರೆ ಸಮೆವನ್ನೆಗಂ ನೀಮೀ ಪೊೞಲಂ ಪುಗದಿರಿಮೆಂದು ಬಾರಿಸಿದೊಡೆ ಶಿಷ್ಯರ್ಕಳಿಂದರ್ ನಮ್ಮಂ ದೇವತೆಯೀಗೆಯ್ದೆಪ್ಪೊಳ್ ಪೋಪಂ ಭಟಾರಾ ಎಂದು ಭಟಾರರನೊಡಗೊಂಡು ದೇವತೆ ಬಾರಿಸೆವಾರಿಸೆ ಪೊೞಲಂ ಪೊಕ್ಕು ಮತ್ತಿರುಳ್ ಪೊೞಲ ಪಡುವಣ ದೆಸೆಯ ಕೋಂಟೆಯಿಂ ಪೊಱಗಣ ದೆಸೆಯೊಳ್ ವಿದ್ಯುಚ್ಚೋರ ಭಟಾರರ್ ಪ್ರತಿಮಾಯೋಗಂ ನಿಂದೊಡೆ ದೇವತೆ ಮುಳಿದು [12]ಪೊ*ಱ*ಸುಗಳನಿರ್ರಿಯುವು[12] ದಂಸ ಮಸಕಂಗಳಂ ವಿಗುರ್ವಿಸೆ ಮುಯ್ಯೆಲ್ಲಮುನಿರ್ಕ್ಕೆ ನಾಲ್ಕು ಜಾವಮುಂ ತಿನೆ ನರಕ ವೇದನೆಯಿಂದಮಗ್ಗಳಮ ಪೇೞ್ದನಿಯುಪ್ಪಂತುಪಸರ್ಗಂಗೆಯ್ಯೆ ಅಂತಪ್ಪ ದುಃಖಮುಂ ವೇದನೆಯುಮಂ ಮನದೊಳಿಲ್ಲದಂತಿರೆ ಸೈರಿಸಿ[13] ಆಜ್ಞಾವಿಚಯಮಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬೀ ನಾಲ್ಕುಂ ಧರ್ಮಧ್ಯಾನಂಗಳಂ ಧ್ಯಾನಿಸಿ ಬೞಿಕ್ಕೆ ಪೃಥಕ್ತ್ವ ವಿತರ್ಕವೀಚಾರಮೆಂಬ ಪ್ರಥಮ ಶುಕ್ಲಧ್ಯಾನಮಂ ಧ್ಯಾನಿಸುತ್ತಂ ಕ್ಷಪಕಶ್ರೇಣಿಯನೇಱಿ ಏಕತ್ವವಿತರ್ಕವೀಚಾರ ಸೂಕ್ಷ್ಮಕ್ರಿಯಾಪ್ರತಿಪಾತಿ ಸಮುಚ್ಛಿನ್ನ ಕ್ರಿಯಾನಿವೃತ್ತಿಯೆಂಬ ಶುಕ್ಲಧ್ಯಾನಂಗಳಂ ಧ್ಯಾನಿಸಿ ಘಾತಿಕರ್ಮಂಗಳಂ ಕಿಡಿಸಿ ಅಂತರ್ಗತಕೇವಳಿಯಾಗಿ ಅಘಾತಿಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ವೋದರ್[14]

---

1. ವಸುಂಧರೆ (ಘಚಫ). 2. ಗಯ್ದು (ಘಚಫ). 3. ಳಮಿಳ (ಘಚಫ). 4. ರುಷಿಯರ್ (ಘಚಫ). 5. ಮಂದರ (ಕ). ಮಂಡಳ (ಖಗ). 7. ಮಲಿಪ್ತಮಂ (ಘಚಫ). 7. ಯುವಂಗಾ (ಘಚ), ಯುವರುಗಾಯಿ (ಛ). 8. ಬಯುಗ್ರ (ಘಚಫ). 9. ಳ್ವರಂ (ಘಚ). ಳ್ವರೆಗಂ (ಛ). 10. ಗಃ ನಾಡಪ್ಪುದು (ಘಚಫ). 11. ಳ್ ಕಂಡಿದಿರ್ವೋಗಿ (ಘಚಫ). 12. ರುಷಿಯರ್ಗೆ (ಘಚಫ). *ರ (ಕಖಗ). 13. + ಸಮ್ಯಗ್‌ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ (ಘಚಫ). 14. + ಉಳಿದ ಯ್ನೂರ್ವರ್ ರುಷಿಯರ್ಕಳುಮುಪಸರ್ಗಂಗಳಂ ಸೈರಿಸಿ ಸಮ್ಯಗ್‌ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ ಸ್ವರ್ಗಂಗಳನೆಯ್ದಿದರ್ (ಘಚಫ).

# (೧೪) ಗುರುದತ್ತ ಭಟಾರರ ಕಥೆ

ಗುರುದತ್ತ ಭಟಾರರ ಕಥೆಯಂ ಪೇೞ್ವೆಂ :

**ಗಾಹೆ ॥** ಹತ್ಥಿಣಪುರ ಗುರುದತ್ತೋ ಸ*[ಮ್ಮಾಲಿ]*[1]ಥಾಳೀವ[1] ದೊಣ್ಣಿಮಂತಮ್ಮಿ ।
ದಜ್ಝಂತೋ ಅಡಿಯಾಸಿಯ ಪಡಿವಣ್ಣೋ ಉತ್ತಮಂ ಅಟ್ಠಂ ॥

[ಹತ್ಥಿಣಪುರ—ಹಸ್ತಿನಾಪುರಮುಮಂ ಪುಂಸ್ನಾ[2]ಳ್ವ[2], ಗುರುದತ್ತೋ—ಗುರುದತ್ತ ರಿಸಿ, ಸ* [ಮ್ಮಾಲಿ]*ಥಾಳೀವ—[3]ಸೂಡಿವೊತ್ತಿಸೆಪಟ್ಟನಂತೆ,[3] ದೊಣ್ಣಿಮಂತಮ್ಮಿ—ದೋಣಿಮಂತಮೆಂಬ ಪರ್ವತದ ಸಾರೆ, ದಜ್ಝಂತೋ—ಬೇಯುತ್ತಿರ್ದೊನಾಗಿ, ಅಧಿಯಾಸಿಯ—[4]ಉ[4]ಪಸರ್ಗಮಂ ಸೈರಿಸಿ, ಪಡಿವಣ್ಣೋ—ಪೊ[5]ರ್ದಿ[5]ದೊಂ, ಉತ್ತಮಂ ಅಟ್ಠಂ—ಮಿಕ್ಕ ದರ್ಶನಜ್ಞಾನಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ [6]ಕುಣಾಳ[6]ಮೆಂಬುದು ನಾಡಲ್ಲಿ ಸಾವಸ್ತಿಯೆಂಬುದು ಪೊೞಲದನಾಳ್ವೊನುಪರಿಚರ[7]ನೆಂಬೊನರಸನಾತನ ಮಹಾದೇವಿಯರ್ ಪದ್ಮಾವತಿ ಅಮಿತಪ್ರಭೆ ಸುಪ್ರಭೆ ಪ್ರಭಾವತಿ ಅಂತು ನಾಲ್ವರುಂ ಮಹಾದೇವಿಯರ್ ಮೊದಲಾಗಿ ಅರಸಿಯರ್ಕಳಯ್ನೂರ್ವರ್ ಪದ್ಮಾವತಿ ಮಹಾದೇವಿಯ ಮಗನನಂತವೀರ್ಯನಮಿತಪ್ರಭೆಯ ಮಗಂ ವಜ್ರಪಾಣಿ ಸುಪ್ರಭೆಯ ಮಗಂ ವಜ್ರಬಾಹು ಪ್ರಭಾವತಿಯ ಮಗಂ ವಜ್ರ[8]ಧ[8]ರನಿಂತೀ ನಾಲ್ವರುಂ ಮಹಾದೇವಿಯರ ಮಕ್ಕಳ್ ಉೞಿದರಸಿಯರ ಮಕ್ಕಳಯ್ನೂರ್ವರಂತವರ್ಗ[9]ಳಿ[9]ಷ್ಟ ವಿಷಯ ಕಾಮಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತೊಂದು ದಿವಸಂ ವಸಂತಕಾಲದೊಳ್ ಅಂಕುರಿತ ಪಲ್ಲವಿತ ಕೋರಕಿತ ಕುಸುಮಿತ ಫಲಿತಮಪ್ಪ ಮನೋಹರೋದ್ಯಾನಕ್ಕಯ್ನೂರ್ವರರಸಿಯರ್ಕಳು[10]ಮಣುಗರ್ಕಳುಂ[10] ಬೆರಸು ಪೋಗಿ ಮಹಾವಿಭೂತಿಯಿಂ ವನಕ್ರೀಡೆಯಂ ಪಿರಿದುಂ ಬೇಗಮಾಡಿ ಬೞಿಕ್ಕಾನಂದನವನದೊಳಗಣ ಸುದರ್ಶನಮೆಂಬ ಮಣಿಕುಟ್ಟಿಮಮಪ್ಪ [11]ಬೊಡ್ಡಣ[11] ಬಾವಿಯೊಳ್ ಕರ್ಪೂರ ಕಾಳಾಗರು ತುರುಷ್ಕ ಕುಂಕುಮ ಚಂದನಾದಿ ಸುಗಂಧ ದ್ರವ್ಯಂಗಳಿಂ ಬೆರಸೆ ಪಟ್ಟುದಜಳೊಳ್ ಮತ್ತಂ [12]ನೀಲೋತ್ಪಲ ಕುವಳಯಂ ಮೊದಲಾಗೊಡೆಯ ನಾನಾ ಪ್ರಕಾರದ ಪುಷ್ಪಜಾತಿಗಳಿಂದಂ ಸಂಛನ್ನಮಪ್ಪುದ[13]ಜಳೊಳ್ ಚಕ್ರವಾಕ ಬಕ

---

* ಪ್ಪಾಳಿ (ಸ). 1. ತಾಳಿರ (ಕಖಗ), ದಾಳಿವ (ಘಚ), ದಾಳಿದ (ಛ). 2. ಳ್ವ (ಗ), ಳ್ದನಾಗಿ (ಘಚಛ). 3. ಕವೆಲೆಪೊಲು (ಕಗ), ಕವಿಲೆಪ್ಪೊಲ್ (ಖ). 4. ಅಮನುಷ್ಯೋ (ಘಚಛ). 5. ಳ್ದ (ಕಖಗ). 6. ಕುಣಾಣ (ಕಗ), ಕಣಾಳ (ಖ), ಕುಳಾಳ (ಘಚಛ). 7. + ಮಹಾರಾಜ (ಘಚಛ). 8. ದ (ಘಚಛ). 9. ಳಿಲ್ಲದು (ಘಚ). 10. ಮನಿಬರ್ ಮಕ್ಕಳುಂ (ಕಖಗ). 11. ಒದ್ದ (ಕಗ), ಪೊದ್ದ (ಖ), ಬೊಂದಣ (ಘಛ). 12. + ಪದ್ಮ (ಛ). 13. + ದ.

ಬಳಾಕ ಹಂಸ ಮಂಡೂಕ ಜೀವಂ ಜೀವಕ ಚಕೋರಾದಿ ಜಲಚರವಿಹಂಗ ಸಮೂಹಂಗಳನೊಡೆಯುದ[1]ಜೊಳ್ ಸಾಲ್ವರುಂ ಮಹಾದೇವಿಯರ್ವೆರ[2]ಸೊಂದೊ[2]ರ್ವರಂ ನಾನಾ ಪ್ರಕಾರದ ಯಂತ್ರಂಗಳಿಂದಂ ಜೀರ್ಕೊಳವಿಗಳಿಂದಂ ತಳಿಯುತ್ತಂ ನೀರ್ಗಳಂ ಸೂಸುತ್ತಂ ಜಲಕ್ರೀಡೆಯುಂ ಮನಕ್ಕೆ[3]ವಂದ[3]ರಸಿಯರ್ಕಳೊಡನೆ ನೀಡುಂ ಬೇಗಮಾಡುತ್ತಿರ್ಪನ್ನೆಗಂ

ಮತ್ತಿತ್ತ ವಿಜಯಾರ್ಧ ಪರ್ವತದ ಉತ್ತರ ಶ್ರೇ[4]ಣಿ[4]ಯೊಳಳಕಾಪುರಮೆಂಬುದು ಪೊೞಲದನಾಳ್ವೊಂ ವಜ್ರದಾಡನೆಂಬ ವಿದ್ಯಾಧರನನೇಕ ವಿದ್ಯಾ[5]ಬಲ[5]ಗರ್ವಿತನಾತನ ಮಹಾದೇವಿ ಮದನವೇಗೆಯೆಂಬೊಳಂತವರಿರ್ವರುಮೊಂದು ದಿವಸಂ ರಮ್ಯ ಪ್ರದೇ ಶಂಗಳೊಳ್ ಕ್ರೀಡಿಸಲ್ವೇಡಿ ಭೌಮವಿಹಾರಕ್ಕೆಂದು ವಿಚಿತ್ರಮಾಗುತ್ತಿರ್ದ ವಿಮಾನಮ ನೇಱಿಯಾಕಾಶಪಥದೊಳ್ ಪೋಗುತ್ತಿ[6]ರ್ದವರ್ಗಳ್[6] ದೇವಸಮಾನರಪ್ಪ ಸಾಮಂತ ಮಹಾ ಸಾಮಂತರ್ಕಳಿಂದಂ ದೇವಗಣಿಕೆಯು[7]ರಪ್ಸರೆಯರ್ಕಳಂ[7] ಪೋಲ್ವಯಿರ್ಪ್ಪರ್ ರರಸಿಯರ್ಕಳಿಂದಂ ಪೆಂಡವಾಸ[8]ದೆಳವೆಂಡಿರಿಂ[8]ದಂ ಪರಿವಾರ ಜನಂಗಳಿಂದಮಿಂತು ದಿವ್ಯಮಪ್ಪ [9]ಸ[9]ಭೆಯಿಂದಂ ಪರಿವೇಷ್ಟಿತನಾಗಿ ಪಟು ಪಟಹ ಪಣವ ತಂಣವ ಭಂಭಾ ಮರ್ದಳ ಝಲ್ಲರಿ ಮುಕುಂದ ಶಂಖ ವಂಶ ತಾಳ ಭೇರೀ ಮೃದಂಗ ವೀಣಾ[10] ಕಹಳಾದಿ ನಾನಾ ಪ್ರಕಾರದ ತೂರ್ಯ[11]ಧ್ವನಿ[11]ಗಳ್ ದೇವದುಂದುಭಿ ಮೊೞಗುವಂತೆ ಘೋರ್ಗರೆದು ಮೊೞಗೆ ಮಹಾ ವಿಭೂತಿಯಿಂದಂ ಜಲಕ್ರೀಡೆಯನಾಡುತ್ತಿರ್ಪ ಪರಿಚರ ಮಹಾ[12]ನೃಪತಿಯು[12]ನಿರ್ವರುಂ ಕಂಡು ವಿಮಾನಮಂ ನಿ[13]ಱಿಸಿ ನೀಡುಂ [14]ಬೇಗಂ[14] ನೋಡಿ ಮದನವೇಗೆಯಿಂತೆಂದಳ್ ನಾ[15]ಮಾ[15]ಕಾಶದೊಳ್ ಕಾಗೆಗಳಂತಿರೆ ಪಾಱುವನಿತಲ್ಲದೆ ನಮ[16]ಗಿನಿತು[16] ವಿಭವಮು[17]ಮೈಶ್ವರ್ಯ[17]ಮುಂಟೆ ಶ್ರೀಯೊಳಂ ರೂಪಿನೊಳಂ[18] ವಿಭವದೊಳಂ[19] ನಾನಾ ಪ್ರಕಾರದ ವಿನೋದಂಗಳಿಂದಮುಪರಿಚರ ಮಹಾರಾಜನಿಂದಗ್ಗಳಂ ಪೆಱರಾರುಮಿಲ್ಲಮಿ ಸಂಸಾರದೊ[20]ಳ್ ಬರ್ದ ಬಾೞ ನೀ[20]ತನೆ ಬರ್ದನೆಂದು ಪೊಗೞ್ದೊಡೆ ವಜ್ರದಾಡಂ ಕೇಳ್ದು [21]ಮನದೊಳ್[21] ಮು[22]ಳಿ[22]ದು ಪುರುಡಿಸಿ ತನ್ನ ಪೊೞಲ್ಗೆ ಪೋಗಿ ಮದನವೇಗೆಯನಲ್ಲಿಟ್ಟು ತಾನೊರ್ವನೆ ವಿಮಾನಮನೇಱಿ ತುರಿಪದಿಂ ಬಂದು ಜಳಕ್ರೀಡೆಯನಾಡುತ್ತಿರ್ಪ್ಪುಪರಿಚರ ಮಹಾ ನೃಪತಿಯ ಮೇಗೆ ವಿದ್ಯೆಯಿಂದಂ ವಿಗುರ್ವಿಸಿ ಪಿರಿದೊಂದು ಶಿಲೆಯನೆತ್ತಿಕೊಂಡು [22]ಬಂದು ಮಣಿಕುಟ್ಟಿಮಮಪ್ಪ ಸುದರ್ಶನಮೆಂಬ ಬಾವಿಯ ಬಾಗಿಲೆಲ್ಲಮಂ ನಿಶ್ಛಿದ್ರಮಾಗಿ ಮುಚ್ಚಿ ಕವಿದಿಕ್ಕಿ ಪೋದಂ[23] ಪೋದೊಡೆ ಪದ್ಮಾವತಿ ಮೊದಲಾ

1. + ದ (ಕಖಗ). 2. ಸು ಹಿರೊ (ಕಖಗ). 3. ಮೆಚ್ಚುವ (ಘಚಛ). 4. ಶ್ರೇ (ಘಚಛ). 5. (ಛ)ದಲ್ಲಿಲ್ಲ. 6. ರ್ದಾಗಳ್ (ಘಚಛ). 7. ರುಮಪ್ಸರೆಯರ್ಕಳಂ (ಖ). ರಿಗೆ ಸಮಾನೆಯರಪ್ಪ ತರುಣಿಯರ್ಕಳಂ (ಛ). 8. ದ ಪಲಬರು ಮೊಳ್ವೆಂಡಿರ್ಕಳಿಂ (ಖಘಛ), ದ ಪಲಬರೊಳ್ವೆಂಡಿರ್ಕಳಿಂ (ಛ). 9. ಶೋ (ಘಚಛ). 10. + ಜಂಗುಘಂಟಾ (ಘಚಛ). 11. ರವಂ (ಖಘಚಛ). 12. ರಾಜನ (ಘಚಛ). 13. ಲಿ (ಘಚಛ). 14. (ಘಚಛ)ಗಳಲ್ಲಿಲ್ಲ. 15. ವಾ (ಕಗ). 16. ಗಿಂತಪ್ಪ (ಘಚಛ). 17. (ಚಛ)ಗಳಲ್ಲಿಲ್ಲ. 18. + ತೇಜದೊಳಂ (ಘಚಛ). 19. + ಮೈಶ್ವರ್ಯದೊಳಂ (ಘಚಛ). 20. ಳ (ಘಚಛ). 21. (ಘಚಛ)ಗಳಲ್ಲಿಲ್ಲ. 22. ನಿ (ಘಚಛ). 23. (ಚ)ನಲ್ಲಿ ತ್ರುಟಿತ.

ಗೊಡೆಯ ನಾಲ್ವರ್ ಮಹಾದೇವಿಯರುಂ ಮೋಹಿಸದ ಬುದ್ಧಿಯನೊಡೆಯರಧಿಗತ ಸಮ್ಯಗ್ದೃಷ್ಟಿಗಳ್ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಯಾವಜ್ಜೀವಂ ನಿವೃತ್ತಿಗೆಯ್ದು ಪಂಚನಮಸ್ಕಾರಮನುಚ್ಚಾರಿಸುತ್ತಂ ದೇವರಂ [1]ಜ್ಞಾ[1]ನಿಸುತ್ತಂ[2] ದರ್ಶನಜ್ಞಾನಚಾರಿತ್ರಂಗಳನಾರಾಧಿ[3]ಸಿ ಮುಡಿಪಿ[3] [4]ಸೌಧರ್ಮಕಲ್ಪದೊಳ್ ಸ್ವಸ್ತಿಕಾವರ್ತಮೆಂಬ ವಿಮಾನದೊಳೊಂದು ಸಾಗರೋಪಮಮಾಯುಷ್ಯಮನೊಡೆಯರ್ ಸಾಮಾನಿಕ ದೇವರಾಗಿ ನಾಲ್ವರುಂ ಪುಟ್ಟಿದರ್ ಮತ್ತುಪರಿಚರ[5]ನಪ್ಪರಸಂ[5] ಮಿಥ್ಯಾದೃಷ್ಟಿಯಪ್ಪುದಱಿಂ ತನ್ನುದ್ಯಾನವನದೊಳ್ ರಾಜ್ಯವಿಭೂತಿಯೊಳಾದಮಾನುಂ ಮೋಹಿ[6]ಸಿ[6]ದ ಬುದ್ಧಿಯನೊಡೆಯನಾರ್ತಧ್ಯಾನದಿಂ ಸತ್ತು ತನ್ನ ಮನೋಹರೋದ್ಯಾನವನದೊಳ್[7] ಪೆರ್ವಾವಾಗಿ ಪುಟ್ಟಿದಂ

ಮತ್ತೆರಡನೆಯ ದಿವಸದಂದು ಸಾಮಂತ ಮಹಾಸಾಮಂತರ್ಕಳುಂ ಪರಿವಾರಮುಂ ನೆರೆದು ಅನಂತವೀರ್ಯನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ[8]ದರ್ ಮೂಱ[8]ನೆಯ ದಿವಸದಂದು ಸಾರಸ್ವತರೆಂಬಾಚಾರ್ಯರವಧಿಜ್ಞಾನಿಗಳಯ್ನೂರ್ವರ್ ರಿಸಿಯರ್ವೆರಸು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಆ ಪೊೞಲ್ಗೆ ವಂದು ಮನೋಹರಮೆಂಬ ನಂದನವನದೊಳಗಣ ಸ್ಫಟಿಕಶಿಲಾತಳದ ಮೇಗಿರ್ದೋರಂ ರುಷಿನಿವೇದಕಂ ಕಂ[9]ಡು ಬಂದ[9] ನಂತವೀರ್ಯ ನೃಪತಿಗೆ ಪೇೞ್ದೊಡಾತನಂ [10]ಸಪರಿವಾರಂ[10] ಭಟಾರರಲ್ಲಿಗೆ ವಂದನಾಭಕ್ತಿಗೆ ಪೋಗಿ ಬಲಗೊಂಡು ಗುರುಭಕ್ತಿಗೆಯ್ದು [11]ವಂದಿಸಿಯುೞಿದ ರಿಸಿಯರೆಲ್ಲರು[11]ಮಂ ಗುರುಪರಿಪಾಟಿಯಿಂದಂ ವಂದಿಸಿ ಪಿರಿದುಬೇಗಂ ಧರ್ಮಮಂ ಕೇಳ್ದು [12]ಬೞಿ[12]ಕಿಂತೆಂದು ಬೆಸಗೊಂಡಂ ಭಟಾರಾ ಎಮ್ಮ ತಂದೆಗಂ ತಾ[13]ಯ್ವಿರ್ಕ[13]ಳ್ಗ ಮಾಕಸ್ಮಿಕಮೊರ್ಮೊದಲನಿರ್ಗಮೋ ಕಾರಣಂ ಸಾಮಾಮುದಾರ್ ಕೊಂದರೆಂ[14]ದು ಬೆಸಗೊಂಡೊ[14]ಡೆ ಭಟಾರರಿಂತೆಂದು ಪೇೞ್ದರ್ ಸಂವರ್ತನಮೆಂ[15]ಬ ಬೊಡ್ಡಣ ಬಾ[15]ವಿಯೊಳ್ ನಿಮ್ಮ ತಂದೆಯುಂ ನಾಲ್ವರ್ ತಾಯ್ವಿರ್ಕಳುಂ ಜಳಕ್ರೀಡೆಯನಾಡುತ್ತಿ[16]ರ್ಪನ್ನೆಗಂ ಭೌಮವಿಹಾರಾರ್ಥಂ[16] ವಿಮಾನಮನೇಱಿ ಪೋಗುತ್ತಿರ್ದ ವಜ್ರದಾಡನೆಂಬ ವಿದ್ಯಾಧರನುಮಾತನ ಮಹಾದೇವಿ ಮದನವೇಗೆಯುಂಬೊಳಾಯಿರ್ವರುಂ ಕಂಡು ನಿಮ್ಮ ತಂದೆಯ ವಿಭವಮಂ ಮದನವೇಗೆ ಪೊಗೞ್ದೊಡೆ ವಜ್ರದಾಡಂ[17] ಪುರು[18]ಡು ಪುಟ್ಟಿ ಬಾವಿಯ ಬಾಗಿಲಂ[18] ನಿಶ್ಛಿದ್ರಮಾಗಿ [19]ಮುಚ್ಚಿ ಪೋಗೆ[19]

---

1. ಧ್ಯಾ (ಖಘಚಛ). 2. + ಸಮ್ಯಗ್ (ಘಚಛ). 3. ಸುತ್ತಂ (ಕಖಗ). 6. + ಸಮಾಧಿವಿಧಿಯಿಂ ಮುಡಿಪಿ (ಚ). 5. ಮಹಾರಾಜಂ (ಘಚಛ). 6. ಇ (ಕಖಗ). 7. +ಸಂಮೂರ್ಛಿಮಂ (ಘ), ಸಂಮೂರ್ಚಿಮಂ (ಚಛ). 8. ಮತ್ತೆರಡೆ (ಕಖಗ). 9. ಡ (ಘಚಛ). 10. ಪರಿವಾರಂ ಬೆರಸು (ಘಚಛ). 11. ಇನ ರುಷಿಯರುಮುದಾಯಮುಂ (ಘಚಛ). 12. ತದನಂತರಮಿಂ (ಘಚಛ). 13. ಯ್ಗಂ ಮಕ್ಕ (ಛ). 14. ದೊ (ಘ). ದ (ಚಛ). 15. ಬೊಡ್ಡ ಬಾ (ಕ), ಬೊಡ್ಡಣ ಬಾ (ಖ). ಬ ಬೊಡ್ಡ ಬಾ (ಗ), ಬೊಡ್ಡಣ ವಾ (ಘಚ). ಬೊಡ್ಡಣ ಬಾ (ಛ). 16. ರ್ಪಲ್ಲಿ ನಿಮ್ಮ ತಂದೆಯ ವಿಭವಮಂ (ಕಖಗ). 17. +ಗೆ (ಕಖಗ). 18. ದಿಂ (ಘಚಛ). 19. ಮುಚ್ಚಿ ಪೋಗೆ (ಕ), (ಘಚಛ)ಗಳಲ್ಲಿಲ್ಲ.

ರಾಜ್ಯಾಭಿಷೇಕಂಗೆಯ್ದು ಪಟ್ಟಂಗಟ್ಟಿ [1]ಮಹಾ[1]ಪದ್ಮನರಸಿ ಚಂದ್ರಮತಿ ಮಹಾದೇವಿಯುಂ ಚಂದ್ರಭುಕ್ತಂಗೆ ಮಹಾದೇವಿಮಾಡಿ ಮತ್ತೆ ನಂದನ[2] ಭಂ*ಡಾರದೊಳಂ ತ[3]ಮ್ಮ[3] ಭಂಡಾರದೊಳಂ ದ್ರವ್ಯಮಿಲ್ಲದುದನಱಿದು ಪಾ[4]ಟಳೀಪುತ್ರದ[4] ಪ್ರಜೆಗಳಂ ನಾಡ ಪ್ರಜೆಗಳಂ ಬಱಿಯ[5]ಟ್ಟಿ ಬರಿಸಿ[6]ಯ[6]ವರ್ಗೆಲ್ಲಮುಣಿಸಂ ಮಾಡಿ ಸೊರ್ಕಪ್ಪಾಹಾರಮನೂಡಿ [7]ನಿಮ್ಮ ನಿಮ್ಮ ದ್ರವ್ಯಂಗಳಿರ್ದೆಡೆಯಂ ತೋಱಿಮೆಂದು[7] ಬೆಸಗೊಂಡೊಡವರ್ಗಳ್ ಸೊರ್ಕಿ ಮೆಯ್ಯಱಿಯದನಿಬರುಂ [8]ತಂ[8]ತಮ್ಮ ದ್ರವ್ಯದ[9]ಡೆಗಳಂ ತೋಱಿ[10] ಪೇೞ್ದು ಕೊಟ್ಟರಿಂತನೇಕ ಸಹಸ್ರಕೋಟಿ ದ್ರವ್ಯಮಂ ಚಾಣಾಕ್ಯಂ ಪಡೆದು ಚಂದ್ರಭುಕ್ತಂಗೆ [11]ತೋಱಿ[11] ಭಂಡಾರಮಂ ತೀವಿಯರಮನೆಯ ಮುಂದಣಂಗಣದೊ[12]ಳ್ ಇಂ[12]ತೆಂದು ಪೇೞ್ದಾಡಿದಂ ಪನ್ನೆರಡು ವರ್ಷ[13]ದಿಂದಂ[13] ನಂದನ ವಂಶಮಂ ನಿರ್ಮೂಲಂ[14] ಮಾಡಿ ಕಿಡಿಸುವೆನೆಂದೆನ್ನ ಪೂಣ್ದ ಪ್ರತಿಜ್ಞೆ[15]ನೆಱೆದತ್ತು ಮ[16]ತ್ತೆನಗೆ ಜಾದಿನೊಳೂಡಿದವೆ[16]ರಡು ವಸ್ತ್ರಮೊಳವು ಪೊನ್ನ ಗುಂಡಿಗೆ[17]ಯುಮುಂಟು ಮೂಱುದಂಡಮುಮೊಳವು[17] ಮಗಧೆನಾ[18]ಡ[18] ದ್ರವ್ಯಮೆಲ್ಲಮಂ ತಂದು ಭಂಡಾರಮಂ ತೀವಿದೆಂ ಗುಣವಿಶೇಷಮನಱಿವರಸನುಮೆನಗೆಬಸ[19]ಮಾದಂ[19] ಪೊಡೆಪಱಿಯನೆಂದು ಪೆಱಿಯಂಪೊ[20]ಯ್ಸಿ[20]ಯೊಸೆದು ರಾಗಿಸಿ ತ್ರಿದಂಡಮನೆತ್ತಿ ಸೊರ್ಕಿದ ಪ್ರಜೆವೆರಸು [21]ಲಟಹ[21]ದಿಂದಾಡಿದೊಂ ಮತ್ತಂ ಶ್ರೀಪರ್ವತದೊಳಿರ್ದ ತನ್ನ [22]ಪಾರ್ವಂ[22]ತಿ ಯಶೋಮತಿಗೆ ಬಱಿಯಟ್ಟಿ ಬರಿಸಿಯಾಕೆಯೊಡನೆ ಭೋಗೋಪಭೋಗಂಗಳನನುಭವಿಸುತ್ತಂ ಸಾಮಂತ ಮಹಾಸಾಮಂತರ್ಕ[23]ಳ್ಗಂ ಜೀವಿತಂ[23]ಗೆಯ್ದು ತಳವರ್ಗ[24]ಮುಮಂ ಸಂತ[25]ವಿಸಿ[25] ಮಗಧವಿಷಯಮನಾಳುತ್ತಮಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತುಂ ಪಲಕಾಲಂ ಸಲೆ

ಮತ್ತಂ ಚಂದ್ರಮತಿ ಮಹಾದೇವಿಗೆ ಗರ್ಭಮಾಗಿಯೊಂದು ದಿವಸಂ ರಥಮನೇಱಿದೊಡಾ ರಥದ ಚ[26]ಕ್ರದ ಪತ್ತುಂ ಕೆ[ದಿರ್ಗ]ಳ್ ನೆಲದೊಳದುರ್[26]ದಂ ಚಾಣಾಕ್ಯಂ ಕಂಡೀ ಚಂದ್ರ[27]ಭುಕ್ತಂ[27] ಮೊದಲಾಗಿ ಪೃಥ್ವಿಯನೇಕಚ್ಛತ್ರಚ್ಛಾಯೆಯಿಂ ದಶಮಯೂರರ್ಕಳಾಳ್ವರೆಂದಾದೇಶಂಗೆಯ್ದಂ ಮತ್ತೆ ಕೆಲವು ದಿವಸದಿಂ ಚಂದ್ರಮತಿ ಮಹಾದೇವಿಗೆ ನವಮಾಸಂ[28]ನೆಱೆದೊಂ[28]ದುದಿವಸ ಮರಸಂನಂಜಿನೊಳ್ ಬೆರಸಿದಾಹಾರಮನುಣ್ಬಾಗಳ್ ಪಕ್ಕದಿರ್ದರಸಿಗೆ ಅರಸನೊಡನು[29]ಣ್ಬ[29] ಬಯಕೆ

---

1. (ಘಛ)ಗಳಲ್ಲಿಲ್ಲ. 2. + ಸ (ಕಖಗ). *(ಛ) ಪ್ರತಿ ಇಲ್ಲಿಗೆ ನಿಂತುಹೋಗಿದೆ (ಓಲೆ ೧೮೦) ; ಅಸಮಗ್ರ. 3. ನ್ನ (ಘ). 4. ಳಿಪ (ಘ). 5. + ಸ (ಘ). 6. ಮ (ಕಖಗ). ಪೇಳಿಪೇಳಿಂ ನಿಮ್ಮ ದ್ರವ್ಯಗಳನೆಂದು (ಘ). 8. (ಕಗ)ಗಳಲ್ಲಿಲ್ಲ. 9. + ಲ್ಲೆ (ಕಗ). 10. + ಯುಂ (ಘ). 11. (ಘ)ದಲ್ಲಿಲ್ಲ. 12. ಳಿರ್ದಂ (ಘ). 13. ದಂದಿಂಗೆ (ಘ). 14. + ನ (ಕಖಗ). 15. + ಯುಂ (ಖ). 16. ತ್ರಮೆನೆಗೆ ವಾದಿಸೊಳ್ಕೂಡಿದೆ (ಘ). 17. ಯುಂ ಮೂಱು ದಂಡಮುಮುಂಟು (ಘ). 18. ಡೊಳುಳ್ಳ (ಘ). 19. ದನೊಸೆದನೊಳಂ (ಘ). 20. ಡೆಯಿಸಿ (ಘ). 21. ಲ್ಲಹ (ಘ). 22. ಪೆಂಡ (ಘ). 23. ಳಂಜಿಬೆಸಂ (ಕಗ). 24. + ಳ (ಘ). 25. ಯ್ಸಿ (ಘ). 26...ಕದ್ದಿರ್ಗಗಳ್...(ಕಖಗ), ಕ್ರಂ ಪತ್ತುಂ ಕಡಿಯಾಗಿ ನೆಲಸೊಳ್ ಬಿದ್ದೊಡ (ಘ). 27. ಗುಪ್ತಂ (ಖ). 28. ತೀವಿಯೊಂ (ಕಗ). 29, ಣಲ್ (ಖ).

ಯಾದೊಡೆ ಬಾಳಂಕಿಟ್ಟು ಇರ್ದ[1]ರ್ದು ಪಕ್ಕದಿರ್ದ[1] ಚಾಣಾ[2]ಕ್ಯನ[2] ದೃಷ್ಟಿ[3]ಯಂ ಬಂಚಿ[3]ಸಿ ಪ್ರಚ್ಛನ್ನದಿಂದಂ ತನ್ನ ಕೆಯ್ಯ ತುತ್ತನರಸಂ ವಿಷಮಿಶ್ರಮೆಂದಱಿಯದೆ ಕೊಟ್ಟನದ[4]ನಾ[4]ಕೆ ಬಾಯೊಳಿಟ್ಟಾಗ[5]ಳ[5] ಚಾಣಾಕ್ಯಂ ಕಂಡು ತಲೆಯಂ[6]ಪೊ[6]ಗಿಱಿದು ಬಸಿಱಂ ಪೋೞ್ದು ಕೂಸಂ ಪೂಱಮಡಿ[7]ಸುವು[7]ದಂ ಕಂ[8]ಡು ಹಾ [9]ಅಯ್ಯೋ[9] ಎನ್ನ ಚಂದ್ರಮತಿ ಮಹಾದೇವಿ ಎನ್ನ ನಲ್ಲಳೆಯೆಂದು ಪ್ರಳಾಪಂಗೆಯ್ದು ದುಃಖಾಕ್ರಾಂತನಾಗಿ ತದ್ವಿಯೋಗದಿಂ ಚಂದ್ರಗುಪ್ತಂ ಪ್ರಾಣ ಪರಿತ್ಯಾಗಂಗೆಯ್ದು ಮತ್ತಾ ಕೂಸಿನ ತಲೆಯೊಳಿನಿಸಾನುಂ ವಿಷ[10]ಬಿಂದು ಪಸಿತುಂದಱಿಂದಾತಂಗೆ ಬಿಂದು ಸಾ[11]ಗ[11]ರನೆಂ[12]ದು ಪೆಸರನಿಟ್ಟು ಪಟ್ಟಂಗಟ್ಟಿ ಕೂಸಂ ತೋಱಿಯರಸುಗೆಯ್ಯುತ್ತಂ ಕಾಲಂ ಸಲೆ

ಮತ್ತೆ ಬಿಂದುಸಾಗರಂ ನವಯೌವನನಾದಂದಂ ಚಾಣಾಕ್ಯಂಗೆ ಸಂಸಾರ ಶರೀರ[13]ಭೋಗಂಗಳೊಳಾದಂ[13] ವೈರಾಗ್ಯಮಾಗಿ ತಪಂಬಡುವ ಬಗೆಯಾಗಿ ಸಂಬಂಧುಮಂ ಸೆಱೆಯಿಂ[14] ಬಿಡಿಸಿ [15]ವರಿಸಿ[15] ಕ್ಷಮೆ[16]ಗೊಳಿಸಿ[16] ಸನ್ಮಾನದಾನಾದಿಗಳಿಂದಾತನಂ ಪೂಜಿಸಿ ಬಿಂದುಸಾಗರಂಗೆ ಮಂತ್ರಿಮಾಡಿಯರಸನಂ ಬೆ[17]ಸಂ[17]ಗೊಂಡೊಡಂಬಡಿಸಿಯೆಲ್ಲರುಮಂ ಕ್ಷಮೆಗೊಳಿಸಿ ಬಾಹ್ಯಾಭ್ಯಂತರ ಪರಿಗ್ರಹಂಗ[18]ಳಂ[18] ತೊಱೆದು ಮತಿವರರೆಂಬಾಚಾರ್ಯರ ಪಕ್ಕದೆ ತಪಂಬಟ್ಟಾಗ[19]ಮಮ[19]ಲ್ಲಮಂ ಕಲ್ತಾಚಾರ್ಯರಾಗಿ ಪ[20]ಲಂಬ[20]ರ್ ಶಿಷ್ಯರ್ಕಳಂ ಮಾಡಿ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಪಲಕಾ[21]ಲ ಮುಗ್ರೋಗ್ರತಪಶ್ಚರಣಂ[21]ಗೆಯ್ದು ಮತ್ತೆ ಪಾಟಲೀಪುತ್ರದ[22]ಸಾರೆ ಸೋ[22]ಣೆಯೆಂಬ ತೊಱೆಯ[23] ತಡಿಯ ತುಱುಪಟ್ಟಿ[24]ಯೊಳ್ ವಿಹಾರಿಸುತ್ತಂ[24] ಬಂದಿ[25]ರ್ದರಾ[25] ಬರವಂ ಸುಬಂಧು ಕೇಳ್ದು ಮಹಾಪದ್ಮನ ರಾಜ್ಯಮಂ ಕೊಂಡುದುಮಂ ತನ್ನಂ [26]ಸಂಕಲೆಯೊಳಿಟ್ಟು ಸೆಱೆಗೆಯ್ದು[26] ಪಲಕಾಲಂ ನವೆಯಿಸಿದ ಪಗೆಯುಮಂ ನೆನೆದು ಸಂಚೆವ್ರೊ[27]ಟ್ಟಾ[27]ದಾಗಳ್ ಬಂದಿಸುವ ನೆವದಿಂದಂ ಕಿರಿದುಮರ್ಚನೆಯುಮಂ ಕೊಂಡು ಪೋಗಿ ಚಾಣಾಕ್ಯನುಂ ಚಿಯರ್ ಮೊದಲಾಗೊಡೆಯ ರುಷಿಯರ್ಕಳನರ್ಚಿಸಿ ಗುರು ಪರಿ[28]ವಿ[28]ಡಿಯಿಂದಂ ಬಂದಿಸಿ ಕಿರಿದುಬೇಗಂ ಚಾಣಾಕ್ಯರಿಸಿಯೊಡನೆ [29]ಗೋಷ್ಠಿಯಿಂ[29]ದಿರ್ದು ಪೋಪಾಗಳ್ ತನ್ನವಗ್ಗರಂದಂ ಮಾಗಿಯ ದಿವ[30]ಸಂ[30] ರಿಸಿಯರ್ಕಳ್ [31]ಸೀತದೊಳ್ ಸೆಡೆಗುಂ[31] ಸೋದೆಗೆಡುವರದಱಿಂ ಬಿಳಿಸಿಯುಂ ಕಿರಿದುಂ ಗೊಬ್ಬರಮು

1. ರ್ದ (ಫ). 2. ಕ್ಯಂ (ಕಖಗ). ಕ್ಯನಂ (ಫ). 3. ಯಿಂದಂಚಿ (ಕಖಗ). 4. ನಂತಾ (ಫ). 5. ಚೆ (ಖ). ಳ್ (ಫ). 6. ಬಾ (ಕಖಗ). 7. ಸಿದು (ಫ). 8. ಡರಸಂ (ಫ). 9. (ಫ)ದಲ್ಲಿಲ್ಲ. 10. + ದಿ (ಫ). 11. ದಲ್ಲಿಲ್ಲ: ಮುಂದಕ್ಕೂ ಈ ಪ್ರತಿಯಲ್ಲಿ ಹೀಗೆಯೇ. 12. ದುಂ (ಫ). 13. ದೊಳಪ್ಪ (ಫ). 14. + ದಂ (ಖಫ). 15. ಬರಿಸಿ (ಖ). (ಫ)ದಲ್ಲಿಲ್ಲ. 16 ಗೊಂಡು (ಫ). 17. ಸ (ಫ). 18. ಳೆಲ್ಲಮಂ (ಫ). 19. ಮಂಗಳ (ಫ). 20. ಲ (ಫ). 21. ಲಂತಪಂ (ಫ). 22. ಸಮೀಪದ ಶೋ (ಫ). 23. + ತೀರದ (ಫ). 24. ಗೆ (ಫ). 25. ರ್ದೊಡವರ (ಫ). 26. ಸೆಱೆಯೊಳಿಕ್ಕಿ ಸೆಱೆಯೊಳ್ (ಫ). 27. ಶ್ರು (ಕಗ). ತರ್ (ಖ). 28. ವ (ಖಫ). 29. ಗೋಷ್ಠಿಯೊಳ್ (ಫ). 30. ಸದಿಂ (ಫ). 31. ಸೀತದೊಳ್ (ಖ). (ಫ)ದಲ್ಲಿಲ್ಲ.

ನೊಟ್ಟಿ[1]ಮೆಂದು[1] ಪಕ್ಕದಿದೆರ್ೊಟ್ಟಿಸಿ ಬಳಸಿಯುಂ ಕಿಚ್ಚಿಂತಗು[2]ಳ್ಚಲ್ವೇಟ್ಟು[2] ಪ್ರೊಬಲ್ಗೆ ಪೋದಂ

ಮತ್ತೆ ಗೊಬ್ಬರದ ಕಿಚ್ಚು ಬಳಸಿಯುಂ ತಮ್ಮಂ ಸುಡೆ ಚಾಣಾಕ್ಯ ಋಷಿಯರ್ ಮೊದಲಾಗೊಡೆಯ ರಿಸಿಯರ್ಕಳೆಲ್ಲಂ

ಗಾಹೆ ॥ ಭಿಜ್ಜಉ ಭಿಜ್ಜವು ಜಾಉ ಖಉ ಜೋ ಇಯ ಏಹು ಸರೀರು ।
ಅಪ್ಪಾ ಭಾವಹಿ ಣಿಮ್ಮಲಉ ಜೇಂ ಪಾವಹಿ ಭವ ತೀರು ॥
ಖಮ್ಮಾಮಿ ಸವ್ವಜೀವಾಣಂ ಸವ್ವೇ ಜೀವಾ ಖಮಂತು ಮೇ ।
ಮೆತ್ತೀ ಮೇ ಸವ್ವಭೂದೇಸು ವೇರಂ ಮಜ್ಝಣ ಕೇಣಚಿ ॥

ಎಂದಿಂತು ಕ್ಷಮೆಯಂ ಭಾವಿಸಿ[3] ಚತುರ್ವಿಧಮಪ್ಪಾಹಾರ [4]ಶರೀರ[4]ಮುಮಂ ತೋಱಿ[3] ದಿಂ[5]ಗಿ[5]ಣೀ ಮರಣದಿಂ ಶುಭಪರಿಣಾಮದೊಳ್ [6]ಕೂಡಿ ಮಿಕ್ಕ ರತ್ನತ್ರಯಮ ನಾರಾಧಿಸಿ[6] ಸನತ್ಕುಮಾರ ಕಲ್ಪದೊಳ್ ಸರ್ವಾರ್ಥಮೆಂಬ ವಿಮಾನದೊಳ್[7] ಚಾಣಾಕ್ಯ ರಿಸಿಯರ್ ಪುಟ್ಟಿದರ್ ಮತ್ತುೞಿದ ಋಷಿಯರ್ಕಳೆಲ್ಲಂ ಸೌಧರ್ಮಕಲ್ಪಂ ಮೊದಲಾಗೊಡೆಯ ಕಲ್ಪಂಗಳೊಳ್ ಪುಟ್ಟಿದರ್

ಮತ್ತೆ ಪೆಱರುಂ ಸಂನ್ಯಸನಂ ಗೆಯ್ದಿರ್ದ ಕ್ಷಪ[8]ಣ[8]ಕರುಂ ಚಾಣಾಕ್ಯರಿಸಿಯರಂ ಮನದೊಳ್ ಬಗೆದು ಚತುರ್ವಿಧಮಪ್ಪುಪಸರ್ಗಮುಮಂ ಪಸಿವುಂ ನೀರೞ್ಕೆ ಮೊದಲಾಗೊಡೆಯ [9]ಇಪ್ಪತ್ತೆರಡು[9] ಪರೀಷಹಂಗ[10]ಳಂ[10] ವ್ಯಾಧಿಗಳೊಳಪ್ಪ ವೇದನೆಗ[10]ಳುಮಂ[10] ಸೈರಿಸಿ ಶುಭ ಪರಿಣಾಮದಿಂ [11]ಮಿಕ್ಕ ದರ್ಶನಜ್ಞಾನಚಾರಿತ್ರಂಗಳನಾರಾ[11]ಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

---

1. ಯುಂ ಮುಂದು (ಕಗ). ಯುಂ (ಖ). 2. ಳ್ಚಿಮೆಂದು (ಫ). 3. + ಸಮ್ಯಗ್ದರ್ಶನ ಜ್ಞಾನಚಾರಿತ್ರಂಗಳಂ ಸಾದಿಸಿ (ಫ). 4. (ಫ)ದಲ್ಲಿಲ್ಲ. 5. ದಿ (ಫ). 6. ಮುಡಿಪಿ (ಫ). 7. + ಸಪ್ತಸಾಗರೋಪಮಾಯುಷ್ಯ ಸ್ಥಿತಿಯನೊಡೆಯನಾಗಿ (ಫ). 8. (ಖಫ)ಗಳಲ್ಲಿಲ್ಲ. 9. ದ್ವಾವಿಂಶತಿ (ಫ). 10. ಳ್ಕಂ (ಫ). 11. ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಂ (ಸಾ) (ಫ).

# (೧೯) ವೃಷಭಸೇನರೆಂಬ ರಿಸಿಯರ ಕಥೆ

ವೃಷಭಸೇನರೆಂಬ ರಿಸಿಯರ ಕಥೆಯಂ ಪೇೞ್ವಂ :

ಗಾಹೆ ॥ ವಸಈಏ ಪಳಿದಾಏ ವಿಟ್ಠಾಮಚ್ಚೇಣ ಉಸಹಸೇಣೋವಿ ।
ಆರಾಧಣಂ ಪವಣ್ಣೋ ಸಂಘ ಪರಿಸಾಏ ಕುಣಾಳಮ್ಹಿ ॥

[ವಸಈಏ—ಬಸದಿ, ಪಳದಾಏ—ಉ[1]ರಿ[1]ಪೆಪಟ್ಟುದಾದೊಡೆ, ವಿಟ್ಠಾಮಚ್ಚೇಣ—ವಿಷ್ಟಮ[2]ತ್ಸ್ಯ[2]ನಿಂದಂ, ಉಸಹಸೇಣೋವಿ—ವೃಷಭಸೇನಾಚಾರ್ಯರ್, ಆರಾಧಣಂ—[3]ಮಿಕ್ಕ[3] ದರ್ಶನಜ್ಞಾನಚಾರಿತ್ರಂಗಳಾರಾಧನೆಯುಂ, ಪವಣ್ಣೋ—ಪ್ರೊ[4]ರ್ದಿ[4]ದೊಂ, ಸಂಘ ಪರಿಸಾಏ—ತಮ್ಮ ರಿಸಿಸಮುದಾಯಂಬೆರಸು, ಕುಣಾಳಮ್ಹಿ—ಕುಣಾಳಮೆಂಬ ಪೊೞಲೊಳ್]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ದಕ್ಷಿಣಾ ಪಥದೊಳ್ ಕರ[5]ಹಟ[5]ಮೆಂಬುದು ನಾಡಲ್ಲಿ ಕುಣಾಳಮೆಂಬ ಪೊೞಲದನಾಳ್ವೊಂ ಧನದನೆಂಬೊನರಸನಾತನ ಮಹಾದೇವಿ ಪದ್ಮಶ್ರೀಯೆಂಬೊಳ್ ಮಂತ್ರಿ ವಿಷ್ಟಮತ್ಸ್ಯನೆಂಬೊಂ[6] ಪಿರಿಯ ಪಂಡಿತ ನಂತವರ್ಗಳಿಷ್ಟವಿಷಯಕಾಮಭೋಗಂಗಳನನುಭವಿಸುತ್ತಂ ಪಲಕಾಲಂ ಸೆಲೆ

ಮತ್ತೊಂದು ದಿವಸಂ ವೃಷಭಸೇನರೆಂಬಾಚಾರ್ಯರ್ ಪಿರಿದು ರಿಸಿಸಮುದಾಯಂಬೆರಸು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತ[7]ಮಾ[7] ಪೊೞ[8]ಲ್ಗೆ[8] ಬಂದೊಂದು [9]ಬಸದಿಯೊ[9]ಳಿರ್ದರವರ ಬರವನರಸನುಂ ಪೊೞಲ*ವರುಂ ಕೇಳ್ದು ಪಿರಿದುಂ ಪೂಜೆಯುಂ ಕೊಂಡುಪೋಗಿಯರ್ಚಿಸಿ ಪೂಜಿಸಿ ಪೊಡೆವಡುವುದಂ ವಿಷ್ಟಮತ್ಸ್ಯಂ ಕಂಡು ಸೈರಿಸಲಾಱದೆ ಮಾತ್ಸರ್ಯದಿಂದಂ ತನ್ನ ಪಾಂಡಿತ್ಯದ ಗರ್ವದಿಂದಂ ವೃಷಭಸೇನಾಚಾರ್ಯರೊಡನೆ ವಾದುಗೆಯ್ದು ನೆರವಿಯೊಳ್ ಸೋಲ್ತುಸಿಗ್ಗಾಗಿ ಪೋಗಿ ನಟ್ಟನಡುವಿರುಳ್ ಬಂದು* ಕಿಚ್ಚಂ ತಗುಳ್ಚಿ ಪೋದಂ ಮತ್ತಂ ವೃಷಭಸೇನಾಚಾರ್ಯರ್ ಮೊದಲಾಗೊಡೆಯ ರಿಸಿಯರ್ಕಳ್ [10]ಕ್ಷಮೆಯುಂ ಭಾವಿಸಿ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಯಾವಜ್ಜೀವಂ ನಿವೃತ್ತಿಗೆಯ್ದು ಶುಭ ಪರಿಣಾಮದಿಂದ[11]ಂ ಮಿಕ್ಕ ರತ್ನತ್ರಯಂಗಳಂ ಸಾಧಿಸಿ[11] ಮುಡಿಪಿಯಲ್ಲಿ ವೃಷಭಸೇನಾ

---

1. ರು (ಕಗ). 2. ತ್ಸರನೆಂಬೊ (ಫ). 3. ಸಮ್ಯಗ್ (ಫ). 4. ಕ್ಷಿ (ಕಖಗ). 5. ಹಡ (ಖ). ಹಾಟ (ಫ). 6. + ಪಿರಿ (ಖ). 7. ಮುಂತಾ (ಫ). 8. ಲೊಳಗೆ (ಫ). 9. ಪುರದೊ (ಕ). ಮರದೊ (ಖಗ). 'ಮಠದೊ' ಎಂದಿರಬಹುದೆ ? *-* (ಫ)ದಲ್ಲಿ ತ್ರುಟಿತ. 10. + ಸಮ್ಯಗ್‌ದರ್ಶನ ಚಾರಿತ್ರಂಗಳಂ ಸಾಧಿಸಿ (ಫ). 11. (ಫ)ದಲ್ಲಿಲ್ಲ.

ಚಾರ್ಯರ್ ಪದಿನಾಲ್ಕನೆಯ ಪ್ರಾಣತಮೆಂಬ ಕಲ್ಪದೊಳ್ ಪ್ರ[1]ಷ್ಪ[1]ಕಮೆಂಬ ವಿಮಾನದೊಳಿರ್ಪ[2]ತ್ತು[2] ಸಾಗರೋಪಮಾಯುಷ್ಯಮನೊಡೆಯ ದೇವನಾಗಿ ಪುಟ್ಟಿ[3]ದರ್[3] ಮತ್ತುಳಿದ ರಿಸಿಯರ್ಕಳುಂ [4]ತಂತಮ್ಮ ತಪೋನುಷ್ಠಾನಕ್ಕೆ ತಕ್ಕಂತು[5] ಸೌಧರ್ಮಕಲ್ಪಂ ಮೊದಲಾಗೊಡೆಯ ಸ್ವರ್ಗಂಗಗೊಳ್ ಪುಟ್ಟಿದರ್

ಮ[4]ತ್ತಂ[5]ಪೆಜಿರುಂ [6]ಸಂನ್ಯಸನಂಗೆಯ್ದಿರ್ದ ಕ್ಷಪ[6]ಣಕರುಂ[7] ವೃಷಭಸೇನಾಚಾರ್ಯರ್ ಮೊದಲಾಗೊಡೆಯ ರಿಸಿಯರ್ಕಳಂ ಮನ[8]ದ[6] ಬಗೆದು ಚತುರ್ವಿಧಮಪ್ಪುಸರ್ಗಮುಮಂ ಪಸಿವುಂ ನೀರೞ್ಕೆ ಮೊದಲಾಗೊಡೆಯ ಪರೀಷಹಂಗಳಂ [9]ವ್ಯಾಧಿಗಳೊಳಪ್ಪ ವೇದನೆಗಳುಮಂ[9] ಸೈರಿಸಿ ಕ್ಷಮೆಯುಂ ಭಾವಿಸಿ ಶುಭ ಪರಿಣಾಮದಿಂ[10]ದಂ[10] ಪರಮ ಶುದ್ಧ ಸಹಜ ದರ್ಶನಜ್ಞಾನ ಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗ†ಸುಖಂಗಳನೆಯ್ದಿಗೆ*

ಈ ಪೇೞ್ದ ಪತ್ತೊಂ[11][ಬ][11]ತ್ತು ಕಥೆ[12]ಗ [ಳಂ][12]
[13]ಶಿವ[13]ಕೋಟ್ಯಾಚಾರ್ಯ[14]ರ್ ಪೇೞ್ದಾ [ರ್][14]
[15]ವಡ್ಡಾರಾಧನೆ ಸಂಪೂರ್ಣಂ[15]††

---

1. (ಕಫ). ರ್ಪ (ಗ). 2, ತ್ತೆರಡು (ಫ). 3, ದಂ (ಫ). 5. ಸಮ್ಯಗ್‌ದರ್ಶನಜ್ಞಾನ ಚಾರಿತ್ರಂಗಳಂ ಸಾಧಿಸಿ ಸಮಾಧಿಮರಣದಿಂ ಮುಡಿಪಿ (ಫ). 5. ತ್ತೆ (ಫ). 6. + ಸಮ್ಯಗ್ ದರ್ಶನ ಜ್ಞಾನ ಚಾರಿತ್ರಂಗಳಂ ಸಾದಿಸಿ (ಫ). 7. ಕರುಂ (ಖ), ಕರ್ (ಫ). 8. ದೊಳು (ಕಗಫ). 9. (ಫ)ದಲ್ಲಿ ಇಲ್ಲ. 10. ಮುಡಿಪಿ (ಫ). † +ದ (ಫ). 12. ಭ (ಕಖಗಫ). 12. ಗ+(ಕ), ಗಳ್ (ಖ). ಗಳು (ಗ), ಯಂ (ಫ), 13. (ಕ)ದಲ್ಲಿ ತ್ರುಟಿತ. ರೇವಾ (ಫ), 14. ರು ಪೇಳ್ದಾ (ಗ), ರ್ ಪೇಳ್ದ (ಖ), ರ್ಪೇಳ್ದ (ಫ). 15. ವೊಡ್ಡಾರಾದಣಂ ಸಂಪೂರ್ಣಂ (ಕಗ). ವಡ್ಡಾರಾಧನೆಯ ಕವಚವು (ಖ). ವಡ್ಡಾರಾಧನೆಯ ಕವಚವೆಂಬದಿಕಾರಲು (ಫ).

*ಈ ಕಥೆ ಮುಗಿದಮೇಲೆ (ಫ)ದಲ್ಲಿ ಈ ಕೆಳಗಿನ ಗಾಹೆಗಳಿವೆ :

**ಹಾಗೆ** ॥ ಜದಿತಾ ಏವಂ ಏದೇ ಅವಗಾರಾ ತಿಬ್ಬ ವೇದಣ ವೋ ಪಿ ।
ಏಕಾರಿಯ ಪಡಿಕಮ್ಮಾ ಪಡಿವಣ್ಣೋ ಉತ್ತಮಂ ಅಟ್ಠಂ ॥

ಕಿಂಪುಣ ಅಣಗಾರ ಸಹಾಯು ಗೇಣ ಕಿರದರ ಗಹಿ ಪಡಿಕಮ್ಮೇ ।
ಸಂಘೇಓ ಅಂಗತು ಅಂಗತು ಆರಾಧವೇ ದುಣ್ಣ ಸಕ್ಕಂಚಿ ॥

ಜಿಣವಯಣ ಮರುದ ಭೂದಂದು ತಚ್ಚಣ್ಣಾಹುದಿಂ ಸುಣು ।
ತೇಣ ಸಖ್ಖಿಸಪ...ಮರುಜ್ಜೀ ಸೋದೇದುಂ ಉತ್ತಮಂ ಅಟ್ಠಂ ॥

(††) ಇದಾದಮೇಲೆ (ಫ)ದಲ್ಲಿ ಈ ಕೆಳಗಿನ ಕಂದಪದ್ಯವಿದೆ:

ಆವಾವ ಜನ್ಮಜನ್ಮದೊ
ಳಾವಾವ ಕುಲಾಕುಲಂಗಳೊಳ್ ಪುಟ್ಟುವಡಂ
ದೇವರರುಹಂತರೆಂಬೀ
ಭಾವನೆ ಸಮನಿಸುಗು ಜನ್ಮಜನ್ಮಾಂತರದೊಳ್

# ೧. ಟಿಪ್ಪಣಿಗಳು

(ಪುಟಸಂಖ್ಯೆಯನ್ನು ದಪ್ಪಕ್ಷರದಲ್ಲಿಯೂ, ಪಂಕ್ತಿಯನ್ನು ಸಣ್ಣಕ್ಷರದಲ್ಲಿಯೂ ತೋರಿಸಿದೆ.)

**೧.** ೩-೪: ಯದ್ವಿದ್ಯಾ—ಯಾವ ಕೇವಲಜ್ಞಾನವು, ಸಾಲೋಕಾನಾಂ ತ್ರಿಲೋಕಾನಾಂ—ಅಲೋಕಾಕಾಶದಿಂದ ಕೂಡಿದ ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳಿಗೆ, ದರ್ಪಣಾಯತೇ—ಕನ್ನಡಿಯಂತೆ ಪ್ರತಿಫಲನ ಮಾಡುತ್ತಿರುವುದೋ, ಆ, ನಿರ್ಧೂತ ಕಲಿಲಾತ್ಮನೇ—ತೊಳೆಯಲ್ಪಟ್ಟ ಸಕಲ ಕರ್ಮಮಲಗಳನ್ನುಳ್ಳ, ಶ್ರೀ—ಸಂಪದ್ಯುಕ್ತನಾದ, ವರ್ಧಮಾನಾಯ—ವರ್ಧಮಾನ ಜಿನಸ್ವಾಮಿಗೆ, ನಮಃ—ನಮಸ್ಕಾರಗಳು.

೭: ನೀರಟ್ಟಿ—ನೀರಡಿಕೆ ; ಮೊದಲಾಗೊಡೆಯ—ಮೊದಲಾಗಿ ಉಳ್ಳ ; ತೊಱೆದು—ಬಿಟ್ಟು ; ನೆಗಟ್ದು—ಆಚರಿಸಿ, ಮಾಡಿ ; ಕರ್ಮಕ್ಷಯಂಗೆಯ್ದು—ಪುಣ್ಯಪಾಪರೂಪವಾದ ಕರ್ಮಗಳನ್ನು ನಾಶಮಾಡಿ ; ಮುನ್ನಂ—ಮೊದಲು.

## (೧) ಸುಕುಮಾರಸ್ವಾಮಿಯ ಕಥೆ

**೨.** ೨: ತಿನೆಪಡುತಿರ್ದೊನಾಗಿಯುಂ—ತಿನ್ನಲ್ಪಡುತ್ತಿದ್ದವನಾದರೂ ; ೩. ಕಡಿದಪ್ಪ—ತೀವ್ರವಾದ ; ಬಟ್ದಿದೊನಾಗಿಯುಂ—ಸತ್ತವನಾದರೂ, "ಬರ್ದು <ಬಟ್ದು—ಮರಣೇ" ; ೫. ಪೊರ್ದಿದೊಂ—ಹೊಂದಿದನು, ಪಡೆದನು.

೮. ಪೊಬಲ್—ಪಟ್ಟಣ ; ಆಳ್ವಂ—ಆಳುವವನು : ನೋಡಿವರೆಲ್ಲರ್ಗಳ—ನೋಡಿದವರೆಲ್ಲರ : ೩. ಕಣ್ಣಾಲಿಗೆ—ಕಣ್ಣಿನ ಗುಡ್ಡೆಗಳಿಗೆ : ೧೧. ಒಡೆಯಳ್—ಉಳ್ಳವಳು ; ೧೪. ಕೇಳ್ವಿಯಂ—ಕೇಳುವುದನ್ನು, ಕೇಳ್ + ವಿ ; ಭಾವನಾಮ ; ೧೫. ಕಡವರಮಂ—ಚಿನ್ನವನ್ನು ಎಂದರೆ ಐಶ್ವರ್ಯವನ್ನು. ಕಾರ್ತಸ್ವರ > ಕಡವರ ; ೧೬. ಬಿಯಂಗೆಯ್ಯುತ್ತುಂ—ವ್ಯಯಮಾಡುತ್ತ, ಖರ್ಚುಮಾಡುತ್ತ : ಸಪ್ತವ್ಯಸನಾಭಿಭೂತರಾಗಿ—ಬೇಟೆ, ಜೂಜು, ಮಾಂಸಭಕ್ಷಣ, ಸುರಾಪಾನ, ವೇಶ್ಯಾಗಮನ, ಕಳ್ಳತನ, ದುರ್ವಾಕ್ಯ—ಮುಂತಾದ ಏಳು ಕೆಟ್ಟ ಚಟಗಳಿಂದ ಹೊಡೆಯಲ್ಪಟ್ಟವರಾಗಿ : ನೆಗಟುತ್ತಿರೆಯಿರೆ—ನಡೆಯುತ್ತ, ಆಚರಿಸುತ್ತ ಇರಲು ; ೧೭. ಕಟಿದೊಡೆ—ಸತ್ತುಹೋದರೆ, "ಕಟಿ—ನಿಧನಾತಿ ದೂರಯೋ!" : ಒಳರಿಲ್ಲೆಂದು = ಒಳರೆ + ಇಲ್ಲೆ + ಎಂದು—ಉಂಟೇ, ಇರುವರೆ, ಇಲ್ಲವೇ ಎಂದು ; ೧೮. ಬೆಸಗೊಂಡೊಡೆ—ಕೇಳಿದರೆ ; ಬಟಿಯಟ್ಟಿ—ದೂತನೊಡನೆ ಹೇಳಿ ಕಳುಹಿಸಿ ; ಮಜ್ಜನದೊಳ್—ಸ್ನಾನದಲ್ಲಿ ; ೧೯. ಮಿಸಿಸಿ—ಸ್ನಾನ ಮಾಡಿಸಿ. ಮಿಾಯಿಸಿ ; ತುಡಿಸಿ—ಆಭರಣಗಳಿಂದ ಅಲಂಕಾರ ಮಾಡಿಸಿ ; ಊಡಿ—ಊಟ ಮಾಡಿಸಿ : ಉಬ್ಬೆಗಂ ಬಡದಿರಿಂ—ದುಃಖಪಡಬೇಡಿರಿ : ೨೦. ಆಱಿಸಿ—ಶಮನ ಮಾಡಿ ; ಬೀಡಿಂಗೆ—ಮನೆಗೆ ; ೨೧. ಓದುಗಳಂ—ವಿದ್ಯೆಗಳನ್ನು : ೨೨. ತೀವಿ—ತುಂಬಿ : ನೆಲನಂ ಬರೆಯುತ್ತಿರೆ—ನಾಚಿಕೆಯಿಂದ ನೆಲದ ಮೇಲೆ ಕಾಲಹೆಬ್ಬೆರಳಿನಿಂದ ಗೆರೆ ಹಾಕುತ್ತಿರಲು : ೨೫. ದಾಯಿಗಂ—ದಾಯಾದಿ : ಬಲ್ಲೊಂಗಂ—ತಿಳಿದವನಿಗೂ ; ಬಾಟುಮಂ—ಜೀವಿಕೆಯನ್ನೂ ; ಪ್ರತಿಪತ್ತಿಯುಮಂ—ಸತ್ಕಾರವನ್ನೂ : ೨೬. ವೈರಾಗ್ಯಪರಾಯಣರಾಗಿ—ವಿರಕ್ತಿಯನ್ನು ಹೊಂದಿ ಆಚರಿಸುವವರಾಗಿ.

**೩.** ೧: ಕಪ್ಪಡಮುಟ್ಟು—ಹರಕುಬಟ್ಟೆಯನ್ನು ಉಟ್ಟು : ಕರ್ಪಟ > ಕಪ್ಪಡ ; ಬೈಕಂದಿರಿದು—ಭಿಕ್ಷಕ್ಕಾಗಿ ಬೇಡಿ ತಿರುಗಾಡಿ : ಓದುಮಂ—ಓದೋಣ : ಅಂತಪ್ಪೊಡೆ—ಹಾಗಾದರೆ ; ೫. ಕಲ್ಪಿಸಿ—ತಿಳಿಸಿ ; ಓಲೆಯುಂ—ಪತ್ರವನ್ನು : ೮. ಕತಿಪಯ—ಕೆಲವು ; ೯. ಇರ್ಕೆದೊಡೆ—ಮುಂದೆ ಇರಿಸಿದರೆ ; ೧೧. ಬಾಜಿಸಿ—ಓದಿ. ವಾಚಿಸು > ಬಾಜಿಸು ; ೧೨. ಕಟಿದುದುಮಂ—ಸತ್ತುದನ್ನೂ :

೧೩. ಬಾೞ್ಕೆಯಿಂ—ಜೀವಿಕೆಯಿಂದ : ಬುದ್ಧಿಯೊಡೆಯರುಂ—ಬುದ್ಧಿವಂತರೂ : ೧೫. ಪಸರಂಗೊಟ್ಟೆನಪ್ಪೊಡೆ—ಸಲಿಗೆಯನ್ನು ಕೊಟ್ಟೆನಾದರೆ ; ೧೬. ಉರ್ಕಿ ಕಿಡುವರ್—ಉಕ್ಕಿ, ಗರ್ವಿಷ್ಠರಾಗಿ ಹಾಳಾಗುವರು : ಮನದೆ ಬಗೆದು—ಮನಸ್ಸಿನಲ್ಲಿ ಭಾವಿಸಿ : ೧೯. ನೀಮಾರ್ಗೆ—ನೀವು ಯಾರಿಗೆ ಸಂಬಂಧಪಟ್ಟವರು ; ಆರಾದೊಡಮೇಂ—ಯಾರಾದರೇನು ; ೨೦. ಕಲ್ವೆಮೆಂಬ—ಕಲಿಯುತ್ತೇವೆಂಬ : ಅೞ್ತಿಯೊಳ್—ಅಕ್ಕರೆಯಲ್ಲಿ : ೨೧. ಅಲಸದೆ—ಆಯಾಸಪಡದೆ, ಸೋಮಾರಿಗಳಾಗದೆ : ನಿರ್ಬಂಧದಿಂದೆ—ಬಲಾತ್ಕಾರದಿಂದ, ನಿಯಮಕ್ಕೆ ಅನುಸಾರವಾಗಿ : ಆರ್ಪೊಡೆ—ಸಮರ್ಥರಾದರೆ : ೨೪. ಓಜರ್ಗೆಱಗಿ—ಉಪಾಧ್ಯಾಯರಿಗೆ ನಮಸ್ಕರಿಸಿ ; ೨೬. ಆಱುಂಗಮುಂ—ಷಡಂಗಗಳೂ, ಎಂದರೆ ಶಿಕ್ಷಾ, ಕಲ್ಪ. ವ್ಯಾಕರಣ. ನಿರುಕ್ತ, ಛಂದಸ್ಸು, ಜ್ಯೋತಿಷ ಎಂಬ ವೇದಾಂಗಗಳು ; ಪದಿನೆಂಟು ಧರ್ಮಶಾಸ್ತ್ರಂಗಳುಂ—ಮನು, ಯಮ, ದೇವಲ. ವಸಿಷ್ಠ. ಅತ್ರಿ, ದಕ್ಷ, ವಿಷ್ಣು, ಅಂಗಿರಸ್, ಉಶನಾ, ವಾಕ್ಪತಿ. ವ್ಯಾಸ, ಆಪಸ್ತಂಬ, ಗೌತಮ. ಕಾತ್ಯಾಯನ, ನಾರದ, ಯಾಜ್ಞವಲ್ಕ್ಯ, ಪರಾಶರ, ಸಂವರ್ತ. ಶಂಖ, ಹಾರೀತ, ಲಿಖಿತ—ಇವರಿಂದ ಪ್ರಣೀತವಾದ ಧರ್ಮಶಾಸ್ತ್ರಗಳು : ಇವುಗಳಲ್ಲಿ ಯಾವುವೋ ಹದಿನೆಂಟು. ೨೬. ಮೀಮಾಂಸಾ—ವೇದವಾಕ್ಯಗಳ ಅರ್ಥವನ್ನು ಚರ್ಚಿಸುವ ಶಾಸ್ತ್ರ : ನ್ಯಾಯವಿಸ್ತರಂ—ತರ್ಕಶಾಸ್ತ್ರ ಅಥವಾ ಗೌತಮನ ನ್ಯಾಯಸೂತ್ರವೆಂಬ ದರ್ಶನಗ್ರಂಥ ಅಥವಾ ಪ್ರತಿಜ್ಞಾ, ಹೇತು, ಉದಾಹರಣೆ, ಉಪನಯ, ನಿಗಮನ ಎಂಬ ಐದಂಶಗಳನ್ನೊಳಗೊಂಡ ವಾದವಿಧಾನ : ಪ್ರಮಾಣಂ—ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅನುಪಲಬ್ಧಿ, ಅರ್ಥಾಪತ್ತಿ ಎಂಬ ಅಂಶಗಳ ಆಧಾರದ ಮೇಲೆ ಜ್ಞಾನಸ್ವರೂಪವನ್ನು ನಿರ್ಣಯಿಸುವುದು : ೨೮. ಚಾಣಕ್ಯಂ—ಕೌಟಿಲೀಯ ಅರ್ಥಶಾಸ್ತ್ರ.

೪. ೧ : ಶಾಲಿಹೋತ್ರಂ—ಶಾಲಿಹೋತ್ರ ಎಂಬ ಋಷಿ ಬರೆದಿರುವ ಅಶ್ವಶಾಸ್ತ್ರ ; ಪಾಳಕಾಪ್ಯಂ—ಪಾಲಕಾಪ್ಯ ಋಷಿ ಬರೆದಿರುವ ಗಜಶಾಸ್ತ್ರ, ಈ ಎರಡು ಹೆಸರುಗಳಲ್ಲಿಯೂ ಸಮಾನಾರ್ಥಕ ಶಬ್ದಗಳು, ಭಿನ್ನ ಭಾಷೆಗಳಿಗೆ ಸೇರಿದುವು ಇವೆಯೆಂದು ವಿದ್ವಾಂಸರ ಅಭಿಪ್ರಾಯ : ಶಾಲಿ ಎಂದರೆ ಕುದುರೆ, ಹೋತ್ರ (ದ್ರಾವಿಡಭಾಷಾಶಬ್ದ. ಗುರ್ರಮು ಹೋಲಿಸಿ) ಎಂದರೂ ಕುದುರೆ ; ಪಾಲ ಎಂದರೆ ಪಲ್—ದಂತ (ದ್ರಾವಿಡಭಾಷೆ), ಕಾಪ್ಯ—ಆನೆ (ಸಂ) ಎಂದರೆ ದಂತಿ, ಆನೆ ; ಇಂಥ ಶಬ್ದಗಳಿಗೆ **polyglots** ಎಂದು ಹೆಸರು (ಶಬ್ದವಿಹಾರ ೮೬), ಹಾನಿತಂ—ಒಂದು ವೈದ್ಯಶಾಸ್ತ್ರ (?), ಹಾರೀತಂ ಎಂದು ಪಾಠವಿದ್ದರೆ ಒಂದು ಸ್ಮೃತಿಶಾಸ್ತ್ರವಾಗುತ್ತದೆ ; ಅಶ್ವಿನೀಮತಂ—ಅಶ್ವಿನೀದೇವತೆಗಳೆಂಬ ದೇವವೈದ್ಯರಿಂದ ಪ್ರಣೀತವಾದ ಗ್ರಂಥ ; ಬಾಹಲಂ—ಬಾಹಟಂ < ಸಂ. ವಾಗ್ಭಟ, ಅಷ್ಟಾಂಗಹೃದಯವೆಂಬ ವೈದ್ಯಗ್ರಂಥ : ೨. ಸುಶ್ರುತಂ—ಶುಶ್ರುತಪ್ರಣೀತ ವೈದ್ಯಗ್ರಂಥ : ಕ್ಷಾರ ಪಾನೀಯಂ—ಬಿಡುಲವಣ ಅಥವಾ ಕೃಷ್ಣಲವಣದ ಪಾನಕ್ಕೆ ಸಂಬಂಧಿಸಿದ ವೈದ್ಯ ; ಮೊದಲಾಗೊಡೆಯ—ಮೊದಲಾಗಿ ಉಳ್ಳ ; ೬. ನೆಱೆಯೆ ಕಲ್ಪಿಸಿ—ಪೂರ್ಣವಾಗಿ ಕಲ್ಪಿಸಿ, ಹೇಳಿಕೊಟ್ಟು ; ೫. ಪಂಡಿತರೆಂ ಆದೆಂ—ನಾವು ಪಂಡಿತರಾಗಿದ್ದೇವೆ. ೫. ಆದಮಾನುಂ = ಆದಂ + ಆನುಂ—ವಿಶೇಷವಾಗಿ, ಅತಿಶಯವಾಗಿ ; ಒಸೆದು—ಸಂತೋಷಿಸಿ ; ನಾಡ್ಗೆ = ನಾಡಿಂಗೆ—ನಾಡಿಗೆ ; ಪೋದಪೆಂ—ಹೋಗುತ್ತೇವೆ ; ಓಜರ್ಗೆ—ಉಪಾಧ್ಯಾಯರಿಗೆ ; ೭. ಪಸರಂಗೊಟ್ಟೆನಿಲ್ಲ—ಸಲುಗೆಯನ್ನು ಕೊಡಲಿಲ್ಲ ; ೮. ಎತ್ತಾನುಂ—ಎಲ್ಲಿಯಾದರೂ ; ೧೦. ಸಂಬಳಮುಮಂ—ಬುತ್ತಿಯನ್ನೂ : ೧೨. ಮನದೆ—ಮನಸ್ಸಿನಲ್ಲಿ ; ೧೪. ಬೈಕಂದಿರಿದು—ಭಿಕ್ಷವನ್ನು ಬೇಡಿ ತಿರುಗಿ. ಅಲೆದಾಡಿ, ಬೈಕ < ಸಂ. ಭೈಕ್ಷ : ನೆರಂ—ಸಹಾಯಕವಾಗಿ ; ೧೫. ಕಟಿಯನಕ್ಕೆ—ಗಂಜಿಯನ್ನಾಗಲಿ, 'ಕಟ್—ಸೌವೀರೇ ಚ' ; ಎಱೆಯಿಸಿಯುಂ—ಹೊಯಿಸಿಯೂ, ಹಾಕಿಸಿಯೂ ; ೧೮. ಪರ್ವದಿವಸದೊಳ್—ಹಬ್ಬದ ದಿನಗಳಲ್ಲಿ ; ಎಂದಾನುಂ—ಎಂದಾದರೂ ; ೧೯. ಪಗೆವರಂ—ಹಗೆಗಳನ್ನು ; ೨೩. ತುೞಿಲ್ಗೆಯ್ದು—ನಮಸ್ಕಾರಮಾಡಿ : "ತುೞಿಲೆಂದು ಪೊಡೆವಡಿಕೆಯುಂ ವೀರಮುಮಕ್ಕುಂ" : ೨೪. ಉಪಶ್ಲೋಕಿಸಿ—ಸ್ತುತಿಸಿ, ಹೊಗಳಿ : ೨೫. ಮಸ್ಸಾಣಿಸಿ—ವ್ಯಾಖ್ಯಾನ ಮಾಡಿ ಎಂದರೆ ವಿಸ್ತಾರವಾಗಿ ಹೇಳಿ ; ಪಂಡಿತಿಕ್ಕೆಯುಂ—ಪಾಂಡಿತ್ಯವನ್ನು. ಪಂಡಿತ + ಇಕ್ಕೆ ; ೨೬. ಬಿಚ್ಚಳಿಸು < ಸಂ. ವಿಸ್ತರ + (ಇಸು). ವಿಸ್ತಾರಮಾಡಿ.

ದೊಡ್ಡದು ಮಾಡಿ; ೨೬. ಜೀವಿತಮಂ—ಜೀವನಕ್ಕಾಗಿ ಕೊಡುವ ಗದ್ದೆ ಮುಂತಾದ ಜಮೀನುಗಳನ್ನು ; ೨೯. ಓದುಗಳಂ—ವಿದ್ಯೆಗಳನ್ನು.

೫. ೨ : ಅನರ್ಘ್ಯಮಪ್ಪ—ಅತ್ಯಂತ ಬೆಲೆಬಾಳುವ: ೩. ಸಂಜೆವಾರಿಸಲೆಂದು—ಸಂಧ್ಯಾಕಾಲದಲ್ಲಿ ಸೂರ್ಯನಿಗೆ ನೀರನ್ನು ಸುರಿಯಬೇಕೆಂದು ಎಂದರೆ ಸಂಜೆ ಸೂರ್ಯನಿಗೆ ಅರ್ಘ್ಯ ಕೊಡಬೇಕೆಂದು. ಸಂಜೆ + ಬಾರ್ + ಇಸು. ಬಾರ್—ದ್ರವದ್ರವ್ಯನಿರ್ಮುಕ್ತಿ. (ತ) ವಾರ್—ನೀರು ಮುಂತಾದುವನ್ನು ಸುರಿ: ೪. ಉರ್ಚೆ—ಸಡಿಲವಾಗಿ. ಜಾರಿ. ಜಿಪ್ಪಿ : ತಾವರೆಗೆಱೆಯೊಳ್—ತಾವರೆಯ ಕೆರೆಯಲ್ಲಿ, ಕೊಳದಲ್ಲಿ; ೫. ಕಮ್ಮನೆ—ಸುಮ್ಮನೆ; ಕಿಱಿದಂತರಮುಂ—ಸ್ವಲ್ಪ ದೂರವನ್ನು; ೬. ಪ್ರಮಾಣಮಱಿಯದೆ—ಕಾರಣವನ್ನು ತಿಳಿಯದೆ : ೭. ಮುಲ್ಮುಲಂ ಮಱುಗುತ್ತೆ—ಮಲಮಲ ಎಂದು ವ್ಯಥೆಪಡುತ್ತ: ನೋಟ್ಪನ್ನೆಗಂ—ನೋಡುತ್ತಿರುವಷ್ಟರಲ್ಲಿ: ೧೦. ಭವ್ಯನೆಂದಱಿದು—ಭವ್ಯಜೀವಿ ಎಂದು ತಿಳಿದುಕೊಂಡು; ವಾರಕದ—ತಾತ್ಕಾಲಿಕವಾಗಿ ಕೊಟ್ಟ. ನ್ಯಾಸವಾಗಿರುವ ಅಥವಾ ಭೂಷಣದ. ಅಲಂಕಾರದ (?) : ಸಂಸ್ಕೃತದ ವಾರ, ವಾರಕ ಎಂಬ ಶಬ್ದಗಳಿಗೆ, ಬಾರಿ. ಕ್ರಮ. ಸಮೂಹ ಎಂಬ ಅನೇಕವಾದ ಅರ್ಥಗಳುಂಟು. ಅವು ಯಾವುವೂ ಪ್ರಕೃತಕ್ಕೆ ಅನ್ವಯಿಸುವಂತಿಲ್ಲ: ಕುಮಾರವ್ಯಾಸನು ವಾರಕ ಶಬ್ದವನ್ನು ಪ್ರಯೋಗಿಸಿರುವನು : "ಊರೊಳಗೆ ಸಾಱಿದರು ಕೊಟ್ಟರು ವಾರಕವನಬಲಾಜನಕೆ ಭಂಡಾರ ಸವೆದುದು ಗಣಿಕೆಯರಿಗಾಭರಣದಾನದಲಿ (೩-೧೭-೨೮)"—: ಗೋವುಗಳಿಗೆ ಮಾಡಿದ ಅಲಂಕಾರವನ್ನು ವರ್ಣಿಸುವಾಗ "ಪಂಚವಣ್ಣಿಗೆಯ ಪಟ್ಟೆಯ ತೋರದೊಂಗಲುಂ ಬೇವಿನ ದಂಡೆಯುಂ ನವಿಲಕಂಠದ ಬಾಸಿಗಮುಂ ಮಲುಗೆ ವಾರಮುಂ ಉರಚಲ್ಲಿಯುಂ ನೇವಣಮುಂ ಲೀಲೆವಡೆಯೆ" ಎಂದು ರುದ್ರಭಟ್ಟನ ಪ್ರಯೋಗ (ಜಗವಿ. ೪-೮೦ ಗ) : ೧೨. ಬಳಿರೆ—ಉಂಟೆ, ಇರುವರೆ ? :. ೧೪. ನೀರ್ವೆರಸು—ನೀರಿನ ಸಮೇತವಾಗಿ. ಬೆರಸು ಎಂಬುದಕ್ಕೆ ಹಿಂದೆ ಪ್ರಥಮಾವಿಭಕ್ತಿ ಬರುತ್ತದೆ: ೧೫ ಮುಗುಳಮೇಗೆ—ಮೊಗ್ಗಿನ ಮೇಲೆ: ತಗುಳ್ದು—ಅನುಸರಿಸಿ. ಅಂಟಿಕೊಂಡು. ಸೇರಿಕೊಂಡು : ೧೬. ಮಾನಸರಂ ಕಾಪಿಟ್ಟು—ಮನುಷ್ಯರನ್ನು ಕಾವಲಿರಿಸಿ : ೧೯. ತುರಿಪದಿಂದ—ತ್ವರೆಯಿಂದ, ಶೀಘ್ರತೆಯಿಂದ : ೨೧. ಅಂತರಿತ—ಒಳಗಡೆ ಇರುವ, ಮುಚ್ಚಿದ : ೨೨. ಕ್ಷಪಣಕನಂ—ಜೈನ ಸಂನ್ಯಾಸಿಯನ್ನು : ಮಿಥ್ಯಾವಿನಯದಿಂದೆ—ಕೃತಕ ನಮ್ರತೆಯಿಂದ, ಕಪಟ ವಿಧೇಯತೆಯಿಂದ: ಇಳಿಸಿ—ಅವಜ್ಞೆ ಮಾಡಿ, ತಿರಸ್ಕರಿಸಿ : ೨೩. ಪಾರ್ವಂತಿಗೆ—ಬ್ರಾಹ್ಮಣಿತಿಗೆ. ಹಾರುವನ ಹೆಂಡತಿಗೆ ; ೨೫. ಭಟ್ಟಾರಾ—ಪೂಜ್ಯರಾದ ಸ್ವಾಮಿಗಳೇ ; ೨೬. ಅಟ್ಟಿಯಿಂ—ಪ್ರೀತಿಯಿಂದ, ಆಸಕ್ತಿಯಿಂದ : ಕಲ್ಪಿಪ್ಪುದು—ಕಲಿಸುವುದು. ಹೇಳಿಕೊಡುವುದು.

೬. ೩ : ಪಱಿಸಿ—ಹತ್ತಿಸಿ, ಆರೋಪಿಸಿ ; ನಮಸ್ಕಾರಂಗಳಂ—ಪಂಚಪರಮೇಷ್ಠಿಗಳ ವಂದನೆಯನ್ನು : ಆಲೋಚನೆಗಳಂ—ಪ್ರಾಯಶ್ಚಿತ್ತಕ್ಕೆ ಮುಂಚೆ ತನ್ನ ದೋಷಗಳನ್ನು ಗುರುಗಳಿಗೆ ತಿಳಿಸುವುದು ; ನಿಯಮ—ಮಾಡಬೇಕಾದ ಪ್ರತಿಜ್ಞೆ, ವ್ರತ : ಓದಿದೊಡಲ್ಲದೆ—ಹೇಳಿಯಲ್ಲದೆ. ಪಠಿಸಿಯಲ್ಲದೆ : ೬. ತ್ರಿಷಷ್ಟಿಶಲಾಕಾಪುರುಷರ್—ತೀರ್ಥಂಕರರು ; ೨೪. ಚಕ್ರವರ್ತಿಗಳು ೧೨. ವಾಸುದೇವರುಗಳು ೯, ಪ್ರತಿವಾಸುದೇವರುಗಳು ೯. ಬಲಭದ್ರರು ೯. ಒಟ್ಟು ೬೩. ಜನರು : ೭. ಚರಣ ಗ್ರಂಥಂಗಳುಮಂ—ಜೈನ ಶ್ರಾವಕರ ಮತ್ತು ಯತಿಗಳ ಆಚಾರಗಳನ್ನು ನಿರೂಪಿಸುವ ಗ್ರಂಥಗಳನ್ನೂ : ಲೋಗಾಣಿ—ಲೋಕಾಕಾರವನ್ನು ನಿರೂಪಿಸುವ ಗ್ರಂಥಗಳು : ಸಂಗಾಣಿ—ಸಪ್ತಪದಾರ್ಥಗಳ ಸ್ವರೂಪ ನಿರೂಪಕ ಗ್ರಂಥಗಳು : ಕರಣ ಗ್ರಂಥಗಳು—ಶ್ರುತಸ್ಕಂಧವೆಂಬ ದಿಗಂಬರ ಗ್ರಂಥಸಮುದಾಯದಲ್ಲಿ ಎರಡನೆಯ ವರ್ಗವಾದ ಕರಣಾನುಯೋಗಕ್ಕೆ ಸೇರಿದ ಗ್ರಂಥಗಳು. ಲೋಕಾಕಾರ, ಜ್ಯೋತಿಷ ಮುಂತಾದ ವಿಷಯಗಳನ್ನು ಪ್ರತಿಪಾದಿಸುತ್ತವೆ. ಸೂರ್ಯಪ್ರಜ್ಞಪ್ತಿ ಚಂದ್ರಪ್ರಜ್ಞಪ್ತಿ—ಮುಂತಾದ ಶಾಸ್ತ್ರಗಳಿವೆ : ೧೨. ದ್ರವ್ಯಾನುಯೋಗ—ಶ್ರುತಸ್ಕಂಧದಲ್ಲಿ ಮೂರನೆಯ ವಿಭಾಗ. ಸಪ್ತತತ್ತ್ವಗಳು. ನವಪದಾರ್ಥಗಳು. ಷಡ್ದ್ರವ್ಯಗಳು ಮುಂತಾದ ತಾತ್ತ್ವಿಕ ವಿಚಾರಗಳನ್ನು ತಿಳಿಸುವ ಗ್ರಂಥಗಳು ; ೧೪. ಎಸಗೇಮುಟ್ಟು = ಎಸಗೆ + ಏಂ + ಮುಟ್ಟು —ಎಸಗೆ— ಏನು ಉಪಕರಣ. ಸಾಮಗ್ರಿ, ಸಹಾಯ ; ೧೫. ತೊಡಗಿಸೆ—ಆರಂಭಿಸಲು : ೧೬. ಮಿಥ್ಯಾತ್ವಂ—

ಜೈನದರ್ಶನದ ವಿಚಾರದಲ್ಲಿರುವ ಅಪನಂಬಿಕೆ, ಸಮ್ಯಕ್ತ್ವಕ್ಕೆ ವಿರುದ್ಧವಾದದ್ದು ; ಇನಿಸಿನಿಸು—ಸ್ವಲ್ಪ ಸ್ವಲ್ಪ; ಪಿಂಗೆ—ಹಿಂಜರಿಯಲು. ತೊಲಗಲು ; ೨೦. ಅಱಿತಮುಂ—ಜ್ಞಾನವೂ ; ಕುಶಲಿಕೆಯುಂ—ನೈಪುಣ್ಯವೂ : ೨೪. ಎಮ್ಮುಕ್ಕೆವತಪದಿಂದಂ=ಎಮ್ಮ, ಉಕ್ಕೆವ+ತಪದಿಂದಂ—ನಮ್ಮ ಕಪಟ ತಪಸ್ಸಿನಿಂದ. ''ಉಕ್ಕೆವಗೆಯ್ತದ ಗಾಳುಗೆಯ್ದೆ ಕೂರ್ಪನೆ'', ''ಉಕ್ಕೆವಗುದುರೆ ಪೊಟಲನಟಲಿಸಿತಾಗಳ್''—ಎಂಬಿವು ಇತರ ಪ್ರಯೋಗಗಳು ; ನಾಗಚಂದ್ರನು ಈ ಪದವನ್ನು ಉತ್ಸವ ಎಂಬರ್ಥದಲ್ಲೂ ಬಳಸಿದ್ದಾನೆ: ''ಉರಿಯಂ ಕಾಱುವ ಕೆಂಡಮಂ ಕಱೆವ ಬಿಲ್ಲಂ ಕಂಡೆವಿಲ್ಲುಕ್ಕೆವಂ'', ''ಉಕ್ಕೆವ ಚಾಮರ ವಿಕ್ಕಲುಯ್ದಪೆಂ''; ಇದೇ ಅರ್ಥದಲ್ಲಿ ಸಿಂಗರಾರ್ಯನು ತನ್ನ 'ಮಿತ್ರವಿಂದಾ ಗೋವಿಂದ' ನಾಟಕದಲ್ಲಿ ಈ ಪದವನ್ನು ಹಲವು ಸಲ ಪ್ರಯೋಗಿಸಿದ್ದಾನೆ : ೨೮. ಏಕವಿಹಾರಿಯಾಗಿ—ಒಂಟಿಯಾಗಿ ಸಂಚರಿಸುವವನಾಗಿ. ಪರಿವ್ರಾಜಕನಾಗಿ.

೭. ೨ : ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳ್ : ಗ್ರಾಮ—ನೂರಕ್ಕೆ ಕಡಿಮೆಯಿಲ್ಲದೆ ಐನೂರಕ್ಕಿಂತ ಹೆಚ್ಚಾಗದ ಕೃಷಿಕ ಕುಟುಂಬಗಳು ವಾಸಮಾಡುವ ಹಳ್ಳಿ : ಇದರ ಎಲ್ಲೆಕಟ್ಟು ಒಂದೆರಡು ಕ್ರೋಶಗಳಷ್ಟಿರುತ್ತದೆ; ಎಲ್ಲೆಯ ನಿರ್ಧಾರಕ್ಕೆ ನದಿ, ಬೆಟ್ಟ, ಕಾಡು ಮುಂತಾದುವನ್ನು ಆರಿಸಬೇಕು. ನಗರ—ರಾಜಧಾನಿ ; ಖೇಡ —ಎತ್ತರವಾದ ಕೋಟೆಯನ್ನುಳ್ಳ ಊರು ; ಖರ್ವಡ—ಕ್ಷುಲ್ಲಕ ಪ್ರಾಕಾರವಿರುವ ಊರು ; ಮಡಂಬ—ದೂರಸ್ಥಲ. ಸೀಮಾಂತದಲ್ಲಿರುವ ಪುರ ; ಪತ್ತನ—ಬಂಡಿಗಳಲ್ಲಾಗಲಿ ನಾವೆಗಳಲ್ಲಾಗಲಿ ಪ್ರಯಾಣಮಾಡಿ ಸೇರಬಹುದಾದ ಪುರ; ದ್ರೋಣಾಮುಖಂ—ಜಲಸ್ಥಳ ಮಾರ್ಗಗಳನ್ನುಳ್ಳ ಪುರ. ಈ ವಿವರಣೆಯಲ್ಲಿ ಭಿನ್ನಾಭಿಪ್ರಾಯಗಳಿವೆ. ವಿದ್ವಾನ್ ಎನ್. ಎಸ್. ವೆಂಕಟನಾಥಾಚಾರ್ಯರಿಂದ ಸಂಪಾದಿತವಾಗಿರುವ ಕೌಟಿಲೀಯಾರ್ಥಶಾಸ್ತ್ರದ ೫೦ನೇ ಪುಟದ ಅಡಿಟಿಪ್ಪಣಿಯನ್ನು ನೋಡಬಹುದು ಈ ವಿಷಯವಾಗಿ ಪಂಪನು ಹೀಗೆ ಬರೆದಿದ್ದಾನೆ (ಆದಿ. ಪುಟ ೮—೬೩ ವ) : ''ಕ್ರೋಶದ್ವಿಕ್ರೋಶ ಸೀಮಾ ಭಾಗ ಯೋಜನ ಪಂಚಶತ ಕುಟುಂಬ ಕುಲಾವಿರ್ಭಾವಿತಾಧಮೋತ್ತಮ ಭೇದಂಗಳುಮಂ ಸರಿದ್ಗಿರಿದರೀ ಭೂರುಹ ಸೇತು ವನ ಸೀಮೋಪಲಕ್ಷಿತಂಗಳುಮಪ್ಪ ಮಹಾ ಗ್ರಾಮಂಗಳುಮಂ ಪೂರ್ವೋಕ್ತರಾಂಭಃಪ್ಲವಂಗಳುಮಂ ಪರಿಖಾ ವಪ್ರಪ್ರಾಕಾರ ಗೋಪುರಾಟ್ಟಾಲ ಪರಿವೃತಂಗಳುಮಂ ನಾನಾಭವನವಿನ್ಯಾಸೋದ್ಯಾನಲೀಲಾ ಜಲಾಶಯಂಗಳುಮಂ ಪ್ರಧಾನ ಪುರುಷಾಧ್ಯಾಸಿತಂಗಳಪ್ಪ ಪುರಂಗಳುಮಂ, ಗಿರಿಸರಿತ್ಸಂರುದ್ಧಂಗಳಪ್ಪ ಖೇಟಂಗಳುಮಂ, ಉರ್ವೀಧರ ನಿರುದ್ಧಂಗಳಪ್ಪ ಖರ್ವಡಂಗಳುಮಂ, ಪಂಚಶತಗ್ರಾಮ ಪರೀತಂಗಳಪ್ಪ ಮಡಂಬಂಗಳುಮಂ. ಸಮುದ್ರೋತ್ಕೀರ್ಣ ನಿವಾಸಂಗಳಪ್ಪ ಪಟ್ಟಣಂಗಳುಮಂ. ನಿಮ್ನಗಾತಟ ನಿಕಟವರ್ತಿಗಳಪ್ಪ ಮಹಾ ದ್ರೋಣಾಮುಖಂಗಳಂ.'' ೬. ಚರಿಗೆದೊಟಲುತ್ತುಂ—ಭಿಕ್ಷಕ್ಕಾಗಿ ಸುತ್ತಾಡುತ್ತ; ೭. ಪರಿತಂದು—ಓಡಿಬಂದು : ೮. ಕರ್ಚಿ<ಕಟ್ಟ್=ತೊಳೆದು : ಪಡಿಗಹ ಮುಚ್ಚಂಥಾಣಂ—ಎತ್ತರವಾದ ಸ್ಥಳವನ್ನು ಪ್ರತಿಗ್ರಹಿಸಿರಿ ಎಂದರೆ ಎತ್ತರವಾದ ಆಸನದ ಮೇಲೆ ಕುಳ್ಳಿರಿ ; ಒಂಬತ್ತುಂ ತೆಱದಿಂದಂ—ಒಂಬತ್ತು ತೆರನಾದ ಸತ್ಕಾರಗಳಿಂದ. ಇವನ್ನು ಕೆಳಗಿನ ಪದದಲ್ಲಿ ಹೇಳಿದೆ :

ಇದಿರ್ಗೊಂಡುನ್ನದೊಳೇಱಲಿಕ್ಕಿ ಚರಣ ಪ್ರಕ್ಷಾಳನಂಗೆಯ್ದು ಸಂ
ಸ್ತ್ರುದದಿಂದರ್ಚಿಸಿ ಭಕ್ತಿಯಿಂದೆ ಪೊಡೆವಟ್ಟಾಗಳ್ ಮನಶ್ಶುದ್ಧಿಯಿಂ
ಮೃದುವಾಕ್‌ಶುದ್ಧಿಯಿನನ್ನ ಶುದ್ಧಿಯಿನೊಱಲ್ದಾಹಾರಮಂ ಶುದ್ಧಮ
ಪ್ಪುದನಾತಂ ನವಪುಣ್ಯವೊಂದಿರೆ ಮಹಾಪುಣ್ಯಾಸ್ಪದಂಗಿಕ್ಕಿದಂ

(ಸುಕುಮಾ. ೪—೨೨)

ಏೞುಂ ಗುಣಂಗಳ್—ಶ್ರದ್ಧೆ, ಭಕ್ತಿ, ದಯೆ, ಉದಾತ್ತತೆ, ಶೀಲ, ಕ್ಷಮೆ. ಶೌಚ ಎಂಬ ಏಳು ಗುಣಗಳು :

ಪುದಿದಟ್ಟಿ ಭಕ್ತಿ ದಯೆಯಿಂ
ದುದಾತ್ತಶೀಲಂ ಕ್ಷಮಾಗುಣಂ ಶೌಚಮೆನಿ

ಪ್ರ್ವದಿತೋದಿತಮೇಱುಗಂ
ಉದಾತ್ತಮತಿ ಕೂಡಿ ಮುನಿಗೆ ದಾನಮನಿತ್ತಂ (ಸುಕುಮಾ. ೪–೨೩.)

೧೦. ಪ್ರಾಸುಕಮಪ್ಪ—ಜೀವಜಂತುರಹಿತವಾದ ಪರಿಶುದ್ಧವಾದ ; ಬಡ್ಡಿಸೆ—ಬಡಿಸಲು, ಸಂವರ್ಧಿಸು ; ೧೩. ಕಿಱಿಯ ಗುಡ್ಡನಂ—ಚಿಕ್ಕ ಶಿಷ್ಯನನ್ನು ; ಲೋಹಾಸನಂ—ಒಂದು ಬಗೆಯಾದ ಪೀಠ ; ಇದರ ಲಕ್ಷಣ. "ಪಂಚಭಿಃ ಸಪ್ತಭಿರ್ವಾಪಿ ನವಭಿರ್ಲೋಹಜೈಃ ಪದೈಃ। ಲೋಹಪಟ್ಟಿ ಕೃತಾಧಾರೈರ್ಲೋಹಜಾಲಕಮೂರ್ಧನಿ॥ ಖದಿಕಾಪಟ್ಟಗರ್ಭಸ್ಥಂ ಕಾರ್ಪಾಸೇನ ವಿಮಿಶ್ರಿತಂ। ಲೋಹಾಸನಮಿದಂ ಪ್ರೋಕ್ತಮುಪರಿಷ್ಟಾತ್ಸುಕೀಲಿತಂ॥" ೧೩. 'ಮನದ' ಎಂಬುದಕ್ಕೆ ಸರಿಯಾದ ಪಾಠ 'ಮಾನ' ಎಂದಿರಬೇಕು, ಔದ್ಧತ್ಯ ಎಂದು ಅರ್ಥ ; ೧೬. ಇನಿವಿರಿದು = ಇನಿತು + ಪಿರಿದು —ಇಷ್ಟು ಹಿರಿದಾದ, ದೊಡ್ಡದಾದ ; ೧೮. ಮಲಗ್ರಸ್ತರ್—ಕೊಳಕಿನಿಂದ ಕೂಡಿದವರು ; ಮಿಂದು—ಸ್ನಾನಮಾಡಿ ; ೨೦. ನಿರಾಕರಿಸಿ—ತಿರಸ್ಕರಿಸಿ ; ಪೊಲ್ಲದಂ ಪೇೞ್ದು—ಕೆಟ್ಟ ಮಾತುಗಳನ್ನಾಡಿ ; ೨೧. ಕೊಯ್ತ್ತಲೆಯಧಮಾ—ಕೊಯ್ದ ತಲೆಯ ನೀಚನೇ ಎಂದರೆ ಎರಡು ತಲೆಯ ನೀಚನೇ.

**ಗಾಹೆ :** ಣಂದಂತಂ—ನಿಂದಿಸುವವನನ್ನು. ಸಿಳಹಂತು—ಶ್ಲಾಘಿಸುವವನನ್ನು. ಸತ್ತುಂ—ಶತ್ರುವನ್ನು. ಮಿತ್ತು—ಮಿತ್ರನನ್ನು ತಹೇವ—ಹಾಗೆಯೇ. ಜೋ—ಯಾವನು. ಸಮಭಾವಇ—ಸಮತೆಯಿಂದ ಭಾವಿಸುವನೋ, ಪೇಚ್ಛಇ—ನೋಡುವನೋ, ಸೋ—ಅವನು. ಸಮಣೋ—ಶ್ರಮಣನು ಎಂದರೆ ಜೈನ ಸಂನ್ಯಾಸಿಯು. ಸೋಯ—ಅವನೇ. ಪವ್ವಇಓ—ಪರಿವ್ರಜಿತನು ಎಂದರೆ ಪರಿವ್ರಾಜಕನಾದ ಯತಿ.

**ವೃತ್ತ :** ವಚಸಾ—ಮಾತುಗಳಿಂದ. ಆಕೃಷ್ಟಯೇವ—ಆಕರ್ಷಿಸಲ್ಪಟ್ಟವನಾಗಿದ್ದೇನೆಯೇ ಹೊರತು. ನ ತು ತಾಡಿತೋಸ್ಮಿ—ನಾನು ಹೊಡೆಯಲ್ಪಟ್ಟವನಾಗಿಲ್ಲ : ಸಂತಾಪಿತೋಸ್ಮಿ—ನಾನು ದುಃಖಿತನಾಗಿದ್ದೇನೆ. ತು—ಆದರೆ, ಮೇ—ನನ್ನ, ಉತ್ತಮಾಂಗಂ—ತಲೆಯು. ನ ಹೃತು—ಅಪಹರಿಸಲ್ಪಡಲಿಲ್ಲ : ಮಮ—ನನ್ನ, ಪ್ರಾಣಾಃ—ಪ್ರಾಣಗಳು, ಪರೈಃ—ಇತರರಿಂದ, ಹೃತಾ—ಅಪಹರಿಸಲ್ಪಟ್ಟಿವೆ, ನ ತು ಮೇ ಸಮಾಧಿಃ—ನನ್ನ ಧ್ಯಾನಸ್ಥಿತಿಯಲ್ಲ : ಇತಿ—ಹೀಗೆಂದು. ಆತ್ಮಚಿಂತನ ಪರಂಪರಯಾ—ಸಂತತವಾದ ಆತ್ಮಧ್ಯಾನದಿಂದ, ಕ್ಷಮೇತ—ಕ್ಷಮಿಸಬೇಕು.

**೮.** ೫ : ಕೀಱಿ—ಗಟ್ಟಿಯಾಗಿ ಕೂಗಿ, ಬಲಾತ್ಕರಿಸಿ ; ೬. ತಪಂಬಟ್ಟು—ತಪಸ್ಸನ್ನು ಹೊಂದಿ ; ಕ್ರಿಯೆಗಳೆಲ್ಲಮಂ—ಎಲ್ಲಾ ಯತ್ಯಾಚರಣೆಗಳನ್ನು ; ೮. ಸಲ್ಗೆಯಿಂದಂ—ಸಲಿಗೆಯಿಂದ ; ಅೞಲಿಂದಂ—ದುಃಖದಿಂದ ; ೧೨. ಬಾೞಂ—ಜೀವಿತವೂ ; ೧೩. ಪೞಿಯಲುಂ—ನಿಂದಿಸಲೂ ; ೧೪. ಆಕ್ಕುಮೆ—ಆಗುತ್ತದೆಯೆ ? ; ೧೫. ಪೊಲ್ಲಮಾನಸರ—ಕೆಟ್ಟ ಮನುಷ್ಯರ ; ಜಾರಜಾತರ—ಜಾರರಿಂದ ಹುಟ್ಟಿದವರ : ವಿಜಾತಿಗಳ್ಗೆ—ಕುಲವಿಲ್ಲದವರಿಗೆ : ಜಡಿದು—ಗದರಿಸಿ ; ೧೬. ಕವರ್ದುಕೊಂಡು—ಸುಲಿಗೆಮಾಡಿ, ಕಿತ್ತುಕೊಂಡು : ಸವಣನಾಗಿರ್ದ್ದಣ್ಣನ—ಜೈನಯತಿಯಾಗಿರುವ ಗಂಡನು ; ೨೦. ನಿದಾನಂಗೆಯ್ದು—ಸಂಕಲ್ಪವನ್ನು ಮಾಡಿ, ನಿಶ್ಚಯಿಸಿ ; ೨೨. ತಿರಿಯುತ್ತಿರ್ದರ್—ತೊಳಲುತ್ತಿದ್ದರು ; ೨೩. ಅತಿಮಾನ ಗರ್ವದಿಂದಂ—ಅತಿಯಾದ ಉದ್ಧತತನದ ಅಹಂಕಾರದಿಂದ ; ಪರಿಭವಿಸಿ—ತಿರಸ್ಕರಿಸಿ ; ೨೪. ಪೞಿದ—ನಿಂದಿಸಿದ : ೨೫. ಉದುಂಬರ ಕುಷ್ಠಮಾಗಿ (ಪಾಠ ಔದುಂಬರ ಎಂದಿರಬೇಕು)—ಅತ್ತಿಯ ಹಣ್ಣಿನಂತೆ ಕ್ರಿಮಿಪೂರಿತವಾದ ಕುಷ್ಠರೋಗವುಂಟಾಗಿ ; ೨೬. ಮಿಳಿಯ ಬಿದಿರಮೇಗೆ—ಹಗ್ಗ ಕಟ್ಟಿದ ಬಿದಿರ ಗಣೆಯ ಮೇಲೆ : ಲಂಗಿಗರ—ದೊಂಬರ, (ಸಂ) ಲಂಖಿಕ, (ಪ್ರಾ) ಲಂಖಿಗ—ಗಣೆಯ ಮೇಲೆ ಆಡುವವನು.

**೯.** ೧ : ಪಿರಿಯವಪ್ಪ—ದೊಡ್ಡವಾದ : ೩. ನಾಳಬಿರ್ದ—ಉದ್ದನೆಯ ಹಳ್ಳವಾಗಿ, ಉದ್ದವಾದ ಕೊಳವೆಯಾಗಿ, (ಸಂ) ನಾಲಿ : ವಸ್ತುಗಳ ಬಿನ್ನೊಡೆದು ಆಗುವ ಹುಣ್ಣಿಗೆ ನಾಳವ್ರಣ ಎಂಬ ಹೆಸರುಂಟು. (ಲೋಕೋಪ. ೯–೧೫೪) ; ಕಱುಮೆಯಾಗಿ—ಬಲಿತು, ವಕ್ರವಾಗಿ (?) : ೩. ಮೇಪಂದಿ > ಮೇಲ್ + ಪಂದಿ—ಮೇಲು ತಿನ್ನುವ ಹಂದಿಯಾಗಿ ; ಮಾದೆಗರ ಮನೆಯೊಳ್—

ಹೊಲೆಯುರ ಮನೆಯಲ್ಲಿ ; ೫. ಪ್ರಧಾನನಪ್ಪ—ಮುಖ್ಯಪುರುಷನಾದ, ಗೌಡನಾದ ; ೬. ಮಾದೆಗಿಗಂ —ಹೊಲತಿಗೂ : ೭. ಬಟ್ದಿದೊಳ್—ಬಾಳಿದವಳು. ಬದುಕಿರುವವಳು ; ೧೨. ನಿಸಿದ್ಧಿಗೆ—ಸಮಾಧಿಗೆ. ಸತ್ತವರನ್ನು ಹೂತು ಮೇಲೆ ಕಟ್ಟಿದ ಬೃಂದಾವನ ; ೧೫. ಸಂಬರ ನಾಗಲಾಣದೊಳ್ —ಶಂಬರ ಎಂಬ ಹೆಸರಿನ ನಾಗಾಲಯದಲ್ಲಿ, ಸಂವಲ (ಕಕೋ) ; ೧೮. ಪರವಸದಿಂದಂ—ಮೈ ಮರೆಯುವಿಕೆಯಿಂದ ; ೧೯. ಮನ್ಯುಮಿಕ್ಕು—ದುಃಖವು ಹೆಚ್ಚಾಗಿ ; ಕುಂಚದ—ನವಿಲಗರಿಯ ಕಟ್ಟಿನ ; ಪರೆದಿರ್ದ—ಹರಡಿದ್ದ; ೨೦. ಸಾರ್ಚುತ್ತಂ—ಹತ್ತಿರಕ್ಕೆ ಸೇರಿಸುತ್ತ; ನೀಡುಂಬೇಗಂ—ದೀರ್ಘಕಾಲ ; ಬಹಳ ಹೊತ್ತು; ೨೧. ನಿರ್ವೇಗವಾಗೆ—ವಿರಕ್ತಿಯುಂಟಾಗಲು ; ಅಲಾಭಂ ಮಾಡಿ —ಭಿಕ್ಷೆಯಿಲ್ಲದಂತೆ ಆಚರಿಸಿ. ಮುಟ್ಟುಪಡಂ ಎಂಬುದು ಅಲಾಭಕ್ಕೆ ಸಮಾನಾರ್ಥಕನಾದ ಶಬ್ದ; ೨೨. ಆವಾಸಕ್ಕೆ—ಮನೆಗೆ ಎಂದರೆ ಇರುವ ಸ್ಥಳಕ್ಕೆ; ೨೫. ಜಾತ್ಯಂಧೆಯಪ್ಪ—ಹುಟ್ಟುಕುರುಡಿಯಾದ; ೨೭. ವಿಧಾತ್ರಾ—ದೈವವೇ.

**೧೦.** ೮ : ಕೂರ್ಮೆಯಾದುದು—ಪ್ರೀತಿಯುಂಟಾಯಿತು ; ೯. ನಿಮ್ಮ ಪೇಟಿ—ನೀವು ಹೇಳಲು, ಪ್ರಥಮಾರ್ಥದಲ್ಲಿ ಷಷ್ಠಿ—(ವಿಭಕ್ತಿ ಪಲ್ಲಟ) ; ಬ್ರತಂಗಳಂ—ವ್ರತಗಳನ್ನು; ಕೈಕೊಳ್ಗುಂ—ಸ್ವೀಕರಿಸುತ್ತದೆ ; ೧೧. ಏಳಿದು ನುಡಿದ—ತಿರಸ್ಕರಿಸಿ ಕೆಟ್ಟ ಮಾತಾಡಿದ ; ೧೩. ಈ ಭವದಿಂತೊಟ್ಟು —ಈ ಜನ್ಮದಿಂದ ಆರಂಭವಾಗಿ, ತೊಡಗಿ ; ೧೫. ಮಧುಮದ್ಯಮಾಂಸಂಗಳಂ—ಜೇನುತುಪ್ಪ ಹೆಂಡ ಮಾಂಸಗಳನ್ನು ; ೧೭. ನೀಡಱಿಂದೆ—ದೀರ್ಘಕಾಲದ ಅನಂತರ ; ಎತ್ತಾನುಮಲ್ಲದೆ—ಎಲ್ಲಿಯಾದರೂ ಅಲ್ಲದೆ, ಪೆಱದು—ಪಡೆಯದು ; ಪೆತ್ತೊಡಂ—ಪಡೆದರೂ ; ೧೮. ಇಂತಾಗಿ—ಹೀಗಾಗಿ ಎಂದರೆ ಹುಟ್ಟುಗುರುಡಿ ದುರ್ಗಂಧೆ ದುಃಸ್ವರೆ ಇತ್ಯಾದಿಯಾಗಿ.

**ವೃತ್ತ :** ವೈರೂಪ್ಯಂ—ವಿಕಾರವಾದ ರೂಪವೂ, ದುರ್ಭಗತ್ವಂ—ಹೀನಭಾಗ್ಯವೂ, ಕುಮತಿತಾ —ಕೆಟ್ಟಬುದ್ಧಿಯು, ಕುಜನತಾಂ—ಕೇಡಿಗರ ಸ್ವಭಾವವು, ಕುತ್ಸಿತತ್ವಂ—ನೀಚತನವು, ಕುಜಾತಿಂ —ಕೆಟ್ಟಜಾತಿ. ಕ್ಷುತ್ತೃಷ್ಣಾಪೀಡಿತತ್ವಂ—ಹಸಿವುಬಾಯಾರಿಕೆಗಳಿಂದ ಪೀಡಿಸಲ್ಪಡುವುದು, ವಿರಸ ವಿಕಳತಾಂ—ರಸಹೀನವಾದ ಮನೋದುಃಖಗಳು ; ವ್ಯಾಧಿತಾಂ—ರೋಗಸ್ವಭಾವವು, ಚ—ಮತ್ತು, ಅಬಲತ್ವಂ—ಶಕ್ತಿಹೀನತೆಯು, ಹೀನತ್ವಂ—ಹೀನತನ, ಪ್ರೇಷಣತ್ವಂ—ಇತರರ ಆಳುತನ ಮಾಡುವುದು, ಲಘುತರಮರಣಂ—ಅತಿ ಹಗುರವಾದ ಸಾವು, ಶೋಕಕಾಂಕ್ಷಾಲಯತ್ವಂ—ದುಃಖ ದುರಾಸೆಗಳಿಗಾಶ್ರಯವಾಗಿರುವುದು. ಇದನ್ನೆಲ್ಲ ಮಾಂಸಾಶೀ—ಮಾಂಸವನ್ನು ತಿನ್ನುವವನು, ಪ್ರಾಣಘಾತೀ —ಜೀವಹಿಂಸೆ ಮಾಡುವವನು, ಮನುಷ್ಯಜನ್ಮಂ—ಮನುಷ್ಯಜನ್ಮವನ್ನು, ಪ್ರಾಪ್ಯ—ಪಡೆದು, ಚಿರಂ —ಬಹುಕಾಲ, ಅನುಭವತಿ—ಅನುಭವಿಸುತ್ತಾನೆ, ಹಿ—ಅಲ್ಲವೆ.

ವಾಮನ ಪಂಗ್ವಂಧ ಕುಬ್ಜ ಖಂಜ ಕರಾಳಾಃ—ಕುಳ್ಳಾಗಿರುವವನು, ಕೈಕಾಲಿಲ್ಲದವನು, ಕುರುಡನಾದವನು. ಗುಜ್ಜಾಗಿರುವವನು, ಕುಂಟನು, ಭಯಂಕರನು, ಜಡ—ದಡ್ಡನು, ಬಧಿರ—ಕಿವುಡನು, ಮೂಕ—ಮೂಗನು, ಕೃಶರೋಮಶ—ಕೃಶನಾಗಿ ಮೈಮೇಲೆಲ್ಲ ಕೂದಲು ಬೆಳೆದಿರುವವನು, ವಕ್ರ —ವಿಕಾರನಾದವನು, ನಿಬಿಡಾಳಿಸ್ತೇ (?) ಆಗಿ, ಪಾಪಾತ್—ಪಾಪಕರ್ಮದ ದೆಸೆಯಿಂದ, ಜಾಯಂತೇ ಹುಟ್ಟುತ್ತಾರೆ, ಕಿಲ—ಅಲ್ಲವೇ.

**ವಸಂತತಿಲಕಂ :** ನರಾಃ—ಮನುಷ್ಯರು, ಪೂರ್ವಚರಿತೇನ—ಹಿಂದೆ ಮಾಡಿದ, ಪಾಪಾತ್ —ಕರ್ಮದಿಂದ, ಉದ್ದಂತ—ಉಬ್ಬುಹಲ್ಲುಳ್ಳವನು, ಕುಬ್ಜ—ಗುಜ್ಜನು, ಕುಣಿ—ಮೋಟುಗೈಯವನು, ಕುಂಡ—ಹಾದರಕ್ಕೆ ಹುಟ್ಟಿದವನು, ಕಾಣಾಃ—ಒಕ್ಕಣ್ಣನು, ಸಂಸ್ಥೂಲ—ಅತಿ ದಪ್ಪವಾದ, ದೀರ್ಘ —ಉದ್ದವಾದ, ಕೃಶರೋಮಶ—ಕೃಶತೆಯಿಂದಲೂ ಕಾಡುಕೂದಲುಗಳಿಂದಲೂ ಕೂಡಿದ, ರೂಕ್ಷ—ಒರಟಾದ. ರೂಪಾಃ—ಆಕಾರವುಳ್ಳವರೂ, ಕುಷ್ಠಾರ್ದಿತಾಃ—ಕುಷ್ಠರೋಗದಿಂದ ಪೀಡಿಸಲ್ಪಟ್ಟವರೂ, ಕೃಪಣ—ಜೀನರಾದವರೂ, ವಾಮನ—ಕುಳ್ಳಾದವರೂ. ಪಾಮನಾಃ ಚ—ಚರ್ಮರೋಗ ಪೀಡಿತರೂ ಆಗಿ, ಭವಂತಿ—ಹುಟ್ಟುತ್ತಾರೆ.

**ವೃತ್ತ :** ಕುಲಹೀನಂ—ನೀಚಕುಲದಲ್ಲಿ ಜನಿಸಿದವನು, ದೀನಮಾನಂ ತಗ್ಗಿದ ಗೌರವವುಳ್ಳವನು, ಪರಿಭವ ವಿಭವಂ—ತಿರಸ್ಕಾರಕ್ಕೆ ಗುರಿಯಾದ ವೈಭವವುಳ್ಳವನು, ದುಷ್ಕೃತಂ—ಕೇಡಿಗನು,

ಪಾಪಕರ್ಮಂ—ಪಾಪಗೆಲಸವನ್ನು ಮಾಡಿದವನು. ಮಲಿನಂ—ಕೊಳಕನು. ದುರ್ಗಂಧಗಂಧಂ—ದುರ್ನಾತವುಳ್ಳವನು. ಜಡಮತಿ—ಮಂದಬುದ್ಧಿಯುವನು. ಕಿವುಡಂ—ಕಿವುಡನು. ಪಂಗು—ಹೆಳವನು. ಮೂಕಂ—ಮೂಗನು, ನಾಣಿಲಿ—ಲಜ್ಜೆಯಿಲ್ಲದವನು, ಜಾರ್ಣ್ಯಂ—ಜಾರನು. ಷಂಡೆ—ಹೇಡಿ, ಲೋಭಂ—ಅತ್ಯಾಸೆಯುಳ್ಳವನು, ಖಳಂ—ದುಷ್ಟನು. ಅಳಿಕಮನಂ—ಕಪಟಮನದವನು. ವಂಚಕಂ—ಮೋಸಗಾರನು. ನಿತ್ಯರೋಗಾಕುಳಂ—ಯಾವಾಗಲೂ ರೋಗಪೀಡಿತನಾದವನು. ಎಂಬ—ಎನ್ನುವ. ಈ ನಾಮ—ಈ ಹೆಸರುಗಳ, ನಾಮಾವಳಿಗೆ—ಹೆಸರುಗಳ ಗುಂಪಿಗೆ, ವ್ರತವ್ಯಾಪ್ತಿಹೀನಂ—ಅಹಿಂಸೆಯೇ ಮೊದಲಾದ ವ್ರತಗಳನ್ನು ಆಚರಿಸಿದವನು, ನಿಳಯಮಕ್ಕುಂ—ಮನೆಯಾಗುತ್ತಾನೆ.

**೧೧.** ೧: ಉಟಿದುದಱಿಂದಂ—ಬಿಟ್ಟುದರಿಂದ : ೨. ಎಯ್ದುಗುಂ—ಹೊಂದುತ್ತದೆ.

**ವೃತ್ತ** : ಮಧುಸುರಾಮಾಂಸ ಸೇವಾನಿವೃತಾಃ—ಜೇನು ಮದ್ಯ ಮಾಂಸಗಳನ್ನು ತಿನ್ನದೆ ಬಿಟ್ಟವರು. ಶ್ರೀವಕ್ಷಃ—ಸಂಪದ್ಯುಕ್ತವಾದ ಎದೆ, ಚಾರುರೂಪಂ—ರಮ್ಯವಾದ ರೂಪ, ಕುಲಬಲವಿನಯಂ—ಕುಲಬಲಗಳ ವಿನಯವು, ಖ್ಯಾತಿ ದೀರ್ಘಾಯುಷ್ಯತ್ವಂ—ಕೀರ್ತಿಯೂ ದೀರ್ಘಾಯುಸ್ಸೂ, ದೇವಾಸುರೇಂದ್ರೈಃ—ಇಂದ್ರನಿಂದಲೂ ರಾಕ್ಷಸ ರಾಜರಿಂದಲೂ, ಪೂಜಾಂ—ಪೂಜೆಯೂ, ಸುರವರವನಿತಾ ಪ್ರೀತಿಂ—ದೇವಸ್ತ್ರೀಯರ ಪ್ರೇಮವೂ, ಅಷ್ಟಾಂಗಭೋಗಂ—ಅನ್ನ, ನೀರು, ತಾಂಬೂಲ, ಪುಷ್ಪ, ಚಂದನ, ವಸ್ತ್ರ, ಶಯ್ಯೆ, ಅಲಂಕಾರ ಎಂಬ ಈ ಸುಖಗಳೂ. ದ್ಯುತಿಮತಿ ಪಟುತಾಂ—ಕಾಂತಿಯುಕ್ತವಾದ ಬುದ್ಧಿಯ ಸಾಮರ್ಥ್ಯವೂ, ರಾಜರಾಜಶ್ರಿಯಂ—ಕುಬೇರನ ಐಶ್ವರ್ಯವೂ. ಸೌಭಾಗ್ಯಂ—ಸಂಪತ್ತು, ಪೂಜ್ಯವಾಕ್ಯಂಚ—ಗೌರವಯುಕ್ತವಾದ ನುಡಿ, ಇವುಗಳನ್ನು ಸ್ವರ್ಗೇ ಮರ್ತ್ಯೇ ಜಗತಿ ಚ—ಸ್ವರ್ಗದಲ್ಲೂ ಮನುಷ್ಯಲೋಕದಲ್ಲೂ ಜಗತ್ತಿನಲ್ಲೂ, ಲಭಂತೇ—ಪಡೆಯುವರು.

**ಆರ್ಯೆ** : ಜೀವಾಃ—ಜೀವಗಳು. ವಿಖ್ಯಾತವಿಪುಲವಂಶೇಷು—ಪ್ರಸಿದ್ಧವೂ ವಿಸ್ತಾರವೂ ಆಗಿರುವ ವಂಶಗಳಲ್ಲಿ. ಏಕೇ—ಒಂದರಲ್ಲಿ, ದ್ಯುತಿ...ಸಂಪನ್ನಾಃ ; ದ್ಯುತಿಮತಿ—ಪ್ರಕಾಶದಿಂದ ಕೂಡಿದ ಬುದ್ಧಿಯಿಂದಲೂ, ಧೃತಿ—ಸ್ಥಿರತೆಯಿಂದಲೂ, ಕಾಂತಿ—ತೇಜಸ್ಸಿನಿಂದಲೂ, ಶ್ರೀ—ಐಶ್ವರ್ಯದಿಂದಲೂ, ಹ್ರೀ—ಲಜ್ಜೆಯಿಂದಲೂ. ರೂಪಾರೋಗ್ಯ ಸತ್ವಬಲ—ಆಕಾರ ಆರೋಗ್ಯ ಸತ್ವಗುಣ ಶಕ್ತಿಯಿಂದಲೂ, ಸಂಪನ್ನಾಃ—ಸಂಪತ್ತನ್ನುಳ್ಳವರಾಗಿ, ಹೊಂದಿದವರಾಗಿ. ಪುಣ್ಯಾತ್—ಪುಣ್ಯವಶದಿಂದ, ಉತ್ಪಾದ್ಯಂತೇ—ಹುಟ್ಟುತ್ತಾರೆ.

ಆಜ್ಞಾ—ಆಜ್ಞೆಮಾಡುವ ಅಧಿಕಾರವೂ, ಯಶಃ—ಕೀರ್ತಿಯೂ. ಧೃತಿ—ಸ್ಥಿರತೆಯೂ, ಮತಿ ದ್ಯುತಿ—ಬುದ್ಧಿಪ್ರಕಾಶವೂ ಕಾಂತಿ—ತೇಜವೂ. ಲಕ್ಷ್ಮೀ—ಐಶ್ವರ್ಯವೂ, ಶೌರ್ಯಪ್ರತಾಪ—ಪರಾಕ್ರಮ ಪ್ರತಾಪಗಳೂ, ಪರಿವಾರಧನೋಪಭೋಗಾಃ—ಸೇವಕರು ಐಶ್ವರ್ಯ ಮುಂತಾದ ಸುಖಗಳೂ. ತೇ—ಇವುಗಳೆಲ್ಲ, ಲೋಕವೇದ ಸಮಯೇಷು—ಲೌಕಿಕ ವೈದಿಕವೆಂಬ ಸಂಪ್ರದಾಯಗಳಲ್ಲಿ, ಸುನಿಶ್ಚಯೇನ—ಅತ್ಯಂತ ನಿಶ್ಚಯವಾದ, ಪುಣ್ಯೋದಯೇನ—ಪುಣ್ಯದ ಏಳ್ಗೆಯಿಂದ ಸುಲಭಾಃ—ಸುಲಭವಾಗಿ ಲಭಿಸುವುವು, ಇತಿ—ಹೀಗೆಂದು, ವರ್ಣಯಂತಿ—ವರ್ಣಿಸುತ್ತಾರೆ.

ಧರ್ಮೇಣ—ಧರ್ಮದಿಂದ. ವರ...ಸುರಥಾಃ—ವರಯುವತಿ—ಶ್ರೇಷ್ಠಳಾದ ಸ್ತ್ರೀ. ಭವನ—ಮನೆ. ವಾಹನ—ಪಲ್ಲಕ್ಕಿ ಮುಂತಾದವು. ನಾಟಕ—ನೃತ್ಯಗಳು. ಧನ—ಐಶ್ವರ್ಯ, ಕನಕ—ಚಿನ್ನ, ರಜತ—ಬೆಳ್ಳಿ. ಮಣಿ—ರತ್ನ, ಸುರಥಾಃ—ಒಳ್ಳೆಯ ರಥಗಳು. ಅತಿಲಲಿತ—ಬಲು ರಮ್ಯವಾದ, ತುಂಗ—ಎತ್ತರವಾದ. ಮದಗಳಿತ—ಮದೋದಕದಿಂದ ಬಿರಿದಿರುವ. ನಾಗ—ಆನೆಗಳೂ, ಭೃತ್ಯಾಃ—ಸೇವಕರೂ. ಭವಂತಿ—ಉಂಟಾಗುತ್ತಾರೆ.

೧೭. ನಿರ್ವಾಣಸುಖ—ಮೋಕ್ಷದ ಸುಖವನ್ನು.

**ಗಾಹೆ :** ಜತ್ಥ—ಎಲ್ಲಿ. ದಯಾ—ದಯೆಯು ಇದೋ, ಸೋ—ಅದು, ಧಮ್ಮೋ—ಧರ್ಮವು ; ತಹಿ—ಹಾಗೆ. ಜತ್ಥ—ಎಲ್ಲಿ. ವಿಸಯಣಿಗ್ಗಹೋ—ಇಂದ್ರಿಯ ನಿಗ್ರಹವು ಇದೆಯೋ, ಸೋವಿ—ಅದು ಕೂಡ. ಧಮ್ಮೋ—ಧರ್ಮವು ; ದಸಅಟ್ಠದೋಸರಹಿ—ಹದಿನೆಂಟು ದೋಷಗಳಿಲ್ಲದವನು,

ಸೋ—ಅವನು. ದೇವಃ—ದೇವತೆಯು, ಆರಾಧ್ಯವಸ್ತುವು ; ಸಂದೇಹೋ—ಸಂಶಯವು, ಣತ್ಥಿ—ನಾಸ್ತಿ, ಇಲ್ಲವು.

೨೧. ದೇವನ ಪೇೞ್ದುದು—ದೇವನು ಎಂದರೆ ಅರ್ಹಂತನು ಹೇಳಿದ್ದು ; ೨೮. ಮೆಲ್ಲಿದಳಾಗಿ—ಮೃದುವಾದವಳಾಗಿ ; ಭವಾಂತರಂಗಳು—ಜನ್ಮಾಂತರಗಳನ್ನು ; ೨೯. ಅದಮಾನುಂ—ಅತಿಶಯವಾಗಿ ; ೩೦. ಶ್ರಾವಕ ಬ್ರತಂಗಳಂ—ಜೈನಗೃಹಸ್ಥನು ಮಾಡಬೇಕಾದ ವ್ರತಗಳನ್ನು ; ೩೧. ಕರ್ಮಕ್ಷಯಮಕ್ಕೆ—ಕರ್ಮದ ನಾಶವಾಗಲಿ.

**೧೨.** ೧ ; ಆವಾಸಕ್ಕೆ—ಮನೆಗೆ : ೨. ಮೇಲ್ಕೊಂಡು—ಧರಿಸಿ ; ೪. ಮಹಾವಿಭೂತಿ ವಿಸ್ತಾರದಿಂದಂ—ಮಹಾವೈಭವದ ಅಧಿಕ್ಯದಿಂದ ; ಪೂಜೆಯಂ—ಪೂಜಾವಸ್ತುಗಳನ್ನು ; ೫. ಪರಕೆಗುಡಲ್—ಹರಕೆಯನ್ನು ಒಪ್ಪಿಸಲು : ಒಡವೋಪ—ಜೊತೆಯಲ್ಲಿ ಹೋಗುವ ; ೬. ವ್ಯಾವರ್ಣಿಸಿ—ವಿಸ್ತಾರವಾಗಿ ವರ್ಣನೆಮಾಡಿ ; ಪುಟ್ಟುವೆನಕ್ಕೆ—ಹುಟ್ಟುವೆನಾಗಲಿ : ೮. ನಿದಾನಂಗೆಯ್ದು—ಸಂಕಲ್ಪಿಸಿ, ನಿಶ್ಚಯಿಸಿ ; ಪಾವು ಕೊಳೆ—ಹಾವು ಕಡಿಯಲು ; ೧೨. ಒಡೆಯಳ್—ಉಳ್ಳವಳು ; ೧೩. ಮಗುೞ್ದು—ತಿರುಗಿ, ಮತ್ತೆ. ಪೊಱವೊೞಲೊಳ್—ಪಟ್ಟಣದ ಹೊರಭಾಗದಲ್ಲಿ ; ೧೮. ಪೆಸರನೊಡೆಯ—ಹೆಸರನ್ನುಳ್ಳ ; ೧೯. ಮುನ್ನಿರ್ದ—ಮುಂಚೆ ಇದ್ದ. ತಂಗಿ ಇದ್ದ : ನಾಗತಾಣದೊಳ್—ನಾಗರೆಡೆಯಲ್ಲಿ ; ೨೧. ನಿಯೋಗಿಗಳ—ಅಧಿಕಾರಿಗಳ ; ಪಲಂಬರುಂ—ಹಲವರೂ ; ೨೫. ಜಾತಿಸ್ಮರೆಯಾಗಿ—ಹಿಂದಿನ ಜನ್ಮಗಳ ನೆನಪುಂಟಾದವಳಾಗಿ ; ೨೯. ಪೊಡೆವಟ್ಟು—ನಮಸ್ಕರಿಸಿ. ಪೊಡೆಯಂ + ಮಡು—ಹೊಟ್ಟೆಯನ್ನು (ನೆಲಕ್ಕೆ) ಸೇರಿಸು, ನಮಸ್ಕರಿಸು.

**೧೩.** ೧ : ಅಭಿಮಾನಂ—ಗರ್ವವು : ಉೞಿದೆ—ಹೊಂದದೆ. ಲಕ್ಷಿಸದೆ ; ಪರಿಭವಿಸಿ—ತಿರಸ್ಕರಿಸಿ ; ಪೊಲ್ಲಮೆಯ—ದುಷ್ಟತನದ. ಕೇಡಿಗತನದ, ಹೊಲಸಿನ ; ೨. ಬಯ್ಗುಳ್ = ಬಯ್ + ಗುಳ್ (ಕೃತ್ಪ್ರತ್ಯಯ); ೪. ಕಱುಮೆಯಾಗಿ ಕಱಮೆಯಾಗಿ—ಬಲಿತು. ಪಕ್ವವಾಗಿ (?); ೮. ಪ್ರತಿಬೋಧಿಸೆ—ಎಚ್ಚರಿಸಲು ತಿಳಿಯಹೇಳಲು ; ೧೧. ಕಟಿದ—ದಾಟಿದ, ಹಿಂದೆ ಆಗಿಹೋದ : ೧೩. ನಿಮ್ಮಮ್ಮಂ—ನಿಮ್ಮ ಅಪ್ಪನು. ತಂದೆಯು ; ಪೆಱವುಳಿ—ಇದರ ಪಾಠ ಪೆಱವುೞ್ ಎಂದಿರಬೇಕು—ಬೇರೆ ಎಡೆ, ಇತರ ಸ್ಥಲವಿಸುಡದಿರ್—ಬಿಸುಡದಿರು : ೧೯. ಪಾರ್ವರೆಮುಂ—ಬ್ರಾಹ್ಮಣರಾಗಿದ್ದೇವೆ. ಮತ್ತು ; ಅಗ್ಗಳಂ—ಶ್ರೇಷ್ಠರು ; ೨೦. ಪೂಜಿತರೆಮುಂ—ಪೂಜಿತರಾಗಿದ್ದೇವೆ. ಮತ್ತು : ಎಮ್ಮಿಂದಗ್ಗಳಂ—ನಮಗಿಂತ ಶ್ರೇಷ್ಠರಾದವರು ; ಪೆಱರಿಲ್ಲ—ಇತರರಿಲ್ಲ : ಸವಣರ ಧರ್ಮಂ—ಜೈನಯತಿಯ ಧರ್ಮವನ್ನು ; ೨೧. ಕೊಳಲಾಗ—ಸ್ವೀಕರಿಸಲಾಗದು. ಆಗ < ಆಗದು : ಅಮ್ಮಾ—ತಂದೆಯೇ ; ೨೨. ಬಿಸುಟಪ್ಪೆಂ—ಬಿಸುಡುತ್ತೇನೆ ; ೨೩. ಎಡೆಯೊಳ್—ನಡುವೆ ; ೨೪. ಬಟ್ಟೆಯೊಳ್—ದಾರಿಯಲ್ಲಿ, ಬಟ್ಟೆ < (ಸಂ) ವರ್ತ್ಮನ್—ಮಾರ್ಗ : ಪೆಡಂಗಯ್ ಉಡಿಯೆ—ಬೆನ್ನು ಹಿಂದೆ ಬಾಗಿಸಿ ಕಟ್ಟಿದ ಕೈಗಳು ಮುರಿವಂತೆ : ಒಂದೆವಱೆಗುಟ್ಟು—ಒಂದೇ ಹರೆಯನ್ನು ಎಂದರೆ ತಮಟೆಯನ್ನು ಹೊಡೆಯುತ್ತ : ೨೫. ಕೊಲಲುಯ್ವ—ಕೊಲ್ಲಲು ಮೆರವಣಿಗೆಯಲ್ಲಿ ಕರೆದುಕೊಂಡು ಹೋಗುವ : ೨೬. ಬೆಸಗೊಳ್ಗುಂ—ಕೇಳುತ್ತಾಳೆ ; ೨೭. ಬೆಸಗೊಳ್ಳಿರಿ—ಕೇಳಿರಿ, ವಿಚಾರಿಸಿರಿ.

**೧೪.** ೧ : ತಳಾಱನಂ—ನಗರ ರಕ್ಷಕನನ್ನು. ಕೊತ್ವಾಲನನ್ನು, ಪ್ರಾ.ದೇ. ತಲವರ, (ತು.) ತಳವಾರೆ. (ತೆ.) ತಲಾರಿ, (ಮರಾ) ತಳ್ವಾರ್. ತಱವಳ ಎಂಬ ರೂಪವೂ ಕನ್ನಡದಲ್ಲುಂಟು ; ಇರುಳ ತಱವಳಿಕೆ ಪೈಡಿಂಬಂಗೆ (ಕುವ್ಯಾ.ಉ. ೧೧-೪೧) ; ೪. ಕಸವರಮನೊಡೆಯೊಂ—ಕಸವರವನ್ನು ಎಂದರೆ ಚಿನ್ನದ ನಾಣ್ಯಗಳನ್ನು (ಚಿನ್ನವನ್ನು) ಉಳ್ಳವನು : ಜೂದಾಡಿ—ಜೂಜನ್ನು ಆಡಿ ; ೫. ದೀನಾರಮೆಂಬ ನಾಣ್ಯವನ್ನು. ಇದು **Denarius** ಎಂಬ ಹೆಸರಿನ ರೋಮ್ ಚಕ್ರಾಧಿಪತ್ಯದ ನಾಣ್ಯ. ಚಿನ್ನದ್ದು ಅಥವಾ ಬೆಳ್ಳಿಯದು : ಸೋಲಮಂ—ಸೋತುದನ್ನು. ಸೋಲ್ > ಸೋಲ : ೧೦. ಅಮೋಘಂ—ತಪ್ಪದೆ, ಖಂಡಿತವಾಗಿ : ೧೨. ಸೂಲದೊಳ್—ಶೂಲದಲ್ಲಿ : ೧೪. ಕ್ಷಪಣಕಂಗೆ—ಜೈನಸನ್ಯಾಸಿಗೆ : ಒಪ್ಪಿಸುವಂ—ಒಪ್ಪಿಸಿ ಕೊಡೋಣ : ಕಿಱುದಂತರಮಂ—ಸ್ವಲ್ಪ ದೂರವನ್ನು : ೧೮. ವೈನಯಿಕನೆಂಬೊಂ—ವೈನಯಿಕ ಎಂಬಾತನು. ಇದನ್ನು ಒಬ್ಬ ಪುರುಷನ

ಹೆಸರಾಗಿ ಇಲ್ಲಿ ಕೊಟ್ಟಿದೆ. ಅದರೆ ವೈನಯಿಕ ಎಂಬುದೊಂದು ವಿದ್ಯೆ : ಚತುಷ್ಪಷ್ಟಿ ಕಲೆಗಳಲ್ಲಿ ಒಂದೆನಿಸುದು (ಕಾಮಸೂ. ೧-೩-೧೬). "ವೈನಯಿಕೀನಾಂ ವೈಜಯಿಕೀನಾಂ ವ್ಯಾಯಾಮಿಕೀನಾಂ ಚ ವಿದ್ಯಾನಾಂ ಜ್ಞಾನಂ", "ಸ್ವಪರವಿನಯ ಪ್ರಯೋಜನಾತ್ ವೈನಯಿಕ್ಯೋ ವಿನಯಾಚಾರ ಶಾಸ್ತ್ರಾಣಿ. ಹಸ್ತ್ಯಾದಿ ಶಿಕ್ಷಾ ಚ" ಎಂದು ವ್ಯಾಖ್ಯಾನಕಾರ ಯಶೋಧರನ ಅಭಿಪ್ರಾಯ. ಆದ್ದರಿಂದ ಇಲ್ಲಿ ವೈನಯಿಕ ಎಂದರೆ ಆ ಹೆಸರಿನ ವಿದ್ಯೆಯನ್ನು ಬಲ್ಲವನು ಎಂದರ್ಥ : ೧೯. ಲೋಗರಂ—ಜನರನ್ನು : ದಂಬಿಸಿ—ಮೋಸಮಾಡಿ : ಮಾಱುಗೊಳ್ವ—ಬೆಲೆಗೆ ಕೊಳ್ಳುವ : ೨೨. ಸರ್ಪದಷ್ಟ ಮಾದೊಡೆ—ಹಾವು ಕಡಿದರೆ, ಹಾವಿನ ಕಡಿತವುಂಟಾದರೆ ; ೨೩. ಇಱಿಪಿದೊಡೆ—ಕಳಕ್ಕೆ ಇಳಿಸಿದರೆ : ೨೪. ಬಾೞಿಸುವೆಂ—ಬದುಕಿಸುತ್ತೇನೆ ; ದಾಷ್ಟಿಕಂಗೆ—ಕಚ್ಚಲ್ಪಟ್ಟವನಿಗೆ : ಜಾವಮಿರಿಂ—ಕಾವಲಾಗಿ ಇರಿ.

**೧೫.** ೧ : ಪುಳ್ಳಿಯಂ—ಪುರುಲೆ ಸೌದೆಯನ್ನು : ೨. ದಾಷ್ಟಿಕನಾ ಪಕ್ಕದೆ—ಕಚ್ಚಿಸಿಕೊಂಡವನ ಮಗ್ಗುಲಲ್ಲಿ, ಪೂ.ಹ.ಗ.ದ ಷಷ್ಠೀ ದೀರ್ಘವಿಲ್ಲದೆ, ಕಾದಿರ್ದಂ—ಕಾವಲಿದ್ದನು : ೩. ಪೊೞ್ತುಱನೆ—ಹೊತ್ತಾರೆಯುದೇ ಪೊೞ್ತುಱನ + ಎ ; ನೇಸಱ್‌ಮೂಡೆ—ಸೂರ್ಯ ಹುಟ್ಟಲು : ೯. ಪಱಿಗುಟ್ಟಿ—ಹರೆಯನ್ನು ಹೊಡೆದು : ದಾಷ್ಟಿಕನಂ—ಕಚ್ಚಲ್ಪಟ್ಟವನನ್ನು ; ೫. ಒರೊರ್ವರ್ಗೆ—ಒಬ್ಬೊಬ್ಬರಿಗೆ : ಸಾಸಿರ—ಸಾವಿರ : ೬. ಪೊಟ್ಟಳಿಗೆಗಳಂ—ಪೊಟ್ಟಣಗಳನ್ನು : ಜನಸಂಕೀರ್ಣದ—ಜನರ ಗುಂಪಿನ : ೭. ಈಡಾಡಿದೊಡೆ—ಬಿಸಾಡಿದರೆ : ೯. ಅರೈವುದು—ವಿಚಾರಮಾಡುವುದು ; ೧೦. ಕಳ್ಳನನಾರಯ್—ಕಳ್ಳನನ್ನು ಹುಡುಕು : ನಿಗ್ರಹಮಂ—ಶಿಕ್ಷೆಯನ್ನು : ೧೧. ಬಗ್ಗಿಸಿ ನುಡಿದೊಡೆ—ಗದರಿಸಿ ಬಯ್ದು ಹೇಳಿದರೆ : ೧೨. ಬಿನ್ನನೆ ಮೊಗಂ ಬಾಡಿ (ಮಾಡಿ)—ಶೂನ್ಯವಾದ, ಬಿಳಿದಾದ ಮುಖವುಳ್ಳವನಾಗಿ : ೧೩. ಬಿನ್ನನಾಗಿ—ಶೂನ್ಯವಾಗಿ, ದಿಕ್ಕುತೋಚದೆ : ೧೬. ಸಂತವಿಸಿದಾಗಳ್—ಸಮಾಧಾನಪಡಿಸಿದಾಗ ; ಪರೀಕ್ಷಿಸಲ್ ವೇಡಿ—ಪರೀಕ್ಷೆಮಾಡಲು ಬಯಸಿ : ೨೦. ಮಿಾಯಲ್ ಪೋಗಿ—ಸ್ನಾನಮಾಡಲು ಹೋಗಿ : ಮಿಾವಲ್ಲಿ—ಸ್ನಾನಮಾಡುವ ಎಡೆ : ೨೧. ನೆಗಳ್—ಮೊಸಳೆ : ಆದಮಾನುಮಂಜಿ—ಬಹಳವಾಗಿ ಹೆದರಿ : ತಡಿಯೊಳಿರ್ದ—ದಡದ ಮೇಲಿದ್ದ : ೨೨. ಬೇಡಿದುದಂ—ಬಯಸಿದ್ದನ್ನು : ಈವೊಡೆ—ಕೊಡುವ ಪಕ್ಷದಲ್ಲಿ : ೨೩. ಪೂಣ್ದೊಡೆ—ಭಾಷೆ ಕೊಟ್ಟರೆ : ೨೪. ಬೇಡುವಯ್—ಬಯಸುತ್ತೀಯ ; ೨೬. ಪಸದನಮಂ—ಅಲಂಕಾರವನ್ನು : ಪ್ರಸಾಧನಾ > ಪಸದನು ; ೨೬. ಪೂಣ್ದಳ್—ಪ್ರತಿಜ್ಞೆಮಾಡಿದಳು, ಭಾಷೆಕೊಟ್ಟಳು : ನೆಱೆದಂದು—ತುಂಬಿದಾಗ : ೨೯. ಪೂಣ್ಕೆ—ಭಾಷೆಯನ್ನು : ೨೯. ಕೈಗೆಯ್ದು—ಸಿಂಗರಿಸಿಕೊಂಡು : ಪೊಱಮಟ್ಟು—ಹೊರಕ್ಕೆ ಸೇರಿ ; ಹೊರಕ್ಕೆ ಹೊರಟು.

**೧೬.** ೧ : ಆಪಣಕ್ಕೆ—ಅಂಗಡಿಗೆ, ಮಳಿಗೆಗೆ : ಎಡೆಯೊಳ್—ನಡುವೆ : ನಿನ್ನ ತೊಟ್ಟ—ನೀನು ತೊಟ್ಟ : ೩. ತುಡುಗೆಯೆಲ್ಲಮಂ—ಒಡವೆಗಳನ್ನೆಲ್ಲ, ಆಭರಣಗಳನ್ನೆಲ್ಲ : ಎನ್ನ ಬರ್ಪನ್ನೆಗಂ—ನಾನು ಬರುವವರೆಗೂ : ೫. ಈ ಪೊೞ್ತು—ಈ ಹೊತ್ತು : ಪೊಲ್ಲಮಾನಸಿಯೆ—ಕೆಟ್ಟ ಮನುಷ್ಯಳೇ : ಮನೆವಾೞ್ತೆ—ಮನೆಯ ಕೆಲಸ, ಮನೆವಾರ್ತೆ : ೭. ಮೆಚ್ಚುಗೆಯ್ವೆಂ—ಮೆಚ್ಚಿದ್ದನ್ನು ಮಾಡುತ್ತೇನೆ : ನನ್ನಿಗೊಟ್ಟು—ಸತ್ಯವಾದುದನ್ನು ಹೇಳಿ. ನಂಬಿಕೆಯನ್ನುಂಟುಮಾಡಿ, ಭಾಷೆಕೊಟ್ಟು : ೧೨. ತುರಿಪದಿಂದೆ—ತ್ವರೆಯಿಂದ : ಅಲ್ಕಱಿಂದೆ—ಪ್ರೀತಿಯಿಂದ : ಪೋದಳಪ್ಪಳ್—ಹೋಗುತ್ತಾಳೆ : ಬೞಿವಱಿಯನೆ—ದಾರಿದಾರಿಯನ್ನೇ. ಹಿಂದುಹಿಂದೆಯೇ : ೧೫. ತೆಱೆಯಿಂ—ತೆರೆಯಿಂದ : ೫. ಎನ್ನ ನನ್ನಿಗೊಂಡಯ್ ನನ್ನ ಭಾಷೆಯನ್ನು ಸ್ವೀಕರಿಸಿದೆ : ೨೦. ಪೊಲ್ಲದು. ವಂದೆ—ಕೆಟ್ಟದು, ಬಂದೆ : ೨೩. ಮದವಳ್—ಮದುವೆ ಹುಡುಗಿ. ಕನ್ನೆ : ೨೫. ಒಡೆಯಯ್—ಉಳ್ಳವಳಾಗಿದ್ದೀಯೆ : ೨೬. ಅೞಿಯಲಾಱೆಂ—ಹಾಳುಮಾಡಲಾರೆನು.

**೧೭.** ೩ : ಕೈಯನಂ—ಕೈಯಲ್ಲಿರುವುದನ್ನು : ಬರ್ದ್ದಪ್ಪನೆ—ಬದುಕುತ್ತೇನೆಯೆ ? : ೪. ಪಱಿಕೊಂಡ—ಎಳೆದು ಕಿತ್ತುಕೊಂಡ : ಕಸವರಂ—ಚಿನ್ನ : ತವನಿಧಿಯಂತೆ—ಅಕ್ಷಯವಾದ ನಿಧಿಯ ಹಾಗೆ : ತವದೆ—ಕ್ಷಯವಾಗದೆ, ನಾಶವಾಗದೆ : ೫. ಮದವಳಂ—ಮದುವಣಗಿತ್ತಿಯನ್ನು : ೧೭. ಕಱಿಸಿದಂ—ಕಳುಹಿಸಿಕೊಟ್ಟನು : ೧೨. ಒಡೆಯೊಳಂ—ಉಳ್ಳವಳನ್ನು : ವಂದೊಳಂ—ಬಂದವ

ಳನ್ನು ; ೧೩. ಸಮನಿಸಿದೊಡೆ—ಒದಗಿದರೆ, ಉಂಟಾದರೆ : ಅಳಿಪದೆ—ಆಸೆಪಡದೆ : ೧೬. ಕಿಱಿದು ಬೇಗಂ—ಸ್ವಲ್ಪ ಹೊತ್ತು ; ೧೭. ಮಱಲುಂದಿಸುವ—ಮೈಮರೆತು ನಿದ್ದೆ ಮಾಡುವ ಹಾಗೆ ಮಾಡಿದ ; ಬೞಿಕ್ಕ—ಅನಂತರ ; ಎೞ್ಪಿ—ಎಬ್ಬಿಸಿ ; ಏಕಾಂತದೊಳ್—ರಹಸ್ಯದಲ್ಲಿ ; ೧೮. ಆಟಿಸಿದೆಂ—ಬಯಸಿದೆನು, ಪ್ರೀತಿಸಿದೆನು : ನೆಱೆಯೆ—ಪೂರ್ಣವಾಗಿ : ತುಡುಗೆಯುಂ—ಒಡವೆಗಳನ್ನು : ೧೯. ಭಾಗಸಮುಳ್ಳೊಡೆ—ಐಶ್ವರ್ಯವಿದ್ದರೆ, ದ್ರವ್ಯವಿದ್ದರೆ (?) ಭಾಗವಶ>ಭಾಗವಸ ; ಪೆಂಡತಿಯುನಾಗಿ—ನಾನು ಹೆಂಡತಿಯಾಗಿ : ಒಡವರ್ಪೆಂ—ಜೊತೆಯಲ್ಲಿ ಬರುತ್ತೇನೆ : ಉರ್ಕೆವ >ಉಕ್ಕೆವ—ಮೋಸ, ಕಪಟ : ೨೦. ಮನಂಗೊಳೆ—ಮನಸ್ಸನ್ನು ಸೂರೆಮಾಡುವಂತೆ ; ಮೆಯ್ಯಱಿಯದೆ—ಮೈಮೇಲೆ ಪ್ರಜ್ಞೆಯಿಲ್ಲದೆ : ೨೨. ಪೋಪಂ—ಹೋಗೋಣ ; ೨೩. ತಂದೆಯ ಮಱಲುಂದಿದಲ್ಲಿಗೆ—ತಂದೆ ಮೈಮರೆತು ನಿದ್ರಿಸುತ್ತಿದ್ದ ಸ್ಥಳಕ್ಕೆ ; ಬರುಂಟಿ—ಬೆರಳಿನಿಂದ ಚುಚ್ಚಿ. ಇದು ಬೆರಂಟು ಎಂಬುದರ ಬೇರೆ ರೂಪವಾಗಿರಬಹುದು, ''ಬೆರಂಟು—ಅಂಗುಲಿಕ್ರಿಯಾಯಾಂ'' : ಬರುಂಟು ಗೆ ಪ್ರಯೋಗ ''ಪೇಟಿಲ್ ಬಾರದು ಮನದೊಳ್ ಪೂಟಿಲ್ ಬಾರದು ಬರುಂಟಿ ಕೇಳ್ದವರಾರುಂ ಬಾಟಿಲ್ ಬಾರದ ಕನಸಂ—ಕಂಡಂ'' (ಅರ್ಧನೇಮಿ. ೭-೬೬) : (ತಮಿಳು) ವರುಟ್ಟು —ನಂಬಿಸು. ವಶೀಕರಿಸು ಎಂಬರ್ಥಗಳುಂಟು : ೨೫. ಚಿತ್ರಕಥೆಗಳುಮಂ—ಆಶ್ಚರ್ಯಕರವಾದ ಕಥೆಗಳನ್ನು : ಕಥಾಸಾಹಿತ್ಯದಲ್ಲಿ 'ಚಿತ್ರಕಥೆ' ಒಂದು ವಿಭಾಗವಾಗಿರಬಹುದು.

**೧೮.** ೪ : ಕಬ್ಬಿನಕೆಯ್ಯಂ—ಕಬ್ಬಿನ ಗದ್ದೆಯನ್ನು : ಉೞ್ವೊಂ—ಉಳುವವನು : ನಿದಾನಮಂ—ನಿಧಿಯನ್ನು ; ೫. ಮಱಸಲ್ವೇಡಿ—ಮರೆಮಾಡಲು ಬಯಸಿ : ೭. ಕೆಮ್ಮಗಿರು—ಸುಮ್ಮನೆ ಇರು : ನಿರ್ಬಂಧದಿಂ—ಬಲಾತ್ಕಾರದಿಂದ. ಒತ್ತಾಯದಿಂದ ; ಕೀಱ್—ಗಟ್ಟಿಯಾಗಿ ಕೂಗಿ ; ೧೨. ಬಿದ್ದಿ—ಮುದುಕಿ<ವೃದ್ಧಾ (ಸಂ) ; ೧೪. ಮೋದಗೆಯ ಮೇಗೆ—ಕಡುಬಿನ ಮೇಲೆ (ಸಂ) ಮೋದಕ>ಮೋದಗೆ ; ೧೫. ಲಡ್ಡುಗೆಗಳ್—ಲಾಡುಗಳು ; ೧೯. ಅಟ್ಟು—ಅತ್ತು : ೨೨. ಸಾರಯೂರಂ—ಹತ್ತಿರದ ಊರನ್ನು ; ೨೩. ನೀರನಿಡಿಸಿ—ನೀರನ್ನು ಇರಿಸಿ ಎಂದರೆ ಬಿಸಿನೀರನ್ನು ಸಿದ್ಧಮಾಡಿ : ಪೂಸಿಸಿ—ಎಣ್ಣೆಯಿಂದ ಬಳಿಯಿಸಿ ; ಒಲ್ಲಣಗೆಯಂ—ಒದ್ದೆ ಬಟ್ಟೆಯನ್ನು ಎಂದರೆ ಸ್ನಾನಮಾಡುವಾಗ ಉಟ್ಟುಕೊಳ್ಳುವ ಬಟ್ಟೆಯನ್ನು, (ಸಂ) ಉದ್ರಪಟಿಕಾ>ಒಲ್ಲಣಗೆ : ೨೪. ಕಟಿಯುಂ—(ಬಿಸಿ) ಗಂಜಿಯನ್ನು : ೨೫. ಪುಯ್ಯಲಿಟ್ಟಾಗಳ್— ಹುಯ್ಯಲಿಟ್ಟಾಗ ಎಂದರೆ ಗಟ್ಟಿಯಾಗಿ ಕೂಗಿಕೊಂಡಾಗ : ಅನಿಬರುಂ—ಅಷ್ಟು ಜನರೂ : ತ್ರಸ್ತಾಭಿಭೂತರಾಗಿ—ಭಯಕ್ಕೆ ವಶರಾಗಿ ; ಪಟ್ಟನೆ ಪಾಱಿ—ತಟಕ್ಕನೆ ಹಾರಿ, ನೆಗೆದು : ೨೬. ಒಳ್ಳಿತ್ತು—ಚೆನ್ನಾಗಿ ; ಛಿದ್ರಿಸಿದಳ್ ವಂಚಿಸಿದಳು : ಪಗೆಸಾಱಿರ್ದ್ದರ್—ಹಗೆತನವನ್ನು ಘೋಷಿಸಿ ಇದ್ದರು.

**೧೯.** ೧ : ಕೂರಿತಪ್ಪ—ಹರಿತವಾದ, ತೀಕ್ಷ್ಣವಾದ ; ಬಾಳಂ—ಕತ್ತಿಯನ್ನು : ೨. ಉಂದಿದ —ಮಲಗಿದ, ನಿದ್ರಿಸುತ್ತಿದ್ದ : ೩. ಅರಿದೊಡೆ—ಕತ್ತರಿಸಿದರೆ ; ೪. ಪುಗಲ್ ಪಾಂಗಿಲ್ಲ—ಪ್ರವೇಶಿಸಲು ಅವಕಾಶವಿಲ್ಲ, ಪಾಂಗು—ರೀತಿ : ೫. ಕೊಱೆದೊಡೆ—ಕತ್ತರಿಸಿದರೆ : ಸೂಟುಸೂಟಿಳೆ— ಸರದಿ ಪ್ರಕಾರದಲ್ಲೇ : ೬. ಮೂಗರಿಯೆಪಟ್ಟು—ಮೂಗು ಕತ್ತರಿಸಲ್ಪಟ್ಟು, ಕರ್ಮಣಿಪ್ರಯೋಗ ; ೭. ಇಂದ್ರಜಾಲಿಗನ—ಮಾಯಮಂತ್ರಗಳನ್ನು ಮಾಡುವವನ : ೮. ಪುಡುಕೆಯಂ—ಪೆಟ್ಟಿಗೆ, ಸಂಪುಟ, ಭರಣಿ, ಬುಟ್ಟಿಯನ್ನು, ಪುಡುಕೆಯ ಮೊಲದಂತೆ ತುಬ್ಬುತಿರ್ಪರ್ ಪಗೆವರ್ (ಚಾವುಂ. ಪು. ೨೨) ''ಪುಡುಕೆಯ ಪೊಂಗಳಾರೊಡನೆ'' (ಅಜಿಪು. ೨-೧೦೩), ''ತರವೇಟುಟ್ ಮಾಣಿಕ್ಯ ಭಂಡಾರದ ಪುಡಿಕೆಗಳಂ (ಕಾವ್ಯಾಲೋ. ೨೮೪) ಎಂದು ಇತರ ಪ್ರಯೋಗಗಳು. (ಸಂ) ಪುಟಿಕಾ >ಪುಡಿಕೆ, ಪುಡುಕೆ ; ೯. ಮಱಲುಂದಿದರ್—ಮೈಮರೆತು ಮಲಗಿದರು ; ೧೦. ಪಿಶಿತಮಂ— ಮಾಂಸವನ್ನು : ಮಾಡುತ್ತಿರ್ದು—ಬೇಯಿಸಿ ಸಿದ್ಧಪಡಿಸುತ್ತಿದ್ದು ; ೧೧. ಪಾವೆಗಳುಂ —ಬೊಂಬೆಗಳೂ : ೧೨ ಝಂಪಮಂ—ಮೇಲುಹೊದಿಕೆಯನ್ನು : ೧೬. ಬೞಿಯಂ ತಗುಳೆ—ಬೆನ್ನಟ್ಟಿ ಓಡಲು, ಹಿಂದು ಹಿಂದೆ ಓಡಿಬರಲು : ೧೭. ಪ್ರತಿಮುಖಮಂ—ಮುಖವಾಡವನ್ನು : ೧೮. ಕಳೆದಿಕ್ಕಿ—ತೆಗೆದೆಸೆದು : ಮಾಣಿಸಿ—ನಿಲ್ಲಿಸಿ : ೧೯. ಪಚ್ಚುಗೊಟ್ಟು—ಹಂಚಿಕೊಟ್ಟು ; ಇದು ಪಚ್ಚುಗೊಟ್ಟು ಎಂದಿರಬೇಕು, ''ಪಸು ವಿಭಜನೇ'' : ೨೦. ಬೈಗಿರುಳಿನ—ಮುಂಜಾನೆಯ ; ಚಾವಂ

—ಏಳೂವರೆ ಗಳಿಗೆಯ ಕಾಲ, (ಸಂ) ಯಾಮ ; ೨೧. ನೆರಂಬೆಱದೆ—ಸಹಾಯವನ್ನು ಪಡೆಯದೆ ; ೨೩. ಬಟ್ಟೆಯೊಳ್ ಬರ್ಪ—ದಾರಿಯಲ್ಲಿ ಬರುವ ; ೨೪. ನೀನಾರ್ಗೆ—ನೀನು ಯಾರಿಗೆ ಸಂಬಂಧಿಸಿದವಳು, ಯಾರು : ೨೬. ಒಂದು ಪಾಂಗಿನೊಳ್—ಒಂದು ರೀತಿಯಲ್ಲಿ ; ಪಿಶಿತದ ಖಂಡಮಂ—ಮಾಂಸದ ಚೂರನ್ನು.

**೬೪.** ೨ : ಪಱಿಯೆ ಕಚ್ಚಿದೊಡೆ—ಕತ್ತರಿಸಿಹೋಗುವಂತೆ ಕಚ್ಚಿದರೆ ; ಪುಯ್ಯಲಿಟ್ಟು—ಕೂಗಿಕೊಂಡು ; ೪. ಈ ಪೊಟಲೊಳ್—ಈ ಪೊಟ್ಟರೆಯಲ್ಲಿ, ಇದು ಪೊೞಲೊಳ್ ಎಂದೂ ಇರಬಹುದು ; ೬. ದಿವಸಕ್ಕಂ—ಪ್ರತಿದಿನವೂ ; ೧೪. ಕಿಱಿದಾನುಂ—ಸ್ವಲ್ಪ ಚಿಕ್ಕದಾಗಿರುವ ; ಛಿದ್ರದ್ವಾರ—ರಂಧ್ರದ ಬಾಯಿ : ೧೬. ಗಾವುಂಡಂ—ಗೌಡನು, (ಸಂ) ಗ್ರಾಮಕೂಡ>ಗಾವಊಡ>ಗಾವುಡ>ಗವುಡ>ಗವುಣ್ಡ ಇತ್ಯಾದಿ ರೂಪಾಂತರಗಳು ; ೧೯. ಅರಸುವರೆಗಮಾದೊಡೆ—ರಾಜನವರೆಗೂ ದೂರು ಹೋದರೆ ; ೨೨. ನಿವೃತ್ತಿಗೆಯ್ದನಮ್ಮಾ—ಬಿಟ್ಟೆನು ತಂದೆಯೇ ; ೨೫. ಏದೋಷಂ ಗೆಯ್ದರ್—ಏನು ತಪ್ಪನ್ನು ಮಾಡಿದರು.

**೬೫.** ೩ : ಸಾರೆ—ಸಮೀಪದಲ್ಲಿ ; ಪೊೞಲ್—ಪಟ್ಟಣ ; ಪರದಂ—ವ್ಯಾಪಾರಿ, ವರ್ತಕ ; ೬. ಪರದಿಗಂ—ವರ್ತಕನ ಹೆಂಡತಿಗೂ, ವರ್ತಕ ಸ್ತ್ರೀಗೂ : ಬಸಿಱೊಳಿರ್ದಂತೆ—ಇನ್ನೂ ಗರ್ಭದಲ್ಲಿರುವಾಗಲೇ : ೮. ನುಡಿದರ್—ಮಾತುಕೊಟ್ಟರು ; ೧೨. ಕೈನೀರೆಱೆದು—ಕೈಗೆ ಧಾರೆಯನ್ನು ಹೊಯ್ದು ; ತಗುಳ್ದೊಡೆ—ತೊಡಗಿದರೆ ; ೧೮. ಮಱೆವಾೞುತ್ತಿರ್ಪಂ—ಮರೆಯಾಗಿ ಬಾಳುತ್ತಿರುವನು, ಗುಟ್ಟಾಗಿ ಬದುಕುತ್ತಿರುವನು ; ೨೧. ಕಾಯ್ದ—ಕಾಸಿದ : ಕಬ್ಬೊಣ್ಣ—ಕಬ್ಬಿಣದ ; ೨೨. ಅಪ್ಪವೇೞಿಂ—ಆಲಿಂಗಿಸುವಂತೆ ಹೇಳಿರಿ.

**೬೬.** ೧ : ಕೊಲೆಪಡುವಾತಂ—ಕೊಲೆಯನ್ನು ಅನುಭವಿಸುವವನು, ಅಥವಾ ಕೊಲ್ಲಲ್ಪಡುವವನು : ಗೋಮಂಡಳಮಂ—ಹಸುಗಳ ಮಂದೆಯನ್ನು : ೨. ಒಳ್ಳಿದುವಪ್ಪ—ಚೆನ್ನಾಗಿರುವ, ಉತ್ತಮವಾಗಿರುವ : ೩. ಪಯಸುಮಂ—ಹಸುಗಳನ್ನೂ, ಕರೆವ ಆಕಳುಗಳನ್ನೂ ; ಪ್ರಮಾಣಂ ಮಾಡಿ—ಆಣೆ ಮಾಡಿ : ೪. ಪಸರದೊಳ್—ಸಲಿಗೆಯಲ್ಲಿ ; ದಾಯಂಗೊಟ್ಟಂ—ಆಸ್ತಿಯನ್ನು ಕೊಟ್ಟನು ಅಥವಾ ಅವಕಾಶ ಕೊಟ್ಟನು : ಸಾಮಂತರ—ಅಧೀನರಾಜರ : ನಿಯೋಗಿಗಳ—ಅಧಿಕಾರಿಗಳ : ೬. ಅರಸರ ಮಂಡಲದೊಳಗೆ—ರಾಜನ ಗೋವುಗಳ ಮಂದೆಯಲ್ಲಿ : ಲೋಭಾಭಿಭೂತಂ—ದುರಾಸೆಗೆ ವಶನಾಗಿ : ೮. ಜಡಿದು ಬಗ್ಗಿಸಿಕೊಂಡು—ಗದರಿಸಿ ಬೈದು : ಉಣೆ—ಉಣ್ಣಲು, ಅನುಭವಿಸಲು : ೯. ಅಗ್ಗಳಮಪ್ಪ—ಶ್ರೇಷ್ಠವಾದ : ೧೦. ಮೂಲಿದಸೆ—ಎದರುಬಿದ್ದು ಹೀಯಾಳಿಸಿದರೆ : ೧೩. ಎನ್ನ ಕೊಟ್ಟುದಱೊಳ್—ನಾನು ಕೊಟ್ಟಿದ್ದರಲ್ಲಿ ; ೧೬. ಒಯ್ದಪ್ಪರ್—ತೆಗೆದುಕೊಂಡು ಹೋಗುತ್ತಾರೆ ; ೧೭. ಕಳ್ಳದ—ಕದಿಯುದ, ಕಳದ ಎಂಬ ರೂಪವೂ ಉಂಟು ; ಸ್ವದಾರಸಂತೋಷಂ—ತನ್ನ ಹೆಂಡತಿಯಲ್ಲೇ ಸಂತೋಷವನ್ನು ಹೊಂದುವುದು. "ಪೊಸ ಜವ್ವನಮಂ ಸ್ವದಾರಸಂತೋಷದೆ" (ಗದಾ. ೫-೨೨) ; ಪರಿಮಿತ ಪರಿಗ್ರಹಂ—ಎಷ್ಟು ಬೇಕೋ ಅಷ್ಟರ ಮಿತಿಯುಳ್ಳ ಸ್ವೀಕರಣ ; ೧೯. ಸೇದೆಯಂ—ಆಯಾಸವನ್ನು ; ಕಟ್ಟುಪಡುವುದುಂ—ಬಂಧನಕ್ಕೆ ಒಳಗಾಗುವುದೂ : ೨೧. ನಿರ್ಲಜ್ಜಂ—ನಾಚಿಕೆಯಿಲ್ಲದ : ಬತ್ತಲಿಗನಪ್ಪ—ಬೆತ್ತಲೆಯಾಗಿರುವ; ೨೦. ಗೆಂಟಱೊಳ್—ದೂರದಲ್ಲಿ : ೨೬. ಬೇನೆ—ನೋವು : ೨೯. ಎಡೆಯಿಂದಂ—ಸ್ಥಳದಿಂದ.

**೬೭.** ೧ : ಆಟ್ಯಾದವನ್ನೆಗಂ—ಹಾಳುಮಾಡದವರೆಗೆ : ೨. ತೊವಲಂ—ಚಿಗುರನ್ನು : ಅಬ್ರಹ್ಮಣ್ಯಂ ಭೋ—ಬ್ರಾಹ್ಮಣನು ಕಷ್ಟಕ್ಕೆ ಸಿಕ್ಕಿದಾಗ ಸಹಾಯಕ್ಕಾಗಿ ಕೂಗಿಕೊಳ್ಳುವುದು : ೫. ಕೋಳ್ಪಟ್ಟೆನ್—ಕೊಳ್ಳೆ ಹೊಡೆಯಲ್ಪಟ್ಟೆನು—ಸುಲಿಗೆಗೊಳಗಾದೆನು ; ೮. ಸಬಾಳವೃದ್ಧಜನಮೆಲ್ಲರುಂ—ಎಲ್ಲ ಹುಡುಗರೂ ಮುದುಕರೂ : ೧೦. ಇದೇನ್ ಸಂಬಂಧಂ—ಇದೇನು ವಿಚಾರ, ವಿಷಯ : ೧೯. ಓದಿಸಿವಾ—ಕಲಿಸಿದೆಯಾ, ಹೇಳಿಕೊಟ್ಟೆಯಾ ; ಇಲ್ಲೋದಿಸಿದೆಂ—ಓದಿಸಿದೆನಿಲ್ಲ, ಹೇಳಿಕೊಡಲಿಲ್ಲ, ಕಲಿಸಲಿಲ್ಲ : ೨೦. ಎಮ್ಮೋದಿಸಿದ—ನಾವು ಹೇಳಿಕೊಟ್ಟ, ಪಾಠಮಾಡಿದ : ನೆರವಿ—ಸಮೂಹ, ಸಭೆ. ೨೨. ಪ್ರಣವಮಂ—ಓಂಕಾರವನ್ನು : ೨೫. ಪಾಳಿಪದಕ್ರಮ ಜಟೆ—ವೇದ

ಪಠಣದ ನಾನಾ ವಿಧಾನಗಳು ; ೨೮. ವಕ್ಕಾಣಿಸಿ—ವ್ಯಾಖ್ಯಾನಮಾಡಿ, ಸವಿಸ್ತರವಾಗಿ ಹೇಳಿ ; ನೆರೆದ—ಸೇರಿದ.

೩೮. ೩ : ಈಯಿರ್ದ್ದ—ಇಗೋ ಇಲ್ಲಿರುವ : ವಾಯುಭೂತಿಯೆಂಬೊನಾನ್—ವಾಯುಭೂತಿ ಎಂಬುವನನ್ನು, ಇಲ್ಲಿ ಪೂ.ಹ.ಗ.ದ ಆನ್ ಎಂಬ ದ್ವಿತೀಯಾ ವಿಭಕ್ತಿಯಿದೆ ; ೪. ಮಾನಕಷಾಯಂ—ಗರ್ವಕ್ರೋಧ ; ೧೦. ಅರಸುಗೊಟ್ಟು—ದೊರೆತನವನ್ನು ಕೊಟ್ಟು ; ೧೮. ಕಂತಿಯರ ಪಕ್ಕದೆ—ಜೈನ ಸಂನ್ಯಾಸಿನಿಯ ಹತ್ತಿರ ; ೧೮. ಅಚ್ಯುತಕಲ್ಪದೊಳ್—ಅಚ್ಯುತವೆಂಬ ಸ್ವರ್ಗದಲ್ಲಿ : ೨೨. ನಿದಾನಂಗೆಯ್ದು—ಸಂಕಲ್ಪಮಾಡಿ : ಮುಡಿಪಿ—ಸತ್ತು.

೩೯. ೮ : ಆತನ ಪುಟ್ಟಿದಂದೆ—ಅವನು ಹುಟ್ಟಿದ ಆ ದಿನವೇ ; ೯. ಸೆಟ್ಟಿವಟ್ಟಂಗಟ್ಟಿ—ರಾಜಶ್ರೇಷ್ಠಿ ಪದವಿಯ ಪಟ್ಟವನ್ನು ಕಟ್ಟಿ ; ತಪಂಬಟ್ಟಂ—ತಪಸ್ಸನ್ನು ಪಡೆದನು : ೧೧. ಬಳ್ಳಿ ಮಾಡಂಗಳ್—ಲತಾಗೃಹಗಳು ; ೧೩. ನಾಟಕಗಳ್—ನೃತ್ಯಗಳು : ೧೬. ನೈಮಿತ್ತಿಕಂ—ಜೋಯಿಸನು ; ಆದೇಶಂಗೆಯ್ದಂ—ಭವಿಷ್ಯ ಹೇಳಿದನು : ೩೫. ಅವಱ—ಅವುಗಳ ; ಕೊಳಲಾಱದೆ—ಕೊಳ್ಳಲು ಅಸಮರ್ಥರಾಗಿ ; ೨೭. ಒರೊಂದಱೊಳಂ—ಒಂದೊಂದರಲ್ಲೂ ; ಖಂಡವಾಗೆ—ತುಂಡಾಗುವಂತೆ ; ೨೮. ಪಚ್ಚುಗೊಟ್ಟೊಡೆ—ವಿಭಾಗಿಸಿ ಕೊಟ್ಟರೆ ; ಕೆರ್ಪುಗಳೊಳ್—ಎಕ್ಕಡಗಳಲ್ಲಿ ; ೨೯. ತಗುಳ್ಚಿದರ್—ಸೇರಿಸಿದರು, ಅಂಟಿಸಿದರು ; ಚೋದ್ಯಂಬಟ್ಟು—ಅಚ್ಚರಿಯನ್ನು ಹೊಂದಿ : ವಿಭೂತಿಯಂ—ಐಶ್ವರ್ಯವನ್ನು.

೭೦. ೧ : ಬಟ್ಟೆಯೊಳೆಲ್ಲಂ—ದಾರಿಯಲ್ಲೆಲ್ಲ ; ೨. ಪಂಚರತ್ನಂಗಳಿಂ—ನೀಲ, ವಜ್ರ, ಪದ್ಮರಾಗ, ಮುತ್ತು, ಹವಳ ಎಂಬ ಐದು ಬಗೆಯ ರತ್ನಗಳಿಂದ : ನೇತ್ರಪಟ್ಟದುಕೂಲಚೀನಾದಿ—ನೇತ್ರ, ಪಟ್ಟು, ದುಕೂಲ, ಚೀನ ಎಂಬ ಬಗೆಬಗೆಯ ರೇಷ್ಮೆಗಳ : ೩. ಮಣಿಭದ್ರಮಪ್ಪ—ರತ್ನಗಳಿಂದ ಸುಂದರವಾದ; ಹೇಮ—ಚಿನ್ನ : ೪. ಬರಮಂ—ಬರುವುದನ್ನು, ಆಗಮನವನ್ನು : ೪. ಪಾರುತ್ತಿರೆ—ಎದುರುನೋಡುತ್ತಿರಲು : ೭. ಕರಂ ಸಾದು—ಬಹು ಸಾಧುವಾದವನು : ಬರಮಂ—ಬರವನ್ನು ; ೫. ಬೞಿಯನಟ್ಟಂ—ದೂತನೊಡನೆ ಹೇಳಿಕಳಿಸಿರಿ : ೧೧. ಮಾರ್ಕೊಳ್ಳಲಾಱದೆ—ಮೀರಲಾರದೆ, ಪ್ರತಿಭಟಿಸಲಾಗದೆ ; ಬರ್ಪೊನಂ—ಬರುವವನನ್ನು ; ೧೨. ಕಣ್ಬೆತ್ತ—ಕಣ್ಣನ್ನು ಪಡೆದ ; ೧೪. ಸಿದ್ಧಾರ್ಥಂಗಳಂ—ಬಿಳಿ ಸಾಸಿವೆಗಳನ್ನು ; ೧೫. ಸೇಸೆಯನಿಕ್ಕಲ್—ಮಂತ್ರಾಕ್ಷತೆ ಹಾಕಲು ; ೧೬. ಕಟವಮಂ—ಸೊಂಟವನ್ನು ; ೧೬. ಸೊಡರಂ—ದೀಪವನ್ನು ; ೧೭. ಬ್ಯಾದಿ—ವ್ಯಾಧಿ : ಎಟ್ಟನ್ನಿಂ—ಬನ್ನಿರಿ : ೧೮. ಮಣಿಕುಟ್ಟಿಮಮಪ್ಪ—ರತ್ನಖಚಿತವಾದ ನೆಲಗಟ್ಟುಳ್ಳ ; ೨೦. ಅಱಸಲ್ವೇಡಿ—ಹುಡುಕಲು ಬಯಸಿ ; ತೂಂತಂ—ತೂಬನ್ನು, ರಂಧ್ರವನ್ನು ; ಉರ್ಚಿ—ಬಿರಡೆಯನ್ನು ತೆಗೆದು ; ೨೨. ಆರೋಗಿಸಲ್—ಊಟಮಾಡಲು : ೨೩. ಪರಿಯಣದ—ಊಟದ ತಟ್ಟೆಯ ; ೨೪. ಇನಿಯಮಪ್ಪ—ರುಚಿಯಾದ, ಸಿಹಿಯಾದ : ೨೫. ಕುತ್ತಂ—ರೋಗ ; ೨೬. ಅರುಚಿ—ರುಚಿಯಿಲ್ಲದಿರುವುದು ; ಬಗೆದು—ಭಾವಿಸಿ : ಸಮೆದ ಬೞಿಕ್ಕೆ—ಮುಗಿದ ತರುವಾಯ.

೭೧. ೧ : ಅವಂ—ಅವುಗಳನ್ನು ; ಪಸದನಂಗೊಂಡು—ಅಲಂಕರಿಸಿಕೊಂಡು : ೪. ಮರ್ದಂ—ಔಷಧವನ್ನು ; ೫. ಸರುಸಪಂಗಳ್—ಸಾಸಿವೆಗಳು ; ಅವ ಕಾಲಮುಂ—ಎಲ್ಲಾ ಕಾಲವೂ ; ೭. ವಾಸಿಸಿದ—ವಾಸನೆ ಕಟ್ಟಿದ; ಕೂೞಂ—ಅನ್ನದಗುಳನ್ನು ; ೧೧. ದೊರೆಯಲ್ಲವು—ಸಮಾನವಲ್ಲ; ೧೯. ಭ್ರಾತರರಪ್ಪ—ಸಹೋದರರಾದ ; ೨೩. ಮಾಡದ—ಮನೆಯ ; ಪೆಱಗಣ—ಹಿಂದಣ ; ೨೫. ಪಱಿವೊತ್ತು—ಹರೆ ಬಾರಿಸುವ ಹೊತ್ತು. ಸಂಜೆ ; ಜೋಗುಗೊಂಡಿರ್ದರ್—ಯೋಗಸ್ಥರಾಗಿದ್ದರು ; ೨೭. ಪೆಱವುೞಿ—ಬೇರೆ ಎಡೆ, ಬೇರೆ ಸ್ಥಳ : ಬಸದಿ—ಜೈನದೇವಾಲಯ : ೨೮. ನಿಡುಪಯಣಂ—ದೀರ್ಘಪ್ರಯಾಣ ; ಸೇದೆಗೆಟ್ಟು—ಆಯಾಸದಿಂದ ಬಳಲಿ : ಎಂತಾನುಂ—ಹೇಗಾದರೂ : ಅಸತ್ತು—ಆಯಾಸಗೊಂಡು : ಜೋಗಿನ—ಯೋಗದ.

೭೨. ೧ : ಪೊೞ್ತಱೊಳ್—ಹೊತ್ತಿನಲ್ಲಿ : ಜೋಗುಗೊಂಡಿರ್ದೆಂ—ಯೋಗವನ್ನು, ತಪಸ್ಸನ್ನು ಸ್ವೀಕರಿಸಿದ್ದೇನೆ : ೨. ನಾಲ್ಕು ತಿಂಗಳುಂ—ಚಾತುರ್ಮಾಸವೂ : ೩. ಓವದೆ—ಪರಿಸದೆ : ಮೋನಂ

ಗೊಂಡು—ಮೌನವಾಗಿದ್ದು, ಮೌನವ್ರತವನ್ನು ಹೊಂದಿ : ನಡಪಾಡದೆ—ಅಡ್ಡಾಡದೆ, ಓಡಾಡದೆ : ಬಳಗಣ—ಒಳಗಡೆಯೇ ; ೪. ಜೋಗು ನೆಱೆದಂದು—ಯೋಗ ಪೂರ್ಣವಾದಾಗ : ಬಿಜಯಂಗೆಯ್ಯಂ—ಪ್ರಯಾಣ ಬೆಳೆಸಿರಿ : ೬. ಪಱನೆಯ ನೆಲೆಯೊಳ್—ಪಱನೆಯ ಅಂತ್ಯದಲ್ಲಿ : ೭. ಲಂಬಿರ್ದಂ—ಮಲಗಿದ್ದನು : ೮. ಪ್ರಮಾಣಾವಸಾನದೊಳ್—ಅವಧಿಯ ಕೊನೆಯಲ್ಲಿ : ೯. ಬೈಗಿರುಳಿನ—ಮುಂಜಾವದ, ರಾತ್ರಿಯ ಕೊನೆಯ ಭಾಗದ : ಪಂಚಮಹಾಶಬ್ದದ—ಶೃಂಗ, ತಮಟೆ, ಶಂಖ, ಭೇರಿ, ಜಯಘಂಟೆ (ಜಾಗಟೆ) ಎಂಬ ಐದು ವಾದ್ಯಗಳ : ಪೊಟ್ಟುಜಿಱೊಳ್—ಬಾರಿಸುವ ಸಮಯದಲ್ಲಿ : ತ್ರಿಲೋಕಪ್ರಜ್ಞಪ್ತಿ—ಲೋಕಾಕಾರಾದಿಗಳನ್ನು ನಿರೂಪಿಸುವ ಶಾಸ್ತ್ರಗ್ರಂಥ : ೧೦. ಪರಿವಿಡಿಗೆಯ್ದಾಗಳ್—ಅನುಕ್ರಮವಾಗಿ ಪಠಿಸಿದಾಗ. "ಪರಿವಿಡಿಗೆಯ್ಯೆಸೊಂದಿಗಿಳಿ ತಂದೆಯ ತಾಯ ಸಮೀಪದೊಳ್ ತನೂದರಿಯ ರತೋಪಯುಕ್ತರುತಿಯಂ ವಿನತಾಸನೆ ನಾಣ್ಚಿ" ಎಂದು ಪೊನ್ನನ ಪ್ರಯೋಗ : ೧೨. ಪದ್ಮಗುಲ್ಮವೆಂಬ ವಿಮಾನಮಂ—ಪದ್ಮಗುಲ್ಮ ಎಂಬ ಪ್ರಾಸಾದವನ್ನು : ೧೩. ವ್ಯಾವರ್ಣಿಸುವುದು—ವಿಸ್ತಾರವಾಗಿ ವರ್ಣಿಸುವುದನ್ನು; ಜಾತಿಸ್ಮರನಾಗಿ—ಜನ್ಮಾಂತರದ ಸ್ಮರಣೆ ಬಂದವನಾಗಿ : ೧೫. ತಣಿಯದಂ—ತೃಪ್ತಿ ಪಡದವನು : ಪುಲ್ಪನಿಯೊಳ್—ಹುಲ್ಲಿನ ಮೇಲಣ ನೀರ ಹನಿಯನ್ನು ; ೧೬. ಶಿವಸುಖಮನೆಯ್ದಿಸುವ—ಮಂಗಳಕರವಾದ ಸುಖವನ್ನು ತಂದುಕೊಡುವ : ಬಟ್ಟಿದೆಂ—ಕೆಳಕ್ಕೆ ಜಾರಿದೆನು. "ಬಟಿಲ್ಚು—ಅಧಃಸ್ರಂಸನೇ" : ೧೮. ಪೆಱಗಣ—ಹಿಂದಣ : ೧೯. ತಗುಳ್ಚಿ—ಸೇರಿಸಿ : ೨೪ ನೆಗಟಲ್ ಪೆತ್ತೆನಿಲ್ಲ—ಆಚರಿಸಲು ಪಡೆದೊಲ್ಲ : ೨೫. ಬಾಳಂಕಬೊಲ್—ಬಾಲದ ಹುಳುವಿನಂತೆ : ೨೮. ಯಾವಜ್ಜೀವಂ—ಜೀವ ಪರ್ಯಂತ.

**೭೩.** ೧ : ಪ್ರಚ್ಛನ್ನಮಪ್ಪ—ಮುಚ್ಚಿದ, ಮರೆಯಾದ; ಮೃತಕ ಸಜ್ಜೆಯೊಳ್—ಹೆಣದ ಹಾಸಿಗೆಯಲ್ಲಿ, ಶವಾಸನದಲ್ಲಿ (?) : ೩. ನೀಡುಂ—ದೀರ್ಘಕಾಲ ; ೬. ತೊಟಲುತ್ತಂ—ಸುತ್ತಾಡುತ್ತ : ಮಹಾಕಾಳಕ್ಕೆ—ಮಹಾಕಾಳವೆಂಬ ಶ್ಮಶಾನಕ್ಕೆ : ೭. ಮಣಿಕುಟ್ಟಿಮ ಭೂಮಿಯೊಳ್—ರತ್ನದ ನೆಲಗಟ್ಟುಳ್ಳ ನೆಲದಲ್ಲಿ ; ೮. ನೇತ್ರಪಟಿಯ—ನೇತ್ರವೆಂಬ ರೇಷ್ಮೆಯ ಬಟ್ಟೆಯ : ೯. ಕಿಟ್ಟಿಯಱಿಯದೊಂ—ಸೋಂಕಿ ತಿಳಿಯದವನು, ಮುಟ್ಟಿ ಅರಿಯದವನು. "ಕಿಟ್ಟು—ಸ್ಪರ್ಶನೇ" ೧೦. ಕಿಱುಗಲ್ಗಳುಂ—ಸೊರಜುಕಲ್ಲು : ಪೆಟ್ಟಿಗಳುಂ—ಹೆಂಟೆಗಳೂ : ಅಗುಂಟ್ದು—ತೋಡಿ, ನಾಟಿಕೊಂಡು : ಪುಗುಳ್ ಒಡೆದು—ಬೊಬ್ಬೆಯಾಗಿ, ಬೊಕ್ಕೆಯಾಗಿ : ಕರಗದ ದಾರೆವೊಲ್—ಗಿಂಡಿಯಿಂದ ಸುರಿಯುವ ನೀರ ಧಾರೆಯಂತೆ : ೧೧. ಎಡೆವಱಿಯದೆ—ನಡುವೆ ಕತ್ತರಿಸಿಹೋಗದೆ, ನಿರಂತರವಾಗಿ : ಒಕ್ಕ—ಸುರಿದ : ನೆತ್ತರ—ರಕ್ತದ : ೧೨. ರಾಗಿಸಿ—ಸಂತೋಷಿಸಿ : ಅಡಿಯಿಂದಂ ತೊಟ್ಟು—ಪಾದಗಳಿಂದ ಪ್ರಾರಂಭಿಸಿ ; ೧೪. ಕಟಿವರೆಗಂ—ಸೊಂಟದವರೆಗೂ : ಪೋಟ್ದು—ಸೀಳಿ : ೧೬. ಸಯಸತ್ತಮ ದೇವನಾಗಿ—ಅತ್ಯಂತ ಶ್ರೇಷ್ಠನಾದ ದೇವತೆಯಾಗಿ : ೧೮. ಪರಿವರಿದು—ಓಡಿಓಡಿ : ೨೦. ಬೈಗಿನ ಪೊಟ್ತುಜಿಱೊಳ್—ಸಂಜೆ ಹೊತ್ತಿನಲ್ಲಿ : ದೇವಸಂಘಾತಮಂ—ದೇವತೆಗಳ ಸಮೂಹವನ್ನು : ೨೫. ಬಯ್ಗಿರುಳಾದಾಗಳ್—ಮುಂಜಾವವಾದಾಗ, ರಾತ್ರಿಯ ಅಂತಿಮ ಭಾಗದಲ್ಲಿ : ೨೯. ಅಡಂಗಿರ್ದೋನನ್—ಅಡಗಿರುವವನನ್ನು.

**೭೪.** ೧ : ತಿಳಿಪಿಕೊಂಡು—ಮುಳಿಸನ್ನು ಹೋಗಲಾಡಿಸಿ, ಪ್ರಸನ್ನಗೊಳಿಸಿ : ೨. ಕೈಗೆಯ್ದು—ಸಿಂಗರಿಸಿಕೊಂಡು : ೫. ಮುಚ್ಚೆಪಟ್ಟನಾಗಿ—ಮುಚ್ಚಲ್ಪಟ್ಟವನಾಗಿ, ಕರ್ಮಣಿ ಪ್ರಯೋಗ : ಕಂಪಿಂಗೆಱಗಿದ—ಸುಗಂಧಕ್ಕಾಗಿ ಬಿದ್ದ, ಮುಸುರಿಕೊಂಡ : ೭. ಮೃತಕಮಂ—ಹೆಣವನ್ನು : ನೀಡಱಿಂದೆಟ್ಟುತ್ತು—ದೀರ್ಘಕಾಲದನಂತರ ಎಚ್ಚತ್ತು : ೮. ಮೆಯ್ಪಂ—ಮೃದುಸ್ವಭಾವವನ್ನು : ನುಡಿಯ ಬಲ್ಮೆಯಂ—ಮಾತಿನ ಪ್ರೌಢಿಮೆಯನ್ನು : ಒಲ್ಮೆಯಂ—ಪ್ರೀತಿಯನ್ನು : ೧೧. ಒಡೆಯವು—ಉಳ್ಳವು, ಇವೆ : ೧೪. ನೀರಿೞಿದು—ಸ್ನಾನಮಾಡಿ : ಬಸಱಿವೆಂಡಿರ್—ಗರ್ಭವತಿಯರಾದ ಪತ್ನಿಯರು : ೧೬. ಸೌಧರ್ಮಕಲ್ಪಂ—ಸೌಧರ್ಮವೆಂಬ ಸ್ವರ್ಗವು : ೧೮. ತಿರಿಕೋಪಸರ್ಗಮಂ—ಪ್ರಾಣಿಗಳಿಂದಾಗುವ ಉಪದ್ರವವನ್ನು : ೨೦. ಆರಾಧಕರಪ್ಪ—ಸಾಧಕರಾದ : ೨೨. ಆಪ್ತಾಗಮ ಪದಾರ್ಥಂಗಳೊಳ್—ಆತ್ಮೀಯವಾದ ಆಗಮಗಳಲ್ಲಿ, ನವಪದಾರ್ಥಗಳಲ್ಲಿ

ಮತ್ತು ಋದ್ಧಿ(ಸಿದ್ಧಿ)ಗಳಲ್ಲಿ; ಅತೀವ—ಅತಿಶಯವಾಗಿ; ೨೪. ಅಪವರ್ಗ ಸುಖಂಗಳಂ—ಮುಕ್ತಿ ಸುಖಗಳನ್ನು; ಎಯ್ದುಗೆ—ಸೇರಲಿ, ಪಡೆಯಲಿ; ಕಾಲಂಗೆಯ್ದೊಡೆ—ಮರಣವನ್ನು ಪಡೆದ ಸ್ಥಳವು; ೨೮. ಅಗರು—ಆ ಹೆಸರಿನ ಸುಗಂಧದ್ರವ್ಯ; ಕಾಳಾಗರು—ಕರಿಯಗರು; ೨೯. ಗೋಶೀರ್ಷ—ಒಂದು ವಿಧವಾದ ಶ್ರೀಗಂಧ.

**೭೫.** ೧: ಬಿಬ್ದುದು—ಬಿದ್ದಿತು; ೨. ಪೆಂಡಿರ್ಕಳ್—ಸ್ತ್ರೀಯರು; ಪ್ರಳಾಪಂಗೆಯ್ದು—ರೋದಿಸಿ; ಅಟ್ಟಿ—ಅತ್ತು; ಸಿದ್ಧಾಯತನ—ಸಿದ್ಧಾಲಯ, ಸಿದ್ಧರ ಕ್ಷೇತ್ರ.

## ೨. ಸುಕೌಶಳ ಸ್ವಾಮಿಯ ಕಥೆ

**೭೬.** ೬: ಪರದನ ಕಾದಲಿಸೆ ಪಡುವ ಮಗಂ—ಹರದನಿಂದ (ವರ್ತಕನಿಂದ) ಪ್ರೀತಿಸಲ್ಪಡುವ ಮಗನು, ಇಲ್ಲಿ ಕರ್ಮಣಿಪ್ರಯೋಗ; ಕಾದಲಿಸು = ಕಾದಲ + ಇಸು, ಕಾದಲ < (ಸಂ). ಕಾತರ, ಪ್ರಾ. ಕಾಯರ = ಪ್ರಿಯ, ಸ್ನೇಹಪಾತ್ರ. ೭. ಪೆರ್ಮೆಯನೊಡೆಯೊಂ—ಹಿರಿಮೆಯುಳ್ಳವನು; ೮. ಬರ್ದಿದೊನಾಗಿಯುಂ—ಸತ್ತವನಾಗಿಯೂ, "ಬರ್ದು—ಮರಣೇ"; ೯. ಪೊರ್ದಿದೊಂ—ಹೊಂದಿದನು, ಪಡೆದನು; ೧೩. ಓರಂತಪ್ಪ—ಸಮಾನವಾಗಿರುವ; ೧೫. ಅಧಿಗಮ—ಸಂಪಾದಿಸಲ್ಪಟ್ಟ.

**ಗಾಹೆ**: ಸಮ್ಮದ್ದಸ್ಸಣ ಸದ್ಧೊ—ಸಮ್ಯಗ್ದರ್ಶನದಲ್ಲಿ ಶುದ್ಧನಾಗಿರುವವನು, ಅಕದ ಪದಕಮ್ಮೋ—ಹೀನವಲ್ಲದ ಎಂದರೆ ಉತ್ತಮವಾದ ಕರ್ಮವನ್ನುಳ್ಳವನು, ಸುಶೀಲ ಗುಣಣಿಳಯೋ—ಒಳ್ಳೆಯ ಶೀಲಕ್ಕೂ ಗುಣಕ್ಕೂ ಮನೆಯಾಗಿರುವವನು, ಉಜಗತ್ತೊ—ಪ್ರಯತ್ನದಲ್ಲಿ ಆಸಕ್ತಿಯುಳ್ಳವನು, ಗುರುಭಕ್ತೋ—ಗುರುವಿನಲ್ಲಿ ಭಕ್ತಿಯುಳ್ಳವನು, ಪವಯಣಕುಸಳೋ—ಪ್ರವಚನದಲ್ಲಿ ಎಂದರೆ ಉಪನ್ಯಾಸಾದಿಗಳಲ್ಲಿ ನಿಪುಣನಾದವನು, ಮದಿಪ್ಪಗಬ್ಭೋಯಂ—ಬುದ್ಧಿಯ ಪ್ರಗಲ್ಭತೆಯನ್ನು ಎಂದರೆ ಪಾಂಡಿತ್ಯವನ್ನು ಉಳ್ಳವನು.

೨೦. ಆದಮಾನುಂ ವಿಚಿತ್ರಮಪ್ಪುದಂ—ವಿಶೇಷವಾಗಿ ರಮ್ಯವಾಗಿರುವುದನ್ನು; ಅನವರತಂ—ಯಾವಾಗಲೂ.

**೭೭.** ೧: ಮೆಯ್ಯನೊಡೆಯೊಳ್—ಮೈಯನ್ನುಳ್ಳವಳು; ೩. ನೋಂತು—ವ್ರತಮಾಡಿ; ೫. ನಾಣ್ಚಿ—ನಾಚಿ, ಲಜ್ಜಿಸಿ; ೬. ಕೇರಂ ಸಾರ್ದು—ಗೋಡೆಯ ಹತ್ತಿರ ಹೋಗಿ; ಪೊನ್ನ—ಚಿನ್ನದ; ಗಳಂತಿಗೆಯುಂ—ನೀರು ತುಂಬುವ ಕಲಶವನ್ನು, ಹೂಜಿಯನ್ನು; ೭. ಲೆಪ್ಪದ—ಮಯಣ ಮುಂತಾದ ಲೇಪ್ಯವಸ್ತುವಿನ; ಕಾಷ್ಠಕರ್ಮದ—ಮರಗೆಲಸದ; ೮. ಜೀವವಿದ್ದ—ಜೀವಂತವಾಗಿರುವ ಶಿಲ್ಪಪ್ರತಿಮೆ; ೯. ಕಶ್ಚಿದ್ದೇವದತ್ತಂ—ದೇವದತ್ತನೆಂಬ ಯಾವನೋ ಒಬ್ಬ; ೧೪. ಗುರುಪರಿವಿಡಿಯಿಂದಂ—ಗುರುಪರಂಪರೆಯ ಕ್ರಮದಿಂದ; ೧೫. ಸಿದ್ಧಸೇಸೆಯುಂ—ಸಿದ್ಧರಿಗೆ ಅರ್ಚಿಸಿದ ಹೂವು ಮುಂತಾದವನ್ನು; ೧೮. ಅಟಿಸಿ—ಬಯಸಿ, ಅಪೇಕ್ಷಿಸಿ; ೨೧. ಪ್ರಧಾನ ವೆರ್ಗಡೆಗಳಂ—ಪ್ರಮುಖರಾದ ಹೆಗ್ಗಡೆಗಳನ್ನು; ೨೨. ಉತ್ತವಳನಾಗಿ—ಉತ್ಕಂಠಿತನಾಗಿ, "ಉತ್ಕಂ ವಿಮನಸ್ಕನುತ್ತವಳನವನಕ್ಕುಂ" (ವಸ್ತುಕೋ. ೧೧೪–೨೩).

**೭೮.** ೧: ವಿಗ್ರಹಮಾದೊಡೆ—ಯುದ್ಧವಾದರೆ; ೩. ಗಂಧಹಸ್ತಿಯುಂ—ಸೊಕ್ಕಿದ ಆನೆಯನ್ನು; ೪. ಪಾಗುಡಮಂ—ಕಾಣಿಕೆಯನ್ನು, (ಸಂ) ಪ್ರಾಭೃತ > ಪಾಗುಡ; ಸೊರ್ಕಿನಿಂದಂ ಮಸಗಿದುದಂ—ಮದದಿಂದ ಕೆರಳಿರುವುದನ್ನು; ಜಾತಿಸ್ಮರೆಯಾಗಿ—ಹಿಂದಿನ ಜನ್ಮದ ಸ್ಮರಣೆ ಬಂದವಳಾಗಿ; ೭. ತಳಿದು—ಚುಮುಕಿಸಿ; ಪರಿತಂದು—ಓಡಿಬಂದು; ೯. ಮಱುಸೂಟಿನೆ—ಮತ್ತೊಂದು ಸಲ, ಮತ್ತೊಂದು ಬಾರಿ; ೧೦. ಕೇರ್ಗಳ—ಗೋಡೆಗಳ; ವ್ಯಾಳಂಗಳಪ್ಪ—ತುಂಟಾಟವಾಡುವ, ತೊಂಡಾದ; ೧೪. ಬಾರಿಯೊಳ್—ಆನೆಗಳನ್ನು ಹಿಡಿಯಲು ಕಟ್ಟಿರುವ ಕೋಟೆಯಲ್ಲಿ, ಬೋನಿನಲ್ಲಿ, (ಸಂ)ದಲ್ಲಿ ಇದಕ್ಕೆ ವಾರೀ ಎಂದೂ ಇದರಿಂದಾಗುವ ಕಾರ್ಯಕ್ಕೆ ವಾರೀಕರ್ಮವೆಂದೂ ಇದೆ. ಈ ಖೆಡ್ಡಾವನ್ನು ಅಥವಾ ಬೋನನ್ನು ನಿರ್ಮಿಸುವ ವಿಧಾನವನ್ನು

'ಮಾತಂಗಲೀಲಾ' ಎಂಬ ಗ್ರಂಥದಲ್ಲಿ ಹೇಳಿದೆ (೧೦-೨, ೩). "ವಾರೀ ತು ಗಜಬಂಧನೀ" ಇತ್ಯಮರಃ ; ೧೫. ನೀಡುಂ ಬೇಗಂ—ಬಹಳಹೊತ್ತು ; ಸೇದೆಗೆಡಿಸಿ—ಸೇದೆಯಿಂ + ಕಿಡಿಸಿ, ಆಯಾಸಗೊಳಿಸಿ, ಶಕ್ತಿಯನ್ನು ಹೋಗಲಾಡಿಸಿ ; ೧೬. ಬಸಕ್ಕೆ—ವಶಕ್ಕೆ ; ಅಂಕುಸಮಂ—ಅಂಕುಶವನ್ನು : ಪೊಳೆಯಿಸುತ್ತ—ಹೊರಳಿಸುತ್ತ, ತಿರುಗಿಸುತ್ತ, ಪೊಳೆ—ಲುಠನೇ" ; ೧೭. ಮುಚ್ಚಿದಾ—ಮೆಚ್ಚಿದೆಯಾ ; ೧೮. ಇದೇನೆಂಬಾನೆ—ಇದು ಏನು ಆನೆ, ಎಂದರೆ ಸಾಮಾನ್ಯವಾದ ಆನೆ ಎಂದು ತಾತ್ಪರ್ಯ ; ತಗರೊಳೋರಂತಪ್ಪುದು—ಟಗರಿಗೆ ಸಮಾನವಾಗಿರುವುದು ; ೧೯. ಬಣ್ಣಮನೊಡೆಯುದು—ಬಣ್ಣವನ್ನುಳ್ಳುದು ; ೨೦. ಎಱೆಯನಪ್ಪುದು—ಒಡೆಯನಾಗಿರುವುದು, ರಾಜನಾಗಿರುವುದು, ಸಲಗ : ೨೨. ಪಿಡಿಯೊಡನೆ—ಹೆಣ್ಣಾನೆಯೊಡನೆ ; ೨೩. ಏಱೆಯಾಡಲ್‌ಬಲ್ಮೆಯುಂ—ಆನೆಸವಾರಿ ಪ್ರೌಢಿಮೆಯನ್ನು : ಗಂಡಗುಣಮುಮಂ—ಪೌರುಷವನ್ನೂ : ೨೫. ನಿನ್ನನ್ನರ್—ನಿನ್ನಂಥವರು : ನೀನಪ್ಪೊಡೆ—ನೀನಾದರೆ.

೭೯. ೨ : ಭರ್ತಾರಂ—ಗಂಡ ; ಭೌಮವಿಹಾರಾರ್ಥಂ—ಭೂಮಿಯ ಮೇಲೆ ಸಂಚರಿಸುವ ಕ್ರೀಡೆಗಾಗಿ ; ೩. ತೊಟಲ್ವಲ್ಲಿ—ಸುತ್ತಾಡುತ್ತಿರುವಾಗ ; ಕರಿಣೀವೃಂದಂ ಬೆರಸು—ಹೆಣ್ಣಾನೆಗಳ ಗುಂಪಿನೊಡನೆ ಕೂಡಿ ; ೪. ಐರಾವಣ ಸನ್ನಿಭಮಂ—ಐರಾವತವನ್ನು ಹೋಲುವುದನ್ನು ; ಉರ್ಕಿನಿಂದಂ ಪೇಟ್ದೊಡೆ—ಒಸಗೆಯಿಂದ, ಸಂತೋಷದಿಂದ ಹೇಳಿದರೆ (?) ; ೫. ಕಟ್ಟೆಪಟ್ಟ—ಕಟ್ಟಲ್ಪಟ್ಟ, ನಿಬದ್ಧವಾದ : ಮುಳಿಸನೊಡೆಯೊಂ—ಕೋಪವುಳ್ಳವನು : ೭. ತೇಜದೊಳೋರಂತಪ್ಪ—ತೇಜಸ್ಸಿನಲ್ಲಿ ಸಮಾನವಾದ; ಮೆಯ್ಯನೊಡೆಯ—ಮೈಯನ್ನುಳ್ಳ ; ೮. ಮೆಲ್ಗಂಭೀರಮಪ್ಪ—ಮೃದುವಾಗಿ ಗಂಭೀರವಾಗಿರುವ ; ಗರ್ಜನೆಯನೊಡೆಯುದುಂ—ಗರ್ಜನೆಯನ್ನುಳ್ಳದ್ದೂ : ೯. ಹತವಿತತ ಕೋಳಾಹಳಂ ಎಟಿದು—ಚೆಲ್ಲಾಪಿಲ್ಲಿಯಾಗಿ ಹೊಡೆದೆಳೆದು ಚೆದರಿಸಿ ; ೧೦. ನಿಡಿಯ—ಉದ್ದವಾದ: ತೋರಮಪ್ಪ—ದಪ್ಪವಾಗಿರುವ. (ಸಂ) ಸ್ಥೂಲ > ಥೋರ > ತೋರ : ೧೫. ಪ್ರಳಾಪಂಗೆಯ್ದು—ರೋದಿಸಿ, ಅತ್ತು ; ೧೬. ತಱಿಕೈಸಿ—ಅಪ್ಪಿಕೊಂಡು ; ೨೦. ರಿಸಿನಿವೇದಕನಿಂದಂ—ಋಷಿಗಳು ಬಂದರೆಂದು ಅರಿಕೆಮಾಡುವವನಿಂದ : ೨೪. ತಮ್ಮಡಿಗಳೊಳ್—ಋಷಿಯರ ಬಳಿ, ಸ್ವಾಮಿಗಳ ಹತ್ತಿರ, ಇಲ್ಲಿ ತಂತಮ್ಮೆಡೆಯೊಳ್—ತಮ್ಮ ತಮ್ಮ ಸ್ಥಾನಗಳಲ್ಲಿ ಎಂದಿರುವ ಪಾಠಾಂತರ ಗ್ರಾಹ್ಯವಾಗಬಹುದು ; ೨೭. ಅಭಿಮುಖರಾಗಿ—ಎದುರಾಗಿ ನಿಂತು : ೨೯. ಜನ್ಮಾನುಬಂಧಿಯಪ್ಪ—ಜನ್ಮಾಂತರದಿಂದ ಬಂದಿರುವ ; ೩೧. ನಿದಾನಸಹಿತಂ—ನಿದಾನ ಸಮೇತನಾಗಿ, ಸಂಕಲ್ಪದೊಡನೆ.

೮೦. ೪ : ದ್ರವಿಳ ವಿಷಯದೊಳ್—ದ್ರಾವಿಡ ದೇಶದಲ್ಲಿ ; ೧೧. ಮಾಲೆಗಾರ್ತಿ—ಹೂವಿನ ಮಾಲೆಯನ್ನು ಕಟ್ಟುವವಳು : ೧೩. ಅೞ್ತಿಯಾದುದು—ಇಷ್ಟವಾಯಿತು, ಪ್ರೀತಿಯಾಯಿತು : ೧೪. ನೆಱಪಲಕ್ಕುಂ—ಪೂರೈಸಲಾಗುತ್ತದೆ ; ೧೬. ತದೀಪ್ಸಿತ—ಅವರಿಗೆ ಬೇಕಾದ, ಇಷ್ಟವಾದ : ೧೭. ಪುಳಿನಸ್ಥಳಂಗಳೊಳ್—ಮರಳಿರುವ ಎಡೆಗಳಲ್ಲಿ ; ೧೮. ಹಸ್ತಿಯೂಥಂ—ಆನೆಯ ಹಿಂಡು : ೧೯. ಕರಿಣೀಗಣಂಗಳ್—ಹೆಣ್ಣಾನೆಯ ಗುಂಪುಗಳು ; ಆಕಾಶಪುಷ್ಪಂಗಳಿಂ—ಆಕಾಶವೆಂಬ ಹೂಗಳಿಂದ : ೨೦. ಕಬಳಂಗೊಳುತ್ತಂ—ಆಹಾರಕ್ಕಾಗಿ ತಿನ್ನುತ್ತ ; ೨೧. ವಿಚ್ಛಳಾಕಾರಮಪ್ಪ—ಹೊಳೆಯುತ್ತಿರುವ ಆಕಾರವನ್ನುಳ್ಳ : ೨೨. ಹಸ್ತಿಭೋಗಂಗಳೊಳ್—ಆನೆಯ ಸುಖಗಳಲ್ಲಿ : ಕಾಂಕ್ಷೆಯಿಂದಂ—ಅಪೇಕ್ಷೆಯಿಂದ : ೨೪. ಬಱಸಿಡಿಲ್—ಮಳೆಯಿಲ್ಲದೆ ಬರುವ ಸಿಡಿಲು : ೨೬. ಪರವಶನಾಗಿ—ಮೂರ್ಛಿತನಾಗಿ ; ಕಾದಲನ—ಪ್ರಿಯನ ; ೨೮ ಸುರಿಗೆಯುಂ—ಕತ್ತಿಯನ್ನು.

೮೧. ೩ : ಸುಭದ್ರಜಾತಿ—ಆನೆಗಳಲ್ಲಿ ಉತ್ಕೃಷ್ಟವಾದ ಒಂದು ತಳಿ, ಜಾತಿ, ಭದ್ರಜಾತಿ ; ೮. ಕಂಡೋರ್ಗಳೆಲ್ಲಂ—ಕಂಡವರೆಲ್ಲ : ೧೦. ಯೂಥಾಧಿಪತಿ—ಹಿಂಡಿನೊಡೆಯ, ಸಲಗ : ೧೨. ನಿಚ್ಚಂ—ನಿತ್ಯವೂ : ೧೩. ನೆರವುತ್ತಂ—ಕೂಡಿಹಾಕುತ್ತ : ೧೬. ಪೊರ್ದಲಾಟಿಸುವುದಂ—ಹೊಂದಲು, ಸೇರಲು ಇಷ್ಟಪಡುವುದನ್ನು : ಸಾರಲೀಯದುದಱಿಂ—ಹತ್ತಿರ ಹೋಗಲು ಬಿಡಲಿಲ್ಲವಾದ್ದರಿಂದ : ೨೩. ದಾಯಮಂ—ಸಲುಗೆಯನ್ನು, ಅವಕಾಶವನ್ನು, ಬಹುಮಾನವನ್ನು ; ೩೦. ತಡಂ ಬಂದು—ತಡವಾಗಿ ಬಂದು : ೩೨. ಮೆಯ್ಯಱಿಯದೆ—ಮೈಮೇಲೆ ಪ್ರಜ್ಞೆಯಿಲ್ಲದೆ.

**೮೨.** ೧ : ಮಲಯಾವತಿಗೆತ್ತು—ಮಲಯಾವತಿಯೆಂದು ಭ್ರಮಿಸಿ ; ೨. ಪರಿಭವಿಸಿದಂ—ತಿರಸ್ಕರಿಸಿದನು ; ಪುರುಡುಂ – ಹುರುಡೂ. ಸ್ಪರ್ಧೆಯೂ ; ೪. ತನ್ನನಿಕ್ಕಿ—ತನ್ನನ್ನು ಬೀಳಿಸಿಕೊಂಡು ; ೫. ಶತಖಂಡಮಾಗಿ—ನೂರು ಚೂರಾಗಿ : ಸತ್ತತ್ತು—ಸತ್ತಿತು ; ಅದಱ ಸತ್ತುದಂ—ಅದು ಸತ್ತುದನ್ನು . ೧೦. ಕೊಲೆಸತ್ತ—ಕೊಲೆಯಿಂ + ಸತ್ತ : ಪೂಜಿಸೆವಟ್ಟ—ಪೂಜಿಸಲ್ಪಟ್ಟ : ೧೧. ಉಪಶಮಕ್ಕೆ—ಶಾಂತಿಗೆ, ಸಮತಾಭಾವನೆಗೆ ; ೧೩. ಅಡಿವೊಣರಂ—ಪಾದದ್ವಯವನ್ನು, ಅಡಿಯ + ಪೊಣರ್— ಜೋಡಿ, ಯುಗ್ಮ; ೧೬. ಕೋಟ್ಕೆಳಂ—ಕೊಂಬುಗಳನ್ನು : ೨೮. ಓರನ್ನನಪ್ಪೊಂ—ಸಮಾನನಂತೆ ಆಗಿದ್ದಾನೆ ; ೩೧. ದ್ರವ್ಯತಪದೊಳ್—ಕಪಟ ತಪಸ್ಸಿನಲ್ಲಿ, ಮಿಥ್ಯಾ ತಪಸ್ಸಿನಲ್ಲಿ.

**೮೩.** ೩ : ಆ ಸತ್ತೊಳಂ—ಆ ಸತ್ತವಳನ್ನು, ಹಾಗೆ ಸತ್ತವಳನ್ನು ; ೫. ಬರ್ದಿ—ನವೆದು ; ಕೃಶವಾಗಿ. (ತಮಿೞು) ವರುಸ್ದು; ಬಂಬಳಂ ಬಾಡಿ—ಬಂಬಲಿಸಂತೆ ಬಾಡಿ ; ೬. ಪಾಡೞಿದು—ಸ್ಥಿತಿಕೆಟ್ಟು ; ಉಬ್ಬೆಗಂಬಟ್ಟು—ದುಃಖಿತನಾಗಿ ; ೯. ಅಯಿರ್ದಳ್—ಆಗೋ, ಇದ್ದಾಳೆ ; ೧೪. ನೆಗೞ್ತಿಗಳನೆಲ್ಲಮಂ—ಮಾಡಿದುದನ್ನೆಲ್ಲ ; ೧೬. ಮರುಳ್ಗೊಂಡು—ಭ್ರಾಂತನಾಗಿ, ಹುಚ್ಚನಾಗಿ; ೧೮. ಬಲಗೊಂಡು—ಪ್ರದಕ್ಷಿಣೆ ಮಾಡಿ ; ೧೯. ಸ್ವೇಪ್ಸಿತ—ತಾನು ಬಯಸಿದ ; ೨೪. ಪಟಮಂ ನಿಮಿರ್ಚಿ—ಚಿತ್ರಪಟವನ್ನು ಸುರುಳಿಬಿಚ್ಚಿ ಸೈತಾಗಿರಿಸಿ ; ೨೪. ಕಾದಲಳೆ—ಪ್ರಿಯಳೆ : ೨೭. ಒಸಗೆಯಿಂದಂ—ಸಂತೋಷದಿಂದ ; ೩೧. ಮುನ್ನವಿಟ್ಟು—ಮೊದಲೇ ಇಟ್ಟು, ಹಾಕಿ, ಮುನ್ನವೆ + ಇಟ್ಟು.

**೮೪.** ೧ : ಆರಯ್ದಪ್ಪ—ಹುಡುಕುತ್ತಿರುವೆ, ವಿಚಾರಿಸುತ್ತಿರುವೆ ; ೪. ಕಲ್ಪಿಸಿ—ಕಲಿಸಿ, ತಿಳಿಯ ಹೇಳಿ ; ೫. ಪಾಂಗಿನೊಳ್—ರೀತಿಯಲ್ಲಿ ; ೭. ದೆವಸಕ್ಕಂ—ಪ್ರತಿದಿನವೂ ; ಅೞ್ಕಱೊಳ್—ಪ್ರೀತಿಯಲ್ಲಿ ; ೧೦. ಮರುಳಾಗಿರ್ದೆಂ—ಭ್ರಾಂತನಾಗಿದ್ದೆ, ಹುಚ್ಚನಾಗಿದ್ದೆ ; ೧೭. ಪಿಂಗಿತೆಂದು—ಹಿಂಜರಿಯಿತೆಂದು, ಹೋಯಿತೆಂದು ; ೧೬. ಭಾಗ್ಯಮಿಲ್ಲದುದಂ—ಅದೃಷ್ಟವಿಲ್ಲದುದನ್ನು ; ಪೆಱಲಾಗ—ಪಡೆಯಲಾಗದು ; ಬೇಂಟಮಂ—ಪ್ರೀತಿಯನ್ನು ; ಉೞಿವುದು—ಬಿಡುವುದು ; ೨೦. ಮಂತಣಮಿರ್ದಲ್ಲಿ— ಮಂತ್ರಾಲೋಚನೆಯಲ್ಲಿದ್ದಾಗ ; ೨೧. ಕೂಸುಕುಡಲ್ಕೆ—ಕನ್ಯಾದಾನ ಮಾಡುವುದಕ್ಕೆ ; ೨೪. ಉರ್ಕವದಿಂದಂ—ಒಸಗೆಯಿಂದ, ಉತ್ಸಾಹದಿಂದ ; ೨೫. ಮದುವಕ್ಕಳಂ—ಮದುವೆಗಿರುವವರನ್ನು ; ೨೭. ಅಱಿವುದರ್ಕಂ—ತಿಳಿಯುವುದಕ್ಕೆ ; ೨೭. ಪಣ್ಣುವಂ—ಮಾಡೋಣ ; ಭಾಗ್ಯದೊಳ್—ಅದೃಷ್ಟದಲ್ಲಿ.

**೮೫.** ೪ : ಮಾಲೆಯಂ ಸೂಡಿದಳ್—ಮಾಲೆಯನ್ನು ಮುಡಿಸಿದಳು, ಹಾಕಿದಳು ; ಆಂ ಏಕೈಕ ಪ್ರಧಾನರೆಂ—ನಾವು ಒಬ್ಬೊಬ್ಬರೇ ಪ್ರವರಪುರುಷರಾಗಿದ್ದೇವೆ ; ೯. ಸೊಪಾರಕ್ಕೆ—ಸೊಪಾರವೆಂಬ ವಿಷಯಕ್ಕೆ. ಈಗಲೂ ಈ ಹೆಸರಿನ ಒಂದು ಊರು ಪಶ್ಚಿಮ ಸಮುದ್ರತೀರದಲ್ಲಿ ನರ್ಮದಾನದಿಯ ಆಳುವೆಗೆ ದಕ್ಷಿಣದಲ್ಲಿದೆ ; ೨೫. ತಮ್ಮಿರ್ವರುಂ—ತಾವಿಬ್ಬರೂ ; ೨೬. ಪರಿನಿರ್ವಾಣ ಭೂಮಿಯೊಳ್—ಮುಕ್ತಿಗೆ ಸಂದ ಪ್ರದೇಶದಲ್ಲಿ ; ೨೯. ಮಾಸೋಪವಾಸಂಗೆಯ್ದು—ಒಂದು ತಿಂಗಳು ಉಪವಾಸವನ್ನು ಮಾಡಿ.

**೮೬.** ೨. ಪೇೞ್ದಿತ್ತು—ಹೇಳಿತು ; ೫. ನೆನೆದಾ—ನೆನೆಸಿಕೊಂಡೆಯಾ ? ; ೧೩. ಕೂಸಂ ಬೇಡಿ—ಕನ್ಯೆಯನ್ನು ದಾನಮಾಡಿ ಎಂದು ಪ್ರಾರ್ಥಿಸಿ ; ಪೆತ್ತು—ಪಡೆದು ; ೧೯. ಕೋಣೊಳ್—ಮೂಲೆಯಲ್ಲಿ ; ೨೦. ವಿಷಯದೊಳ್—ದೇಶದಲ್ಲಿ ; ನೆಱೆದೊಂ—ತುಂಬಿದವನಾದನು ; ೨೮. ಕಾಲಂಗೆಯ್ದು—ಸತ್ತು; ೨೯. ದೇವಗಣಿಕೆಯನೆ—ದೇವಸ್ತ್ರೀಯರನ್ನೇ.

**೮೭.** ೧ : ಪಿರಿದುಂ ವಿಸ್ತಾರದಿಂ—ಹಿರಿದಾದ ವೈಭವದ ವಿಸ್ತಾರದಿಂದ ; ೪. ಸಪ್ತತಳ ಪ್ರಾಸಾದದ—ಏಳು ಉಪ್ಪರಿಗೆಗಳನ್ನುಳ್ಳ ಅರಮನೆಯ ; ೮. ಪೊಲ್ಲಮೆಯುಮಂ—ಹೇಸಿಗೆಯನ್ನೂ; ಅನಿತ್ಯತೆಯುಮಂ—ಅಶಾಶ್ವತತೆಯನ್ನೂ ; ೯. ಬಗೆದು—ಚಿಂತಿಸಿ, ಭಾವಿಸಿ ; ಬುದ್ಧಿಯನೊಡೆಯರಾಗಿ—ಬುದ್ಧಿಯನ್ನುಳ್ಳವರಾಗಿ ; ೧೨. ಕಾಪೊರ್—ಕಾಪಾಡುವವರು ; ೧೩. ತಪಂಬಟ್ಟಪ್ಪಿರ್—ತಪಸ್ಸನ್ನು ಸ್ವೀಕರಿಸುತ್ತೀರಿ ; ೧೫. ನಿಮ್ಮೆಲ್ಲರ ಪೇೞ್ದುದಂ—ನೀವೆಲ್ಲರೂ ಹೇಳಿದ್ದನ್ನು ; ಇಂಬು

ಗೆಯ್ದಪ್ಪೆಂ—ಒಪ್ಪುತ್ತೇನೆ ; ೧೬. ವಕ್ರಂಬರ ಸಲ್ಲ—ಅಡ್ಡಿಯಾಗಿ ಬರಲು ಸಲ್ಲದು ; ೧೭. ಬಾರಿಸೆ —ತಡೆಯಲು ; ಮಾಣ್ದಿರ್ದ—ಬಿಟ್ಟಿದ್ದು : ೨೦. ಚರಿಗೆವೊಕ್ಕೊಡೆ—ಭಿಕ್ಷಕ್ಕಾಗಿ ಮನೆಗೆ ಪ್ರವೇಶಿಸಿದರೆ ; ೨೧. ನಿಱಿಸಿ—ನಿಲ್ಲಿಸಿ ; ಕೈಯಲಿಕ್ಕಿ—ಕೈಯಲ್ಲಿ ಆಹಾರವನ್ನಿಟ್ಟು, ಸಂನ್ಯಾಸಿಗಳು ಬೊಗಸೆಯಲ್ಲಿ ಉಣ್ಣಬೇಕೆಂದು ನಿಯಮ, ಇವರಿಗೆ ಪಾಣಿದಲಭೋಜಿಗಳೆಂದು ಹೆಸರು ; ನಿರಂತರಂ ಮಾಡಿ—ಎಡೆಬಿಡದೆ, ಸಂತತವಾಗಿ ; ೨೪. ಪೆಱುವಯ್—ಹೆರುತ್ತೀಯೆ ; ೨೮. ಒರ್ಮೊದಲಾಗೆ—ಏಕಕಾಲದಲ್ಲಾಗಲು ; ೨೯. ಕಱಿದು—ಸತ್ತು.

೪೮. ೧ : ನೆಲಮನೆಯಂ ಮಾಡಿಸಿ—ನೆಲದೊಳಗಡೆ ಮನೆಯನ್ನು ಕಟ್ಟಿಸಿ ; ಕುತ್ತಂ ಜಲೋದರಂ—ಜಲೋದರವೆಂಬ ರೋಗವು ; ೨. ಕ್ರಿಯೆಗೆಯ್ವೆದಪ್ಪೆಂ—ಚಿಕಿತ್ಸೆ ಮಾಡಿಸುತ್ತೇನೆ ; ೩. ನೆಱೆದಂದು—ತುಂಬಿದಾಗ ; ಪ್ರಸೂತೆಯಾಗಿ—ಹೆತ್ತವಳಾಗಿ ; ೪. ಬೆಸಕೆಯ್ವ ತೊೞ್ತು—ಚಾಕರಿ ಕೆಲಸ ಮಾಡುವ ದಾಸಿ, ಸೇವಕಿ ; ೭. ಕೆಳದಿ—ಗೆಳತಿ ; ೮. ಪಲದೆವಸದಿಂದಂ—ಹಲವು ದಿವಸಗಳಿಂದ ; ೧೦. ಸೂರುಳಿಸಿ—ಪ್ರತಿಜ್ಞೆಮಾಡಿಸಿ. ಭಾಷೆ ತೆಗೆದುಕೊಂಡು ; ಸೆಟ್ಟಿತಿ—ಸೆಟ್ಟಿಯ ಪೆಂಡತಿ ; ಬೆಸಲೆಯಾದಳ್—ಹೆತ್ತಳು, ಪ್ರಸವಿಸಿದಳು ; ಕಿರುಂಡೆಗನಂ —?, ಕಿಱುಂಡೆಗ ಎಂದು ಇದ್ದ ಪಕ್ಷದಲ್ಲಿ ಚಿಕ್ಕವನು ಎಂದರೆ ಚಿಕ್ಕಸೆಟ್ಟಿ ಎಂದು ಅರ್ಥವಾಗಬಹುದೇನೋ ; ತಿರುಂಡಿ ಮಗನು ಪೆತ್ತಳ್ ಎಂದಿದ್ದರೆ ಆಗ ಕದ್ದು ಮಗನನ್ನು ಹೆತ್ತಳು ಎಂದರ್ಥವಾಗುತ್ತದೆ. ತಮಿಳು ತಿರುಡು—ಕದಿ ; ೧೩. ಸಂಜೆವಾರಿಸುತ್ತಿರ್ದ—ಸಂಜೆಕಾಲದಲ್ಲಿ ಸೂರ್ಯನಿಗೆ ಅರ್ಘ್ಯವನ್ನು ಕೊಡುತ್ತಿದ್ದ ; ೧೪. ಮಾದುಫಲಮಂ—ಮಾದಳದ ಹಣ್ಣನ್ನು : ೧೬. ಒಂದೊಸಗೆಯಂ—ಒಂದು ಸಂತೋಷದ ಸುದ್ದಿಯನ್ನು ; ೧೭. ಕಟಕ—ಕಡಗ, ಬಳೆ ; ಕಟಿಸೂತ್ರ—ಉಡಿದಾರ : ೧೮. ಅಂಗಚಿತ್ರಮುಮಂ—ಮೈಮೇಲೆ ಧರಿಸುವ ಆಭರಣಗಳನ್ನು ತೆಗೆದುಕೊಡುವ ಬಹುಮಾನವನ್ನು : ೧೯. ದಾರಿದ್ರ್ಯಮೋಕ್ಷಮಂ—ಬಡತನದ ಬಿಡುಗಡೆಯನ್ನು ; ೨೧. ಸೋಂಕಿಲ ಮೇಗೆ —ಉಡಿಯ ಮೇಲೆ, ಮಡಿಲಿನ ಮೇಲೆ ; ಎಳನೇಸಱ ತೇಜದೊಳ್—ಬಾಲಸೂರ್ಯನ ಕಾಂತಿಯಲ್ಲಿ ; ಓರಂತಪ್ಪನಂ—ಸಮಾನನಾಗಿರುವವನನ್ನು ; ೨೨. ಬಾೞ್ವೆಯಾಗು—ಬದುಕಿರುವವನಾಗು ; ೨೪. ಇನ್ನುಂದಿತ್ತ—ಇನ್ನು ಇಂದಿನಿಂದ ಈಚೆಗೆ, ಇನ್ನುಮೇಲೆ ; ೨೫. ಸೆಟ್ಟಿವಟ್ಟಂಗಟ್ಟಿ—ಸೆಟ್ಟಿ ಪದವಿಯ ಪಟ್ಟವನ್ನು ಕಟ್ಟಿ ; ೨೮. ಪಿಡಿದು—ಆಶ್ರಯಿಸಿ.

೪೯. ೧ : ಮುಡಿಪಿ—ಸತ್ತು : ೩. ಏಕವಿಹಾರಿಯಪ್ಪೆಂ—ಒಂಟಿ ಪರಿವ್ರಾಜಕನಾಗುತ್ತೇನೆ : ೫. ಛಟ್ಟಟ್ಟಮ ದಸಮದುವಾಳಸ—ಆರು, ಎಂಟು, ಹತ್ತು, ಹನ್ನೆರಡು (ದಿನಗಳು ಮಾಡುವ ಉಪವಾಸವ್ರತ) ; ೯. ಬಾಗಿಲ್ಗಾಪಿನವರಂ—ದ್ವಾರರಕ್ಷಕರನ್ನು ; ೧೦. ಬಾಲವದ್ದೆಯಂ—ಬಾಣಂತಿಯನ್ನು (?). ಇದೇ ಗ್ರಂಥದಲ್ಲಿ ಇನ್ನೊಂದೆಡೆ ಪ್ರಯೋಗವಾಗಿದೆ (ಪು. ೧೧೩-೬) ; ಅವ್ಯಕ್ತನಂ—ಸೂಕ್ಷ್ಮವಾಗಿರುವವನನ್ನು ; ೧೧. ವಿಸುಟ್ಟು—ಬಿಸುಟು, ಬಿಟ್ಟು : ೧೨. ಮೊಲೆಯೂಡುವ—ಮೊಲೆಯುಣಿಸುವ ; ಊಡುವ—ಲೇಪನಾದಿಗಳನ್ನು ಮಾಡುವ, ಬಳಿಯುವ ; ೧೪. ಮಜ್ಜನಂ ಬುಗಿಸುವ—ಸ್ನಾನಮಾಡಿಸುವ ; ಪಸದನಂಗೊಳಿಸುವ—ಅಲಂಕಾರ ಮಾಡುವ. ಐವರು ದಾದಿಗಳು—ಕ್ಷೀರಧಾತ್ರಿ, ಮಂಡನಧಾತ್ರಿ, ಮಜ್ಜನಧಾತ್ರಿ, ಕೆಳವಸ(ಕ್ರೀಡೆಯ)ಧಾತ್ರಿ, ಅಂಕಧಾತ್ರಿ ; ೧೫. ನಡಪೆ—ಸಾಕಲು ; ೧೮. ಮದುವೆನಿಱಿಸಿದೊಳ್—ಮದುವೆಯನ್ನು ಸ್ಥಿರಗೊಳಿಸಿದಳು : ೨೦. ಮಾಡಂಗಳಂ—ಮನೆಗಳನ್ನು, ಸೌಧಗಳನ್ನು, ಇದರಲ್ಲಿ ಏಕಶಾಲ ಮುಂತಾದವು ಬೇರೆಬೇರೆ ರೀತಿಯವು ; ೨೧. ಸೆಂಡಾಡುವ—ಚೆಂಡಾಟವಾಡುವ : ತಱಿಯುಂ—ಮರದ ದಿಮ್ಮಿಗಳಿಂದ ಮಾಡಿದ ಜಗಲಿ ಅಥವಾ ಮೋಟುಗೋಡೆ. ಆನೆಯ ಹೋರಾಟಕ್ಕೂ ಇದನ್ನು ಉಪಯೋಗಿಸುತ್ತಾರೆ ; ೨೨. ಕಾಪಂ ಮಾಡಿ—ರಕ್ಷಣೆಯನ್ನು, ಕಾವಲವನ್ನು ಕಲ್ಪಿಸಿ : ೨೯. ಪರಿವೇಷ್ಟಿತನಾಗಿ—ಬಳಸಿದವನಾಗಿ.

೫೦. ೧ : ಅಯೋಧ್ಯೆನಗರಮಂ ಬಂದು—ಅಯೋಧ್ಯಾಯೆಂಬ ನಗರಕ್ಕೆ ಬಂದು : ಪಾರಣೆಯಂದು—ಪಾರಣೆ ಮಾಡುವ ದಿನ : ೨. ಕಿಱುಮನೆ ಪೆರ್ಮನೆಯೆನ್ನದೆ—ಚಿಕ್ಕಮನೆ ದೊಡ್ಡಮನೆ ಎನ್ನದೆ : ೩. ಗಿಡಿಗಿಡಿ ಜಂತ್ರಂ ಮಿಳಿಮಿಳಿ ನೇತ್ರರಪ್ಪ—ಉಪವಾಸಗಳಿಂದ ಕೃಶರಾಗಿ

ಮೈಯೊಣಗಿರುವ ಜೈನಯತಿಗಳನ್ನು ವರ್ಣಿಸುವಾಗ ಈ ಶಬ್ದಗಳು ಜೈನಕಾವ್ಯಗಳಲ್ಲಿ ಪ್ರಯೋಗವಾಗಿವೆ; 'ಗಿಟಿಗಿಟಿ ಜಂತ್ರಂ' ಎಂಬ ರೂಪವೂ ಉಂಟು, ನೇಮಿಚಂದ್ರನ ಪ್ರಯೋಗ (ಅರ್ಧನೇ. ೭–೨) :

ಬರಿಯೆಲ್ ಬೇಱಿರ್ದ ತಂಕಾಳಿಕೆ ಪೆಡತಲೆಯೊಳ್ ಪೊಕ್ಕ ತೋರ್ಪ ಕೆಯ್ಯಾ
ಲ್ಸಿರೆ ಪಾತಾಳಕ್ಕೆ ಪೊಕ್ಕಿರ್ದೊಣವಸಿಱುಡುಗಿರ್ದೊಂದುರಂ ಪೊಟ್ಟ ಬಾಯ್ ಬೇ
ಕರಿಯೋದಂತಿರ್ದ ಬಾಸಂಗುಳಿ ಗಿಟಿಗಿಟಿ ಜಂತ್ರಂಬೊಲಾಗಿರ್ದ ಮೆಯ್
ಸಿರಿ ಚಿದ್ರೂಪಕ್ಕೆ ಪಕ್ಕಾಗಿರೆ ಚರಿಗೆಗುಣಲ್ ಬಂದನೊರ್ವಂ ಮುನೀಂದ್ರಂ ॥

''ವಿಶ್ವನಂದಿ ಮುನೀಂದ್ರಂ ಗಿಡಿಗಿಡಿ ಜಂತ್ರದ ತೆಱದಿಂ ನಡುಬೀದಿಯೊಳಿಂತು ಮೆಲ್ಲಮೆಲ್ಲನೆ ಬರೆಯುಂ'' (ಶಾಂತೀಶ್ವ. ೭–೩೨) ಎಂದು ಕಮಲಭವನ ಪ್ರಯೋಗ, ''ಗಿಡಿಗಿಡಿ ಜಂತ್ರಮಾಯ್ತೊಡಲ್'' (ಚಂದ್ರಪ್ರ. ೯೧–೧೭) ಎಂದು ಅಗ್ಗಳ ;

ಕದಿರ ಕಡ್ಡಿಯಂತೆ ಕೃಶವಾದ ಮೈಯುಳ್ಳ ಮತ್ತು ಗುಳಿಬಿದ್ದ ಕಣ್ಣುಗಳಿಂದ ಮಿಳಮಿಳ ನೋಡುತ್ತಿರುವ ಎಂಬರ್ಥವನ್ನು ಸೂಚಿಸಬಹುದು. ೫. ಇನ್ನರಂ—ಇಂಥವರನ್ನು ; ೬. ಅಂಗಡಿಯುಲವಡಂ—ಅಂಗಡಿಬೀದಿಯಲ್ಲಿ ಅಲೆದಾಡುವವನು ; ೭. ಪೆಱುಕಿ ತಿಂದು ಬಾೞ್ವೊಂ—ಅಲ್ಲಿ ಇಲ್ಲಿ ಆರಿಸಿಕೊಂಡು ತಿಂದು ಬದುಕುವವನು, (ತಮಿಳು) ಪೆಱುಕ್ಕು. (ಮಲ) ಪೆಱುಕ್ಕಿ—ಆರಿಸಿಕೊ, ಭಿಕ್ಷೆ ಬೇಡು ; ಬೈಕಂಗುಳಿ—ಭಿಕ್ಷೆಬೇಡುವುದೇ ಶೀಲವಾಗುಳ್ಳವನು ; ೮. ದೇಸಿಗಂ—ದಿಕ್ಕಿಲ್ಲದವನು, ನಿರ್ಗತಿಕ ; ಕೋವಣಕ್ಕಪ್ಪೊಡಂ—ಲಂಗೋಟಿಗಾದರೂ ; ಭಾಗಸಮಿಲ್ಲದೊಂ—ಭಾಗ್ಯವಿಲ್ಲದವನು, ಹಣವಿಲ್ಲದವನು ; ೯. ಮಾರ್ಕೊಂಡು – ಪ್ರತಿಭಟಿಸಿ ; ೧೦. ಪೊಲ್ಲದಂ ನುಡಿದಯ್—ಕೆಟ್ಟ ಮಾತನ್ನಾಡಿದೆ ; ೧೨. ಕೊೞೆದ—ಕೊಳೆತ (?) ; ಪುಲ್ಲದರ್ಕ್ಕಂ—ಹುಲ್ಲಿನ ಕೂಳೆಯನ್ನು ; ತೊಱೆವಂತೆ—ಬಿಡುವಹಾಗೆ ; ೧೩. ಇಳಿಸಿ—ತಿರಸ್ಕರಿಸಿ ; ಪರಿಭವಿಸಿ—ಅವಮಾನಗೊಳಿಸಿ ; ಮುಟ್ಟುಗಿಡಿಸಿ—ಉಪಕರಣರಹಿತನನ್ನಾಗಿ ಮಾಡಿ, ನಿಸ್ಸಹಾಯಕನೆಂದು ಭಾವಿಸಿ (?) ; ಬಾರಿಸಿದೊಳಂ—ಅಡ್ಡಿಮಾಡಿದವಳನ್ನು, ತಡೆದವಳನ್ನು ; ೧೪. ಕಣ್ಕೆತ್ತಿ—ಕಣ್ಣನ್ನು ಅಲುಗಿಸಿ ; ಪೆಱಪೆಱನೆ—ಬೇರೆಬೇರೆಯಾದ ಮಾತುಗಳನ್ನೇ ; ೧೫. ತಗುಳ್ದೊಡೆ—ಮೊದಲಿಟ್ಟರೆ, ಆರಂಭಿಸಿದರೆ ; ಸಗರ್ಭವಚನಂಗಳ್— ಒಳ ಅರ್ಥವನ್ನುಳ್ಳ ಮಾತುಗಳು ; ೧೬. ಬಗೆಯುತ್ತಿರ್ಪನಂ—ಭಾವಿಸುತ್ತಿರಲು ; ಬಾಣಸಿಗಂ—ಅಡಿಗೆಮಾಡುವವನು ; ಬೋನಮೆತ್ತಿ—ಭೋಜನವನ್ನು ಬಡಿಸಿ ; ಓಗರಂ—ಅನ್ನವು ; ೧೭. ಆಱಿದಪ್ಪುದು—ತಣ್ಣಗಾಗುತ್ತದೆ ; ೨೨. ವೇಳಾತಿಕ್ರಮಮಾದಪ್ಪುದು—ಹೊತ್ತು ಮೀರುತ್ತಿದೆ ; ಆರೋಗಿಸಲ್ಕೆ—ಊಟ ಮಾಡುವುದಕ್ಕೆ ; ೨೩. ಉಣ್ಬೆನಲ್ಲೆಂ—ಊಟ ಮಾಡುವವನಲ್ಲ ; ೨೪. ಪೇೞೆಯಪ್ಪೊಡೆ—ಹೇಳಿದೆಯಾದರೆ ; ೨೫. ಸೂರುಳಿಸಿ—ಆಣೆಯಿರಿಸಿ ; ೨೮. ನಿಱಿಸಲ್ವೇಡಿ—(ದೇಹ) ಧಾರಣೆಗಾಗಿ ಬಯಸಿ ; ೨೯. ಚರಿಗೆವೊಕ್ಕು—ಭಿಕ್ಷೆಗಾಗಿ ಪ್ರವೇಶಿಸಿ ; ಬಾಪರಿವುಗುತ್ತಂ—ದುಂಬಿ ಹೇಗೆ ಹೂವಿನಿಂದ ಹೂವಿಗೆ ಹೋಗುವುದೋ ಹಾಗೆ ಮನೆಮನೆಗೆ ಭಿಕ್ಷಾರ್ಥಿಯಾಗಿ ತಿರುಗುತ್ತ, ಇದಕ್ಕೆ ಭ್ರಾಮರೀವೃತ್ತಿಯೆಂದು ಹೆಸರು ; ಪೊಱಮಟ್ಟು—ಹೊರಕ್ಕೆ ಹೊರಟು ; ೩೦. ಆರೋಗಿಸಲ್ವೇೞ್ಕುಂ—ಉಟಮಾಡಬೇಕು.

೯೧. ೨: ಕೂಸಯ್—ಮಗುವಾಗಿರುವೆ, ಎಳೆಯ ಪ್ರಾಯದವನಾಗಿರುವೆ ; ೩. ಪ್ರಾಯಂ ಬೋದಿಂ ಬೞಿಕ್ಕೆ ಪ್ರಾಯ ಕಳೆದುಹೋದ ಅನಂತರ ; ೬. ಮಾನಸವಾೞ್ಂಬುದು—ಮನುಷ್ಯನ ಬದುಕೆನ್ನುವುದು ; ಪನಿಪ್ಪಲ್ಲ ಮುಗಿಲ ಸಂಜೆಯೊಳ್—ಹುಲ್ಲಮೇಲಿನ ಹನಿ, ಮೋಡ, ಸಂಜೆಗೆಂಪು ಇವುಗಳಲ್ಲಿ ; ಓರಂತಪ್ಪುದು—ಸಮಾನವಾಗುವುದು ; ೮ ಬಸಿಱ ಪೆಂಡತಿ—ಗರ್ಭಿಣಿಯಾದ ಹೆಂಡತಿ ; ೧೪. ಅಲ್ಲಿಂ ಬೞಿಯಂ—ಅಲ್ಲಿಂದನಂತರ, ಆಮೇಲೆ ; ೩೧. ಬಾರಿಸೆವಾರಿಸೆ—ನಿವಾರಿಸಲು ನಿವಾರಿಸಲು, ತಡೆ ತಡೆಯಲು.

೯೨. ೧ ; ಪೞಿದು - ನಿಂದಿಸಿ ; ಉನ್ಮಾರ್ಗೋಪದೇಶದಿಂದೆ—ವಕ್ರೋಪದೇಶದಿಂದ, ಕುಟಿಲೋಪದೇಶದಿಂದ : ೧೭. ಜೋಗುಗೊಂಡು—ತಪವನ್ನು ಸ್ವೀಕರಿಸಿ ; ೯. ಮುನ್ನ

ಮೊದಲು; ೧೦. ಮಲ್ಮಲ ಮಱುಗುತ್ತಿರ್ದುದ್—ಮಲಮಲನೆ ಸಂತಾಪ ಪಡುತ್ತಿದ್ದು: ೧೧. ಮೇಲ್ವಾಯಲ್—ಮೇಲೆ ನುಗ್ಗಲು; ಪರಿತಪ್ಪುದಂ—ಓಡಿಬರುವುದನ್ನು: ೧೨. ಯಾವಜ್ಜೀವಂ—ಜೀವವಿರುವ ಪರ್ಯಂತ; ನಿವೃತ್ತಿ—ಬಿಡುವಿಕೆ.

**ಗಾಹೆ:** ಸವ್ವಜೀವಾಣಂ—ಎಲ್ಲ ಜೀವಗಳನ್ನೂ, ಖಿಮ್ಮಾಮಿ—ಕ್ಷಮಿಸುತ್ತೇನೆ, ಸವ್ವೇಜೀವಾ—ಸಮಸ್ತಜೀವಗಳೂ, ಮೇ—ನನ್ನನ್ನು, ಖಿಮಂತು—ಕ್ಷಮಿಸಲಿ; ಸವ್ವಭೂದೇಷು—ಸರ್ವಪ್ರಾಣಿಗಳಲ್ಲೂ, ಮೇ—ನನಗೆ, ಮೆತ್ತೀ—ಮೈತ್ರಿಯು, ಸ್ನೇಹವು; ಮಜ್ಝ—ನನಗೆ, ವೇರಂ—ವೈರವು, ದ್ವೇಷವು; ಕೇಣಚಿ—ಎಲ್ಲಿಯಾದರೂ, ಣ—ನಾಸ್ತಿ, ಇಲ್ಲ:

*"ಮಜ್ಝಸಹಾವಂ" ಎಂದು ಆರಂಭವಾಗುವ ಗಾಹೆಯು ಪಾಠ ಕೆಳಗೆ ಕಾಣಿಸಿದಂತಿರಬೇಕು.

ಮಜ್ಝ ಸಹಾವಂ ಣಾಣಂ ದಂಸಣ ಚರಣಂ ಣ ಕಿಂ ಪಿ ಆವರಣಂ।
ಜೋ ಸಂವೇಯಣಗಾಹಿ ಸೋಹಂ ಣಾದಾ ಹವೇ ಆದಾ॥

ಇದರ ಸಂಸ್ಕೃತ ಛಾಯೆ:

ಮಮ ಸ್ವಭಾವಃ ಜ್ಞಾನಂ ದರ್ಶನಂ ಚರಣಂ ನ ಕಿಮಪಿ ಆವರಣಂ।
ಯಃ ಸಂವೇದಣಗ್ರಾಹಿ ಸೋಹಂ ಜ್ಞಾತಾ ಭವತ್ಯಾತ್ಮಾ॥

ಮಜ್ಝ—ನನ್ನ, ಸಹಾವಂ—ಸ್ವಭಾವವು, ಣಾಣಂ—ಸಮ್ಯಕ್ ಜ್ಞಾನವು, ದಂಸಣ—ಸಮ್ಯಗ್ದರ್ಶನವು, ಚರಣಂ—ಸಮ್ಯಕ್ ಚಾರಿತ್ರವು; ಣ ಕಿಂಪಿ ಆವರಣಂ—ಯಾವ ಕರ್ಮಲೇಪವೂ ಇಲ್ಲ: ಜೋ—ಯಾವನು, ಸಂವೇಯಣಗಾಹಿ—ಸಂವೇದನೆಯನ್ನುಳ್ಳವನೋ, ಸೋ—ಅವನೇ, ಅಹಂ—ನಾನು; ಆದಾ—ಆತ್ಮನು, ಣಾದಾ—ತಿಳಿಯುವವನು, ಜ್ಞಾತೃವು; ಹವೇ—ಆಗುತ್ತೇನೆ.

*ಛಿಜ್ಜಉ ಭಿಜ್ಜಉ" ಎಂಬ ಗಾಹೆಯ ಸಂಸ್ಕೃತ ಛಾಯೆ:

ಛಿದ್ಯತಾಂ ಭಿದ್ಯತಾಂ ಯಾತು ಕ್ಷಯಂ ಯೋಗಿನ್ ಇದಂ ಶರೀರಂ।
ಆತ್ಮಾನಂ ಭಾವಯ ನಿರ್ಮಲಂ ಯೇನ ಪ್ರಾಪ್ನೋಸಿ ಭವತೀರಂ॥

ಏಹು ಸರೀರು—ಈ ದೇಹವು, ಛಿಜ್ಜಉ—ಕತ್ತರಿಸಲ್ಪಡಲಿ, ಭಿಜ್ಜಉ—ಭೇದಿಸಲ್ಪಡಲಿ, ಸೀಳಲ್ಪಡಲಿ, ಜಾಉ ಖಉ—ಕ್ಷಯವಾಗಲಿ ಅಥವಾ ನಾಶವಾಗಲಿ. ಜೋಇಯ—ಹೇ ಯೋಗಿಯೇ, ಜೇಂ—ಯಾವುದರಿಂದ, ಭವತೀರು—ಸಂಸಾರದ ಆಚೆಯ ತೀರವನ್ನು, ಪಾವಹಿ—ಪಡೆಯುವೆಯೋ, ಅ, ಣಿಮ್ಮಲಉ—ನಿರ್ಮಲನಾದ, ಪರಿಶುದ್ಧನಾದ, ಅಪ್ಪಾ—ಆತ್ಮನನ್ನು, ಭಾವಹಿ—ಧ್ಯಾನ ಮಾಡು.

೨೦. ಬಸಿಱಂ ಪೋೞ್ದು—ಹೊಟ್ಟೆಯನ್ನು ಸೀಳಿ: ತೆಗಲೆಯಂ—ಕೊರಳಿನ ಮೇಲ್ಭಾಗವನ್ನು (ತಮಿಳು) ಶುವರ್; ೨೨. ಕುಂಕುಮಪಂಕಿತ—ಕುಂಕುಮದ ಕೆಸರು ಬಳಿದ: ೨೪. ಸಲ್ವಾಕೆಯೆ—ಸಲ್ಲುವವಳೆ; ೨೫. ವಕ್ಷಃಸ್ಥಳದ—ಎದೆಯ ಪ್ರದೇಶದ; ಶ್ರೀಲಾಂಛನ—ಶ್ರೇಷ್ಠವಾದ ಕುರುಹನ್ನು: ೨೮. ಪಾಷಾಣವೃಕ್ಷಂಗಳೊಳ್—ಕಲ್ಲುಮರಗಳಲ್ಲಿ; ೩೦. ಧರ್ಮಶ್ರವಣಂಗೆಯ್ದು—ಧರ್ಮವನ್ನು ಕೇಳಿಸಿ; ೩೧. ಪಿಡಿಸಿದೊಡೆ—ಧರಿಸುವಂತೆ ಮಾಡಿದರೆ.

**೯೩.** ೧೦: ಓರನ್ನರಪ್ಪ—ಎಣೆಯಾದಂಥವರಾದ ಸಮಾನರಾದ; ೨೪. ನಿಶ್ರೇಯಸಸುಖ—ಮೋಕ್ಷದ ಸುಖ, ಆತ್ಯಂತಿಕ ಸುಖ; ಎಯ್ದುಗೆ—ಸೇರಲಿ, ಪಡೆಯಲಿ.

---

* ಈ ಗಾಹೆಗಳ ಅರ್ಥವನ್ನು ನನಗೆ ದಯೆಯಿಟ್ಟು ತಿಳಿಸಿದವರು ಡಾ॥ ಆ. ನೇ. ಉಪಾಧ್ಯೆ ಎಂ.ಎ., ಡಿ.ಲಿಟ್., ಅವರು.

## ೩. ಗಜಕುಮಾರನ ಕಥೆ

೯೪. ೫: ಓರಂತಾಗಿ—ಕ್ರಮವಾಗಿ; ಮಲರ್ಚಿಕ್ಕಿ—ಹೊಟ್ಟೆಯಡಿಯಾಗಿ ಮಲಗಿಸಿ; ಉರದಿಂ ತಗುಳ್ದು—ಎದೆಯಿಂದ ಹಿಡಿದು; ೬. ಪಂದೊವಲಂ—ಹಸಿ ತೊಗಲನ್ನು, ಪಸಿದು + ತೊವಲ್; ೭. ನಿಡಿಯವುಂ—ಉದ್ದವಾದ; ತೋರಮುಂ—ದಪ್ಪವಾದ; ಕೀಲ್ಗಳಿಂದಂ—ಮೊಳೆಗಳಿಂದ; ೯. ಉರ್ಚಿಪೋಗಿ—ಭೇದಿಸಿಕೊಂಡು ಹೋಗಿ, ಸೀಳಿಹೋಗಿ: ನೆಲಮಂ ತಾಪಿನಂ—ನೆಲವನ್ನು ತಗಲುತ್ತಿರಲು; ಕೀಲಿಜಿಯೆಪಟ್ಟ—ಮೊಳೆಗಳಿಂದ ಹೊಡೆಯಲ್ಪಟ್ಟ, ಚುಚ್ಚಲ್ಪಟ್ಟ; ೯. ಮೆಯ್ಯನೊಡೆಯಂ—ಮೈಯುಳ್ಳವನು: ೧೦. ಪೊರ್ದಿದೊಂ—ಹೊಂದಿದನು.

೧೩. ಸುರಟ—ಸೌರಾಷ್ಟ್ರ; ಅರ್ಧಚಕ್ರಿ—ಭರತಕ್ಷೇತ್ರದ ಆರು ಖಂಡಗಳಲ್ಲಿ ಅರ್ಧಕ್ಕೆ ಎಂದರೆ ಮೂರು ಖಂಡಗಳಿಗೆ ಅಧಿಪತಿಯಾದವನು; ೯. ಆರುಮನುಜಿದೊಂ—ಯಾರನ್ನೂ ಲಕ್ಷ್ಯಮಾಡದವನು; ಬೆಸಕೆಯ್ಯನ್—ಕಾರ್ಯಮಾಡನು, ಸೇವೆಮಾಡನು; ೨೦. ಗೋಸಣೆಯಂ—ಘೋಷಣೆಯನ್ನು, ಡಂಗುರ ಹಾಕಿ ಸಾರುವುದನ್ನು; ೨೧. ಪಿಡಿಕೊಂಡು—ಹಿಡಿಕೊಂಡು; ೨೪. ಚಾತುರ್ದಂತ ಬಳಮುಂ—ಚತುರಂಗ ಸೈನ್ಯವನ್ನು; ೨೫. ಪೆಡಂಗೆಯ್ಯುಡಿಯೆ—ಬೆನ್ನ ಹಿಂದಕ್ಕೆ ಕೈಗಳನ್ನು ಮುರಿಯುವಂತೆ.

೯೫. ೨: ಕೊಂಡು—ಸ್ವೀಕರಿಸಿ; ಈ ದಾಯಮಂ—ಈ ಬಹುಮಾನವನ್ನು; ಬೇಡಿರ್ದಂ ಬಯಸಿರುವೆನು; ೬. ಒಳ್ವೆಂಡಿರೆಲ್ಲರಂ—ಒಳ್ಳೆಯ ಹೆಂಗಸರನ್ನೆಲ್ಲ; ೭. ಮೊಜಿದುಂ—ಸಂಬಂಧವನ್ನು ಮಾಡಿಯೂ; ಒಟ್ಟಯಿಸಿ—ಒಂದುಗೂಡಿ; ಉಯ್ದು—ಎತ್ತಿಕೊಂಡು ಹೋಗಿ; ೮. ಸುವರ್ಣಕಾಜಿನ—ಚಿನ್ನಗೆಯ್ತದವನ, ಅಕ್ಕಸಾಲಿಗನ; ೧೦. ಆಕೆಗಾಟಿಸಿ – ಆಕೆಗೆ ಬಯಸಿ; ೧೧. ಆ ಏರಣಿಗನುಂ ಆ ಅಕ್ಕಸಾಲಿಗನೂ (ಪಾಲಿ) ಹೇರಣಿಕ > ಏರಣಿಗ; "ಗಂದಿಗನೇರಣಿಗಂ ಸರವಂದಿಗನಾ ಪಟ್ಟಸಾಲಿಗಂ", "ಅಬ್ಬಸಂವಾಸಿ ಸಮಿರಾರನೇರಣಿಗನಾಗೆ" ಇತ್ಯಾದಿ ಪ್ರಯೋಗಗಳುಂಟು; ೧೪. ಸಮವಸರಣಂ—ಅರ್ಹಂತನು ಉಪದೇಶಮಾಡುವ ಸಭೆ; ೧೭. ಅಗಮ್ಯಾಗಮನಂ ಗೆಯ್ದೊಡಂ –ಕೂಡಬಾರದವರಲ್ಲಿ ಕೂಡಿದರೂ; ಪೆಜರ ಸಜ್ಜನಂಗಳೊಳ್—ಹೆರವರ ಕುಲಸ್ತ್ರೀಯರಲ್ಲಿ; ಬರ್ದೊಡಂ —ಬಾಳಿದರೂ; ೧೮. ನಾನ್ಯಥಾಜಿನಭಾಷಿತಂ—ಜಿನನು ಹೇಳಿದ್ದು ಅನ್ಯಥಾ ಆಗಲಾರದು, ಎಂದರೆ ಸತ್ಯ; ೧೯. ತೊಜಿದು—ತ್ಯಜಿಸಿ, ಬಿಟ್ಟು; ೨೨. ರೇವತೋದ್ಯಾನ—ರೇವತವೆಂಬ ಉಪವನದಲ್ಲಿ; ೨೩. ರಾತ್ರಿ ಪ್ರತಿಮೆನಿಂದೊನಂ—ರಾತ್ರಿ ಪ್ರತಿಮೆ ಆಕಾರದಲ್ಲಿ ತಪಸ್ಸಿಗೆ ನಿಂತವನನ್ನು: ೨೪. ಪಗೆವನಂ—ದ್ವೇಷಿಸುತ್ತಿರುವವನನ್ನು, ಶತ್ರುವನ್ನು; ಇಜಿಯಲ್ಬೆತ್ತೆಂ—ಹೊಡೆಯಲು, ಕೊಲ್ಲಲು ಪಡೆದೆನು: ೨೭. ಕ್ಷಮಾಂಗನಾಲಿಂಗಿತನಪ್ಪ—ಕ್ಷಮೆಯೆಂಬ ಸ್ತ್ರೀಯರಿಂದ ಆಲಿಂಗಿಸಲ್ಪಟ್ಟವನಾದ, ಎಂದರೆ ಕ್ಷಮಾಗುಣ ಸಮನ್ವಿತನಾಗಿರುವ; ಮಲರ್ಚಿ—ಹೊಟ್ಟೆಕೆಳಗಾಗಿ ಹೊರಳಿಸಿ ಮಲಗಿಸಿ; ೨೮. ವಿದಾರಿಸಿ—ಸೀಳಿ; ಪಂದೊವಲ್—ಹಸಿಚರ್ಮ; ಪೊರೆತಾಪಿನೆಗಂ—ಚರ್ಮದ ಪದರಗಳನ್ನು ತಾಗುತ್ತಿರಲು; ಸಮನ್ತು—ಚೆನ್ನಾಗಿ; ಅವಯವ ಪ್ರದೇಶಂಗಳೊಳ್—ಅಂಗಾಂಗಗಳ ಎಡೆಯಲ್ಲಿ.

೯೬. ೧; ನೆಲನಂ ತಾಪಿನಂ—ನೆಲವನ್ನು ಭೇದಿಸುತ್ತಿರಲು; ೪. ಪ್ರಾಸಾದಕ್ಕೆ—ಸೌಧಕ್ಕೆ; ಕಳಸಮಾಗುತ್ತಿರ್ದ—ಕಲಶದಂತಿರುವ; ಸರ್ವಾರ್ಥಸಿದ್ಧಿ—ಒಂದು ಸ್ವರ್ಗದ ಹೆಸರು. ಸಿದ್ಧಶಿಲೆಯ ಕೆಳಗಿರುವ ಸ್ವರ್ಗ; ಸಾಗರ—ಒಂದು ದೊಡ್ಡ ಸಂಖ್ಯೆ, ೧೦ ಕೋಟಿ × ೧ ಕೋಟಿ ಪಲ್ಯಗಳು; ಹಸ್ತ—ಮೊಳ; ಪುಂಡರೀಕ—ಬಿಳಿ ತಾವರೆ.

## ೪. ಸನತ್ಕುಮಾರ ಚಕ್ರವರ್ತಿಯ ಕಥೆ

೯೭. ೫: ಕಿರಕುಂ—ತುರಿಯೂ, ಚರ್ಮರೋಗ, (ತಮಿಳು) ಶಿರಂಗು; ೬. ಛರ್ದಿಯುಂ —ಭೇದಿಯೂ.

೧೫. ರೂಪನೊಡೆಯುಂ—ರೂಪವುಳ್ಳವನು ; ೧೯. ಪಾಗುಡ—ಕಾಣಿಕೆ, ನಜರು ; ಪಟ್ಟವಾರಮರಗ—ಒಂದು ಕುದುರೆಯ ಹೆಸರು : ೨೦. ದುಷ್ಟಾಶ್ವಮುಂ—ತುಂಟ ಕುದುರೆಯನ್ನು ; ೨೧. ಕೊಸೆಗೊಳೆ —?. 'ಕೊಸೆ—ವಾಹಾರೋಹಣೇದೇ ಚ' ಎನ್ನುತ್ತಾನೆ ಕೇಶಿರಾಜ, ಇದರಂತೆ ವಾಹನವನ್ನು ಹತ್ತುವ ಒಂದು ವಿಧಾನ ಎಂದರ್ಥವಾಗುತ್ತದೆ : ಒಂದು ರೀತಿಯಿಂದ ಕುದುರೆಯನ್ನೇರಲು ಎಂದು ಇಲ್ಲಿ ಅರ್ಥವಾಗಬಹುದು ; ಆದರೆ ಪಂಪನು 'ಕೊಸೆಗೊಳ್' ಎಂಬುದನ್ನು ಬೇರೆ ಅರ್ಥದಲ್ಲಿ ಪ್ರಯೋಗಿಸಿರುವಂತಿದೆ :

ಆರಮ್ಯನದಿಯ ಚೆಲ್ವನಿ
ಳಾ ರಾಮಾರಮಣಿನಟ್ಟಿಯಿಂ ನೋಡುವಿನಂ
ಸಾರಥಿ ಕಣ್ಣಱಿದೊಯ್ಯನೆ
ತೇರಂ ಕೊಸೆಗೊಂಡು ಚಕ್ರಿಯಂ ಬಿನ್ನವಿಕುಂ (ಆದಿಪು. ೧೧–೫೭)

ಇಲ್ಲಿ ವಾಹನವಾದ ರಥವನ್ನು ಸಾರಥಿ ಆರೋಹಿಸಿದನೆಂದು ಹೇಳುವುದು ಸಂಗತವಾಗಿಲ್ಲ. ಏಕೆಂದರೆ ಅವನು ಆಗಲೇ ರಥವನ್ನು ಹತ್ತಿ ಕುಳಿತಿದ್ದಾನೆ. (ತಮಿಳು) ಕುಶೈ ಎಂಬ ಶಬ್ದಕ್ಕೆ ಲಗಾಮು, ಕಡಿವಾಣ ಎಂಬ ಅರ್ಥಗಳಿವೆ, ಕುಶೈ–ಕೊಸೆಗಳು ಜ್ಞಾತಿ ಶಬ್ದಗಳು ; ಆದ್ದರಿಂದ ಇಲ್ಲಿ ಕೊಸೆಗೆ ಅದೇ ಅರ್ಥವೆಂದು ತೋರುತ್ತದೆ ; ಲಗಾಮನ್ನು ಎಳೆದು ಕುದುರೆಯನ್ನು ನಿಲ್ಲಿಸಿ ರಥವನ್ನು ನಿಲ್ಲಿಸಿದನೆಂದು ಪಂಪನ ಅರ್ಥವಿರುವಂತೆ ಕಾಣುತ್ತದೆ. ಪ್ರಕೃತ ಸಂದರ್ಭದಲ್ಲಿ ಕುಮಾರನು ಲಗಾಮನ್ನು ಹಿಡಿದೆಳೆಯಲು ಕುದುರೆ ಓಡಲಾರಂಭಿಸುತ್ತದೆ, ನಿಲ್ಲುವುದಿಲ್ಲ. ಆದ್ದರಿಂದ ಕೊಸೆಗೊಳೆಗೆ ಲಗಾಮನ್ನು ಎಳೆ ಎಂದು ಅರ್ಥಮಾಡುವುದು ಸರಿಯಾಗಲಾರದು. ಬಹುಶಃ ಕಸೆಗೊಳೆ ಎಂಬ ಪಾಠವಿದ್ದಿರಬಹುದು. ಆಗ ಕಸೆ ಎಂದರೆ ಚಾವಟಿ ಎಂಬರ್ಥವಾಗಿ, ಕಸೆಗೊಳೆಗೆ ಚಾವಟಿಯಿಂದ ಹೊಡೆಯಲು ಎಂದು ತಕ್ಕ ಅರ್ಥ ಬರುತ್ತದೆ. (ಸಂ) ಕಶಾ > ಕಸೆ, "ಕಸೆಯುನಿನಿಸಱಿಪಿ ಕುದೆ ಲಂಘಿಸಿದುದು ಪನ್ನೆರಡು ಯೋಜನಂಬರಮಿನ್ನೇ ಪೆಸರ್ಗೊಳ್ವುದೊ ಕಡುವೇಗದಿನಸಕಱಿದುದು ಮನಮುಮಂ ತುರಂಗಮ ರತ್ನಂ" (ಆದಿಪು. ೧೩–೫೯) ಎಂಬ ಪ್ರಯೋಗ ಈ ಊಹೆಗೆ ಪೋಷಕವಾಗಿದೆ. [ಕ]ಸೆಗೊಳೆ ಎಂಬ ಪಾಠವನ್ನು ಒಪ್ಪಬಹುದು. ಪ್ರತಿಗಳಲ್ಲಿ ಆಧಾರವಿಲ್ಲ ಅಷ್ಟೇ. ೨೨. ವಾರಿತಪೂರಿತಂ ಪರಿದು—ವಾರಿತ, ಪೂರಿತಂ ಎಂಬ ಅಶ್ವಗತಿಗಳಲ್ಲಿ (?) ಓಡಿ ; ೨೪. ಕುದುರೆ ಪಡಿವಜ್ಜೆಯುಂ—ಕುದುರೆಯ ಅಡಿಯ, ಎಂದರೆ ಕಾಲ ಗೊರಸಿನ ಗುರುತನ್ನು ; ನಾಡೆಗೆಟ್ಟು ಪೋಗಿ —ಬಹಳ ದೂರ ಹೋಗಿ ; ಇಲ್ಲಿ ಗೆಟ್ಟು ಎಂಬುದು ಗೆಂಟು ಎಂದಿರಬಹುದು.

೯೮. ೪ : ಉಬ್ಬೆಗಂಬಡದೆ—ವ್ಯಥೆಪಡದೆ ; ಮಗುೞ್ದು—ಹಿಂದಿರುಗಿ ; ಮಗುೞ್ಚಿ—ಹಿಂದಿರುಗಿಸಿ ; ೫. ನೋೞ್ಪನ್ನಂ—ನೋಡುತ್ತಿರಲು : ೯. ವ್ಯಾಧನಿವಾಸಂಗಳುಮಂ—ಬೇಡರ ಹಟ್ಟಿಗಳನ್ನೂ ; ಕಱಿದು ಪೋಗಿ—ದೂರ ಹೋಗಿ : ೧೫. ಮಗುೞ್ದು—ಪುನಃ, ಮತ್ತೆ ; ೧೯. ತೂಂಕಡುಗೆಟ್ಟು—ನಿದ್ದೆಬಿಟ್ಟು ಹೋಗಿ, ಎಚ್ಚರವಾಗಿ ; ೨೦. ಸಮುದ್ರದೊಳೋರಂತಪ್ಪ—ಸಮುದ್ರಕ್ಕೆ ಸಮಾನವಾದ ; ೨೨. ಮಾಱುಲಿವ—ಪ್ರತಿಧ್ವನಿಯನ್ನು ಕೊಡುವ ; ೨೫. ನಾಗವಲ್ಲೀಟಿಸದ್ಮ—ವೀಳೆಯದೆಲೆಯ ಬಳ್ಳಿಯಿಂದ ತೆತ್ತಿಸಿರುವ, ಕಿಕ್ಕಿರಿದಿರುವ ; ದ್ರುಮಷಂಡ—ಮರಗಳ ಸಮೂಹ ; ೨೭. ಅಮೋಘಂ—ವ್ಯರ್ಥವಿಲ್ಲದೆ, ನಿಶ್ಚಯವಾಗಿ ; ತೊೞಲ್ವೊಂ—ಸುತ್ತಾಡುವವನು, ಅಲೆದಾಡುವವನು ; ಗಂಭೀರಧ್ವನಿಯೊಳ್—ಉದಾತ್ತ ನಾದದಲ್ಲಿ.

೯೯. ೧ : ವಂಶ—ಕೊಳಲು ; ೨. ಪಾಟಮುಮಂ—ಹಾಡನ್ನೂ, ಗೀತವನ್ನೂ ; ಹರಿಚಂದನ—ಶ್ರೀಗಂಧ ; ೪. ತುರುಷ್ಕಾದಿಗಳ—ತುರ್ಕಿದೇಶದ ಲೋಬಾನವೆಂಬ ಸುಗಂಧದ್ರವ್ಯಾದಿಗಳ ; ಪಿಡಿದೊಡೆ—ಹಿಡಿದರೆ ; ೫. ಸಲ್ವನಾಂ : ಬಹುಶಃ ಸಲ್ವನ್, ಸಲ್ವೊನ್—ಹೋಗುವವನು ; ಕನತ್ಕನಕ—ಪ್ರಕಾಶಮಾನವಾದ ಚಿನ್ನದ ; ಚಳತ್ಕೇತುಪತಾಕಾದ್ಯಮುಂ—ಚಲಿಸುತ್ತಿರುವ ಧ್ವಜಪಾವುಟಾದಿಗಳನ್ನು ; ೯. ಪುರಸ್ಥಿತಮಪ್ಪ—ಎದುರುಗಡೆ ಇರುವ ; ೧೦. ನಾಟಕಮುಂ—ನೃತ್ಯ,

ವನ್ನು ; ೧೪. ಅಱುದಿಂಗಳಿಂ—ಆರುತಿಂಗಳಿನಿಂದ, ಆರುತಿಂಗಳನಂತರ ; ೧೫. ಆಳ್ವನಂ—ಆಳುವವನನ್ನು : ೧೬. ಅಂತಾಗೆ—ಹಾಗೆ ಆಗುವಂತೆ ; ೨೦. ತಣಿಪಿದಾಗಳ್—ತೃಪ್ತಿಪಡಿಸಿದಾಗ ; ೨೧. ಮಾಱಿಪ್ಪವೊಲೆ—ವಿನಿಮಯವಾಗುವಂತೆ, ಆಯ್ತು ; ಒಂದಕ್ಕೆ ಇನ್ನೊಂದನ್ನು ತೆಗೆದುಕೊಳ್ಳುವಂತಾಯಿತು : ೨೨. ಓರಾಸನ—ಒಂದೇ ಪೀಠ, ಆಸನ, ಒಂದು + ಆಸನ : ೨೫. ಮಱುಭವದೊಳ್—ಮಾರನೆಯ ಜನ್ಮದಲ್ಲಿ, ಪುನರ್ಜನ್ಮದಲ್ಲಿ : ಎಱೆಯನಕ್ಕುಂ—ಒಡೆಯನಾಗುತ್ತಾನೆ.

೧೦೦. ೧ : ಪೆತ್ತಿರ್—ಪಡೆದಿರಿ ; ೨. ಪೆಱದೊನ್—ಹೊಂದದವನು, ಪಡೆಯದವನು ; ೪. ವಾಸಗೃಹಮಂ—ಶಯ್ಯಾಗೃಹ, ಮಲಗುವ ಮನೆ ; ೮. ಪರಿಯುತ್ತಿರ್ದುದು—ಓಡುತ್ತಿದ್ದುದು ; ತೆಗಲೆಯೊಡೆದು—ಕೊರಳು ಮುರಿದು ; ಕಾಲಂಗೆಯ್ದತ್ತು—ಸತ್ತಿತು ; ಬಸಮಱೆದು—ವಶತಪ್ಪಿ, ಶಕ್ತಿಗುಂದಿ : ೧೦. ಪಟ್ಟಿರ್ದನ್—ಮಲಗಿದ್ದನು ; ೧೧. ಸಕಲ ಚಕ್ರವರ್ತಿಯಪ್ಪಂ—ಭರತ ಕ್ಷೇತ್ರದ ಆರು ಖಂಡಗಳಿಗೂ ಅಧಿರಾಜನಾಗುವನು : ೧೨. ವಿಗುರ್ವಿಸಿ—ಮಾಯೆಯಿಂದ ಸೃಷ್ಟಿಸಿ : ೧೩. ಆಪ್ಯಾಯನಂ ಮಾಡೆ—ಹಿತವನ್ನುಮಾಡಲು ; ಸ್ವರ್ಣಭಾಜನದಿಂದೆ—ಚಿನ್ನದ ಪಾತ್ರೆಯಿಂದ ; ೧೪. ಕೋಡುವ ನೀರಂ—ಶೀತಲವಾಗಿರುವ ನೀರನ್ನು ; ಕುಡಿಯಲೆಱೆದಂ—ಕುಡಿಯಲು ಹೊಯ್ದನು ; ನೀನಾರ್ಗೆ—ನೀನು ಯಾರು, ಯಾರಿಗೆ ಸೇರಿದವನು ; ೧೮. ನೀರಟ್ಕೆ—ನೀರಡಿಕೆ, ಬಾಯಾರಿಕೆ ; ೨೦. ಆ ಅವಸರದೊಳ್—ಆ ಸಮಯದಲ್ಲಿ ; ಪೂರ್ವವೈರಿ—ಹಿಂದಿನ ಹಗೆ ; ೨೪. ಖಡ್ಗಸನ್ನಿಭಮಪ್ಪ—ಕತ್ತಿಯನ್ನು ಹೋಲುವ ; ಕಿೞ್ತೆತ್ತಿಕೊಂಡು—ಕಿತ್ತು ಎತ್ತಿಕೊಂಡು ; ೨೫. ವೇಷ್ಟಿಸಿದೊಡೆ—ಬಳಸಿ ಸುತ್ತಿದರೆ ; ಹಸ್ತತಳದಿಂ—ಅಂಗೈಯಿಂದ ; ಪಱಿಯೆ—ಕತ್ತರಿಸಿ ಹೋಗುವಂತೆ : ೨೬. ಯಷ್ಟಿ—ದೊಣ್ಣೆ, ಬಡಿಗೆ ; ೨೭. ಬಡವಾಮುಖದೊಳ್—ಬಾಡಬಾಗ್ನಿಯ ಬಾಯಲ್ಲಿ, ಎದುರಿಗೆ ; ೨೮. ನೆಗಪಿದೊನ—ಎತ್ತಿದವನ : ಸ್ಕಂದಮಂ—ಹೆಗಲನ್ನು : ೨೯. ಅವೃಷ್ಟಿ ವಜ್ರಘಾತಂಬೊಲಪ್ಪ—ಬರಸಿಡಿಲಿನ ಹೊಡೆತದಂತಿರುವ.

೧೦೧. ೧ : ಮುದ್ರಾಪೀಡೆಯಿಂ—ಮುದ್ರೆಯ ಹೊಡೆತದ ಹಿಂಸೆಯಿಂದ ; ತ್ರಸ್ತಾಭಿಭೂತನಾಗಿ—ಹೆದರಿದವನೂ ಹೊಡೆಯಲ್ಪಟ್ಟವನೂ ಆಗಿ : ೨. ಮಸ್ತಕದೊಳ್ ನ್ಯಸ್ತಹಸ್ತರ್ಕಳ್—ತಲೆಯಲ್ಲಿ ಕೈಯಿಟ್ಟವರಾಗಿ, ಎಂದರೆ ಕೈಮುಗಿದವರಾಗಿ ; ೫. ನಿನ್ನ ಬರವಂ—ನೀನು ಬರುವುದನ್ನು ; ಬೆಸದಿಂ—ಅಪ್ಪಣೆಯಿಂದ : ಪಾರುತ್ತಿರ್ದೆಂ—ನಿರೀಕ್ಷಿಸುತ್ತಿದ್ದೆನು ; ೧೧. ತೆಗೆಯೆಪಟ್ಟು—ತೆಗೆಯಲ್ಪಟ್ಟು, ಆಕರ್ಷಿತವಾಗಿ ; ೧೨. ಕಾಮಶರಂಗಳ್—ಮನ್ಮಥನ ಬಾಣಗಳು, ಇವು ತಪನ ತಾಪನ ದಹನ ವಿಮೋಹನ ಮರಣಸ್ವರೂಪವುಳ್ಳುವೆಂದು ಇಲ್ಲಿ ಹೇಳಿದೆ. ಹರಿಹರನು "ಓಹೋ ಉನ್ಮದ ಮದನ ಮೋಹನ ಸಂತಾಪನಂ ವಶೀಕರಣಾಸ್ತ್ರ ವ್ಯೂಹಂ" ಎಂದು ಹೇಳಿದ್ದಾನೆ (ಗಿರಿಕಾ. ೮. ೨೫) ; ೧೩. ಪರವಸೆಯರಾಗಿ—ಮೂರ್ಛಿತರಾಗಿ ; ಮಱುಗಿದ—ಕುದಿಯುತ್ತಿರುವ ; ಅಱುನೀರ—ಬತ್ತಿದ ನೀರಿನ ; ಮೀಂಗಳ್ವೊಲ್—ಮೀನುಗಳಂತೆ ; ೧೪. ಬಿಲ್ಬಲ್ಮೆ—ಬಿಲ್ಲಿನ ಕೌಶಲ.

**ಶ್ಲೋಕ :** ಮನ್ಮಥಸ್ಯ ಮಹಾತ್ಮನಃ—ಮಹಾತ್ಮನಾದ ಮನ್ಮಥನ, ಧನುಷಿ—ಬಿಲ್ಲಿನ ವಿದ್ಯೆಯಲ್ಲಿ, ಕೌಶಲಂ—ನೈಪುಣ್ಯವು, ಅಹೋ—ಆಶ್ಚರ್ಯ ; ಗಾತ್ರಾಣಿ—ದೇಹಗಳನ್ನು, ಅಸ್ಪೃಶನ್ನಪಿ—ಮುಟ್ಟದಿದ್ದರೂ, ಸೋಕದಿದ್ದರೂ, ಅಂತರ್ಗತಂ ಮನಃ—ಒಳಗಿರುವ ಮನಸ್ಸನ್ನು, ಭಿನತ್ತಿ—ಕತ್ತರಿಸುತ್ತಾನೆ.

೨೬. ತಣಿವಿನೆಗಂ—ತೃಪ್ತಿಯಾಗುವವರೆಗೂ ; ತುಷ್ಟಿದಾನಂಗೊಟ್ಟು—ತೃಪ್ತಿಕರವಾದ ದಾನವನ್ನು ಕೊಟ್ಟು : ೨೫. ಆಡವೇೞ್ದು—ನರ್ತನಮಾಡುವಂತೆ ಹೇಳಿ : ೨೭. ಈದೃಗ್ವಿಧಮಪ್ಪ—ಇಂತಹ, ಈ ತೆರನಾಗಿರುವ ; ೨೮. ಆರ್ಗೆ—ಯಾರು, ಯಾರಿಗೆ ಸಂಬಂಧ.

೧೦೨. ಕೂಸುಗಳಂ—ಕನ್ಯೆಯರನ್ನು : ಗಂಡುಮಗು, ಹೆಣ್ಣುಮಗು, ಮದುವೆಗೆ ನೆರೆದ ಹೆಣ್ಣು ಮತ್ತು ಗಂಡು, ಮಕ್ಕಳು ಎಂಬಿತ್ಯಾದಿ ಅರ್ಥಗಳು ಸಂದರ್ಭವಶದಿಂದ 'ಕೂಸು' ಶಬ್ದಕ್ಕೆ ಉಂಟಾಗುತ್ತವೆ : ೧೪. ಕೈನೀರೆಱೆದು—ದಾನಧಾರೆಯನ್ನು ಸುರಿದು ; ೧೫. ಒಂದಿದಂ—ಸೇರಿದನು ;

೧೮. ವಿಗುರ್ವಿಸಿ—ಮಾಯೆಯಿಂದ ನಿರ್ಮಿಸಿ, ಈ ಶಕ್ತಿಗೆ ವೈಕುರ್ವಣ ಶಕ್ತಿ ಎಂಬ ಹೆಸರುಂಟು : ೨೧. ನಿರುತಮೊ—ದಿಟವೋ ?

ಶ್ಲೋಕ : ಭವಿತವ್ಯಂ—ಆಗಬೇಕಾದದ್ದು. ಭವತ್ಯೇವ—ಆಗಿಯೇ ಆಗುತ್ತದೆ : ಕರ್ಮಣಾಂ—ಕರ್ಮಗಳ ವಿಷಯದಲ್ಲಿ. ಏಷ—ಇದು, ನಿಶ್ಚಯಃ—ನಿರ್ಣಯವು; ವಿಪತ್ತೌ—ವಿಪತ್ತಿನಲ್ಲಿ. ವಿಷಾದೇನ ಕಿಂ—ವಿಷಾದದಿಂದ ಪ್ರಯೋಜನವೇನು ? ಸಂಪತ್ತೌ—ಸಂಪತ್ತಿನಲ್ಲಿ. ವಿಸ್ಮಯೇನ ಕಿಂ—ಅಚ್ಚರಿಪಡುವುದರಿಂದೇನು ? ೭. ಸಂಭಿನ್ನವಾಗುತ್ತಿರ್ದ್ದ—ದಟ್ಟವಾಗುತ್ತಿದ್ದ : ಪ್ರುಯ್ಯಲಿಟ್ಟಳ್ ಕೂಗಿಕೊಂಡಳು, ಮೊರೆಯಿಟ್ಟಳು.

೧೦೩. ೧ : ಆರಪ್ಪೊಡಂ—ಯಾರಾದರೂ : ಮನದೊನಾಗಿ—ಮನದವನಾಗಿ ; ೭. ನಿವೇದಿಸಲ್ಪಟ್ಟೆಂ—ಅರ್ಪಿಸಲ್ಪಟ್ಟೆನು : ೧೨. ಏನ್ ಅಱಿವೊ—ಏನು ತಿಳಿಯುವಿಯೋ : ನೋಟ್ಪೆನುಂ—ನೋಡುವೆನು ಮತ್ತು, ಬರೆವೆನುಂ—ಬರೆಯುವೆನು ಮತ್ತು, ಭಾವಿಸುತ್ತಿರ್ಪೆಂ—ಭಾವಿಸುತ್ತ ಇರುವೆನು : ಇಲ್ಲಿನ ಉಂ ಸಮುಚ್ಚಯ ಪ್ರಯೋಗ ವಿಶಿಷ್ಟವಾದುದು : ೧೭. ಹರ್ಷರೋಮಾಂಚ ಕಂಚುಕಿತ ವಿಕಸಿತ ವದನೆಯಾಗಿ—ಸಂತೋಷದ ಪುಳಕವೆಂಬ ರವಿಕೆಯನ್ನುಳ್ಳವಳು, ಅರಳಿದ ಮುಖವುಳ್ಳವಳಾಗಿ : ೧೮. ಅಱಸ ಬಳ್ಳಿ ಕಾಲ್ದೊಡರ್ದತ್ತು—ಹುಡುಕಬೇಕಾದ ಬಳ್ಳಿ ಕಾಲಿಗೆ ತೊಡರಿಕೊಂಡಿತು. ಇದು ನಾಣ್ಣುಡಿ ; ೨೪. ಕೊಲ್ವುದರಿದೆ—ಕೊಲ್ಲುವುದು ಅಸಾಧ್ಯವೆ ? ೨೭. ಕಿತ್ತು ಬಾಳ್ವೆರಸು—ಒರೆಯಿಂದ ಸೆಳೆದ ಕತ್ತಿಯೊಡನೆ ; ೨೮. ಇಱಿದಾತನ—ಹೊಡೆದವನ : ಪಿಱಿಂ—ಹೊಡೆತವನ್ನು ; ಬಂಚಿಸಿ—ತಪ್ಪಿಸಿಕೊಂಡು ; ೨೯. ತೆಗಲೆಯು—ಕೊರಳನ್ನು ; ೩೦. ಮೇಗುಚ್ಚಳಿಸಿ—ಮೇಲಕ್ಕೆ ಚಿಮ್ಮಿ ನೆಗೆದು.

೧೦೪. ೯ : ಚೋರಜಾರ ಪಾದರಿಗರ್ಕಳಂ – ಕಳ್ಳರು ಜಾರರು ಹಾದರಿಗರನ್ನು ; ೧೧. ಅಸಿಖೇಟಕಹಸ್ತೆಯಾಗಿ—ಕತ್ತಿ ಗುರಾಣಿಗಳನ್ನು ಕೈಯಲ್ಲಿ ಹಿಡಿದವಳಾಗಿ ; ವಿಭೀಷಣಮಪ್ಪ—ಅತಿ ಭಯಂಕರವಾದ ; ೧೨. ಸಾರ್ದಾಗಳ್—ಹತ್ತಿರ ಬಂದಾಗ ; ಸೌಷ್ಠವದೊಳಿರ್ದೋನಂ—ಚೆಲುವಾದ ರೂಪದಲ್ಲಿದ್ದವನನ್ನು ; ೧೪. ಸ್ಮರವಶಹೃದಯೆಯಾಗಿ—ಮನ್ಮಥನಿಗೆ ಅಧೀನವಾದ ಮನವುಳ್ಳವಳಾಗಿ : ೧೭. ನೀರಿೞಿದು—ಸ್ನಾನಮಾಡಿ, ನೀರ್ಮುಳುಗಿ : ೧೯. ಸೋದರಮುಂ—ಸಹೋದರವನ್ನುಳ್ಳವಳೂ ಎಂದರೆ ಸಹೋದರಿಯೂ : ಕಲ್ಯಾಣಮಿತ್ರೆಯುಂ—ಮಂಗಳಕರಳಾದ ಸ್ನೇಹಿತೆಯೂ: ೨೫. ಮಱುಮಾತುಗೊಟ್ಟೊಡೆ—ಪ್ರತಿವಚನವನ್ನು ಹೇಳಿದರೆ ; ೩೦. ಕಲ್ಯಾಣದೊಳ್ ಕೂಡಿ—ಶುಭದಲ್ಲಿ ಸೇರಿ.

೧೦೫. ೨ : ಪಾರಾವತ ರೂಪದಿಂದ—ಪಾರಿವಾಳದ ಆಕಾರದಿಂದ : ೫. ನಿಮ್ಮ ಮೇಲೆ ಬರ್ಕುಂ—ನಿಮ್ಮ ಮೇಲೆ ದಂಡೆತ್ತಿ ಬರುತ್ತಾನೆ ; ೬. ಎರಲೆಗಳಂ—ಜಿಂಕೆಗಳನ್ನು : ನಿಪಾತಿಸಲ್ಕೆ—ಬೀಳಿಸುವುದಕ್ಕೆ, ಕೊಲ್ಲುವುದಕ್ಕೆ ; ೧೯. ಪಾಗುಡಮುಂ—ನಜರನ್ನು, ಖಿಲ್ಲತ್ತುಗಳನ್ನು ; ೨೫. ಆವನೊರ್ವನ್—ಯಾವನೊಬ್ಬನು : ೨೬. ತಱಿಸಂದ—ನಿಶ್ಚಯಿಸಿದ ; ೩೦. ಎಮ್ಮಮ್ಮನ ಬೆಸದಿಂ—ನಮ್ಮಪ್ಪನ ಅಪ್ಪಣೆಯಿಂದ ; ಓಲಗಿಸಲ್—ನೋಡಲು, ಸೇವೆಮಾಡಲು, ಅವಲೋಕನ + ಇಸು > ಓಲಗಿಸು ; ೩೧. ಬೞಿಯನೆ—ಹಿಂದೆಯೇ.

೧೦೬. ೩ : ಮೇಲೆಟ್ಟಿಂದನಂ—ಮೇಲೆ ದಾಳಿಯಿಟ್ಟು ಬಂದವನನ್ನು ; ೫. ಆನೆ ಸಾಲ್ವೆಂ—ನಾನೇ ಸಾಕಾಗುತ್ತೇನೆ ಎಂದರೆ ನಾನೇ ಸಮರ್ಥನಾಗಿರುವೆನು : ೭. ಪಿಂಛಾತಪತ್ರ—ನವಿಲುಗರಿಯಿಂದ ಮಾಡಿದ ಕೊಡೆ, "ಸಸೌವರ್ಣ ಕಲಾಪಸ್ಥ ಚಂದ್ರಕೈಃ ಪರಿಕಲ್ಪಿತಂ ॥ ಸುವರ್ಣದಂಡಿದಂಡೇನ ರತ್ನೇನ ಪರಿಮಂಡಿತಂ। ಕಲಶೇನ ತದುತ್ಥೇನ ಶುಭ್ರೇಣ ಪರಿಶೋಭಿತಂ ॥ ಪಿಂಛ ಛತ್ರಮಿದಂ ಪ್ರಾಹುಃ" : ಪಾಳಿಧ್ವಜ—ಒಂದು ಬಗೆಯ ಬಾವುಟ ವ್ಯೂಹ : ಹಾರ. ಅಸ್ತ್ರ, ನವಿಲು, ಕಮಲ, ಹಂಸೆ, ಮೀನು, ಸಿಂಹ, ವೃಷಭ, ಆನೆ, ಚಕ್ರ—ಈ ಲಾಂಛನಗಳನ್ನುಳ್ಳ ಬಾವುಟಗಳು ; ೧೦. ಸಾಲುಗಳು ನಾಲ್ಕು ಕಡೆಗೆ ಚೌಕಾಕಾರದಲ್ಲಿರುತ್ತವೆ. ಪ್ರತಿ ಸಾಲಿನಲ್ಲಿ ಒಂದೊಂದು ಬಗೆಯ ಲಾಂಛನದ ೧೦೮ ಧ್ವಜಗಳಿರುತ್ತವೆ. ಒಂದು ಕಡೆಗೆ ಒಟ್ಟು ೧೦೮೦ ಬಾವುಟಗಳು. ೪ ಕಡೆಗಳಲ್ಲಿ ಒಟ್ಟು ೪೩೨೦ ಧ್ವಜಗಳು ಇರುತ್ತವೆ. ಈ ರಚನೆಗೆ ಪಾಳಿಧ್ವಜ ಪಾಳಿಕೇತನ ಎಂದು ಹೆಸರು : (I.A. XIV.)

೧೧. ಬಾಣಾಸನಹಸ್ತನಾಗಿ—ಬಿಲ್ಲನ್ನು ಕೈಯಲ್ಲುಳ್ಳವನಾಗಿ : ಸರದಿಂದೆ—ಬಾಣದಿಂದ, (ಸಂ) ಶರ ; ೧೨. ಪೊಕ್ಕನೆವೋಗೆ—ಪೊಕ್ಕೆಂದು ಕತ್ತರಿಸಿಹೋಗುವಂತೆ ; ೧೩. ವಿದ್ಯುತ್ಕಪಾಲಂಬೊಲ್—ಮಿಂಚಿನ ತಲೆಬುರುಡೆಯಂತೆ ; ಮಱುವಕ್ಕದವರ್—ಪ್ರತಿಪಕ್ಷದವರು. ಶತ್ರುಪಕ್ಷದವರು : ೧೪. ಪುಲ್ಲಂ ಕರ್ಚಿ—ಹುಲ್ಲನ್ನು ಬಾಯಲ್ಲಿ ಕಚ್ಚಿಕೊಂಡು. ಇದು ಶರಣಾಗುವುದರ ಸಂಕೇತ : ೨೪. ಸಿದ್ಧಕೂಟಕ್ಕೆ—ಸಿದ್ಧರಿರುವ ಪರ್ವತಶಿಖರಕ್ಕೆ.

೧೦೭. ೩ : ಸಾರ್ಥಾಧಿಪತಿ—ಸಾರ್ಥಕ್ಕೆ ಒಡೆಯ. ಸಾರ್ಥ—ಊರಿಂದೂರಿಗೆ ಹೋಗಿ ಸರಕುಗಳನ್ನು ಮಾರುವವರ ಶ್ರೇಣಿ ; ೧೬. ಬೀಭತ್ಸಮಂ—ಅಸಹ್ಯಕರವನ್ನು, ಜುಗುಪ್ಸೆಯನ್ನು ; ೨೦. ಪ್ರಾಣತ ಕಲ್ಪದೊಳ್—ಪ್ರಾಣತವೆಂಬ ಸ್ವರ್ಗದಲ್ಲಿ ; ೨೭. ನೆಱೆದೊನಾಗಿ—ತುಂಬಿದವನಾಗಿ. ಏನಾನುಮೊಂದು—ಏನಾದರೂ ಒಂದು.

೧೦೮. ೩ : ಶ್ರಾವಕಧರ್ಮದೊಳ್—ಜೈನಗೃಹಸ್ಥನ ಧರ್ಮದಲ್ಲಿ ; ಅಗ್ಗಳನಾಗಿ—ಶ್ರೇಷ್ಠನಾಗಿ : ೪. ನೆಗೞುತ್ತಂ—ಮಾಡುತ್ತ, ಆಚರಿಸುತ್ತ ; ೮. ಪಾರ್ವಂತಿಗಂ—ಬ್ರಾಹ್ಮಣಸ್ತ್ರೀಗೂ : ೯. ಪರಿವ್ರಾಜಕಂಗೆ—ಸಂನ್ಯಾಸಿಗೆ ; ೧೪. ಮಱುಗುತ್ತಿರ್ದ ಮನಮನೊಡೆಯ—ಕುದಿಯುತ್ತಿರುವ ಮನಸ್ಸುಳ್ಳ (ಕೋಪದಿಂದ) ; ೧೫. ಪಾರಿಸಲ್ವೇೞ್ಪುದು—ಪಾರಣೆಮಾಡಬೇಕು. ಊಟಮಾಡಬೇಕು : ೧೬. ಒಂದು ಪಾಂಗಿನೊಳ್—ಒಂದು ರೀತಿಯಲ್ಲಿ ; ೧೭. ತಳಿಗೆಯೊಳ್—(ಊಟದ) ತಟ್ಟೆಯಲ್ಲಿ : ತುಯ್ಯಲು—ಪಾಯಸವನ್ನು ; ೧೮. ಎನಗೆ ಆೞ್ತಿ—ನನಗೆ ಇಷ್ಟ, ಪ್ರೀತಿ : ಊಡಲಾರ್ಪೊಡೆ ಊಟಮಾಡಿಸಲು ಸಮರ್ಥನಾದರೆ : ೧೯. ಅಚ್ಚಿಗನಾದ—ದುಃಖಿತನಾದ, ವ್ಯಥಿತನಾದ ; ೨೦ ಪರಿಯಾಣಮಂ—ತಟ್ಟೆಯನ್ನು ; ತೆಕ್ಕನೆ ತೀವಿ—ಭರ್ತಿಯಾಗಿ ತುಂಬಿ ; ೨೨. ಪಾರುತ್ತಿರ್ದು—ನಿರೀಕ್ಷಿಸುತ್ತಿದ್ದು : ೨೩. ಸಮೆದ ಬೞಿಕ್ಕೆ—ಮುಗಿದ ಅನಂತರ : ೨೪. ತೊವಲ್—ಚರ್ಮ : ೩೦. ಪುಣ್ ತೀರ್ವನ್ನೆಗಂ—ಹುಣ್ಣು ಮಾಯುವವರೆಗೂ : ಕೈಯನೆತ್ತಿಕೊಳ್ಳಿಂ—ಇಳಿಬಿಟ್ಟು ಕೈಯನ್ನು ಮೇಲಕ್ಕೆ ಎತ್ತೆನು.

೧೦೯. ೧ : ಗೃಧ್ರವಾಯಸಾದಿಗಳ್—ಹದ್ದು ಕಾಗೆಗಳು ; ೬. ಅಲ್ಲಿಂ ಬೞ್ಚಿ ಬಂದು—ಅಲ್ಲಿಂದ ಕೆಳಕ್ಕೆ ಜಾರಿ ಬಂದು : ೧೯. ಮಾವಂಗಳಂ ಬಿಡಿಸಿ—ಮಾವನನ್ನು ಅಗಲಲು ಅಪ್ಪಣೆ ಅಥವಾ ಅನುಮತಿಯನ್ನು ಪಡೆದುಕೊಂಡು : ೨೦. ಅಧಿರೂಢರ್ಕಳಪ್ಪ—ಹತ್ತಿರದವರಾದ : ೨೨. ಮಹಾವಿಭೂತಿಯಿಂದಂ—ಮಹಾವೈಭವದಿಂದ ; ಚಕ್ರಂ ಪುಟ್ಟಿ—ಚಕ್ರವು ಆಯುಧಾಗಾರದಲ್ಲಿ ಹುಟ್ಟಿ : ೨೮. ಪರಿವೇಷ್ಟಿತನಾಗಿ—ಬಳಸಿದವನಾಗಿ.

೧೧೦. ೧ : ಸಹೋತ್ಪನ್ನ—ಸಂಗಡ ಹುಟ್ಟಿದ : ಅವಯವದಿಂ—ಶ್ರಮವಿಲ್ಲದೆ, ಸುಲಭವಾಗಿ : ೮. ಒಮ್ಮೊದಲೆ—ಒಂದೇ ಸಲದಲ್ಲಿ, ಏಕಕಾಲದಲ್ಲಿ : ೧೫. ತಗುಳ್ದೊಡೆ—ಅನುಸರಿಸಿದರೆ. ಒತ್ತಾಯಪಡಿಸಿದರೆ : ೨೨. ಒಳನ್—ಉಂಟು, ಇರುವನು ; ೨೪. ಅದಮಾನುಮಗ್ಗಳಂ—ಅತ್ಯತಿಶಯವಾಗಿ ಶ್ರೇಷ್ಠನಾದವನು ; ೨೭. ಪಡಿಯಱರಂ—ದ್ವಾರಪಾಲಕರನ್ನು : ೨೮. ಗೆಂಟಱಿಂ—ದೂರದಿಂದ : ಆೞ್ತಿವಟ್ಟು—ಪ್ರೀತಿಪಟ್ಟು, ಸಂತೋಷಿಸಿ : ೩೦. ಸಾರೆವೋಗಿ—ಹತ್ತಿರ ಹೋಗಿ.

೧೧೧. ೧ : ಅಭ್ಯಂಗಸಂಗೆಯ್ದು—ಬಳಿದು, ಲೇಪಿಸಿ : ಮಜ್ಜನಂ ಬುಗಲೆಂದಿರ್ದ—ಮಿಂದಾಯಲೆಂದು ಸಿದ್ಧವಾಗಿದ್ದ : ಅವಸರದೊಳ್—ಸಮಯದಲ್ಲಿ : ೨. ವಾಳಾಗ್ರದಿಂ ತೊಟ್ಟು ನಖಾಗ್ರಂ ಬರೆಗಂ—ತಲೆಯ ಕೂದಲ ತುದಿಯಿಂದ ಕಾಲ ಹೆಬ್ಬೆರಳಿನ ಉಗುರಿನ ತುದಿಯವರೆಗೂ : ನಖಾಗ್ರದಿಂ ತೊಟ್ಟು ವಾಳಾಗ್ರಂ ಬರೆಗಂ—ಉಗುರು ತುದಿಯಿಂದ ಹಿಡಿದು ತಲೆಗೂದಲ ತುದಿಯವರೆಗೂ ಎಂದರೆ ಆಪಾದಮಸ್ತಕ ಪರ್ಯಂತ : ೩. ಏಱೆಯುಮಿೞಿಯೆಯುಂ—ಏರುವಂತೆ ಇಳಿಯುವಂತೆ, ನೋಡುವ ಕಣ್ಣು ತಲೆಯನ್ನು ನೋಡುವಾಗ ಏರುತ್ತದೆ, ಕಾಲನ್ನು ನೋಡುವಾಗ ಇಳಿಯುತ್ತದೆ : "ಅರಸನವನನೇಱೆಯುಮಿೞಿಯೆಯುಂ ನೋಡಿ ನೀಡುಂ ನಿರಮಿಸಿಜಾಂತರ್ಗತನೊಳ್" (ಅರ್ಥನೇ. ೬–೬೨ವ) ಎಂದು ಪ್ರಯೋಗವುಂಟು : ೧೨. ಕಿಱಿದಸಿ

ಬೇಗಂ ಮಾಣಿಂ—ಸ್ವಲ್ಪಹೊತ್ತು ನಿಲ್ಲಿರಿ, ತಡೆಯಿರಿ : ೧೩. ಪಸದನಂಗೊಂಡಿರ್ದ—ಒಡವೆಗಳಿಂದಲಂಕರಿಸಿಕೊಂಡು : ೧೮. ಬಟ್ಟೆಯಟ್ಟಿ—ದೂತರೊಡನೆ ಹೇಳಿ ಕಳುಹಿಸಿ

**ಶ್ಲೋಕ :** ಅನೇಕ ರಾಗ ಸಂಕೀರ್ಣಂ ಅಪಿ—ಹಲವು ಬಣ್ಣಗಳಿಂದ ತುಂಬಿದ್ದರೂ, ಘನಲಗ್ನಮಪಿ—ಮೋಡಕ್ಕೆ ಅಂಟಿಕೊಂಡಿದ್ದರೂ. ಇಂದ್ರಧನುಃ—ಮಳೆಬಿಲ್ಲು, ಕಾಮನಬಿಲ್ಲು. ಯಥಾ—ಹೇಗೆ, ನಶ್ಯತಿ—ನಾಶವಾಗುವುದೋ [ತಥಾ—ಹಾಗೆ], ಕಷ್ಟಂ—ಕ್ಲೇಶಕರವಾದ, ಮಾನುಷಂ ಯೌವನಂ—ಮನುಷ್ಯರ ಪ್ರಾಯವು. [ನಶ್ಯತಿ—ನಾಶವಾಗುತ್ತದೆ].

೨೩. ಗಾಡಿಯುಂ—ಸೌಂದರ್ಯವೂ ; ೨೬ ತೊಟ್ಟು—ಪ್ರಾರಂಭವಾಗಿ, ಮೊದಲಾಗಿ : ೨೮. ಯೌವನಭರದೊಳ್—ಪ್ರಾಯದ ಆಧಿಕ್ಯದಲ್ಲಿ. ಅತಿಶಯದಲ್ಲಿ.

**೧೧೨.** ೨ : ಕಿಱಿದು ಕುಂದಿದುದುಮಂ—ಕೊಂಚ ಕಡಿಮೆಯಾಗಿರುವುದನ್ನು : ೪. ದೋಣಿಕೊಂಡಮಂ—ದ್ರೋಣಿ ಕುಂಡವನ್ನು, ದೊನ್ನೆಯಾಕಾರದ ಹರವಿಯನ್ನು, ಮಡಕೆಯನ್ನು : ೫. ಚಮರಿಯಂ ಅರ್ದಿ—ಚಾಮರವನ್ನು ಅದ್ದಿ; ೬. ಪನಿತುದುಮಂ—ಹನಿ ಬಿದ್ದುದನ್ನು : ೭. ತಗುಳ್ದು—ಅಂಟಿಕೊಂಡು : ಬಿಯಮಾದ—ವ್ಯಯವಾದ, ನಷ್ಟವಾದ ; ೧೦. ಆ ವೀಚಿಮರಣಮಂ—ಅಲೆಯ ಸಾವನ್ನು ಎಂದರೆ ಕ್ಷಿಪ್ರಮರಣವನ್ನು : ೧೩. ನಿರ್ವೇಗಕ್ಕೆ—ವಿರಕ್ತಿಗೆ.

**ವೃ :** ರೂಪಂ—ರೂಪವೂ, ಯೌವನಂ—ಪ್ರಾಯವೂ. ಆಯುಃ—ಆಯುಸ್ಸೂ. ಅಕ್ಷವಿಷಯಾಃ—ಇಂದ್ರಿಯಗಳಿಗೆ ಕಾಣುವ ಪದಾರ್ಥಗಳೂ, ಭೋಗೋಪಭೋಗಾಃ—ಸುಖಾನುಭವಗಳೂ. ವಪುಃ—ದೇಹವೂ, ವೀರ್ಯಂ—ಶಕ್ತಿಯೂ. ಸ್ವೇಷ್ಟಸಮಾಗಮಃ—ಇಷ್ಟಜನರ ಸಹವಾಸವೂ. ವಸುಮತೀ—ನೆಲವೂ ಎಂದರೆ ರಾಜ್ಯವೂ. ಸೌಭಾಗ್ಯಭಾಗ್ಯಾದಯಃ—ಸೊಬಗು ಐಶ್ವರ್ಯಗಳೂ. ನಃ—ನಮಗೆ, ಅನಿತ್ಯಾಃ—ಅಶಾಶ್ವತವಾದವುಗಳು, ಇತಿ—ಹೀಗೆಂದು. ಶೇಷಾಃ—ಉಳಿದ, ಸರ್ವೇ ಸುಧಿಯಃ—ಸಮಸ್ತ ಬುದ್ಧಿವಂತರೂ, ಜ್ಞಾನಿಗಳೂ, ಆತ್ಮನಃ ಸಮುದಿತ ಜ್ಞಾನೇಕ್ಷಣಾಭ್ಯಾಂ—ತಮ್ಮಲ್ಲಿ ಚೆನ್ನಾಗಿ ಉಧಿಸಿದ ಜ್ಞಾನವೆಂಬ ನೇತ್ರಗಳಿಂದ, ಋತೇ—ಹೊರತಾಗಿ, ಅನಿತ್ಯತಾಂ—ಅಶಾಶ್ವತತೆಯನ್ನು, ಸ್ಫುಟಂ—ಸ್ಪಷ್ಟವಾಗಿ, ಅನುಚಿಂತಯಂತು—ಚೆನ್ನಾಗಿ ಧ್ಯಾನಿಸಲಿ.

**ಶ್ಲೋಕ :** ಆದೌ—ಮೊದಲಿನಲ್ಲಿ. ಜನ್ಮ—ಹುಟ್ಟುವುದೂ, ಮಧ್ಯೇ—ನಡುವೆ, ಜರಾರೋಗೌ—ಮುಪ್ಪು ಮತ್ತು ರೋಗಗಳು, ಅಂತೇಪಿ—ಕೊನೆಯಲ್ಲೂ. ಖಿಳಾಂತಕಃ—ದುಷ್ಟನಾದ ಯಮನು. ಮೃತ್ಯುವು, ಇತಿ—ಹೀಗೆ, ಭವಾರ್ಣವಂ—ಹುಟ್ಟು ಸಾವುಗಳೆಂಬ ಪರಂಪರೆಯ ಸಮುದ್ರ, ಜಂತೋಃ ಮಧ್ಯೇ—ಪ್ರಾಣಿಗಳ ಮಧ್ಯದಲ್ಲಿ, ಚಕ್ರೈಕ ಸಂಭ್ರಾಂತಿಃ—ಚಕ್ರಾಕಾರದಲ್ಲಿ ತಿರುಗುತ್ತಿರುವುದಾಗಿದೆ.

೨೩. ಮಕುಟ ಬದ್ಧರ್ಕಳ್—ಕಿರೀಟಧಾರಿಗಳು, ರಾಜರು : **೨೫.** ಬಡಬರ್ದ—ದರಿದ್ರಳಾದ ಮುದುಕಿ : ನಿಱಿಸಿ—ಪಾರಣೆಗಾಗಿ ನಿಲ್ಲಿಸಿ : ೨೬. ಪಾರಕಿನ ಕೂಟುಮಂ—ಹಾರಕದಕ್ಕಿಯ ಅನ್ನವನ್ನೂ : ಆಡಿನಳಿಯುಮಂ—ಆಡಿನ ಮಜ್ಜಿಗೆಯನ್ನೂ : ಬಡ್ಡಿಸಿದೊಡೆ—ಬಡಿಸಿದರೆ : ಪಚ್ಚಕ್ಖಾಣಂ = (ಸಂ) ಪ್ರತ್ಯಾಖ್ಯಾನಂ—ಆಹಾರನಿವೃತ್ತಿಯ ಪ್ರತಿಜ್ಞೆಯನ್ನು: ಕೊಂಡರ್—ಸ್ವೀಕರಿಸಿದರು : ಆ ಕಾಲದಿಂ ತೊಟ್ಟು—ಆ ಕಾಲದಿಂದಾರಂಭಿಸಿ ; ೨೮. ಕಚ್ಚು—ಕಜ್ಜಿ. ಜರ—ಜ್ವರ. ಕಾಸ—ಕೆಮ್ಮು, ಸಾಸೋ—ಉಸಿರೆಳೆಯುವುದು, ಭತ್ತಚ್ಛದಿ—ಅತಿಸಾರ. ಅಚ್ಚಿಕುಚ್ಛಿ ದುಃಖಾಣಿ—ಕಣ್ಣುಗಳ, ಹೊಟ್ಟೆಯ ಬೇನೆಗಳು.

**೧೧೩.** ೫ : ಪ್ರತೀಕಾರಮಂ—ಚಿಕಿತ್ಸೆಯನ್ನು, ಪರಿಹಾರೋಪಾಯಗಳನ್ನು : ೧೧. ಅಸ್ಫೋಟಕ—ಬೊಬ್ಬೆ, ಹುಗುಳು. ಬಾವು : ಪಿಟಕಂ—ಹೊಪ್ಪಳೆ ; ಶೂಲ—ಶೂಲೆ, ನೋವು : ಭಗಂದರ—ನಂಜುಲವ್ಯಾಧಿ : ೧೨. ಗಂಡ—ಗಂಡಮಾಲೆ : ಒರ್ಮೊದಲೆ—ಏಕಕಾಲದಲ್ಲಿ : ೧೩. ಋದ್ಧಿಸಂಪನ್ನರಾಗಿಯುಂ—ಋದ್ಧಿಗಳ ಸಂಪತ್ತುಳ್ಳವರಾಗಿಯೂ. ೧೬. ಮಂದುಗಳಂ—ಔಷಧಿಗಳನ್ನು. ಮದ್ದುಗಳನ್ನು. (ತಮಿಳು) ಮರುಂದು : ಪಸುಂಬೆಯೊಳ್—ಹಸುಬೆ ಚೀಲ

ದಲ್ಲಿ ; ತೆಕ್ಕನೆ ತೀವಿ—ಭರ್ತಿಯಾಗಿ ತುಂಬಿ : ೧೭. ಸಾರೆವಂದು—ಹತ್ತಿರ ಬಂದು ; ಕುತ್ತಂಗಳೆಲ್ಲಮಂ—ರೋಗಗಳೆಲ್ಲವನ್ನೂ ; ೧೮. ನೆಱೆವೆವು—ಸಮರ್ಥರಾಗಿರುವೆವು : ೨೦: ಕುಶಲರೆಮುಂ—ನಿಪುಣರಾಗಿದ್ದೇವೆ ಮತ್ತು, ಕುಶಲರ್ + ಎಂ + ಉಂ : ೨೨. ಕರ್ಮಜ್ಞರೆಮುಂ—ಕಾರ್ಯವನ್ನು ಬಲ್ಲವರಾಗಿದ್ದೇವೆ. ಮತ್ತು : ೨೪. ನಿರೋಗಮಪ್ಪಂತಿರೆ—ರೋಗರಹಿತರಾಗುವಂತೆ : ೨೫. ಉಗುಟಿ ಸೀಕರಂಗಳ್—ಉಗುಳಿನ ತುಂತುರು ಹನಿಗಳು : ೨೬. ಸೀಂಟಿ—ಒರಸಿ. ತೊಡೆದು ; ಆ ಎಡೆ—ಆ ಜಾಗವು, ಸ್ಥಳವು ; ಸುವರ್ಣಾಯಮಾನವಾಗಿ—ಚಿನ್ನದ ಬಣ್ಣದಂತಾಗಿ ; ೨೮. ಬಾಟಿಯಪ್ಪೊಡೆ—ಪ್ರಯೋಜನವಾಗುವುದಾದರೆ : ೨೯. ಬಾಟಿಯಲ್ತು—ಪ್ರಯೋಜನವಿಲ್ಲ ; ಜಾತಿ ಜರಾಮರಣಂಗಳೆಂಬ—ಹುಟ್ಟು ಮುಪ್ಪು ಸಾವುಗಳೆನ್ನುವ ; ಕುತ್ತಮಂ—ರೋಗವನ್ನು.

**೧೧೪.** ೧ : ಒಡಂಬಡುವೆಮಲ್ಲೆಂ—ನಾವು ಒಪ್ಪುವವರಲ್ಲ : ೨. ಅಂ ಅಜೆಂ—ನಾವು ಸಮರ್ಥರಲ್ಲ : ಸಮರ್ಥರಿರ್—ಶಕ್ತಿವಂತರಾಗಿರುವಿರಿ : ೫. ನೆಗಟ್ವೆ ನೆಗಟ್ಟಿಯುಮಂ—ಮಾಡುವ ಕೆಲಸವನ್ನೂ : ೭. ಸೌಧರ್ಮೇಂದ್ರನ ಪೊಗಟ್ದುದು—ಸೌಧರ್ಮ ಸ್ವರ್ಗದ ಇಂದ್ರನು ಹೊಗಳಿದ್ದು : ಗುಣಂಗೊಂಡು—ಗುಣಗ್ರಹಣಮಾಡಿ : ೭. ಮಗಟ್ದು—ಸಂತೋಷಿಸಿ, (ತಮಿಳು) ಮಗಿಟ್ : ಪೞವಾವಿಯೊಳ್—ಹಳೆಯ ಬಾವಿಯಲ್ಲಿ ; ೧೦. ಮಿಂದೋರ್ಗೆಲ್ಲಂ—ಸ್ನಾನಮಾಡಿದವರಿಗೆಲ್ಲಾ: ೧೮. ಪಂಚನಮಸ್ಕಾರಮಂ—ಅರ್ಹಂತ, ಸಿದ್ಧ, ಆಚಾರ್ಯ, ಸಾಧು, ಉಪಾಧ್ಯಾಯ ಈ ಐವರಿಗೆ ನಮಸ್ಕಾರವನ್ನು ; ೧೯. ಅಪವರ್ಗ—ಮೋಕ್ಷ.

## ೫. ಅಣ್ಣಿಕಾಪುತ್ರನ ಕಥೆ

**೧೧೫.** ೮ : ಕಾಲಂಗೆಯ್ದೊನಾಗಿ—ಸತ್ತವನಾಗಿ.

೧೪. ಸಾರ್ಥಾಧಿಪತಿ—ಸರಕಿನಬಂಡಿಗಳ ಶ್ರೇಣಿಗೆ ಒಡೆಯ ; ಪರದಂ—ವರ್ತಕ : ೧೭. ಪರದಿಂಗೆಂದು—ವ್ಯಾಪಾರಕ್ಕೆಂದು : ಪಿರಿದುಂ ಸಾರವಪ್ಪ—ಅಧಿಕ ಬೆಲೆಯುಳ್ಳ ; ಭಂಡಮಂ—ಸರಕುಗಳನ್ನು ; ತೀವಿಕೊಂಡು—ತುಂಬಿಕೊಂಡು ; ೨೫. ಪೆಱದಂ—ಬೇರೆ ಇತರ ಸರಕುಗಳನ್ನು ; ತಮ್ಮನಾಟ್ಕೆ—ತಮ್ಮ ನಾಡಿಗೆ.

**೧೧೬.** ತಾಯುಂ ತಂದೆಯುಮಂ = ತಾಯುಮಂ ತಂದೆಯುಮಂ, ಪಲವು ಪದಗಳು ಕೂಡಿ ಬಂದಾಗ ಒಂದಕ್ಕೆ ಸಮುಚ್ಚಯವಿದ್ದರೂ ಅದನ್ನು ಎಲ್ಲಾ ಪದಗಳಿಗೂ ಅನ್ವಯಿಸಿಕೊಳ್ಳಬೇಕು : (ಶಮದ. ೧೫೬) ; ೧೪. ಉತ್ಪಾತವಾತದಿಂದಂ—ವಿಪತ್ಕಾರಕವಾದ ಬಿರುಗಾಳಿಯಿಂದ ; ೧೫. ತೆರೆಯನೊಡೆಯುದಱೊಳ್—ಅಲೆಗಳನ್ನುಳ್ಳದ್ದರಲ್ಲಿ : ೧೬. ವೋಹಿಸದ ಬುದ್ಧಿಯನೊಡೆಯೊಂ—ಲೋಭಕ್ಕೆ ವಶವಾಗದ ಬುದ್ಧಿಯುಳ್ಳವನಾಗಿ.

## ೬. ಭದ್ರಬಾಹು ಭಟ್ಟಾರರ ಕಥೆ

**೧೧೭.** ೭ : ಕಡಿದಪ್ಪ—ತೀವ್ರವಾದ.

೧೫. ಶ್ರೀಯಾದೇವತೆಯನೆ—ಲಕ್ಷ್ಮಿಯನ್ನೇ ; ೧೯. ಮುಂಜಿಗಟ್ಟುವ—ಮುಂಜ ಎಂಬ ಹುಲ್ಲನ್ನು ಸೊಂಟಕ್ಕೆ ಕಟ್ಟುವ ಎಂದರೆ ಉಪನಯನವನ್ನು ಮಾಡುವ : ೨೧. ಓರಗೆಗಳಪ್ಪ—ಸಂಗಡಿಗರಾದ : ಮಾಣಿಗಳ್ವೆರಸು—ಹುಡುಗರೊಡನೆ ಕೂಡಿ, ಬ್ರಹ್ಮಚಾರಿಗಳೊಡನೆ : ೨೨. ಪೊಱವೊಟಲ್—ಪಟ್ಟಣದ ಹೊರಭಾಗದಲ್ಲಿ ; ಬಟ್ಟಾಡುತ್ತಿರೆ—ಬಿಲ್ಲೆಯಾಟವನ್ನು ಆಡುತ್ತಿರಲು, (ಸಂ) ವೃತ್ತ > ಬಟ್ಟು—ಗುಂಡಗಿರುವ ಬಿಲ್ಲೆ ; ೨೫. ಓಳಿಯೊಳಿಟ್ಟು—ಸಾಲಾಗಿ, ಎಂದರೆ ಒಂದರಮೇಲೊಂದನ್ನು ಇಟ್ಟು : ೨೪. ಚತುರ್ದಶ ಪೂರ್ವಧಾರಿಗಳ್—ಜೈನಾಗಮದ ೧೪ ಪೂರ್ವಗ್ರಂಥಗಳನ್ನು ಧರಿಸಿದವರು ಎಂದರೆ ಬಲ್ಲವರು : ಶ್ರುತಕೇವಲಿಗಳ್—ಜೈನಾಗಮದ ಪರಿಪೂರ್ಣ ಜ್ಞಾನವುಳ್ಳವರು : ೨೫. ಉಜ್ಜಯಂತಮಂ—ಉಜ್ಜಯಂತವೆಂಬ ಪರ್ವತವನ್ನು.

ಕೊಟ್ಟು ನಿಲ್ಲಿಸಿ, 'ಶಾಂಗು—ಧಾರಣೇ' ; ೩. ಪದಿಂಬರ್—ಹತ್ತು ಜನರು ; ೫. ಬಸಿಱರ್ ತೀವೆ—ಹೊಟ್ಟೆ ತುಂಬುವಂತೆ ; ಬಡ್ಡಿಸದಿರ್—ಬಡಿಸಬೇಡ ; ೬. ಎಣ್ಣೆಯುಂ ತಿಣ್ಣಮೆಱೆಯದಿರ್—ಎಣ್ಣೆಯನ್ನು ಹೆಚ್ಚಾಗಿ ಹೊಯ್ಯಬೇಡ. ಹಾಕಬೇಡ ; ಮಿಾಯಲ್ ಬೇಡಿದೊಡಂ—ಸ್ನಾನ ಮಾಡಲು ಕೇಳಿದರೂ ; ಎಱೆಯದಿರ್—ನೀರು ಹೊಯ್ಯಬೇಡ ; ೭. ಕಲ್ಪಿಸಿದೊಡೆ—ಕಲಿಸಿದರೆ, ಹೇಳಿಕೊಟ್ಟರೆ ; ಒಡೆಯೊನಾದಂ—ಉಳ್ಳವನಾದವನು ಎಂದರೆ ಧನಿಕನಾದವನು ; ೧೧. ದಮ್ಮ ಕ್ಕಾದೊಡಂ—ಧರ್ಮಕ್ಕಾದರೂ ಅಥವಾ ಒಂದು ದಮ್ಮ (=ದ್ರಮ್ಮ = Drachma) ವೆಂಬ ನಾಣ್ಯಕ್ಕಾದರೂ ; ಸೀರೆಯುಂ—ವಸ್ತ್ರವನ್ನು, ಕೊಂಡೀಯಿಂ—ಬೆಲೆಗೆ ತೆಗೆದುಕೊಂಡು ಕೊಡಿರಿ: ೧೪. ಉಣಲಿಕ್ಕಿದಾ—ಊಟಮಾಡಲು ಬಡಿಸಿದೆಯಾ ? ; ಪರ್ವಮೆಂದು—ಹಬ್ಬವೆಂದು ; ೧೯. ಮಾರಿಯಿರ್ಕೆ—ಮಾರಿದೇವತೆ ಇರಲಿ ; ೨೦. ಮಾಱಲ್ ತಗುಳ್ದೊಡೆ—ಮಾರಲು ಆರಂಭಿಸಿದರೆ ; ಎಂಟು ದಮ್ಮದ—ಎಂಟು ದಮ್ಮಗಳು ಬೆಲೆಬಾಳುವ ; ೨೧. ಒಂದು ಪಣಮನಪ್ಪೊಡಂ—ಒಂದು ಹಣವನ್ನಾದರೂ, ಪಣ—ಒಂದು ಸಣ್ಣ ನಾಣ್ಯ ; ಪೆಱದೆ—ಪಡೆಯದೆ ; ಬಸಿಱ್ಕರ್ಟಿಗಂ—ಹೊಟ್ಟೆ ತುಂಬ ಅನ್ನಕ್ಕೂ ; ಅಂಬಲಿಗಂ—ಅನ್ನದ ಗಂಜಿಗೂ ; ಕಟಿಗಂ—ಹುಳಿಗಂಜಿಗೂ ; ೨೬. ಪರಿವಿಡಿಗೆಯ್ದು—ಅನುಕ್ರಮವಾಗಿ ಪಠಿಸಿ ಹೇಳಿ : ಪಾರಣೆಗೆಂದು—ಉಪವಾಸವನ್ನು ಮುಗಿಸುವ ಊಟಕ್ಕೆಂದು ; ಚರಿಗೆವೊಗುತಂದೊಡೆ—ಚರ್ಯೆಗಾಗಿ ಎಂದರೆ ಭಿಕ್ಷಕ್ಕಾಗಿ ಪ್ರವೇಶಿಸಿದರೆ ; ೨೭. ನೀಡುಂ ನೋಡಿ—ಬಹಳ ಹೊತ್ತು ನೋಡಿ.

**೧೨೨.** ೧: ಬೞಿವೞಿಯನೆ—ಹಿಂದು ಹಿಂದೆಯೇ ; ಇವರನೆಂದವರಂ—? ೩. ಪೆಱರಾರು ನಿಱಿಸಲ್ ಸಲ್ಲ—ಬೇರೆ ಯಾರೂ ಊಟಕ್ಕೆ ನಿಲ್ಲಿಸಲು ಸಲ್ಲದು, ಸಲ್ಲ < ಸಲ್ಲದು ; ೪. ಗೋಸನೆಯುಂ—ಡಂಗುರವನ್ನು ; ೮. ಅರ್ಚನೆಯಿಂದ—ಅರ್ಚನೆ ಮಾಡುವ ವಸ್ತುಗಳಿಂದ ; ಬಲಗೊಂಡು ಬಂದು—ಪ್ರದಕ್ಷಿಣೆ ಮಾಡಿ ; ೯. ಪ್ರಕ್ಷಾಳಿಸಿ—ತೊಳೆದು ; ೧೦. ದೇಸಿಗನ—ದೇಶಿಕನ ಎಂದರೆ ಗುರುವಿನ ಅಥವಾ ದೇಶ ಅಲೆದಾಡುವವನ ; ೧೨. ಪೊನ್ನತಳಿಗೆಯುಂ—ಚಿನ್ನದ ತಟ್ಟೆಯೂ ; ಉಚ್ಚಮಪ್ಪ—ಎತ್ತರವಾದ ; ಅಡ್ಡಣಿಗೆಯುಮಂ—ತಟ್ಟೆಯಿಡುವ ಮುಕ್ಕಾಲುಮಣೆಯನ್ನೂ ; ೧೪. ರಾಜಾನ್ನದ ಕೂೞುಂ—ರಾಜಾನ್ನ ಎಂಬ ಅಕ್ಕಿಯ ಅನ್ನವೂ, ಭತ್ತದಲ್ಲಿ ಒಂದು ಉತ್ತಮವಾದ ಜಾತಿ : ಪೆಸಱ ತೊವೆಯುಂ—ಹೆಸರುಬೇಳೆಯ ತೊವ್ವೆಯೂ ; ೧೫. ನಾರ್ಪ—ಮಗಮಗಿಸುವ ; ೧೬. ಬಾಡುಗಳುಂ—ಕಾಯಿ ಪಲ್ಲೆಗಳೂ ; ತುಯ್ಯಲುಂ—ಪಾಯಸವೂ ; ಪೂರಿಗೆ—ಪೂರಿ : ಇಡ್ಡಲಿಗೆ—ಇಡ್ಡಲಿ : ಸೋದಿಗೆ—ಗೋಧಿ ರವೆಯಿಂದ ಮಾಡಿದ ಭಕ್ಷ್ಯ ; ಲಾವಣಿಗೆ—ಉಪ್ಪಿನಕಾಯಿ ಮುಂತಾದುವು ; ೧೭. ಘೃತಪೂರಂ—ತುಪ್ಪದ ಪೂರಿ ; ಲಡ್ಡುಗೆ—ಲಾಡು : ಮಂಡಗೆ—ಮಂಡಗೆಯೆಂಬ ಭಕ್ಷ್ಯವು : ೨೦. ಪುಟ್ಟಿದಂದಿಂತೊಟ್ಟು—ಹುಟ್ಟಿದ ದಿನದಿಂದ ಹಿಡಿದು ಇಂತಪ್ಪ ಉಣಿಸಂ—ಇಂತಹ ಆಹಾರವನ್ನು ; ಕಂಡಱಿಯದ ಮಗಂ—ನೋಡಿ ತಿಳಿಯದ ಪೈದ : ೨೧. ತಣಿಯೆಯುಣಲ್ವೆಱದ—ಹೊಟ್ಟೆ ತುಂಬ ಊಟಮಾಡಲು ಪಡೆಯದ : ೨೨. ಆಕಂಠಪ್ರಮಾಣಾಂಬರಂ—ಗಂಟಲಿನ ಮಟ್ಟದವರೆಗೂ : ೨೩. ನೆಲವತ್ತಿಯಡಕೆಯ—ನೆಲವತ್ತಿ ಎಂಬ ಪ್ರದೇಶದಲ್ಲಿ ಬೆಳೆದ ಅಡಕೆಯ : "ಅಡಸಿದ ಪಾರಿಜಾತಕದ ಕಪ್ಪುರವಳ್ಳಿಯ ನೆಲವತ್ತಿಯಾಯ್ದಡಕೆಯ ಭೀಮಸೇನಿಕದ ತಂಬುಲದಿಂ" ಎಂದು ಪೊನ್ನನೂ (ಶಾಂತಿಪು. ೧೦-೯೫), "ಕಾಮವಿಕಾರೋತ್ಕರ್ಷ ಸಮಾಕರ್ಷಣ ನಿಮಿತ್ತಂ ಮಾಡಿದೌಷಧದ ಘುಟಿಕಾ ಪೇಟಕಂಗಳೆಂಬಂತಿರ್ದ ಕರ್ಪೂರತೈಲದಿಂ ಘೋಳಿಸಿದ ನೇಲುವತ್ತಿಯಾಯ್ದಡಕೆಯ ಭಾಗಂಗಳಿಂದು" ಎಂದು ಬಾಹುಬಲಿಯೂ (ಬಾಧಪು. ಆ. ೬), ಈ ಅಡಕೆಯನ್ನು ಹೆಸರಿಸಿದ್ದಾರೆ. ಇದು ಅಡಕೆಗಳಲ್ಲಿ ಉತ್ತಮಜಾತಿಯದೆಂದು ತೋರುತ್ತದೆ. "ನೆಲ್ಲವತ್ತಿಯ ಜಿನ ಭವನಂ", "ನೆಲ್ಲವತ್ತಿಯ ಪಟ್ಟೆಯ ಕೆಱೆಯೆರಡುಂ ಬಸದಿಯುಮಂ" ಎಂಬಲ್ಲಿ ಶಾಸನಕವಿ ದಾಮರಾಜನು (ಕಾಲ-ಶಕ ೧೦೫೧. ಶಿವಮೊಗ್ಗ ೧೦) ನೆಲ್ಲವತ್ತಿ ಎಂಬ ಊರನ್ನು ನಿರ್ದೇಶಿಸಿದ್ದಾನೆ ; ೨೪. ಕೈ ತೀವಿದೆಲೆಯುಮಂ—ಕೈತುಂಬ ವೀಳೆಯವನ್ನೂ.

**೧೨೩.** ೧: ಕಾಲಂಕರ್ಚಿ—ಕಾಲನ್ನು ತೊಳೆದುಕೊಂಡು : ೬. ಸಮೆದಿರ್ದ ಬೞಿಕ್ಕೆ—

ನನ್ನ, ಪೇೞ್ವಪ ಪೇೞ್ವಪ—ನೋಡು ನೋಡು : ಜಾಜಾ ಮಂತಃ ಕಾರಣ ಯೇಣ—ಅದೋ ಇದೋ ಯಾವುದಾದರೂ ಕಾರಣದಿಂದ ?, ಇರೇಣ—ಇತರ ಮನುಷ್ಯನಿಂದ. ಪಚ್ಚ ಇಯವ್ವಂ—ನಂಬಲ್ಪಡುವುದು, ಹೋಇ—ಆಗುತ್ತದೆ.

೧೪. ಛಂದಛಂದದಿಂ—ಬೇರೆ ಬೇರೆ ಛಂದಸ್ಸುಗಳಿಂದ, ಬಗೆಬಗೆಯವನಾಗಿ ; ೧೭. ಉಣಿಸುಗೆಂದು—ಊಟಕ್ಕೆ ಎಂದು. ಊಟ ಕಾರಣವಾಗಿ ; ೨೨. ಇನಿವಿರಿದು—ಇಷ್ಟು ದೊಡ್ಡದು : ೨೯. ನೆಗೞ್ದು—ಆಚರಿಸಿ ; ೩೦. ಪಶ್ಚಾತ್ಕಾಲದೊಳ್—ಅನಂತರಕಾಲದಲ್ಲಿ.

೧೨೯, ೧೧ : ಚರಿಗೆವೊಗಿಸುತ್ತುಂ—ಭಿಕ್ಷಕ್ಕಾಗಿ ಮನೆಮನೆಗೆ ಪ್ರವೇಶ ಮಾಡಿಸುತ್ತ ; ೧೨. ಓಸರಿಗೆಯೊಳ್—ಮನೆಯ ಹೊರಬಾಗಿಲಿನ ಒಳಗಿರುವ ಕೋಣೆ, ಪ್ರಾ. ಓಸರಿಆ, (ಸಂ) ಅಪಸಾರಕ ; ೧೩. ಅವ್ಯಕ್ತ ಕಿಱುಗೂಸು—ಅಸ್ಪಷ್ಟವಾಗಿ ಕಾಣುತ್ತಿರುವ ಚಿಕ್ಕ ಕೂಸು : ಬೋೞಪ ಬೋೞಪ—ಗಟ್ಟೆ, ಗಟ್ಟೆ, ಹೋಗು ಹೋಗು, <ಪ್ರಾ. ಪೋಲ ; ೧೭. ಅಲಾಭಂ ಮಾಡಿ—ಆಹಾರವನ್ನು ಸ್ವೀಕರಿಸದೆ : ೨೦. ಬರಿಸಿಂ—ಬರಮಾಡಿಕೊಳ್ಳಿರಿ ; ೨೧. ಪೊಲ್ಲ ಕನಸುಗಳಂ—ಕೆಟ್ಟ ಕನಸುಗಳನ್ನು ; ೨೩. ಕೋಡು—ಕೊಂಬೆ ; ೨೪. ಮಗುೞ್ದುದುಮಂ—ಹಿಂದಿರುಗಿದ್ದನ್ನೂ ; ೨೫. ಕಡುಗಡಿಯುಮಪ್ಪ—ಅತ್ಯಂತ ವೇಗಶಾಲಿಗಳಾದ ; ಪೋರಲ್ ಸಾರ್ದು—ಹೋರಾಡಲು ಸಮೀಪಿಸಿ ; ಪೆಱಗಿಂಗಿ—ಹಿಂಜರಿದು : ೨೬. ಮಿಸುಗುವುದುಮಂ—ಮಿಂಚುವ ಹುಳುಗಳನ್ನೂ ; ೨೮. ಪೊನ್ನ ತಳಿಗೆಯೊಳ್—ಚಿನ್ನದ ತಟ್ಟೆಯಲ್ಲಿ : ತುಱ್ಯೈಲ್—ಪಾಯಸ ; ೨೯. ಕಸಕುಪ್ಪೆಯೊಳ್—ಕಸದ ರಾಶಿಯಲ್ಲಿ ; ೩೦. ಬೆಳ್ಗಟ್ಟೆ—ಬಿಳಿ ಕತ್ತೆ.

೧೩೦, ೪ : ಅವಱ—ಅವುಗಳ ಎಂದರೆ ಆ ಕನಸುಗಳ : ೮. ಕಟಿದೊಡೆ—ಗತವಾದರೆ ; ೧೨. ಇಲ್ಲಿಂ ತೊಟ್ಟು—ಇಲ್ಲಿಂದ ಹಿಡಿದು ; ರೌದ್ರಪಸವಂ—ಭಯಂಕರ ಕ್ಷಾಮ ; ೧೩. ಮೊದಲ—ಮೂಲದ ; ಪೊರ್ದಿದ—ಸೇರಿದ ; ೧೪. ಇಂಬೆಳೆಯೊಳ್—ಇನಿದಾದ ಎಂದರೆ ಒಳ್ಳೆಯ ರುಚಿಯುಳ್ಳ ಬೆಳಸಿನಲ್ಲಿ ; ೧೫. ಪ್ರಜೆಗಳ ಮೆಚ್ಚಿದಂತೆ—ಪ್ರಜೆಗಳು ಮೆಚ್ಚಿದ ಹಾಗೆ ; ಮೞೆ ಕೊಳ್ವುವು—ಮಳೆ ಸುರಿಯುವು ; ಮಂಡಲವರ್ಷಂಗಳ್—ಕೆಲಕೆಲವು ಪ್ರದೇಶಗಳಲ್ಲಿ ಬೀಳುವ ಮಳೆಗಳು ; ೧೭. ಓರನ್ನವು—ಸಮಾನವಾದಂಥ ; ಅಂಗಬಾಹ್ಯಮಪ್ಪ—ದ್ವಾದಶಾಂಗವೆಂಬ ಜೈನಾಗಮಗಳಿಗೆ ಹೊರಗಾದ ; ಚತುರ್ದಶ ವಿದ್ಯಾಸ್ಥಾನಂಗಳುಂ—ಹದಿನಾಲ್ಕು ವಿದ್ಯೆಗಳು ಎಂದರೆ ೧೪ ಪೂರ್ವಾಗಮಗಳ ಉಪದೇಶಸ್ಥಾನಗಳು ; ೧೮. ತನುಮಾತ್ರಮು—ಸ್ವಲ್ಪ ಮಾತ್ರವೇ ; ನಿಲ್ಕುಂ—ನಿಲ್ಲುತ್ತದೆ ; ೧೯. ಪಿನ್ನ—ಹಿಂದಿನ ಕಾಲದ ; ೨೦. ನೆಗೞ್ತೆಯಾಗದು—ಪ್ರಸಿದ್ಧಿ ಉಂಟಾಗುವುದಿಲ್ಲ.

**ಗಾಹೆ :** ಪುವ್ವೇಣ—ಪೂರ್ವದಿಕ್ಕಿನಲ್ಲಿ ; ಅಂಗವಿಸಓ—ಅಂಗವೆಂಬ ದೇಶ ; ದಕ್ಖಿಣದೋ—ದಕ್ಷಿಣ ದಿಕ್ಕಿನಲ್ಲಿ : ಕೋಸಂಬೀ—ಕೌಶಂಬೀನಗರವು. ಜಾವಹೋಇ—ಯಾವಾಗ ಆಗುತ್ತದೋ. ಅವರೇಣ—ಪಶ್ಚಿಮದಲ್ಲಿ, ಜಾವದೂಣಾ—ದೂಣ ಎಂಬುದರವರೆಗೆ. ಉತ್ತರದೋ—ಉತ್ತರ ದಿಕ್ಕಿನಲ್ಲಿ, ಕುಣಾಳ ವಿಸಯೋಯ—ಕುಣಾಳವೆಂಬ ದೇಶವು.

೨೪. ಧೂರ್ತರಪ್ಪ—ದುಷ್ಟರಾದ ; ಪೊಲ್ಲ ಲಿಂಗಿಗಳ—ಕೆಟ್ಟ ಲಾಂಛನಗಳನ್ನುಳ್ಳವರ ; ಪೆರ್ಚಿಕ್ಕುಂ—ಹೆಚ್ಚಳವುಂಟಾಗುತ್ತದೆ ; ೨೯. ಅದಮಾನುಂ—ಅತಿಶಯವಾದ ; ೩೦. ಅಭಿಮಾನಮಂ—ಮಮತೆಯನ್ನು.

೧೩೧, ೪ : ದ್ರವ್ಯಪತಿಗಳುಂ—ಶ್ರೀಮಂತರೂ ; ೭. ಲೋಭಿಷ್ಠರಾಗಿ—ದುರಾಶೆಯಿಂದ ಕೂಡಿದವರಾಗಿ ; ೧೦. ನಿರ್ಗ್ರಂಥಲಿಂಗಮಂ—ನಿರ್ಗ್ರಂಥ ಎಂದರೆ ದಿಗಂಬರತ್ವದ ಲಾಂಛನವನ್ನು ; ೧೧. ಕೈಕೊಳೆಪಟ್ಟುಂ—ಸ್ವೀಕರಿಸಲ್ಪಟ್ಟೂ ; ಪುರುಷಾಕಾರಮುಂ—ಪುರುಷಪ್ರಯತ್ನವೂ ; ೧೩. ನೆಗೞೆಪಟ್ಟುದಂ—ಮಾಡಲ್ಪಟ್ಟದ್ದನ್ನು ; ೧೭. ತೊಟ್ಟು—ಆರಂಭವಾದ ; ನಣ್ಪುಗಳ್—ನಂಟತನಗಳು, ಸಂಬಂಧಗಳು.

**ಹರಿಣಿ :** ಅನ್ಯತಮಚನೇ—ಸುಳ್ಳು ಹೇಳುವುದರಲ್ಲಿ. ನಿತ್ಯಾಭ್ಯಾಸಃ—ಸಂತತವಾದ ಅಭ್ಯಾಸ ; ಖಲೇಷು—ದುಷ್ಟರಲ್ಲಿ. ವಿದಗ್ಧತಾ—ಪಾಂಡಿತ್ಯವು ; ಗುಣವತಿ ಜನೇ—ಗುಣವಂತರಾದ ಜನರಲ್ಲಿ. ವೈರಾಬುದ್ಧಿ—ದ್ವೇಷಬುದ್ಧಿ ; ಖಲೇಷು—ದುಷ್ಟರಲ್ಲಿ ; ಅತಿ ಗೌರವಂ—ಬಹು ಮರ್ಯಾದೆ ;

—ಮತ್ತೆ ಮತ್ತೆ ; ಬಡ್ಡಿಸೆ—ಬಡಿಸಲು ; ಚರಿಗೆಮಾಡಿ—ಊಟಮಾಡಿ ; ೨೭. ಆವಾಸಕ್ಕೆ —ಮನೆಗೆ.

**೧೩೪.** ೧ : ಇನಿಸಾನುಂ ತಿಣ್ಣಂ—ಸ್ವಲ್ಪ ತೀವ್ರವಾಗಿ, ಬೇಗನೆ ; ತೊಟಲ್ವಲ್ಲಿ—ಸುತ್ತಾಡುವಲ್ಲಿ ೭. ಅವಮೋದರ್ಯ ಚರಿಗೆ—ಹೊಟ್ಟೆ ತುಂಬುವುದಕ್ಕೆ ಬೇಕಾದ ಮೂವತ್ತೆರಡು ತುತ್ತುಗಳಲ್ಲಿ ದಿನಕ್ಕೆ ಒಂದರಂತೆ ಕಡಮೆಮಾಡಿ ಊಟಮಾಡುವುದು : ೧೦. ಮುಡಿಪಿ—ಸತ್ತು ; ೧೨. ನಿಸಿದಿಗೆಯಂ —ಬೃಂದಾವನವನ್ನು, ಗೋರಿಯನ್ನು ; ೧೪. ತಿಮುಳನಾಡ್ಗೆ—ತಿಗುಳರ ನಾಡಿಗೆ ಎಂದರೆ ತಮಿಳುನಾಡಿಗೆ ; ೧೫. ನಿರುಪಸರ್ಗದಿಂ—ಉಪಸರ್ಗವಿಲ್ಲದೆ ; ೧೬. ಬಡಗನಾಡ—ಉತ್ತರ ದೇಶದ, ಉತ್ತರಾಪಥದ ; ಪಸವು—ಕ್ಷಾಮ : ತಿಳಿದುದು—ಹೋಯಿತು ; ೨೨. ಬದೋರ್ಕರ್—ಬಾಳಿದರು ; ೨೩. ತಲೆನವಿರ್—ತಲೆಗೂದಲು ; ಪ್ರತಿವಂದನೆ—ನಮಸ್ಕಾರಕ್ಕೆ ಪ್ರತಿನಮಸ್ಕಾರ ; ೨೬. ಕೆಂದು —ಮಲಗಿ, "ಕೆಂದಿದ ವಿಮಾನಂ ತಳ್ತಾಡದಿರ್ದ ಮಡುವಂ ಪೋಲ್ತಂ—ಸುಪ್ತವಿಮಾನಮಿವ ಪ್ರದಾ": "ಕೇ—ಶಯನೇ" ; ೨೭. ಸೇದೆವಟ್ಟಿರ್—ಆಯಾಸಗೊಂಡಿರಿ ; ೨೮. ಪೋಕೆಂದೊಡೆ—ಹೋಗಲಿ ಎಂದರೆ, ಪೋಗೆಮೆಂದೊಡೆ ಎಂಬ ಪಾಠ ಸ್ವೀಕರಣಯೋಗ್ಯ ; ೨೯. ಕಿಮ್ಮನೆ—ಸುಮ್ಮನೆ ; ತಾಂಗಿದಪಿರ್—ತಡೆಯುತ್ತೀರಿ.

**೧೩೫.** ೨ : ಇಂಬುಕೆಯ್ವಂ—ಆಶ್ರಯ ಕೊಡೋಣ, ಅಂಗೀಕರಿಸೋಣ ; ೮. ಬ್ರಹ್ಮಯ್ಯಾ—ಬ್ರಹ್ಮಚಾರಿಯೇ, ಘಾಣಿಯೇ ; ಗುಂಡಿಗೆಯುಂ—ಕಮಂಡಲುವನ್ನು ; ೧೩. ಎಟಿಲ್ದ—ನೇತು ಬಿದ್ದಿರುವ ; ೧೬. ನಿಡಿಯ ಮರದ—ಎತ್ತರವಾದ ಮರದ ; ೧೯. ಬರ್ದಿರ್—ಬಾಳಿದಿರಿ ; ೨೦. ಏವಂಗೊಳ್ಳದೆ—ಅಸಮಾಧಾನಪಡದೆ, ಕೋಪಿಸದೆ ; ೨೪. ಬಾರಿಸಿ—ತಡೆದು ; ಲೋಚುಗೆಯ್ದು —ಕೂದಲನ್ನು ಬೋಳಿಸಿ, ಎಂದರೆ ಕಿತ್ತುಹಾಕಿ, ಸಂ. ಲುಂಛನ.

**೧೩೬.** ೩ : ಲವಟುಗಳ—? ಇದರ ಪಾಠದಲ್ಲಿ ಕ್ಲೇಶವಿದೆ. 'ಬೃಹತ್ಕಥಾಕೋಶ'ದ ಈ ಸಂದರ್ಭದಲ್ಲಿ ವೈದೇಶಿಕಜನೈಃ ಎಂದರೆ ಅನ್ಯದೇಶೀಯರಿಂದ ಎಂದು ಬರುತ್ತದೆ, ಲವಟು ಎಂಬುದಕ್ಕೆ ಆ ಅರ್ಥವಿರಬಹುದೇನೋ ? ಪಡಿಲಾಗ—ಪಡೆಯಲಾಗದು ; ಮೇಲ್ವಾಯ್ದು—ಮೇಲೆ ನುಗ್ಗಿ ; ೫. ಅಟ್ಟು—ಅಡಿಗೆಮಾಡಿ ; ೮. ಮಡಗಿಟ್ಟು—ಜೋಪಾನವಾಗಿಟ್ಟು ; ೯. ನಿರ್ಗ್ರಂಥಯತಿ—ದಿಗಂಬರ ಯತಿ ; ೧೦. ಬಸಿಪ್ಪೆಂಡಿತಿ—ಗರ್ಭಿಣಿ ; ೧೨. ಕರ್ದಿಂಗಳಿರುಳೊಳ್—ಅಮಾವಾಸ್ಯೆಯ ರಾತ್ರಿಯಲ್ಲಿ, ಕರಿದು + ತಿಂಗಳ್, ಬೆಳ್ದಿಂಗಳ್‌ಗೆ ವ್ಯತಿರಿಕ್ತವಾದುದು ; ಕಟ್ಟಲೆಯೊಳ್—ಕತ್ತಲೆಯಲ್ಲಿ ; ೧೩. ಬಸಿಜಾರಿದತ್ತು—ಗರ್ಭಸ್ರಾವವಾಯಿತು ; ೧೬. ಪಸವು ಕಟಿವನ್ನೆಗಂ—ಕ್ಷಾಮವು ಹೋಗುವವರೆಗೆ ; ಎಟಿಲಿಕ್ಕಿ—ಜೋಲುವಂತೆ ಬಿಟ್ಟು ; ಅರ್ಧಗಪ್ಪಡಮುಂ—ಅರೆವಸ್ತ್ರವನ್ನು ; ೧೭. ಮುಯ್ಪಿನ ಮೇಗೆ—ಹೆಗಲ ಮೇಲೆ : ೧೯. ಪಾಂಗಿನೊಳ್—ರೀತಿಯಲ್ಲಿ ; ನೆಗಟ್ದು — ಮಾಡಿ.

**೧೩೭.** ೧ : ಕೊಳಲ್ ಒಲ್ಲದವರ್—ದಿಗಂಬರತ್ವವನ್ನು ಸ್ವೀಕರಿಸಲು ಒಪ್ಪದವರು ; ೨. ಅರ್ಧಗಪ್ಪಡದ ತೀರ್ಥಮುಂ—ಅರೆವಸ್ತ್ರಧಾರಣೆಯ ಶಾಖೆಯನ್ನು, ಸಂಪ್ರದಾಯವನ್ನು ; ನೆಗಟ್ಚಿದರ್—ಮಾಡಿದರು ; ೪. ರಾಜ್ಯಂಬರೆಗಂ—ರಾಜ್ಯದವರೆಗೂ ; ೧೬. ಪಟಿಯುಂ ಸಯ್ಯುಟ್ಟು ಕೊಂಡು—ವಸ್ತ್ರವನ್ನು ಸರಿಯಾಗಿ ಉಟ್ಟುಕೊಂಡು ; ೧೭. ಆ ದಿವಸಂ ತಗುಳ್ದು—ಆ ದಿನದಿಂದ ಹಿಡಿದು ; ೧೮. ಕಚ್ಚೆಗಟ್ಟದೆ—ಕಚ್ಚೆ ಹಾಕದೆ ; ಸಯ್ಯುಡುವರುಂ—ಸರಿಯಾಗಿ ಧರಿಸುವವರೂ ; ಕುಱುವಡಮುಂ—ಕುಱುವಡಿಯುಂ—ಚಿಕ್ಕಮಡಿವಸ್ತ್ರವನ್ನು ; ಪೊದೆವರುಂ—ಹೊದೆಯುವವರೂ : ೧೯. ಕಂಬಳತೀರ್ಥಂ—ಕಂಬಳಿ ಹೊದೆಯುವ ಸಂಪ್ರದಾಯ ಅಥವಾ ಶಾಖೆ : ಶ್ವೇತಪಟರ್—ಶ್ವೇತಾಂಬರರು ; ೨೦. ಅವರಯ—ಅವರದೇ : ಸಂತತಿಯ—ಪರಂಪರೆಯ ; ೨೧. ಶ್ವೇತಭಿಕ್ಷು ಚಾವುಲಿ ಸಂಘ—ಶ್ವೇತಾಂಬರ ಯತಿಗಳ ಚಾವುಲಿ ಎಂಬ ನಗರದ ಸಂಘ, ಚಾವುಲಿ—"ಸಾವಲಿ ಪತ್ತನೇ" (ಬೃ.ಕ.ಕೋ. ೧೩೧–೮೧) : ಮೊದಲಿಗನಾದಂ—ಮೂಲಪುರುಷನಾದನು : ೨೩. ಪೇಟ್ದುದ—ಹೇಳಲ್ಪಟ್ಟಿತು.

ನಯಸೇನನ ಪ್ರಯೋಗ (ಧರ್ಮಾಮೃ. ೬.೧೮೮) ; ೫. ಎಱ್ಱುಕಱ್ಱೆಯುಂ—ಎತ್ತೂ ಕತ್ತೆಯೂ, ಎಮ್ಮೆಯುಂ—ಎಮ್ಮೆಯೂ : ಒಟ್ಟೆಯುಂ—ಒಂಟೆಯೂ : ಉಡುವುಂ—ಉಡವೂ : ೬. ಓಂತಿಯುಂ—ಓತೀಕ್ಯಾತವೂ, ಮುಂಗುಸಿಯುಂ—ಮುಂಗುಸಿಯೂ ; ೭. ನೆಗಳುಂ—ಒಂದು ತೆರನಾದ ಮೊಸಳೆಯೂ ; ೮. ತಿಮಿ—ತಿಮಿಯೆಂಬ ಮಹಾ ಮೀನು ; ತಿಮಿಂಗಿಳ—ತಿಮಿಯನ್ನು ನುಂಗುವ ಪ್ರಾಣಿ ; ೯. ಕುರ್ಕ—ಒಂದು ಬಗೆಯ ನೀರಹಕ್ಕಿ. "ಕುಕ್ಕನೋಳಿ ಚೆಲ್ವಿದಿರ್ಗೆಳೆ ಬರ್ಪ ಸೊನ್ನಲಿಗೆಯಾಗೆ" (ಆದಿಪು ೬-೭೧) ; ಪುರುಳಿ—ಸಾರಿಗೆ ಅಥವಾ ಹೆಣ್ಣುಗಿಳಿ ; ಪೆಂಗುರು—ಒಂದು ಬಗೆಯಾದ ದೊಡ್ಡ ಬಕಪಕ್ಷಿ, (ತೆಲುಗು) ಪೆಗ್ಗುರು, ಬೆಗ್ಗುರು ; ಕಾರಂಡ—ಒಂದು ಬಗೆಯ ನೀರುಕೋಳಿ ; ಅಂಡೆ—ಗೂಬೆ ; ೧೩. ನೆಗಟ್ಟರ್—ಮಾಡುವವರು : ೧೫. ಆಗಂತುಕ—ಬರಲಿರುವ ; ೧೬. ಮೊದಲಾಗೊಡೆಯುವಱಿಂದಂ—ಮೊದಲಾಗುಳ್ಳವುಗಳಿಂದ.

**ಶ್ಲೋಕ** : ಸುಖಸ್ಯಾನಂತರಂ—ಸುಖವಾದ ಬಳಿಕ, ದುಃಖಂ—ದುಃಖವು ; ದುಃಖಸ್ಯಾನಂತರಂ—ದುಃಖವಾದ ಬಳಿಕ, ಸುಖಂ—ಸುಖವು, (ಹೀಗೆ) ದುಃಖಾನಿ ಚ ಸುಖಾನಿ ಚ—ದುಃಖಗಳೂ ಸುಖಗಳೂ, ಚಕ್ರವತ್—ಚಕ್ರದಂತೆ, ಪರಿವರ್ತಂತೇ—ತಿರುಗುತ್ತವೆ.

೨೫. ಸೂಱ್ಸೂಱೊಳೆ—ಬಾರಿಬಾರಿಗೆ ; ೨೬. ಕಲ್ಪಂಗಳೊಳ್—ಸ್ವರ್ಗದಲ್ಲಿ (ಇವು ೧೬) ; ಗ್ರೈವೇಯಕ—ಕಲ್ಪಗಳ ಮೇಲಿರುವ ೯ ಪ್ರದೇಶಗಳು, ಕಲ್ಪಾತೀತವಾದುವು.

**೧೪೨.** ೧ : ನವಾನುದ್ದಿಸೆಗಳ್—೯ ಅನುದ್ದಿಶೆಗಳು, ಇವು ಗ್ರೈವೇಯಕಗಳ ಮೇಲಿರುವ ಸ್ವರ್ಗಗಳು ; ೨. ಪಂಚಾನುತ್ತರೆಗಳ್—೫ ಅನುತ್ತರೆಗಳು, ಇವು ಗ್ರೈವೇಯಕಗಳ ಮೇಲಿರುವುವು. ಇವುಗಳಲ್ಲಿ ಸರ್ವಾರ್ಥಸಿದ್ಧಿಯೆಂಬ ಸ್ವರ್ಗ ಕೊನೆಯದು. ಅದರಾಚೆ ಸಿದ್ಧಶಿಲೆ, ಅಲೋಕಾಕಾಶ ; ೩. ಪಾಸಿನ ಪೊರೆಯೊಳ್—ಹಾಸಿಗೆಯ ಹತ್ತಿರ ; ೧೧. ಮೊದಲಾಗೊಡೆಯುವಿಲ್ಲದೋರ್—ಮೊದಲಾಗುಳ್ಳುವಿಲ್ಲದವರು ; ೧೩. ತೇಜದೊರಾಗಿ—ತೇಜಸ್ಸುಳ್ಳವರಾಗಿ ; ೨೨. ಪಶ್ಚಾತ್ಕಾಲದೊಳ್—ಅನಂತರಕಾಲದಲ್ಲಿ, ಆಮೇಲೆ.

**೧೪೩.** ೬ : ಪುಗುಟ್ಟಿ ಪುಗುಟ್ಟಿ ಬರವುಂ—ಮತ್ತೆ ಮತ್ತೆ ಬರುವುದೂ ಎಂದರೆ ಹುಟ್ಟುವುದೂ ; ೮. ಪೊರೆಯದುದಂ—ವ್ಯಾಪ್ತವಾಗದಿರುವುದನ್ನು : ಒಡೆತಪ್ಪುದಂ—ಉಳ್ಳುದನ್ನು : ೧೦. ಒಮ್ಮೊಡಲೆ—ಒಟ್ಟಿಗೆ, ಏಕಕಾಲದಲ್ಲಿ ; ೧೪. ಪಾತಕರೆಮುಂ—ಪಾಪಿಗಳಾಗಿದ್ದೇವೆ, ಮತ್ತು ; ಪೊಲ್ಲಕೆಯ್ದೆಮುಂ—ಕೆಟ್ಟುದನ್ನು ಮಾಡಿದ್ದೇವೆ ಮತ್ತು ; ಕೊಂದೆಮುಂ—ಕೊಂದಿದ್ದೇವೆ, ಮತ್ತು : ೧೫. ಬರ್ದುಂಕಿದರ್—ಬದುಕಿದರು. ತಪ್ಪಿಸಿಕೊಂಡರು (ಕೊಲೆಯಿಂದ) ; ೧೬. ಪಿಂಗದು—ಹೋಗದು ; ೧೮. ವಾರಿಸಿದರ್—ತಡೆದರು. ನಿವಾರಿಸಿದರು ; ೧೯. ನಾಮೇನಂ ಬಗೆದೆಂ—ನಾವು ಏನನ್ನು ಆಲೋಚಿಸಿದೆವು ; ೨೫. ಕಿಱಿದೆಯಾಯುಷ್ಯಂ—ಸ್ವಲ್ಪವೇ ಆಯುಸ್ಸು ; ೨೭. ಆಮೆಲ್ಲಂ—ನಾವೆಲ್ಲ ; ಕೂಸುಗಳೆಮುಂ—ಚಿಕ್ಕವರಾಗಿದ್ದೇವೆ, ತರುಣರಾಗಿದ್ದೇವೆ. ಮತ್ತು

**೧೪೪.** ೧ : ನವಯೌವನರೆಮುಂ—ಹೊಸ ಪರೆಯದವರಾಗಿದ್ದೇವೆ. ಮತ್ತು ; ೨. ಎಮಗೆಲ್ಲೊರ್ಗಂ—ನಮ್ಮೆಲ್ಲರಿಗೂ : ೪. ನೀರಡಿಸೆಯಿಂದಂ—ನೀರಿನಿಂದ, ನೀರು ಕಾರಣವಾಗಿ : ೬. ಸಾಭಿಪ್ರಾಯಮೇನ್—ಸರಿಯಾದ ಕುರುಹು ಏನು ; ೮. ಪೊಳೆಯಿಸುತ್ತಂ—ಹೊರಳಿಸುತ್ತ ; ಒದಱಿ—ಕೂಗಿ, ಬಗ್ಗಿಸಿದೊಡೆ—ಬಯ್ದರೆ : ೧೦. ಅದಱಕೆಯ್ತಮುಂ—ಆ ಕೂಟದ ಕೆಲಸವನ್ನು ; ೧೩. ತೊಱೆತೀವುಗುಂ—ನದಿಯು ತುಂಬುತ್ತದೆ. ಉಕ್ಕಿ ಹರಿಯುತ್ತದೆ : ೧೯. ಉಚ್ಚಿಗಂ ಬಟ್ಟು—ಉದ್ವೇಗಹೊಂದಿ. ವ್ಯಥೆಪಟ್ಟು ; ೨೫. ಧನ್ಯರೆಮೊ—ನಾವು ಧನ್ಯರಾಗಿದ್ದೇವೆಯೋ ? : ಅಧನ್ಯರೆಮೊ—ನಾವು ಅಧನ್ಯರಾಗಿದ್ದೇವೆಯೋ ? ; ೨೫. ಧನ್ಯರಿರ್—ನೀವು ಧನ್ಯರಾಗಿದ್ದೀರಿ : ೨೭. ಸ್ವರ್ಣಪಾಷಾಣದೊಳ್—ಚಿನ್ನದ ಕಲ್ಲಿನಲ್ಲಿ ಎಂದರೆ ಚಿನ್ನದ ಅದಿರಿನಲ್ಲಿ : ದಹನ—ಸುಡುವಿಕೆ.

**೧೪೫.** ೧ : ತಾಪನ—ಕಾಯಿಸುವಿಕೆ : ಪಿಂಡಿ ಬಂಧನ—ಮುದ್ದೆಕಟ್ಟುವಿಕೆ ; ಕ್ರಿಯೆಪಡೆವನ್ನೆಗಂ—ಕ್ರಿಯೆಗಳನ್ನು ಪಡೆಯುವವರೆಗೂ.

**ಶ್ಲೋಕ** : ಸ್ಥಿತಸ್ಯ ವಾ—ನಿಂತುಕೊಂಡಿರುವುದಾಗಲಿ. ನಿಷಣ್ಣಸ್ಯ ವಾ—ಕುಳಿತುಕೊಂಡಿರುವವನಾಗಲಿ, ಪುನಃ ಸುಪ್ತಸ್ಯ—ಮತ್ತೆ ಮಲಗಿಕೊಂಡಿರುವವನಾಗಲಿ, ಯಾವತ್—ಯಾವಾಗ

ಸರ್ವಾಭೀಷ್ಟ ಪರಿತ್ಯಾಗಃ—ಎಲ್ಲ ಆಕಾಂಕ್ಷೆಗಳನ್ನೂ ಬಿಡುವುದು, ಪ್ರಾಯೋಪಗಮನಂ ಸ್ಮೃತಃ—ಪ್ರಾಯೋಪಗಮನವೆಂದು ತಿಳಿಯುವುದು.

೭. ವಖ್ಯಾನಿಸಿ ಪೇೞೆ—ವ್ಯಾಖ್ಯಾನ ಮಾಡಿ ಹೇಳಲು ಎಂದರೆ ಸವಿಸ್ತಾರವಾಗಿ ತಿಳಿಸಲು ; ೧೧. ಏಕ ಪಾರ್ಶ್ವದೊಳ್—ಒಂದು ಮಗ್ಗುಲಲ್ಲಿ ; ೧೨. ಮಗುಳದೆ—ಹೊರಳಾಡದೆ ; ೧೪. ಮೆಯ್ಯಂ ತೊಱೆದಿರ್ದರ್—ದೇಹಾಭಿಮಾನವನ್ನು ಬಿಟ್ಟಿದ್ದರು ; ಮಟೆಕೊಂಡು ಪೂರಂ ಬಂದು—ಮಳೆ ಸುರಿದು ಪ್ರವಾಹ ಬಂದು ; ೧೮. ಮುಡಿಪಿ—ಸತ್ತು, ೨೦. ಏಕಹಸ್ತ ಪ್ರಮಾಣ—ಒಂದು ಮೊಳ ಆಳತೆಯುಳ್ಳ.

## ೮. ಧರ್ಮಘೋಷ ಭಟಾರರ ಕಥೆ

೧೪೬ ೭: ಆದಮಾನುಂ ಕಡಿದಪ್ಪುದಱಿಂದಂ—ವಿಶೇಷ ತೀವ್ರತೆಯನ್ನುಳ್ಳದ್ದರಿಂದ ; ೧೬. ಬರ್ಪೊರ್—ಬರುವವರು ;

ವೃ ॥ ಧರ್ಮಪ್ರವರಃ—ಕಃ—ಧರ್ಮದಲ್ಲಿ ಶ್ರೇಷ್ಠನಾದವನು ಯಾರು ; ದಯಾತ್ಮಸುಭಗಃ—ದಯೆಯಿಂದ ಕೂಡಿದ ಆತ್ಮಸೌಭಾಗ್ಯವನ್ನುಳ್ಳವನು ; ಕಃ ನರಃ—ಯಾವ ಮನುಷ್ಯನು, ಪಂಡಿತಂ ಸ್ಯಾತ್—ಪಂಡಿತನಾಗಿದ್ದಾನೆ. ವಶಗಾ—ವಶವಾಗಿರುವವಳು ; ಕಾಯೋಷಿತ್—ಹೆಂಗಸು ಯಾರು, ಕಲಿಷ್ಯಯತಿ—? ; ಕ್ರೋಧಃ—ಕೋಪವು, ಅಶುಭಸ್ಯ—ಅಮಂಗಳದ, ಉದಯಃ—ಹುಟ್ಟುವಿಕೆ ; ಅಲಕ್ಷ್ಮೀಃ—ಲಕ್ಷ್ಮಿಯಿಲ್ಲದವಳು, ಕಾ—ಯಾರು, ಅವಿಚಾರಕಾರ್ಯ ಘಟನಾ—ವಿಚಾರವಿಲ್ಲದೆ ಕಾರ್ಯಮಾಡುವುದು ; ಆತ್ಮನಃ—ಆತ್ಮನ, ಮಿತ್ರಂ ಕಿಂ—ಸ್ನೇಹಿತನು ಯಾರು, ಆತ್ಮಾ—ಮನಸ್ಸು; ಭುವಿ—ಲೋಕದಲ್ಲಿ, ಕಿಂ—ಯಾವುದು, ಸೌಖ್ಯಂ—ಸುಖವು, ಶಾಸ್ತ್ರವಾಚನ ಮತಿಃ—ಶಾಸ್ತ್ರವನ್ನು ಓದುವ ಬುದ್ಧಿಯು ; ಕಾ ವಾ ಗತಿಃ—ಗುರಿ ಯಾವುದು, ನಿರ್ವೃತಿಃ—ಮೋಕ್ಷವು.

ಸಮ್ಯಕ್ತ್ವೋತ್ತಮ ಹಸ್ತಿಮಸ್ತಕ ಗತಃ—ಸಮ್ಯಕ್ತ್ವವೆಂಬ ಆನೆಯ ತಲೆಯ ಮೇಲೆ ಕುಳಿತಿರುವ ; ಸುಜ್ಞಾನಕೇತು ವ್ರಜೋ—ಒಳ್ಳೆ ಜ್ಞಾನವೆಂಬ ಧ್ವಜಗಳ ಸಮೂಹವುಳ್ಳವನಾದ ; ನಾನಾ ಶೀಲಗುಣ ವ್ರತೋರು ಪೃತನಃ—ನಾನಾ ಬಗೆಯಾದ ಶೀಲಗಳೆಂಬ ಗುಣಗಳೆಂಬ ವ್ರತಗಳೆಂಬ ಶ್ರೇಷ್ಠವಾದ ಸೈನ್ಯವನ್ನುಳ್ಳ, ಸ್ವಾಧ್ಯಾಯ ಶಂಖಧ್ವನಿಃ—ಶಾಸ್ತ್ರಾಭ್ಯಾಸವೆಂಬ ಶಂಖದ ಧ್ವನಿಯುಳ್ಳ ; ಭಾಸ್ವತ್ ಸಂವರ ಭೂರಿಚಾರುಕವಚೋ—ಪ್ರಕಾಶಮಾನವಾದ ಸಂವರವೆಂಬ ಅತಿಶಯ ಸುಂದರವಾದ ಕವಚವನ್ನುಳ್ಳವನು ; ನಾತೀವ ತೀಕ್ಷ್ಣಾಯುಧಃ—ಅತಿ ತೀಕ್ಷ್ಣವಾದ ಆಯುಧಗಳಿಲ್ಲದವನು, ಸ್ವರ್ಮೋಕ್ಷ ವೃತ್ತಿಪದಃ—ಸ್ವರ್ಗ ಮತ್ತು ಮೋಕ್ಷದ ಸ್ಥಿತಿಯನ್ನು ಕೊಡುವವನಾದ, ಧರ್ಮಮಹಾನೃಪಃ—ಧರ್ಮವೆಂಬ ಮಹಾರಾಜನು. ಬುಧಭಟೈಃ—ವಿದ್ವಾಂಸರೆಂಬ ಸೈನಿಕರಿಂದ, ಸೇವ್ಯೋ—ಸೇವಿಸಲ್ಪಟ್ಟವನು.

೧೪೭ ಶ್ಲೋಕ ॥ ಧರ್ಮಾರ್ಥಕಾಮಮೋಕ್ಷಾಣಾಂ—ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ, ಏಕಃ ಅಪಿ—ಒಂದಾದರೂ. ಯಸ್ಯ—ಯಾರಿಗೆ ನ ವಿದ್ಯತೇ—ಇಲ್ಲವೋ, ತಸ್ಯ ಜನ್ಮ—ಅವನ ಜನ್ಮವು, ಅಜಾಗಲಸ್ತನಸ್ಯ ಇವ—ಮೇಕೆಯ ಕೊರಳ ಕೆಳಗೆ ಇರುವ ಮೊಲೆಗಳಂತೆ, ನಿರರ್ಥಕಂ—ಪ್ರಯೋಜನವಿಲ್ಲದ್ದು.

ವೃ ॥ ಯೇಷಾಂ—ಯಾರಿಗೆ, ನ ವಿದ್ಯಾ—ವಿದ್ಯೆ ಇಲ್ಲವೋ. ನ ತಪೋ—ತಪಸ್ಸಿಲ್ಲವೋ, ನ ದಾನಂ—ದಾನವಿಲ್ಲವೋ. ನಾಪಿ ಏವ ಶೀಲಂ—ಶೀಲವು ಕೂಡ ಇಲ್ಲವೋ. ನ ಗುಣೋ—ಗುಣವಿಲ್ಲವೋ, ನ ಧರ್ಮಃ—ಧರ್ಮವಿಲ್ಲವೋ, ತೇ—ಅವರು. ಮರ್ತ್ಯಲೋಕೇ ಭುವಿ—ಮೃತಿಯನ್ನು ಹೊಂದುವ ಸ್ವಭಾವವುಳ್ಳ ಲೋಕದಲ್ಲಿ, ಭಾರಭೂತಾಃ—ಭಾರವಾಗಿ ಪರಿಣಮಿಸಿದವರು. ಮನುಷ್ಯರೂಪೇಣ—ಮನುಷ್ಯನ ಆಕಾರದಿಂದ. ಮೃಗಾಃ—ಪ್ರಾಣಿಗಳಾಗಿರುವವರು, ಚರಂತಿ—ನಡೆಯುತ್ತಾರೆ.

**ಶ್ಲೋಕ ||** ಪರಸ್ಪರಂ ಭಕ್ಷಯಿತ್ವಾ—ಒಂದನ್ನೊಂದು ತಿನ್ನುತ್ತ, ಕ್ರಿಮಯಃ—ಕ್ರಿಮಿಗಳು, ಕಿಂ ನ ಜೀವಂತಿ—ಬದುಕುತ್ತಿಲ್ಲವೇನು ; ಪರಲೋಕಾ ವಿರುದ್ಧೇನ—ಪರಲೋಕಕ್ಕೆ ವಿರೋಧವಿಲ್ಲದ ರೀತಿಯಿಂದ, ಯಃ—ಯಾರು, ಜೀವತಿ—ಜೀವಿಸುತ್ತಾನೋ, ಸಃ—ಅವನು, ಜೀವತಿ—ಶ್ಲಾಘ್ಯವಾಗಿ ಜೀವಿಸುತ್ತಾನೆ. ಯೇನ—ಯಾವುದರಿಂದ, ಅಪವಾದಃ—ನಿಂದೆಯು, ಭವೇತ್—ಉಂಟಾಗುವುದೋ, ಯೇನ ಚ—ಮತ್ತು ; ಯಾವುದರಿಂದ, ಅಪ್ರತ್ಯಯೋ—ಅವಿಶ್ವಾಸವು, ಭವೇತ್—ಉಂಟಾಗುವುದೋ, ಯೇನ—ಯಾವುದರಿಂದ, ನರಕಃ—ನರಕವು ; ಗಮ್ಯತೇ—ಪ್ರವೇಶಿಸಲ್ಪಡುವುದೊ, ತತ್ಕರ್ಮ—ಆ ಕಾರ್ಯವನ್ನು ನ ಸಮಾಚರೇತ್—ಆಚರಿಸಬಾರದು.

೧೬. ಶಾಸ್ತ್ರಪಾರಂಗತರಾಗಿ—ಶಾಸ್ತ್ರದ ಆಚೆಯ ದಡವನ್ನು ಕಂಡವರಾಗಿ, ಎಂದರೆ ಪರಮಪಂಡಿತರಾಗಿ ; ೧೮. ತಾಮರೆಗೊಳದ—ತಾವರೆಯ ಕೊಳದ ; ೨೦. ಶ್ರಾವಕರ್ಕಳೆಲ್ಲಂ—ಜೈನಗೃಹಸ್ಥರೆಲ್ಲ ; ನಮ್ಮ ನೋಂತುದಂ—ನಾವು ಉಪವಾಸ ವ್ರತಮಾಡಿದ್ದನ್ನು ; ಪಾರಣೆಯ—ಉಪವಾಸಾಂತ್ಯದಲ್ಲಿ ಮಾಡುವ ಊಟವನ್ನು ; ೨೧. ಸಾರ್ತರ್ಕುಂ—ಹತ್ತಿರ ಬರುತ್ತದೆ. ಸೇರುತ್ತದೆ ; ೨೨. ಚರಿಗೆವುಗದೆ—ಭಿಕ್ಷಕ್ಕಾಗಿ ಗೃಹಪ್ರವೇಶ ಮಾಡದೆ ; ತುಱುಪಟ್ಟಿಗೆ—ದನಗಳ ಹಟ್ಟಿಗೆ ; ೨೩. ಅಲ್ಲಿಂದೆರ್ದು ನಾಡೆ ಗೆಂಟು ಪೋದತ್ತು—(ಆ ತುರುಪಟ್ಟಿ) ಆ ಎಡೆಯಿಂದ ಎದ್ದು ಬೇರೆ ಎಡೆಗೆ ಬಹುದೂರ ಹೋಯಿತು ; ೨೪. ಪೆಱತೊಂದು—ಬೇರೊಂದು ; ೨೭. ಸೇದೆಗೆಟ್ಟು—ಆಯಾಸದಿಂದ ಕೆಟ್ಟು ; ಬಸಮೞಿದು—ಶಕ್ತಿಗುಂದಿ ; ಅನುಕಂಪೆಯುಂ—ದಯೆಯೂ ; ೨೮. ಪಿರಿಯ ಕರಗಮಂ—ದೊಡ್ಡ ಕೆಲಸವನ್ನು ; ತಣ್ಣಿದಪ್ಪುಂ—ತಂಪಾಗಿರುವುವೂ ; ೩೦. ಪ್ರಾಸುಕಮಪ್ಪ—ಜೀವರಹಿತವಾದ ; ಪೊಟ್ಟಿದೊಳ್—ಚಿನ್ನದಲ್ಲಿ ಎಂದರೆ ಚಿನ್ನದ ಪಾತ್ರೆಯಲ್ಲಿ ? (ತಮಿಳು) ಪೊಱ್ರು—ಚಿನ್ನದ, ಶ್ರೇಷ್ಠವಾದ ; ೩೦. ಸೇದೆಯುಂ—ಆಯಾಸವನ್ನು, ಆಱಿಸಿಂ—ಶಮನಮಾಡಿಕೊಳ್ಳಿರಿ ; ೩೧. ಅನ್ನೆವರಂ—ಅಲ್ಲಿಯವರೆಗೆ ;

**೧೪೮** ೩ : ಬೆಸಗೊಂಡಳ್—ಕೇಳಿದಳು ; ೬. ಕಮ್ಮಿತುವುಂ—ಸುಗಂಧಯುಕ್ತವಾದುವೂ ; ಪೊಟ್ಟಿದೊಳ್—ಚಿನ್ನದ ಪಾತ್ರೆಯಲ್ಲಿ ; ೧೧. ಪ್ರಾತಿಹಾರ್ಯಮಂ ಗೆಯ್ವುದಂ—ದೇವತೆಗಳು ಮಾಡುವ ಪೂಜೆಯನ್ನು ಮಾಡುವುದು ; ೧೩. ಆಪ್ಯಾಯನಮಾಗಿ—ಹಿತವಾಗಿ ; ೧೫. ದೇವನಿಕಾಯಂ—ದೇವತೆಗಳ ಸಮೂಹ ; ೧೮. ಬಾಧಿಸೆಪಟ್ಟೊರಾಗಿ—ಪೀಡಿಸಲ್ಪಟ್ಟವರಾಗಿ ; ೧೯. ಸೇದೆಗೆಟ್ಟು—ಸೇದೆಯಿಂ ಕೆಟ್ಟು ; ಪ್ರತಿಬೋಧಿಸಲ್—ಎಚ್ಚರಿಸಲು ಎಂದರೆ ಅರಿವನ್ನುಂಟು ಮಾಡಲು ; ತಗುಳ್ದು—ತೊಡಗಿ ; ತಿಳಿಪಲಾಱದೆ—ಅರಿಯಿಸಲರಮರ್ಥಳಾಗಿ ; ೨೨. ಸಮಾವಸ್ಥೆಯೆಲ್ಲಮಂ—ಸಮತೆಯಲ್ಲಿರುವ ಸ್ಥಿತಿಯನ್ನೆಲ್ಲ ; ಸಮಾಧಿ ಸಂಧಾನೋಪಾಯ—ಏಕಾಗ್ರತೆಯನ್ನು ಸೇರಿಸುವ ಉಪಾಯವನ್ನು ; ೨೬. ಸಮಾಧಿಯನೊಡೆಯರಪ್ಪರ್—ಸಮಾಧಿಯನ್ನುಳ್ಳವರಾಗುತ್ತಾರೆ ; ೨೯. ಈ ಭವದಿಂ ತೊಟ್ಟು—ಈ ಜನ್ಮದಿಂದ ಮೊದಲಾಗಿ ;

**೧೪೯** ೧ : ಕರ್ಮಕ್ಷಯಂ ಗೆಯ್ದು—ಕರ್ಮವನ್ನು ನಾಶಮಾಡಿ ; ೩. ಉನ್ಮಾರ್ಗದಿಂದಂ ಮನಮನುಡುಗಿ—ದುಷ್ಟಮಾರ್ಗದಿಂದ ಮನಸ್ಸನ್ನು ತೆಗೆದು ; ನಿಱಿಸಿ, ಸ್ಥಾಪಿಸಿ ;

**ಗಾಹೆ ||** ಹಾ—ಅಯ್ಯೋ. ದುಟ್ಠುಕಯಂ—ದುಷ್ಟಕಾರ್ಯವು ಮಾಡಿಸಲ್ಪಟ್ಟಿತು ; ಹಾ—ಅಯ್ಯೋ, ದುಟ್ಠುಕಾರಿಯಂ—ದುಷ್ಟಕಾರ್ಯವು ಮಾಡಿಸಲ್ಪಟ್ಟಿತು ; ಹಾ—ಅಯ್ಯೋ. ದುಟ್ಠು—ದುಷ್ಟಕಾರ್ಯವು, ಅಣುಮೋದಿಯಂ—ನನ್ನಿಂದ ಒಪ್ಪಲ್ಪಟ್ಟಿತು ; ಜೀವೋ—ಜೀವನು. ಅಂತೋ—ಒಳಗೊಳಗೇ. ವೇವಂತೋ—ನಡುಗುತ್ತ ಪಚ್ಛತ್ತಾವೇಣ—ಪಶ್ಚಾತ್ತಾಪದಿಂದ, ದಜ್ಝಇ—ಸುಡುತ್ತಾನೆ.

೬. ಪೊಲ್ಲದಂ ಬಗೆದೆಂ—ಕೆಟ್ಟುದನ್ನು ಆಲೋಚಿಸಿದೆನು ; ಪೞಿಯುತ್ತಂ—ನಿಂದಿಸುತ್ತ ; ೭. ನಾಮಗ್ರಹಣಂಗೊಂಡಾಗಳ್—ಹೆಸರನ್ನು ಕೇಳಿದ ಮೇಲೆ ; ಅಶುಭ ಪರಿಣಾಮದಿಂ—ಅಮಂಗಳವಾದ ಅಂತ್ಯದಿಂದ ; ಪಿಂಗಿ—ತೊಲಗಿ ;

## ೯. ಸಿರಿದಿಣ್ಣನೆಂಬ ಭಟ್ಟಾರರ ಕಥೆ

**೧೫೦.** ೫ : ಅಯ್ಕ್ರಲಿಂದಂ—ಓಮದಿಂದ ; ೬. ಪಗೆವನಪ್ಪ—ಹಗೆಯಾದ : ವಿಗುರ್ವಿಸೆಪಟ್ಟುದರಿಂದಂ—ಮಾಯೆಯಿಂದ ನಿರ್ಮಿಸಲ್ಪಟ್ಟದ್ದರಿಂದ : ೭. ತಳಿಯೆ ಪಟ್ಟೊನಾಗಿ—ಚುಮುಕಿಸಲ್ಪಟ್ಟವನಾಗಿ ; ೧೨. ಅಧಿಗಮ ಸಮ್ಯಗ್ದೃಷ್ಟಿ ಶ್ರಾವಕಂ—ಸಂಪಾದಿಸಲ್ಪಟ್ಟ ಸಮ್ಯಕ್ ದೃಷ್ಟಿಯುಳ್ಳ ಗೃಹಸ್ಥನು : ೧೯. ಮಹಾಮಹಿಮೆಗಳಂ—ಮಹತ್ತಾದ ಉತ್ಸವಗಳನ್ನು ; ೨೨. ಗುಜ್ಜೆ—ಕುಳ್ಳಿ, (ಸಂ) ಕುಬ್ಜಾ ; ವಿರಳದಂತೆ—ವಿರಳವಾದ ಹಲ್ಲುಳ್ಳವಳು ; ಅದಮಾನುಂ ವಿರೂಪೆ—ವಿಶೇಷವಾಗಿ ಕೆಟ್ಟ ರೂಪುಳ್ಳವಳು : ಪೆಸೆಪಡುವಳ್—(ಇತರರಿಂದ) ಹೇಸಲ್ಪಡುವವಳು ಇದರ ಪಾಠ 'ಪೆಸರ್ಪಡುವಳ್' ಎಂದು ಇರಬಹುದು, ಆಗ ದೂಷಿಸಲ್ಪಡುವಳು ಎಂಬರ್ಥವಾಗುತ್ತದೆ. "ಈ ಮಹಾತ್ಮನಂ ತೊಟ್ಟೆನಲಿಂತು ದೇವ ಯುವರಾಜನನೀ ತೆಱದಿಂ ಪೆಸರ್ಪುದೇ" ಎಂದು 'ಕಾದಂಬರಿಯ'ಲ್ಲಿ ಪ್ರಯೋಗವಿದೆ (ಉ. ೪೭೯) ; ೨೩. ನಾಣಿಸೆಪಡುವೊಳ್ ನಾಚಿಕೆಪಡಿಸಲ್ಪಟ್ಟವಳು.

**೧೫೧.** ೪ : ಪೆತ್ತೆನಿಲ್ಲ—ಪಡೆದೆನಿಲ್ಲ ; ೫. ಉಬ್ಬೆಗಂ ಬಟ್ಟು—ದುಃಖಪಟ್ಟು ; ೬. ಅಷ್ಟೋಪವಾಸಮುಮಂ—ಎಂಟು ದಿನಗಳ ಉಪವಾಸವನ್ನೂ ; ೮. ಸಮೆಯಿಸಿದ ಬಳಿಕ್ಕೆ—ಮುಗಿಸಿದ ಅನಂತರ ; ಕರಂ ಬಡಪಟ್ಟಿರ್ದಿರ್—ವಿಶೇಷವಾಗಿ ಬಡಕಲಾಗಿರುವಿರಿ ; ೧೨. ನಿಮಗೊಸೆದೆಂ—ನಿಮಗೆ ನಾನು ಪ್ರೀತಿಪಟ್ಟೆನು ಎಂದರೆ ನಿಮ್ಮನ್ನು ಮೆಚ್ಚಿದೆನು.

೧೫. ತೊಡಗಿಂದೊಡೆ—ತೊಡಗಿದರೆ : ೧೬. ಪಾರಿಸದೆ—ಉಪವಾಸಾಂತ್ಯದಲ್ಲಿ ಪಾರಣೆ ಮಾಡದೆ ; ೧೭. ಸೇದೆಯುಮಂ—ಆಯಾಸವನ್ನೂ ; ೨೧. ಕಮ್ಮಿತಪ್ಪ—ಗಮಗಮಿಸುತ್ತಿರುವ : ತಂಬೆಲರ್ ವೀಸಿ—ತಂಪಾದ ಗಾಳಿಯನ್ನು ಬೀಸಿ ; ೨೫. ನಿಧಾನಂಗೆಯ್ದು—ನಿಶ್ಚಯಿಸಿ, ಸಂಕಲ್ಪಿಸಿ : ೨೬. ಕಾಲಂಗೆಯ್ದು—ಸತ್ತು ; ೨೭. ಶ್ರೀವಿಹಾರಮಂ—ಶ್ರೀವಿಹಾರವೆಂಬ ದೇವಾಲಯವನ್ನು ; ೨೮. ಓಲಗಿಸುತ್ತುಂ—ಸೇವೆ ಮಾಡುತ್ತ.

**೧೫೨.** ೧ : ಅಪುತ್ರಿಕೆ—ಮಕ್ಕಳಿಲ್ಲದವಳು : ಬೇಟ—ಬಯಸಿ ; ೨. ನಿಚ್ಚಲುಂ—ಪ್ರತಿದಿನವೂ : ೬. ಆಡುತ್ತುಂ—ನರ್ತನ ಮಾಡುತ್ತ ; ೭. ಬೞ್ದುಬಂದು—ಕೆಳಕ್ಕೆ ಜಾರಿ ಬಂದು ; ೧೪. ನೆಱೆದು—ತುಂಬಿ ; ೧೫. ಸಿರಿದಿಣ್ಣ—ಶ್ರೀದತ್ತ ; ೨೦. ಮಾಲೆಸೂಡಿದೊಡೆ—ಮಾಲೆಯನ್ನು ಹಾಕಿದರೆ, ಮುಡಿಸಿದರೆ ; ೨೩. ಕತಿಪಯ...ಕೆಲವು ; ೨೬. ಎರಡು ಬರೆಯುಂ—ಎರಡು ಗೀಟುಗಳನ್ನು : ೨೭. ಪಿರಿದುಂ ಬೇಗಂ—ಬಹಳ ಹೊತ್ತು ; ೨೯. ತೆಗೆದುದಂ—ಅಳಿಸಿದ್ದನ್ನು ; ಕಡು ಮುಳಿದು—ಬಹಳವಾಗಿ ಕೋಪಿಸಿ.

**೧೫೩.** ೧ : ಅದಱ ಗೋಱುಂ—ಆ ಗೀಟಿಯ ಕೊರಳನ್ನು : ೬. ಪಲಗೆಯೊಳ್ ರೇಖೆಗೊಂಡು—ಚಿತ್ರದ ಹಲಗೆಯ ಮೇಲೆ ರೇಖಾಚಿತ್ರವನ್ನು ಬರೆದು : ೭. ನಿರ್ವೇಗಕ್ಕೆ—ವಿರಕ್ತಿಗೆ ; ೧೩. ಪ್ರತಿಮಾಯೋಗದೊಳ್—ನಿಂತಿರುವ ಪ್ರತಿಮೆಯಂತೆ ನಿಂತು ತಪಸ್ಸುಮಾಡುವುದರಲ್ಲಿ ; ೧೫. ವ್ಯಂತರದೇವನಾಗಿ—ವ್ಯಂತರವೆಂಬ ಪಂಗಡಕ್ಕೆ ಸೇರಿದ ದೇವತೆಯಾಗಿ ; ವಿಗುರ್ವಿಸಿ—ಮಾಯೆಯಿಂದ ಸೃಷ್ಟಿಸಿ.

**ಗಾಹೆ** ॥ ಪುಟ ೯೨ ನೋಡಿ.

**ಶ್ಲೋಕ** ॥ ಅಹಂ—ನಾನು. ಅಚ್ಛೇದ್ಯ—ಕತ್ತರಿಸಲಾಗದವನು ; ಅನಂತಸೌಖ್ಯ—ಅನಂತ ಸುಖವನ್ನುಳ್ಳವನು : ವೇತ್ತಾ—ತಿಳಿಯುವವನು, ಜ್ಞಾನಿ ; ಅಪೂರ್ವ—ಅನಾದಿಯಾದವನು ; ನಿರಂಜನ—ಕರ್ಮಲೇಪವಿಲ್ಲದವನು ; ಸರ್ವದುಃಖಾಕರಂ—ಸಮಸ್ತ ದುಃಖಗಳಿಗೂ ಆಶ್ರಯವಾದ, ದೇಹಂ—ಶರೀರವನ್ನು. ತ್ಯಜಾಮಿ—ತೊರೆಯುತ್ತೇನೆ : ಏತತ್—ಇದು. ಪರಿಸ್ಫುಟಂ—ಅತಿ ಸ್ಪಷ್ಟ, ನಿಶ್ಚಯ : ೨೪. ಸಮಚಿತ್ತಭಾವನೆಯುಂ—ಸುಖದುಃಖಗಳು ಸಮಾನವೆಂಬ ಭಾವನೆಯನ್ನು : ೨೭. ದೇವೋಪಸರ್ಗ—ದೇವತೆಯಿಂದ ಆಗುವ ತೊಂದರೆ, ಹಿಂಸೆ :

## ೧೦. ವೃಷಭಸೇನ ಭಟ್ಟಾರರ ಕಥೆ

**೧೫೪.** ೮: ಪೊರ್ದಿದೊಂ—ಪಡೆದನು ; ೧೫. ಮದವಿಹ್ವಳಿತನಾಗಿ—ಸೊಕ್ಕಿನಿಂದ ಪೀಡಿಸಲ್ಪಟ್ಟುದಾಗಿ ; ಮೆಯ್ಯಱಿಯದೆ—ಮೈಮೇಲೆ ಎಚ್ಚರವಿಲ್ಲದೆ ; ದಿಶಾಪಟ್ಟಂಗೊಂಡು—ದಿಕ್ಕುದಿಕ್ಕಿಗೆ ಓಡಿ ಧ್ವಂಸಮಾಡಿ ; ೧೭. ನಾಡೆಯಂತರಂಬೋದೆಡೆ—ಬಹಳದೂರ ಹೋದರೆ ; ೧೮. ನೇಲ್ದಿರ್ದೊಡೆ—ನೇತುಬಿದ್ದಿದ್ದರೆ ; ೧೯. ಬಟ್ಟೆಯೊಳ್ ತಗುಳ್ದು—ದಾರಿಯನ್ನು ಹಿಡಿದು, ಅನುಸರಿಸಿ ; ೨೦. ಅದಱಸಾರೆ—ಆ ಊರಿನ ಹತ್ತಿರ ; ಕೆಯ್ಯುಂಟು—ಗದ್ದೆಯಿದೆ ; ಸಾರೆಯೊಳ್—ಹತ್ತಿರದಲ್ಲಿ ; ೨೨. ಪಥಶ್ರಮದಿಂದಂ—ಮಾರ್ಗಾಯಾಸದಿಂದ ; ಸೇದೆಗೆಟ್ಟು—ಸೇದೆಯಿಂ + ಕೆಟ್ಟು ; ಬಂಬಳಂ ಬಾಡಿ—ಬಂಬಲಿಸಂತೆ ಬಾಡಿ ; ೨೩. ಗಾವುಂಡಂ—ಗೌಡನು. ಗಾವುಂಡಿ—ಗೌಡಿತಿ ; ೨೫. ಒಡೆಯೊಳ್—ಉಳ್ಳವಳು.

**೧೫೫.** ೧.: ಕೂಸೇ—ಮಗುವೇ, ಕನ್ನೆಯೇ ; ಎಱೆಯಾ—ಹಾಕು, ಹೊಯ್ಯಿ ; ೨. ಅಟಿಸಿ—ಬಯಸಿ, ಪ್ರೀತಿಸಿ ; ೩. ಕರಗದ ಧಾರೆಯಂ—ಕೊಡದ ನೀರ ಧಾರೆಯನ್ನು ; ೪. ಉಗಿದುಕೊಂಡೊಡೆ—ಎಳೆದುಕೊಂಡರೆ, ಎಂದರೆ ಉಡುಗಿಸಿಕೊಂಡರೆ ; ತಂತ್ರಮೆಲ್ಲಂ—ಸೈನ್ಯವೆಲ್ಲ, ೧೧. ವಂದೊನೆ—ಬಂದೆನೆ ? ; ೧೩. ಪ್ರತಿಪತ್ತಿಯುಮಂ—ಸತ್ಕಾರವನ್ನು ; ೨೪. ಪೆರ್ಗಡೆಗಳಿಂದಂ—ಹೆಗ್ಗಡೆಗಳಿಂದ, ಕೂಸಂ ಬೇಡಿ ಪೆತ್ತು—ಮಗಳನ್ನು ಬಯಸಿ ಪಡೆದು ; ೨೪. ಗಣಿಯಾನೆಗಳ್ವೆರಸು—ಹಿಂದಿನ ಆನೆಗಳೊಡನೆ ; ೧೯. ಬಾವಿಯಂ—ಬಾರಿಯಂ—ಆನೆಗಳನ್ನು ಹಿಡಿಯುವ ಲಕ್ಕಡಿ ಕೋಟೆಯನ್ನು ; ಖೆಡ್ಡಾವನ್ನು ; ಕಳಕಳಮಾಗಿ—ಕೋಲಾಹಲವಾಗಿ, ಗದ್ದಲವಾಗಿ ; ೨೦. ತುರಿಪದಿಂ—ತ್ವರೆಯಿಂದ ; ೨೧. ಬಾವಿಗೆ—ಬಾರಿಗೆ ; ಪಸದನಂಗೊಂಡಿರ್ದಾಕೆ—ವಲಂಕರಿಸಿಕೊಂಡಿದ್ದವಳು ; ೨೪. ಸೂಟುಂ ಪಾಟಿಯುಮಂ—ಸರದಿಯನ್ನೂ ಧರ್ಮವನ್ನೂ ಎಂದರೆ ಸರದಿ ಪ್ರಕಾರ ಬಹುಪತ್ನೀಕನಾದ ರಾಜ ತನ್ನ ರಾಣಿಯರಿಗೆ ಕೊಡುವ ಭೋಗಾವಕಾಶವನ್ನು ; "ತರುಣಿ ನೀ ದಿಟ ಕೇಳಿಂದು ಮೊದಲಾಗರಸಿ ನೀ ನಾಲ್ವರಿಗೆ ನಾವೆಡೆಮುರಿದವರು ಬಿಟ್ಟೆವರು ನಿನ್ನಯ ಸೂಳುಪಾಳಿಯುವ" ಎಂದು ಕುಮಾರವ್ಯಾಸನ ಪ್ರಯೋಗ (೪-೭-೫೩) ; ೨೫. ಕಿನಿಸಿ—ಕೋಪಿಸಿ ; ಬಾಟೆತ್ತಿಯಲ್ಲಂ—ಪ್ರಯೋಜನವಲ್ಲ ; ೨೬. ಪೆಱತೊಂದು ಪ್ರಾಸಾದದೊಳ್—ಬೇರೊಂದು ಅರಮನೆಯಲ್ಲಿ.

**೧೫೬.** ೧: ಪುರುಷವ್ರತಮಂ—ಬ್ರಹ್ಮಚರ್ಯ್ಯವ್ರತವನ್ನು; ೩. ಬೆಳ್ಕಾಡೊಳ್—ನಿರ್ಜನವಾದ ಕಾಡಿನಲ್ಲಿ (?), (ತಮಿಳು) ವೆಳ್—ಶೂನ್ಯ, ಬರಿದು, (ತಮಿಳು) ವೆಲ್ಲಕ್ಕಾಡು—ಸುಡುಗಾಡು. ಬೆಳ್—ಭೂತಪ್ರೇತ ಪಿಶಾಚಿಗಳು ಇರುವ, ಕಾಡೊಳ್—ಕಾಡಿನಲ್ಲಿ, "ಜಾತಿ ಬೆಳ್ ನಿನಗದೇವಿರಿದೀಯೆಡೆಱಿಂದು" ಎಂದು (ಪಂಪಭಾ. ೧೩-೫೪) ಪ್ರಯೋಗ ; ೪. ಮಸಣದೊಳ್—ಶ್ಮಶಾನದಲ್ಲಿ ; ಇಕ್ಕಿಂ—ಇಡಿರಿ, ಎಸೆಯಿರಿ ; ೧೦. ಪೊತ್ತಱಿನ—ಹೊತ್ತಾರೆಯ, ಪ್ರಾತಃಕಾಲದ ; ಓಲಗದೊಳ್—ಆಸ್ಥಾನದಲ್ಲಿ ; ೧೩. ಆರ್. ಪೆಸಲೆಯಾಗಿ—ಯಾರು ಮಗುವನ್ನು ಹೆತ್ತವರಾಗಿ ; ಪಡಿಯಱಗೆ—ಬಾಗಿಲು ಕಾಯುವ ಸೇವಕರಿಗೆ ; ಸೂಟುಂ ಪಾಟಿಯುಮಿಲ್ಲದೋರ್ಗೆ—ಸರದಿಯೂ ಕ್ರಮವೂ ಇಲ್ಲದವರಿಗೆ.

**೧೫೭.** ೬: ಕೂಸನಯ್—ಮಗುವಾಗಿರುವೆ, ಎಂದರೆ ಚಿಕ್ಕವನಾಗಿರುವೆ ; ಬಾಲವದ್ದ—ಮಂಗಳಕರನಾದ ಬಾಲಕ (?), (ಪು. ೪೩-೧೦) ಎಂಬಲ್ಲಿಯೂ ಇದು ಪ್ರಯೋಗವಾಗಿದೆ ; ೮. ಪಶ್ಚಾತ್ಕಾಲದೊಳ್—ಅನಂತರ ಕಾಲದಲ್ಲಿ ; ೯. ಬಾೞುಂ—ಜೀವನವೂ.

ಕಂದ ॥ ಪನಿಪುಲ್ಲ—ಹುಲ್ಲಮೇಲಣ ಹನಿಯ, ಮುಗಿಲ—ಮೋಡದ, ಸಂಜೆಯ—ಸಂಜೆಹೊತ್ತಿನ, ಕನಸಿನ, ಸುರಧನುವ—ಮಳೆಬಿಲ್ಲಿನ, ನೆಗೆದ—ಎದ್ದ, ನೊರೆಗಳ, ತೆಱಂ—ರೀತಿ ; ನಿಂತು—ಹಾಗೆ, ಬಗೆವೊಡೆ—ಚಿಂತಿಸಿದರೆ. ಮನುಜರ—ಮನುಷ್ಯರ, ಯೌವನಮುಂ—ಪ್ರಾಯವೂ, ಅರ್ಥಮುಂ—ಐಶ್ವರ್ಯವೂ, ಬಾೞ್ವೆಗಳುಂ—ಬದುಕುಗಳೂ, ಎನಸುಂ—ಎಷ್ಟೊ, ಅಲ್ಲಪ್ಪ—ನಿಲ್ಲುವುದಿಲ್ಲ, ಅಶಾಶ್ವತ.

* ಶ್ಲೋಕ ॥ ದೀಪನೀಯೋ—ಉದ್ದೀಪ್ತಿರೂಪ, ವನೋಪಮಃ—ಕಾಡಿಗೆ ಸಮಾನವಾಗಿರುವ, ಭೋಗಃ—ಸುಖಪಡುವುದು, ತೃಷ್ಣಾಗ್ನಿಸಂವೃದ್ಧ್ಯೈ—ಆಸೆಯೆಂಬ ಅಗ್ನಿಯನ್ನು ಬೆಳೆಸುವುದಕ್ಕಾಗಿ ; ಸ್ತ್ರೀವೃದ್ಧ್ಯ ತೃಷ್ಣಾಗ್ನಿ ಶಾಂತ್ಯೈ—ಹೆಣ್ಣು ಕಾರಣವಾಗಿ ಬೆಳೆಯುವ ಭೋಗ ಲಾಲಸೆಯೆಂಬ ಅಗ್ನಿಯ ಶಮನಾರ್ಥವಾಗಿ ; ಏಭಿಃ—ಇವುಗಳಿಂದ, ಇಹಾಪರಂ—ಇಹಪರಗತಿಗಳು, ಚಿಂತ್ಯಂ—ಆಲೋಚಿಸಬೇಕಾದುವು, ಧ್ಯಾನಯೋಗ್ಯವಾದುವು.

* ಗಾಹೆ ॥ ಮುತ್ತಿಪಹಂ—ಮುಕ್ತಿಯ ಮಾರ್ಗದಲ್ಲಿ, ಸಣ್ಣಂವಾ ಬದರಂತು—ಚಿಕ್ಕದಾಗಲಿ ದೊಡ್ಡದಾಗಲಿ ಎಲ್ಲ ಸಂಬಂಧಗಳನ್ನು ತೊರೆದು, ಅವಿಸ್ಸಾಮಂ—ವಿಶ್ರಾಂತಿಯಿಲ್ಲದೆ, ಸಂತತವಾಗಿ ಭೋಗಸುಹಲೋಹವಿರದೋ—ಭೋಗ ಸುಖಲೋಭಗಳಲ್ಲಿ ಅನಾಸಕ್ತನಾಗಿ, ಮೋಕ್ಷೇ—ಮೋಕ್ಷದಲ್ಲಿ, ಮತಿಂ ಕುಜ್ಜಾ—ಮನಸ್ಸನ್ನು ಮಾಡುವುದು.

ಅರ್ಯೆ ॥ ಮನಸಃ—ಮನಸ್ಸಿಗೆ, ಸಂತುಷ್ಟಿಕಾರಕಾ—ಸಂತೃಪ್ತಿಯನ್ನುಂಟುಮಾಡುವ ; ವಿಷಯಾಃ—ವಸ್ತುಗಳು, ನಿಷೇವ್ಯಮಾಣಾ ಯದ್ಯಪಿ—ಸೇವಿಸಲ್ಪಡುವುದಾದರೂ, ಪಶ್ಚಾತ್—ಅನಂತರ, ಕಿಂಪಾಕಫಲಾಶನವತ್—ಕಿಂಪಾಕಫಲವನ್ನು ತಿಂದಂತೆ. ಅತಿ ದುರಂತಾಃ—ಬಹುದುಷ್ಪರಿಣಾಮವಾಗಿ, ಭವಂತಿ—ಆಗುತ್ತವೆ. ೨೦. ಕಿಂಫಾಕಫಲದೊಳ್—ಕಿಂಪಾಕವೆಂಬ ಮರದ ಹಣ್ಣುಗಳಿಗೆ, ಈ ಹಣ್ಣು ನೋಡುವುದಕ್ಕೆ ಸುಂದರ, ತಿನ್ನಲು ಸ್ವಾದು. ತಿಂದಮೇಲೆ ಪ್ರಾಣಹಾನಿಮಾಡುತ್ತದೆ ; ಓರನ್ನವು—ಸಮಾನವಾದುವು ; ೨೨. ಅಗಲ್ದ—ಅಗಲಿದ.

೧೫೮. ೫ : ಆತಪಸ್ಥಿತಯೋಗಮಂ—ಬಿಸಿಲಲ್ಲಿ ನಿಂತುಮಾಡುವ ತಪಸ್ಸನ್ನು ; ೬. ಕಲ್ಲಿಲೆ ನಿಲೆ—ಕಲ್ಲು ನಿಂತಂತೆ ನಿಲ್ಲಲು ; ಶ್ರಾವಕ ಭಕ್ತರುಂ—ಗೃಹಸ್ಥರಾದ ಭಕ್ತರೂ ; ಬೆಸಕೆಯ್ವರುಂ—ಸೇವೆ ಮಾಡುವವರೂ : ೭. ಉಪಾಸಕಂ—ಜೈನಗೃಹಸ್ಥನು ; ೯. ಮಾತ್ಸರಂ—ದ್ವೇಷ ; ೧೧. ತಱಿಯ ಪುಳ್ಳಿಗಳಂ—ತರಿಯುಮರದ ಸೌದೆಗಳನ್ನು ; ೧೨. ಕೆಲಂ ಸಾರ್ಚಿ—ಮಗ್ಗುಲಿಗೆ ಸೇರಿಸಿ ; ೧೩. ಕೆಚ್ಚನಾಗಿರ್ದ—ಕೆಂಪಾಗಿದ್ದ ; ೧೬. ಬಿಸಿಲುಂ ಝಳಮುಂ ಬೆಂಕೆಯುಂ ಕಿಚ್ಚುಮಂ—ಬಿಸಿಲುಮಂ ಝಳಮುಮಂ, ಬೆಂಕೆಯುಮಂ ಕಿಚ್ಚುಮಂ—ಎಂದು ದ್ವಿತೀಯಾ ವಿಭಕ್ತಿ ಅಧ್ಯಾಹಾರ್ಯ.

## ೧೨. ಕಾರ್ತ್ತಿಕ ಋಷಿಯ ಕಥೆ

೧೫೯. ೬ : ಇಱಿಯಿಪಟ್ಟೊನಾಗಿ—ಇರಿಯಲ್ಪಟ್ಟವನಾಗಿ ; ೭. ಕಾದಲಿಸಪಡುವ ಮಗಂ—ಪ್ರೀತಿಸಲ್ಪಡುವ ಮಗನು ; ೧೫. ಪೆಣ್ಗೂಸುಗಳ್—ಹೆಣ್ಣುಮಕ್ಕಳು ; ೧೬. ಕೊಡಗೂಸುಗಳ್—ಕನ್ಯೆಯರು, ಮದುವೆಯಾಗಲಿರುವವರು ; ೧೮. ನಂದೀಶ್ವರಂಗೆಯ್ದು—ನಂದೀಶ್ವರವೆಂಬ ಹಬ್ಬವನ್ನು ಆಚರಿಸಿ ; ೨೦. ಸಿದ್ಧಶೇಷೆಯುಂ—ಪೂಜೆ ಮಾಡಿದ ಹೂವು ಮುಂತಾದುವನ್ನು, ಪ್ರಸಾದವನ್ನು ; ೨೧. ಅಟಿಸಿ—ಬಯಸಿ, ಪ್ರೀತಿಸಿ ; ೨೩. ಎಲ್ಲ ಸಮಯಂಗಳ್ಗಂ—ಎಲ್ಲಾ ಮತಧರ್ಮದವರಿಗೂ ; ಬಱಿಯಟ್ಟಿ—ದೂತನನ್ನು ಕಳುಹಿಸಿ ; ೨೪. ಮಂಡಳಂಗಳೊಳ್—ಪ್ರದೇಶಗಳಲ್ಲಿ.

೧೬೦. ೨ : ತಕ್ಕುದು ತಗದುದು—ಯೋಗ್ಯವಾದುದು, ಯೋಗ್ಯವಲ್ಲದ್ದು ; ೪. ಬಹುಪ್ರಳಾಪಿಗಳ್—ಬಹು ಮಾತಾಡುವವರು ; ೬. ಮೂಱು ಸೊಬ್ಬರಂ—ಮೂರು ಬಾರಿಯವರೆಗೆ ; ನಾಡೆ ನುಡಿದು—ಘೋಷಿಸಿ ಮಾತಾಡಿ ; ೧೦. ಸರವಣ—ಒಂದು ಬಗೆಯಾದ ಜೊಂಡುಹುಲ್ಲು ; ೧೩. ಅತನಿಂ ಬೞಿಯಂ—ಅತನ ಅನಂತರ ; ೧೫. ಕೋಗಳಿಯಯ್ನೂರ್—ಕೋಗಳಿಯೆಂಬ ಐನೂರು ಗ್ರಾಮಗಳುಳ್ಳ (?) ನಾಡು, ಆ ನಾಡಿಗೆ ರಾಜಧಾನಿ ಕೋಗಳಿ ಎಂಬ ಪಟ್ಟಣ ; ಇದು ೮. ೯. ೧೦ನೆಯ ಶತಮಾನಗಳಲ್ಲಿ ಬಹು ಪ್ರಸಿದ್ಧವಾದ ಜೈನ ತೀರ್ಥಕ್ಷೇತ್ರವಾಗಿತ್ತು. ಈಗಲೂ ಕೋಗಳಿ ಎಂಬ ಊರು ಬಳ್ಳಾರಿ ಜಿಲ್ಲೆಯ ಪಶ್ಚಿಮ ಭಾಗದಲ್ಲಿದೆ. ಈ ನಾಡನ್ನೂ ಈ ನಗರವನ್ನೂ ಹೆಸರಿಸುವ ಶಾಸನಗಳು ಅನೇಕವಾಗಿವೆ. ಕಥೆಯ ಆದಿಯ ಗಾಹೆಯಲ್ಲಿ ಕ್ರೌಂಚನೆಂಬ ರಾಜನು ಆಳುತ್ತಿದ್ದ ಊರು 'ರೋಹೇಡಯ'

ಎಂದಿದ್ದರೂ ಇಲ್ಲಿ ಆ ಹೆಸರನ್ನು ಬಿಟ್ಟು ಕೋಗಳಿ ಎಂಬ ಹೆಸರನ್ನು ಹೇಳಿರುವುದು ಗಮನಿಸ ಬೇಕಾದ ಅಂಶ; ೨೦. ಪೂಸಲುಂ—ಬಳಿದುಕೊಳ್ಳಲೂ, ತಂಬುಲಮುಂ—ಅಡಕೆ ವೀಳ್ಯವೂ; ತಿಂಬಡಂಗಳುಂ—ತಿನ್ನುವ ಪದಾರ್ಥಗಳೂ; ೨೧. ಮನದೊಳ್ ಬೞ್ದೊನಾಗಿ—ಮನಸ್ಸಿನಲ್ಲಿ ಸತ್ತವನಾಗಿ ಎಂದರೆ ಸಾಯುವಷ್ಟು ದುಃಖವನ್ನು ಹೊಂದಿ; "ಬರ್ದು—ಮರಣೇ"; ೨೪. ಮನ ದೊಳ್ ಬೞ್ದೊಳಾಗಿ—ಮನಸ್ಸಿನಲ್ಲಿ ವ್ಯಥೆಪಟ್ಟವಳಾಗಿ; ೨೮. ತೆಂಕನಾಡ—ದಕ್ಷಿಣ ದೇಶದ; ಕಿಷ್ಕಿಂಧಮೆಂಬ ಪರ್ವತಮುಂ—ಕಿಷ್ಕಿಂಧಮೆಂಬ ಪರ್ವತಮುಂ—ಕಿಷ್ಕಿಂಧೆಯೆಂಬ ಬೆಟ್ಟವನ್ನು ಹೇಳಿರು ವುದು ಗಮನಾರ್ಹ.

**೧೬೧.** ೨: ಪಿರಿದೊಂದು ಮೞೆಕೊಂಡು—ದೊಡ್ಡದಾದ ಮಳೆ ಸುರಿದು; ೩. ಸರ್ವೌಷಧಿ— ಎಲ್ಲಾ ರೋಗಗಳಿಗೂ ಮದ್ದು; ೬. ಕೋಗಳಿಯನೆಯ್ದಿ—ಕೋಗಳಿಗೆ ಬಂದು; ಬಸದಿಯೊಳ್ —ಜಿನಾಲಯದಲ್ಲಿ, ಆ ಊರಿನಲ್ಲಿ ಅನೇಕ ಬಸದಿಗಳಿದ್ದುವಂತೆ, ಅವುಗಳಲ್ಲಿ ಒಂದು ಗಂಗರಾಜ ದುರ್ವಿನೀತನು ಕಟ್ಟಿಸಿದ್ದು ಎಂದು ಒಂದು ಶಾಸನದಿಂದ ತಿಳಿದುಬರುತ್ತದೆ; ೧೦. ಉಗುರಿಸು ತ್ತಿರ್ದ್ದಾಕೆ—ಉಗುರಿನಿಂದ ಕೆರೆಯುತ್ತಿರುವವಳು; ೧೨. ಮಱಲುಂದಿದರಸನ—ವೈಮರೆತು ನಿದ್ದೆ ಮಾಡಿದ ರಾಜನ; ನಿಱಿಸಲೆಂದು—ಪಾರಣೆಗೆ ಅಥವಾ ಭಿಕ್ಷಕ್ಕೆ ನಿಲ್ಲಿಸಬೇಕೆಂದು; ೧೩. ಕರುಮಾಡ ದಿಂದೆ—ಸುಣ್ಣ ಬಣ್ಣ ಮಾಡಿದ ಮಾಳಿಗೆಯಿಂದ, ಉಪ್ಪರಿಗೆಯಿಂದ; ಪರಿತರ್ಪನ್ನೆಗಂ—ಓಡಿ ಬರು ತ್ತಿರಲು; ಅಂಗಣಮಂ ಪೊಕ್ಕು—ಅಂಗಳವನ್ನು ಪ್ರವೇಶಿಸಿ; ೧೪. ಮಗುೞ್ದು ಪೋಗಿ—ಹಿಂದಿರುಗಿ ಹೋಗಿ; ಬಾಗಿಲ್ಮಾಡಮಂ—ಹೊರಬಾಗಿಲಿನ ಎಡೆಯನ್ನು; ೧೫. ನಿಲ್ಕೆ—ನಿಲ್ಲಲಿ—ಎಂದರೆ ಚರಿಗೆಗೆ ನಿಲ್ಲಿರಿ; ೧೬. ಬಂದೊಮ್—ಬಂದೆವು; ೧೮. ತಾಂಗುತ್ತಿರ್ಪನ್ನೆಗಂ—ತಡೆಯುತ್ತಿರಲು; ೨೧. ಬೞಿಯಂ ತಗುಳ್ದು—ಹಿಂದೆ ಅನುಸರಿಸಿ, ಹಿಂದೆ ಹಿಂದೆಯೇ ಹೋಗಿ; ೨೨. ಸವಣನೊಡನೆ— ಜೈನಯತಿಯೊಡನೆ; ಆ ಪೋರುತ್ತಿಪ್ಪೊಳ್—ಅಗೋ, ಹೋರಾಡುತ್ತಿರುವವಳು; ೨೩. ನಿಚ್ಚಲ್ ನಿತ್ಯವೂ, ದಿನದಿನವೂ: ಕಿನಿಸಿ—ಕೆರಳಿ; ೨೪. ಉರಮಂ—ಎದೆಯನ್ನು: ೨೫ ಉರ್ಚಿ ಪೋಗಿಟ್ಟು —ಭೇದಿಸಿಕೊಂಡು ಹೋಗುವಂತೆ ಹೊಡೆದು; ತಲೆನವಿರಂ—ತಲೆಯ ಕೂದಲನ್ನು: ೨೭. ನೆತ್ತ ರೊಕ್ಕು—ರಕ್ತಸುರಿದು; ಬಸಮೞಿದು—ಶಕ್ತಿಗುಂದಿ: ೨೮. ಕಡುವಿಸಿಲಿಂದಂ—ತೀವ್ರವಾದ ಬಿಸಿಲಿ ನಿಂದ: ನೀರಟ್ಕೆ—ನೀರಡಿಕೆ, ದಾಹ.

**೧೬೨.** ಕಾಲಂಗೆಯ್ದು—ಸತ್ತು; ಆಸನ ಕಂಪಮಾಗಿ—ಕುಳಿತ ಪೀಠವು ನಡುಗಿ; ೨. ಬೆಸನೇನ್ ಕೆಲಸವೇನು, ಅಪ್ಪಣೆಯೇನು, ೩. ತಣ್ಪಿನೆಡೆಗೆ—ತಂಪಾದ ಸ್ಥಳಕ್ಕೆ; ೬. ಪಾಯ್ತರ್ಪ—ಹರಿದು ಬರುವ: ನಿರ್ಝರ—ಬೆಟ್ಟದ ಝರಿಯ; ಶೀಕರಂಗಳಿಂ—ತುಂತುರುಗಳಿಂದ; ಆಪ್ಯಾಯನಮಾಗಿ —ಹಿತವಾಗಿ; ಮುಡಿಪಿ—ಸತ್ತು; ೧೦. ಒಂದೆ ಪಾಂಗಿನೊಳ್—ಒಂದೇ ರೀತಿಯಾಗಿ; ಎಡೆಬಿಡದೆ; ೧೧. ಕಡುನಲ್ಲಪ್ಪುದಱಿಂ—ಅತ್ಯಂತ ಪ್ರೇಮವಂತನಾದ್ದರಿಂದ; ಅದಮಾನುಂ—ವಿಶೇಷವಾಗಿ; ಉಬ್ಬೆಗಂ ಬಟ್ಟು—ದುಃಖಪಟ್ಟು; ೧೨. ಆೞ್ಕೆಯಂ ಮುಗ್ಗಿಸಿ—ಆಳುವನ್ನು ಕುಗ್ಗಿಸಿ, ಹೋಗಾಡಿಸಿ; ಮಱೆಯಿಸುವರ್—ಮರೆಯುವಂತೆ ಮಾಡುವವರು; ೧೩. ಗೋಸಣೆಯಂ ತೊಟಲ್ಚಿದೊಡೆ—ಸಾರಿಸಿ ಡಂಗೂರ ಹೊಡೆಯಿಸಿದರೆ, "ತೊಟಲ್—ಭ್ರಮಣೇ", ೧೪. ಲೋಗರ್ —ಜನರು; ಪಗರಣಿಗರಾಗಿ—ಪಗರಣವೆಂಬ ಆಟವಾಡುವವರಾಗಿ; ಮರಮೊಗಂಗಳುಂ—ಮರದ ಮುಖಗಳನ್ನು ಎಂದರೆ ಮರದ ಮುಖವಾಡಗಳನ್ನು; ೧೬. ಅೞ್ಕೆ—ಅಳುವು; ಕಜ್ಜಟಮನುಟ್ಟು... ಕೌಪೀನವನ್ನು ಧರಿಸಿ; ೧೭. ಕವಡಿಕೆಗಳಂ—ಕವಡೆಗಳನ್ನು, (ಸ) ಕಪರ್ದಿಕಾ; ಕುಂಚಮುಂ—ನವಿಲು ಗರಿಯ ದೊಂದೆಯೂ; ೧೮. ಗುಂಡಿಗೆಯುಂ—ಕಮಂಡಲುವೂ, (ಸಂ) ಕುಂಡಿಕಾ; ೧೯. ಆ ಬರ್ಪೊರೆ—ಅಗೋ ಬರುವವರೇ; ೨೧. ಪಿರಿದು ಕನವರಮಂ...ಹೇರಳವಾಗಿ ಚಿನ್ನವನ್ನು; ಬಾದುಬ್ಬೆಯ ಪರ್ವ—ಬಾದುಬ್ಬೆ ಎಂಬ ಹಬ್ಬ. ಬಾದುಬ್ಬೆಯು ಎಂದು ಒಂದು ದೇವತೆಯ ಹೆಸರು ಇರಬಹುದು. "ಗಣಪನಂ ಗೌರೀಶನಂ ಭಾನುವಂ ಪೆಱೆಯಂ ಗೋಕುಳನುಂ ಗಿರಿಪ್ರಕರಮಂ —ಬಾದುಂಬೆಯ...ದೈವಂಗಳೆಂದಿಂತು ಕೂರ್ತೆಱಗುತ್ತಿರ್ಪವರ್" ಎಂದು ಬ್ರಹ್ಮಶಿವನ ಮಾತು.

''ಚಂಡಕೌಶಿಕ'' ನಾಟಕದಲ್ಲಿ ಬರುತ್ತದೆ; ೧೮. ತಸ್ಕರಶಾಸ್ತ್ರಂಗಳೊಳ್—ಚೋರ ಶಾಸ್ತ್ರಗಳಲ್ಲಿ ಎಂದರೆ ಕಳ್ಳತನವನ್ನು ಉಪದೇಶಿಸುವ ಶಾಸ್ತ್ರಗಳಲ್ಲಿ ಕುಶಲಂ—ನಿಪುಣನು; ಕಸವರಂಗಳಂ—ದ್ರವ್ಯಗಳನ್ನು; ೧೯. ನಾಡೆಯಂತರದೊಳ್—ಬಹುದೂರದಲ್ಲಿ; ೨೧. ಪಾೞ್ದೇಗುಲದೊಳ್—ಹಾಳು ದೇವಾಲಯದಲ್ಲಿ; ೨೨. ಎೞ್ಚಿ—ಬಳಿದುಕೊಂಡು, ''ಎೞ್ಚು—ಅಂಜನಕ್ರಿಯಾಯಾಂ'' ೨೩. ಮೂಗೊಳಗದ್ದ—ಮೂಗು ಒಳಕ್ಕೆ ಕುಸಿದ; ನೊಳವುಗಳ್—ನೊಣಗಳು; ೨೪. ತಿನೆ—ಕಡಿಯಲು; ಪೇಸಿದನಾಗಿ—ಜುಗುಪ್ಸಿತನಾಗಿ ೨೫. ತೊನ್ನುಗೊಂಡಿರ್ಪುದಂ—ತೊನ್ನು ಬಂದಿರುವುದನ್ನು; ಅಱಿಪುತ್ತಂ—ತಿಳಿಸುತ್ತ.

**೧೬೭.** ೧: ಪುಟ್ಟಿಗೆಯನ್ನುಟ್ಟು—ವಸ್ತ್ರವನ್ನುಟ್ಟು, ''ಧರಣಿಜಯಮೆಂಬ ಪುರದೊಳ್ ಪರದಂ ಕಡುಲೋಭಿಯೊಂದೆ. ಪುಟ್ಟಿಗೆಯುಟ್ಟಿರ್ದಿರುಳುಂ ಪಗಲುಂ ತನ್ನಯ ಕರಮನೆ ಪೊದೆದಿರ್ದ ನೈಕಿಲೊಳ್ ಬಿಸಿಲೆಡೆಯೊಳ್'' ಎಂದು ಬಂಧುವರ್ಮನ ಪ್ರಯೋಗವೂ (ಜೀವಸಂ. ೮–೩೦), ''ಪಟ್ಟಸೂತ್ರದ ಚಿತ್ರಸೂತ್ರದ, ನೇತ್ರವಟ್ಟಗೆಯ ಪುಟ್ಟಿಗೆಗಳನೊಟ್ಟಿ ಬೆಟ್ಟಾಗಿ ಪುಂಜಿಸಿ'' ಎಂದು ಶಾಂತಿನಾಥನ ಪ್ರಯೋಗವೂ (ಸುಕುಮಾ. ೧೧–೯೧ ವ) ಇವೆ; ಪೂಸಿ—ಬಳಿದು, ಲೇಪಿಸಿ; ೨. ತಂಬುಲಂದಿನುತ್ತುಂ—ತಾಂಬೂಲವನ್ನು ಅಗಿಯುತ್ತ; ೩. ಅಗ್ಗಳದ—ಶ್ರೇಷ್ಠರಾದ; ಒತ್ತೆಯನಿಟ್ಟು—ಮುಂಗಡವಾಗಿ ದ್ರವ್ಯಾದಿಗಳನ್ನು ಕೊಟ್ಟು; ೪. ಬಚ್ಚರ—ವೈಶ್ಯರ; ದೂಸಿಗರ—ಬಟ್ಟೆ ವ್ಯಾಪಾರಿಗಳ, ದೂಸ> (ಸಂ) ದೂಷ್ಯ + ಇಗ, ದಷ್ಯ ಎಂದರೆ ವಸ್ತ್ರ, ಬಟ್ಟೆ; ನಿಯೋಗಿಗಳ—ಅಧಿಕಾರಿಗಳ ೫. ಅಗ್ಗಳಮಪ್ಪ—ಶ್ರೇಷ್ಠರಾದ, ಇದರ ಪಾಠಾಂತರ ಅಗ್ಗಯಿಲೆಯರಪ್ಪ ಎಂಬುದು ಸ್ವೀಕರಯೋಗ್ಯ, ಅರ್ಘ—ಹೆಚ್ಚು ಹಣವನ್ನು ತೆಗೆದುಕೊಳ್ಳುವವರಾದ; ೮. ಏೞನೆಯ ನೆಲೆಯೊಳ್—ಏಳನೆಯ ಅಂತಸ್ತಿನಲ್ಲಿ; ಉಂದುವೋವರಿಗೆಯ—ಮಲಗುವ ಮನೆಯ ಕೊಠಡಿಯ, ಓವರಿಗೆ< ಸಂ. ಅಪವರಕಾ; ಪುಡಿಕೆಯೊಳ್—ಪೆಟ್ಟಿಗೆಯಲ್ಲಿ; ೧೧. ಮಱಲುಂದು ವೋವರಿಯಂ—ಮೈಮರೆತು ನಿದ್ರಿಸುವ ಕೊಠಡಿಯಲ್ಲಿ; ೧೨. ತಲೆದೆಸೆಯೊಳ್—ತಲೆಯ ಕಡೆಯಲ್ಲಿ; ಪುಡಿಕೆಯಂ—ಪೆಟ್ಟಿಗೆಯನ್ನು, ಭರಣಿಯನ್ನು; (ಸಂ) ಪುಟಿಕಾ; ೧೫. ನೇಸಮ್ಮೂಡೆ—ಸೂರ್ಯನು ಉದಯವಾಗಲು; ೧೭. ಪರದರ—ವರ್ತಕರ; ೧೮. ಆರಯ್ಯದೆ—ವಿಚಾರಿಸದೆ ಹುಡುಕದೆ; ಕೆಮ್ಮಗಿರ್ಪೆ—ಸುಮ್ಮನಿರುವೆ; ೧೯. ಸೆಜ್ಜೆಯೋವರಿಯಂ—ಮಲಗುವ ಕೋಣೆಯನ್ನು; ೨೧. ನಿಗ್ರಹಮಂ—ಶಿಕ್ಷೆಯನ್ನು, ದಂಡನೆಯನ್ನು; ೨೨. ಎಡೆಯನೀವುದು—ಅವಕಾಶವನ್ನು ಕೊಡುವುದು: ೨೩. ಮೆಚ್ಚುಕೆಯ್ವುದು—ಮೆಚ್ಚಿದಹಾಗೆ ಮಾಡುವುದು; ೨೫. ಆರಮೆಗಳೊಳಂ—ಉದ್ಯಾನವನಗಳಲ್ಲಿಯೂ; ೨೮. ''ಪಿರಿದೊಂದು ಕಿಱುವಳ್ಳಮಂ''—ಈ ಪಾಠ ಸರಿಯಲ್ಲ, 'ಳ [ಳಿ]ಱುವಳ್ಳಮಂ' ಎಂದಿರಬೇಕು, ಅಳಿಱು ಎಂದರೆ ಕೆಸರು, ಕೆಸರಿನ ದೊಡ್ಡ ಹಳ್ಳವನ್ನು ಎಂದರ್ಥವಾಗುತ್ತದೆ.

**೧೬೮.** ೧: ವಿದ್ಯಾಧರ ಕರಣದಿಂ—ವಿದ್ಯಾಧರರೆಂಬ ಆಕಾಶಗಾಮಿಗಳ ವಿದ್ಯೆಯಿಂದ; ಲಂಘಿಸಿ—ಹಾರಿ, ದಾಟಿ; ಗೆಂಟಱೊಳಿರ್ದ—ದೂರದಲ್ಲಿದ್ದು; ೨. ಪ್ರಯ್ಯಲಿಡೆಯಡೆ—ಕೂಗಿಕೊಳ್ಳುತ್ತಿರಲು; ೫. ಕಳ್ಳನಲ್ಲದುದರ್ಕೆ ಪೊಟಲೆಲ್ಲಮಱಿಗುಂ—ಇಲ್ಲಿ ದ್ವಿತೀಯಾರ್ಥದಲ್ಲಿ ಚತುರ್ಥಿ; ೯. ರೂಪ್ಪುಗರೆದು—ರೂಪವನ್ನು ಮರೆಸಿ, ಮುಚ್ಚಿಕೊಂಡು; ದಿವಸಕ್ಕೆ—ಹಗಲಿಗೆ; ೧೦. ಪ್ರತ್ಯಯಮಂ ಮಾಡಿ—ನಂಬಿಕೆಯನ್ನುಂಟುಮಾಡಿ; ೧೧. ಪ್ರತಿಘುಟಿಕಾಂಜನಂಗಳಂ—ವಿರುದ್ಧವಾದ ಗುಳಿಗೆ ಕಾಡಿಗೆಗಳನ್ನು: ೧೨. ಕುಹಕಂ—ಮೋಸಗಾರ; ೨೦. ನೀಡುಂ—ಬಹಳ ಹೊತ್ತು; ೨೨. ಬಾೞ್ ವಾೞ್—ಬದುಕಿರಲು ಎಂದರೆ ಪ್ರಾಣವಿರುತ್ತಿರಲು; ಅವಯವದೆ—ಸುಲಭವಾಗಿ, ಶ್ರಮವಿಲ್ಲದೆ; ೨೪. ಒಱಲು—ಕೂಗಲು; ೨೬. ಅಮೋಘಂ—ವ್ಯರ್ಥವಲ್ಲದೆ, ನಿಶ್ಚಯವಾಗಿಯೂ; ೨೯. ದರ್ಕ್ಕಂ ಬಿಸಿದು—ಶೂಲದ ಮೊಳೆಯನ್ನು ಹರಿತಮಾಡಿ; ೩೦. ರೂಪ ಪರಾವರ್ತನಂಗೆಯ್ದು—ಆಕಾರವನ್ನು ಮಾರ್ಪಡಿಸಿಕೊಂಡು, ರೂಪ ಪರಾವರ್ತನ ಎಂಬುದೊಂದು ವಿದ್ಯೆ. ''ರೂಪ ಪರಾವರ್ತನ ವಿದ್ಯೆಯಿಂ ತುರಗ ರೂಪಾದಂ ಚರಂ ಖೇಚರಂ'' ಎಂದು ನಾಗಚಂದ್ರನ ಪ್ರಯೋಗ (ಪಂಪರಾ. ೪–೧೦೫).

ಖಳನಂ—ಪಾಪಿಯನ್ನು, ದುಷ್ಟನನ್ನು. ಪಿಡಿದು—ಹಿಡಿದು. ಉಡಿಯೆ—ಮುರಿಯುವಂತೆ, ಕಟ್ಟಿ. ಮಿಡಮಿಡ ಮಿಡುಕುವಿನಂ—ಅಲುಗಲುಗಿ ಅಲುಗಲುಗುತ್ತಿರಲು. ವಿಲಿವಿಲಿ ಒದ್ದಾಡುತ್ತಿರಲು, ಪೆಡತಲೆಯಿಂ—ತಲೆಯ ಹಿಂಭಾಗವನ್ನು, ಬಡಿಯೊಳ್—ದೊಣ್ಣೆಯಲ್ಲಿ, ಒಡೆಯೆ—ಒಡೆಯುವಂತೆ, ಪೊಡೆ—ಹೊಡೆ.

ಬಡಿ, ಕೊಲ್—ಕೊಲ್ಲು, ಕಟ್ಟು, ಇಱಿ, ಮುಱಿ—ಮುರಿ, ಕಡಿ—ಕತ್ತರಿಸು, ನಡುವಂ—ಸೊಂಟವನ್ನು, ಕೊಱೆ—ಕತ್ತರಿಸು, ಕುತ್ತಿ—ಚುಚ್ಚಿ, ಕರುಳ್ಗಳಂ—ಕರುಳುಗಳನ್ನು, ತೆಗೆ—ಹೊರಕ್ಕೆ ಹಾಕು, ಮೊಗಮಂ—ಮುಖವನ್ನು, ಸುಡು, ಪಿಡಿ—ಹಿಡಿ, ಬಡಿ, ನಿಮಿರ್ದು—ನೇರವಾಗಿ. ಇಱಿ—ಇರಿ. ಬಯ್—ಬೈಯು ; ಕಡಂಗಿ—ಉತ್ಸಾಹಿಸಿ. ಸುಂಗು, ಎಂದು—ಎಂಬುದಾಗಿ. ನಾರಕರಾಗಳ್—ನರಕದವರು ಆಗ, ಮುಸುಱಿ—ಮುತ್ತಿಕೊಂಡು,

೧೩. ಕೊಂತಂಗಳಿಂದಂ—ಒನಕೆಗಳಿಂದ. ಇಟ್ಟಿಗೆಗಳಿಂದಂ—ಈಟಿಗಳಿಂದ, ಕುತ್ತಿಸಿಱಿಂದಂ ; ಕುತ್ತುವ—ಚುಚ್ಚುವ, ಇಸಿಱಿಂದಂ—ಆನೆ ಹಂದಿಗಳ ಕೋಡುಗಳಿಂದ, (ತಮಿಳು) ಎಯಿಱು ; ಕರುಳ್ಮಾಲೆಗಳ್—ಕರುಳಿನ ತೆಕ್ಕೆಗಳು ; ೧೪. ಮುಟ್ಟಿಗೆಗಳೊಳ್—ಮುಟ್ಟಿಗೆಯೆಂಬ ಆಯುಧದಲ್ಲಿ, ಇಟ್ಟು—ಹೊಡೆದು, ತೆಗಪುವುದುಂ—ಎಳೆಯುವುದೂ : ೧೫. ಪೋೞ್ವಂತೆ—ಹೋಳು ಮಾಡುವಂತೆ ; ೧೬. ಬಾೞ್ವುದುಂ—ಪೋೞ್ವುದುಂ (?) ; ೧೭. ಉಸಿರ್ಪತ್ತಿಲ್ಲದೆ—ಉಸಿರಾಡಲು ಅವಕಾಶವಿಲ್ಲದೆ (?) ; ೨೫. ಪೇೞಿಪಟ್ಟ—ಹೇಳಲ್ಪಟ್ಟ.

**೧೭೨.** ೪ : ನಿನಗೊಸೆದೆಂ—ನಿನಗೆ ಪ್ರಸನ್ನನಾದೆನು ; ೧೩. ತೊಱೆಯಾ ತಡಿಯೊಳ್, ಇಲ್ಲಿ ಷಷ್ಠಿ ದೀರ್ಘವಿದೆ ; ೧೬. ಮಗನೆನಾಂ—ಮಗನಾಗಿದ್ದೇನೆ ನಾನು ; ೧೮. ಇರ್ವೆಮುಂ—ಇಬ್ಬರಾದ ನಾವೂ ; ಸಮಾನವಯಸರೆಂ—ಸಮಾನ ವಯಸ್ಸಿನವರಾಗಿದ್ದೇವೆ ; ೨೫. ಸುರಖಮೆಂಬೋದಂ—ಸುರಖ ಎಂಬ ಶಾಸ್ತ್ರವನ್ನು. ಇದು ಕಳ್ಳತನವನ್ನು ಪತ್ತೆಹಚ್ಚುವುದನ್ನು ಪ್ರತಿಪಾದಿಸುವ ಶಾಸ್ತ್ರ ; ಕರಪಟಶಾಸ್ತ್ರ—ಚೋರಶಾಸ್ತ್ರ, ಕಳ್ಳತನವನ್ನು ಕಲಿಸಿಕೊಡುವ ಶಾಸ್ತ್ರ. ಇದನ್ನು ಬರೆದವನು ಖರ ಎಂಬುವನು ; ಅವನ ಹೆಸರಿನಿಂದ ಈ ಶಾಸ್ತ್ರಕ್ಕೆ ಹೆಸರು ಬಂದಿದೆ. ಕೌಟಲೀಯ ಅರ್ಥಶಾಸ್ತ್ರದಲ್ಲಿ 'ತಸ್ಯೋಪಕರಣಂ ಪ್ರಮಾಣಂ ಪ್ರಹರಣಂ ಪ್ರಧಾರಣಮವಧಾರಣಂ ಚ ಖರಪಟ್ಟಾದಾಗಮಯೇತ್' ಎಂದಿದೆ (೪–೮). ಇದಕ್ಕೆ ಟಿಪ್ಪಣಿ "ಖರಪಟ್ಟ ಇತಿ ನಾಮ್ನಾ ಪ್ರಸಿದ್ಧಾತ್ ಚೋರಶಾಸ್ತ್ರಾತ್", ಅರ್ಥಶಾಸ್ತ್ರದ ಮೇಲಣ 'ಪ್ರತಿಪದಸಂಚಿಕಾ' ಎಂಬ ಮಲಯಾಳಿ ಟೀಕೆಯಲ್ಲಿ "ಇಚ್ಛೊನ್ನ ಉಪಕರಣಾದಿಗಳೆಲ್ಲಂ ಕರಪಟತ್ತಿನ್ನು ನಿಕ" ಎಂಬ ವಿವರಣೆ ಇದೆ. ಇದನ್ನು ಗಣಪತಿಶಾಸ್ತ್ರಿಗಳು ಅವಲಂಬಿಸಿ "ಖರಪಟ್ಟಾತ್ ಕರ್ತೃನಾಮ ಪ್ರಸಿದ್ಧ ಚೌರ್ಯಶಾಸ್ತ್ರಾತ್ ಆಗಮಯೇತ್ ಅಧೀಯಾತ" ಎಂದು ಹೇಳಿದ್ದಾರೆ. ಮಹೇಂದ್ರ ವಿಕ್ರಮವರ್ಮನ "ಮತ್ತವಿಲಾಸ ಪ್ರಹಸನ"ದಲ್ಲಿ ಬರುವ ಶಾಕ್ಯ ಭಿಕ್ಷು "ಣಮೋ ಬುದ್ಧಾ ಅ" ಎಂದಾಗ ಕಪಾಲಿಯು "ನಮಃ ಖರಪಟಾಯೇತಿ ವಕ್ತವ್ಯಂ, ಯೇನ ಚೋರಶಾಸ್ತ್ರಂ ಪ್ರಣೀತಂ ಅಥವಾ ಖರಪಟಾದಪ್ಯಸ್ಮಿನ್ನಧಿಕಾರೇ ಬುದ್ಧ ಏವ ಅಧಿಕಃ" ಎಂದು ಉತ್ತರ ಹೇಳುತ್ತಾನೆ. ಭಾಸನ 'ಚಾರುದತ್ತ' ನಾಟಕದಲ್ಲಿ ಬರುವ ಸಜ್ಜಲಕನೆಂಬ ಕಳ್ಳನು "ನಮಃ ಖರಪಟಾಯ" ಎನ್ನುತ್ತಾನೆ (ಅಂಕ ೩. ೧೦ನೆಯ ಪದ್ಯವಾದಮೇಲೆ), ಸುಮಾರು ಕ್ರಿ.ಶ. ೭ನೆಯ ಶತಮಾನದ ತಮಿಳು ಕಾವ್ಯವಾದ "ಶಿಲಪ್ಪದಿಕಾರ"ದಲ್ಲಿ "ಇರವೇ ಪಗಲೇ ಯೆನ್ನಿರಣ್ಡಿಲೇ. ಕರವಡಂ ಕೇಟ್ಟೆನೋರ್ ಪುಗಲಿಡಿಮಿಲ್ಲೊ" ಎಂಬ ಪಂಕ್ತಿಗಳಲ್ಲಿ 'ಕರವಡ' ಎಂಬ ಹೆಸರು ಬಂದಿದೆ ; ಇವಲ್ಲದೆ ಶೂದ್ರಕನು 'ಪದ್ಮಪ್ರಾಭೃತಕ' ಎಂಬ ತನ್ನ ನಾಟಕದಲ್ಲಿ ಧೂರ್ತವಿಟ ಎಂಬ ಸಂಕೇತಗಳಿಂದ ಖರಪಟವನ್ನು ಸೂಚಿಸಿರುವಂತೆ ಕಾಣುತ್ತದೆ : ಬಾಣನು ತನ್ನ 'ಕಾದಂಬರಿ'ಯಲ್ಲೂ ದಂಡಿಯು 'ಅವಂತಿ ಸುಂದರೀ ಕಥಾ' ಎಂಬ ತನ್ನ ಗ್ರಂಥದಲ್ಲೂ ಸುಬಂಧು ತನ್ನ 'ವಾಸವದತ್ತಾ' ಎಂಬ ಕೃತಿಯಲ್ಲೂ, ಬುಧಸ್ವಾಮಿನ್ ಎಂಬಾತನು ತನ್ನ 'ಬೃಹತ್ಕಥಾಶ್ಲೋಕಸಂಗ್ರಹ'ದಲ್ಲೂ ಖರಪಟವೆಂಬ ಹೆಸರನ್ನು ಹೇಳಿದ್ದಾರೆ ; ಕರ್ಣೀಸುತ, ಖರಪಟ, ಮೂಲದೇವ, ಕಲಾಂಕುರ—ಎಂಬ ಈ ನಾಲ್ಕು ಹೆಸರುಗಳು ಒಬ್ಬನೇ ವ್ಯಕ್ತಿಯನ್ನು ನಿರ್ದೇಶಿಸುತ್ತವೆಯೆಂದು

ಪುರುಷೋತ್ತಮನು ತನ್ನ 'ತ್ರಿಕಾಂಡಶೇಷ'ವೆಂಬ ಕೋಶದಲ್ಲಿ ಹೇಳಿದ್ದಾನೆ. ಖರಪಟನೂ ಅವನ ಸ್ತೇಯ ಶಾಸ್ತ್ರವೂ ಕ್ರಿ.ಪೂ. ೨ನೆಯ ಶತಮಾನದಲ್ಲೇ ಪ್ರಸಿದ್ಧವಾಗಿತ್ತು. (ಎಂ. ರಾಮಕೃಷ್ಣ ಕವಿಗಳ Some Cryptic words in the Arthasasthra ಎಂಬ ಲೇಖನವನ್ನು ನೋಡಬಹುದು. *Journal Tirumalai Sri Venkateswara*, Vol. I, P. 41-50).

**೧೭೩.** ೨: ಪುನ್ನಾಗ—ಸುರಗಿಯ ಮರ; ವಕುಳ—ಪವಳದ ಮರ; ತಿಳಕ—ತಿಲಕ ಪುಷ್ಪದ ಮರ; ತಮಾಳ—ಹೊಂಗೆಮರ; ೩. ಕ್ರಮುಕ—ಅಡಕೆ, ನಾಳಿಕೇರ—ತೆಂಗು, ಜಂಬು—ನೇರಿಲೆ, ಜಂಬೀರ—ನಿಂಬೆ, ಪನಸ—ಹಲಸು; ಕದಳೀ—ಬಾಳೆ; ೯. ಸಹಕಾರ—ಸಿಹಿ ಮಾವು: ೫. ಕಿಕ್ಕಿಱಿಗಿಱಿದಿರ್ದ—ದಟ್ಟವಾಗಿ ತುಂಬಿದ್ದ; ೫. ಉಳಿಸೆಂಡು—ಒಂದು ಆಟವನ್ನು, ಚೆಂಡನ್ನು ಬಚ್ಚಿಟ್ಟು ಆಡುವ ಆಟ. ಉಳಿ—ಅಡಗು, ಈ ಆಟವನ್ನು ಪಂಪನೂ ಹೇಳಿದ್ದಾನೆ (ಪಂಪಭಾ. ೨-೩೦). ಅಲೋಕನ ವಿದ್ಯೆಯಂ—ಅದೃಶ್ಯವಾಗುವ ವಿದ್ಯೆಯನ್ನು: ೭. ಉಳಿದೊಡಂ—ಅಡಗಿಕೊಂಡರೂ: ೮. ಕಾಪಿನೊಳ್—ನಗರ ರಕ್ಷಣೆಯಲ್ಲಿ; ೯. ತಳಾಱಿಗೆಯ್ವಂದು—ತಳವಾರನ ಕಾರ್ಯವನ್ನು ಮಾಡುವಾಗ: ೧೧. ನುಡಿದೊಡೆ—ಪ್ರತಿಜ್ಞೆ ಮಾಡಿದರೆ; ೧೨. ಮೂದಲಿಸಿ—ಹುರುಡಿನಿಂದ ಮಾತಾಡಿ, (ತಮಿಳು) ಮೂದಲಿ—ನಿರೂಪಿಸುವುದು; ೧೩. ಸಂತಾನಮಂ—ವಂಶಪರಂಪರೆಯಿಂದ ಬಂದುದನ್ನು; ಇಲ್ಲಿ ತಳವಾರಿಕೆಯನ್ನು: ೨೦. ಅರಯ್ಸುಯುಮಂ—ಹುಡುಕಿಸಿಯೂ: ೨೬. ಮನೆವಾೞ್ತೆಗೆ—ಮನೆಯ ಕೆಲಸಕ್ಕೆ: ೨೭. ಎನ್ನ ಬರ್ಪನ್ನೆಗಂ—ನಾನು ಬರುವವರೆಗೂ; ೨೮. ಕಲ್ಪಿಸಿ—ಕಲಿಸಿ ಹೇಳಿ; ಕಪ್ಪಡಮಂ—ಬಟ್ಟೆಯನ್ನು; ೨೯. ಪಱಿದು—ಹರಿದು.

**೧೭೪.** ೩: ಅಧಿಗಮ ಸಮ್ಯಗ್ದೃಷ್ಟಿಯೆನ್—ಸಂಪಾದಿಸಿದ ಸಮ್ಯಗ್ದೃಷ್ಟಿಯುಳ್ಳವನಾಗಿದ್ದೇನೆ: ೪. ಪಾರದು—ಬಾರದು; ೬. ಮೊದಲ್ಗೊಂ ತಗುಳ್ದು—ಮೊದಲಿನಿಂದ ಆರಂಭಿಸಿ; ೧೧. ಅಗ್ರದಂಗೊಂಡು—ಪಟ್ಟುಹಿಡಿದು; ೧೨. ಮಗುಟ್ಚಲಾರ್ತೊಡೆ—ಹಿಂದಿರುಗಿಸಲು ಸಮರ್ಥನಾದರೆ: ೧೩. ತನ್ನಾರ್ಪ ತೆಱದಿಂ—ತನಗೆ ಸಾಧ್ಯವಾಗುವಷ್ಟು ರೀತಿಯಿಂದ: ೧೪. ಉಪಸರ್ಗಂಗೆಯ್ದು—ತೊಂದರೆಯನ್ನು ಮಾಡಿ; ತನ್ನ ತೊಟ್ಟ—ತಾನು ಧರಿಸಿದ: ೧೮. ಪರಿವೋಟ್ಟೆಯವರ್—ಒಂಟೆಯನ್ನೇರಿ ಬರುವ ಹರಿಕಾರರು, ದೂತರು; ೨೨. ಸಂಧಿವಿಗ್ರಹಿ—ರಾಜನ ಒಬ್ಬ ಅಧಿಕಾರಿ; ೨೩. ಬಾಚಿಸಿದಂ—ವಾಚಿಸಿದನು, ಓದಿದನು; ೨೫. ಪೆಱತಣ—ಹಿಂದಿನ, ಮೊದಲಿನ; ಮನೆವಾೞ್ತೆಯಂ—ಮನೆಗೆಲಸವನ್ನು; ೨೬. ಈಯೋಲೆಯಂ—ಈ ಪತ್ರವನ್ನು: ತಡಮಾಡದೆ; ೨೭. ಈತನ ಪೇೞ್ದುದುಂ—ಇವನು ಹೇಳಿದ್ದೂ; ಇಲ್ಲಿ ಷಷ್ಠಿ ಬಂದಿದೆ.

**೧೭೫.** ೧: ಮಂಡಳಿಕಂ—ಸಾಮಂತ, ಮಂಡಲಾಧೀಶ್ವರ: ಒರಂತಪ್ಪ—ಸಮಾನವಾದ; ೫. ಆಲೇಖ್ಯ—ಚಿತ್ರವಿದ್ಯೆ: ೬. ಪತ್ರಚ್ಛೇದ—ಭೂರ್ಜಾದಿ ಪತ್ರಗಳನ್ನು ಏಕಪ್ರಕಾರವಾಗಿ ಕತ್ತರಿಸುವುದು; ೮. ಪಾಗುಡಂಗಳುಮಂ—ಉಡುಗೊರೆ ಕಾಣಿಕೆ ಮುಂತಾದುವುಗಳನ್ನು: ೯. ತಾಂಗಿರ್ದೆನ್—ತಡೆದಿದ್ದೆನು; ೧೦. ಯೋಗ್ಯನಯ್—ಯೋಗ್ಯನಾಗಿರುವೆ; ೧೨. ಬೆಂಬಂಗೊಂಡಿರ್ದೆನ್ ಪ್ರೀತಿಪಟ್ಟಿರುವೆನು; ಏವೆಂ—ಏನುಮಾಡಲಿ; ೧೩. ಪೆಂಡತಿಗೆ—ಹೆಂಡತಿಗೆ: ೪. ಪರಿಚ್ಛೇದಿಸಿ—ಖಂಡಿತವಾಗಿ; ನಿಶ್ಚಯಿಸಿ; ೧೭. ಅಷ್ಟಶೋಭೆಯಂ—ಕಳಸ, ಕನ್ನಡಿ, ಚಾಮರ, ತೋರಣ, ಧೂಪ, ದೀಪ, ಭೇರಿ, ಬೀಸಣಿಗೆ ಎಂಬ ೮ ಅಲಂಕಾರಗಳನ್ನು; ೨೭. ಕೂಸನಯ್—ಸಣ್ಣ ಪ್ರಾಯದವನಾಗಿರುವೆ; ೨೯. ಪ್ರಸ್ತುತಂಗಳಂ—ತಾತ್ಕಾಲಿಕ ಆಗಿನ ವಿಷಯಗಳನ್ನು.

**೧೭೬.** ಶ್ಲೋಕ ॥ ಸಂಸಾರವರ್ತಿನಾಂ—ಸಂಸಾರದಲ್ಲಿರುವವರ, ಆಯುಃ—ಆಯುಸ್ಸು, ಡಿಂಡೀರ ಪಿಂಡ ಸಂಕಾಶಂ—ನೊರೆಯ ಉಂಡೆಗೆ ಸಮಾನ: ರೂಪ ಯೌವನ—ರೂಪವೂ ಯೌವನವೂ, ಆಖಂಡಲ—ಇಂದ್ರನ, ಧನುಃಖಂಡ—ಬಿಲ್ಲಿನ ಕೋಲಿಗೆ, ಸನ್ನಿಭಂ—ಸಮಾನವಾದದ್ದು.

ವೃ ॥ ಪುಟ ೬೮ ನೋಡಿ.

ವೃ ॥ ಜಾತಿಜರಾಮರಣಂ—ಹುಟ್ಟು ಮುಪ್ಪು ಸಾವುಗಳು. ಯದಿ—ಯಾವಾಗ. ನ ಭವೇತ್—ಉಂಟಾಗುವುದಿಲ್ಲವೋ. ಇಷ್ಟವಿಯೋಗಭಯಂ—ಇಷ್ಟರಾದವರ ಅಗಲಿಕೆಯ ಭಯ: ಯದಿ—ಯಾವಾಗ. ನ ಭವೇತ್—ಉಂಟಾಗುವುದಿಲ್ಲವೋ : ಚ—ಮತ್ತು, ಸರ್ವಂ ಇದಂ—ಈ ಸರ್ವ ವಸ್ತುಗಳೂ, ಯದಿ—ಯಾವಾಗ, ಅನಿತ್ಯಂ—ಅಶಾಶ್ವತವು, ನ ಭವೇತ್—ಆಗುವುದಿಲ್ಲವೋ, ಆಗ ಇಹ ಜನ್ಮನಿ—ಈಗಿನ ಜನ್ಮದಲ್ಲಿ, ಕಸ್ಯ—ಯಾರಿಗೆ, ರತಿಃ—ಒಲವು, ನ ಭವೇತ್—ಉಂಟಾಗುವುದಿಲ್ಲ, ೧೦. ನಲ್ಮೆಯುಂ—ಪ್ರೀತಿಯೂ ; ೧೧. ಮೊದಲಾಗೊಡೆಯುವು—ಮೊದಲಾಗುಳ್ಳವು ; ಮೆಯ್ಯೊಳ್ಳಿತ್ತೆ—ದೇಹ ಒಳ್ಳೆಯದೆ ?

ಗಾಹೆ ॥ ಏದಂ ಸರೀರಂ—ಈ ದೇಹವು. ಅಸುಚೀ—ಶುಚಿಯಲ್ಲದ್ದು ; ಣಿಚ್ಚಂ—ಯಾವಾಗಲೂ. ಕಲಿಕಲುಸಭಾಜಣಂ—ರಾಗದ್ವೇಷಗಳಿಗೆ ಪಾತ್ರವಾಗಿದೆ : ಅಚೋಕ್ಖಂ—ಅಶುಭವಾದದ್ದು : ಅಂತೋ ಬಾಹಿರದಿಟ್ಟಂ—ಒಳಗೂ ಹೊರಗೂ ಚರ್ಮದಿಂದ ಮುಚ್ಚಲ್ಪಟ್ಟದ್ದು ಅಥವಾ ಕರುಳು ಮಾಂಸ ನರಗಳಿಂದ ಪರಿವೇಷ್ಟಿತವಾದದ್ದು ; ಕಿಬ್ಬಿಸಭರಿದಂ—ಅಶುಚಿಯಾದ ಶುಕ್ಲಶೋಣಿತಗಳಿಂದ ತುಂಬಿದ್ದು; ಅಮೇಜ್ಜಘರಂ—ಮೂತ್ರಪುರಿಷಾದಿಗಳ ಮನೆ.

ವಸ—ಮಾಂಸದಲ್ಲಿರುವ ಜಿಡ್ಡು, ಮಜ್ಜ—ಮೂಳೆಯಲ್ಲಿರುವ ಸಾರ. ಮಾಂಸ—ರಕ್ತದ ಕಾರ್ಯ, ಶೋಣಿತಂ—ರಕ್ತರಸದ ಕಾರ್ಯ. ಪುಪ್ಫುಸಂ—ನೊರೆಯ ರೂಪದ ಶ್ವಾಸಕೋಶ. ಕಾಲೇಜ್ಜ—ಕರಿಯ ಮಾಂಸಖಂಡ ರೂಪವಾದದ್ದು, ಯಕೃತ್ತು, ಸಿಂಘ ಸೀಹಾಣಂ—ಶ್ಲೇಷ್ಮಸಿಂಬಳಗಳು, ಸಿರಜಾಲ ಅಟ್ಠಿಸಂಗದ—ರಕ್ತನಾಳಗಳು ಮೂಳೆಗಳು ಇವುಗಳಿಂದ ತುಂಬಿದ್ದು. ಚಮ್ಮಾಲ್ಲಿದ್ದಂ—ಚರ್ಮದಿಂದ ಹೊದಿಸಲ್ಪಟ್ಟದ್ದು ; ಸರೀರಘರಂ—ಶರೀರವೆಂಬ ಮನೆಯು. ಸಂತತಂ ಅಚ್ಚೋಕ್ಖಂ—ಯಾವಾಗಲೂ ಅಶುಚಿಯಾದದ್ದು.

ಅಟ್ಠಿಣಿ ಛಣ್ಣಂ—ಮೂಳೆಗಳಿಂದ ಆವೃತವಾದದ್ದು ; ಣಾಳಿಣಿಬದ್ಧಂ—ರಕ್ತನಾಳಗಳಿಂದ ಕಟ್ಟಲ್ಪಟ್ಟಿದ್ದು ; ಕಲಿಮಲ ಭರಿದಂ—ಸರ್ವ ಕೊಳಕು ದ್ರವ್ಯಗಳಿಂದ ತುಂಬಿದ್ದು: ಕಿಮಿಕುಲ ಪುಣ್ಣಂ—ಕ್ರಿಮಿಗಳಿಂದ ಪೂರ್ಣವಾದದ್ದು. ಮಾಂಸ ವಿಲಿತ್ತಂ—ಮಾಂಸದಿಂದ ಮೆತ್ತಿದ್ದು : ತಯಪಡಿಚ್ಛಣ್ಣಂ ಚರ್ಮದ ಹೊದಿಕೆಯುಳ್ಳದ್ದು, ತಂ ಸರೀರ ಘರಂ—ಆ ದೇಹವೆಂಬ ಮನೆಯು, ಸಂತತಂ ಅಚ್ಚೋಕ್ಖಂ—ಯಾವಾಗಲೂ ಅಶುಚಿಯಾದದ್ದು.

ಏದಾರಿಸೇ ಸರೀರೇ—ಇಂಥ ಶರೀರದಲ್ಲಿ. ದುಗ್ಗಂಧೇ—ದುರ್ನಾತವುಳ್ಳುವುದರಲ್ಲಿ, ಕುಣಿಮ ಪೂಇಯೇ—ಕಶ್ಮಲ ತುಂಬಿದ್ದರಲ್ಲಿ, ಅಚೋಕ್ಖೇ—ಅಶುಚಿಯಾದ್ದರಲ್ಲಿ, ಸಡಣಪಡಣೇ—ಸಡಿಲವಾಗಿ ಬೀಳುವಂಥದ್ದರಲ್ಲಿ, ಅಸಾರೇ—ಸಾರರಹಿತವಾದ್ದರಲ್ಲಿ. ಸಪ್ಪುರಿಸಾ—ಸತ್ಪುರುಷರು. ರಾಗಂ—ಪ್ರೀತಿಯನ್ನು, ಣ ಕರಿಂತಿ—ಮಾಡುವುದಿಲ್ಲ.

* **ಗಾಹೆ** ॥ ಸಕದ ಕಮ್ಮಂ—ತಾನು ಮಾಡಿದ ಕರ್ಮವು, ಛಾಯೇವ—ತನ್ನ ನೆರಳಿನಂತೆ. ಕಾರಗಂ—ಕರ್ತೃವನ್ನು ಎಂದರೆ ಮಾಡಿದವನನ್ನು, ಅಣುಯಾದಿ-ಅಣುಯಾದಿ—ಅನುಸರಿಸಿಕೊಂಡು ಹಿಂದೆ ಹೋಗುತ್ತದೆ, ಣ ಸೇಸಂ—ಬೇರೆಯವನ್ನಲ್ಲ ; ಜಿಣಸಾಸಣೇ—ಜಿನನ ಆಜ್ಞೆ, ಆಶ್ರಯ ಹೊರತಾಗಿ. ಅಣ್ಣತ್ಥ—ಬೇರೆ ಕಡೆಗೆ. ಫಲಾಯಿದಂ—ಓಡಿಹೋಗುವುದು, ದುಸ್ಸಕ್ಕಂ—ಅತ್ಯಂತ ಅಸಾಧ್ಯವಾದುದು.

**ಶ್ಲೋಕ** ॥ ದುರ್ಗಂಧೇ—ಕೆಟ್ಟ ನಾತವುಳ್ಳ, ದುರ್ಧರೇ ದುಃಖೇ—ತಾಳಲಾಗದ ದುಃಖವುಳ್ಳ, ದುಃಸ್ವಭಾವೇ—ಕೆಟ್ಟ ಸ್ವಭಾವವುಳ್ಳ, ನಶ್ವರೇ—ನಾಶವಾಗುವಂಥ, ದುರ್ವಿಲೋಕೇ ಚ—ನೋಡಲು ಅಸಹ್ಯವಾಗುವಂಥ, ಕಾಯೇ—ದೇಹದಲ್ಲಿ, ಜ್ಞಾನಿ—ಜ್ಞಾನಿಯೇ, ವೃಥಾ—ವ್ಯರ್ಥವಾಗಿದೆ, ತವ ಆಗ್ರಹಃ—ನಿನ್ನ ಆಸಕ್ತಿಯು, ಕಿಂತು—ಬೇರೇನು ?

**ಶ್ಲೋಕ** ॥ ೧೮೯ನೆಯ ಪುಟವನ್ನು ನೋಡಿ.

**ವೃ** ॥ ಜಾತಿಕ್ಷ್ಮಾಜಕಲೇ—ಜಾತಿವೃಕ್ಷಗಳ ಸಮೂಹವನ್ನುಳ್ಳ. ಕೃತಾಂತ—ಯಮನಂತೆ, ಕುಪಿತ—ಕೆರಳಿದ, ಕ್ರೂರ—ಕ್ರೂರವಾದ, ಉರು ದುಃಶ್ವಾಪದೇ—ಅಧಿಕವಾದ ದುಷ್ಟ ಜಂತುಗಳನ್ನುಳ್ಳ, ವ್ಯಾಧಿ ವ್ಯಾಧಭಯೇ—ರೋಗಗಳೆಂಬ ಬೇಡನ ಭಯವನ್ನುಳ್ಳ, ದುರಂತ ದುರಿತ—

**೧೭೯.** ೨: ಮನದೊಳ್ ಬಗೆದು—ಮನಸ್ಸಿನಲ್ಲಿ ಧ್ಯಾನಿಸಿ; ೪. ಮೊದಲಾಗೊಡೆಯವಱಿಂ ದಪ್ಪ—ಮೊದಲಾಗುಳ್ಳವುಗಳಿಂದಾಗುವ; ೫. ರತ್ನತ್ರಯಂಗಳಂ—ಮೂರು ರತ್ನಗಳನ್ನು ಎಂದರೆ ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ಚಾರಿತ್ರಗಳನ್ನು; ಅಪವರ್ಗ—ಮೋಕ್ಷ.

## ೧೪. ಗುರುದತ್ತ ಭಟಾರರ ಕಥೆ

**೧೮೦.** ೬ ಸೂಡಿವೊತ್ತಿಸೆ ಪಟ್ಟನಂತೆ—ಸುತ್ತಿ ಉರಿಯಿಂದ ಹೊತ್ತಿಸಲ್ಪಟ್ಟವನಂತೆ; ೭, ಪರ್ವತದ ಸಾರೆ—ಬೆಟ್ಟದ ಹತ್ತಿರ: ೧೨. ಸಾವಸ್ತಿ—ಶ್ರಾವಸ್ತಿ ಎಂಬ ನಗರ: ೧೯. ಅಂಕುರಿತ—ಮೊಳೆತ; ಪಲ್ಲವಿತ—ಚಿಗುರಿದ; ಕೋರಕಿತ—ಟಿಸಿಲೊಡೆದ; ಕುಸುಮಿತ—ಹೂಬಿಟ್ಟ; ೧೦. ಆಱುಂಗರ್ಕಳುಂ—ಮಕ್ಕಳೂ: ೧೧. ಬಿದಿದು ಬೇಗಂ—ಬಹುಕಾಲ; ೧೩. ಮಣಿಕುಟ್ಟಿಮಮಪ್ಪ—ರತ್ನಖಚಿತವಾದ ನೆಲೆಗಟ್ಟುಳ್ಳ; ಬೊಡ್ಡಣ ಬಾವಿಯೊಳ್—ದೊಡ್ಡ ಬಾವಿಯಲ್ಲಿ, ಕೊಳದಲ್ಲಿ (?) (ಸಂ) ವರ್ಧನವಾಪಿ (?). ಈ ಶಬ್ದವನ್ನು ಬಂಧುವರ್ಮ ಎರಡು ಸಲ ಬಳಸಿದ್ದಾನೆ. "ಆತನಂ ಬೊಡ್ಡಣದ ಬಾವಿಯೊಳಗೆ ಪುಗುವಂತೆ ಗೆಯ್ದು" (ಜೀವಸಂ. ೨೧-೩೩). "ತುಂಬಿದ ಬೊಡ್ಡಣ ವಾವಿಯ ತೂಬಂ ತಡವರಿಸಿ ಕಂಡದಂ ಕಳೆದಲ್ಲಿಂ॥ ದಂ ಬೇಗಂ ಪೊಱಮಡೆ. ಕಂಡೇಂ ಬಲ್ಲಿತ್ತೊ ಪುಣ್ಯಮೆಂದು ವನದೇವತೆಗಳ್" (ಅದೇ. ೧-೩೪). ಇಂಥ ಬಾವಿಗೆ ನೀರನ್ನು ತುಂಬಬಹುದು, ಕೆಳಗಿರುವ ತುಂಬಿರುವ ನೀರನ್ನು ಹೊರಕ್ಕೆ ಬಿಡಬಹುದು, ಇದನ್ನು ಜಲಕ್ರೀಡೆಗೂ ಮಿಂಯುವುದಕ್ಕೂ ಉಪಯೋಗಿಸುತ್ತಿದ್ದರು (ಸುಕುಮಾರಸ್ವಾಮಿಯ ಕಥೆ, ಪು. ೪೪-೪೮ ನೋಡಿ); ೩೩. ಬೆರಸಿಪಟ್ಟುದಱೊಳ್—ಬೆರಸಲ್ಪಟ್ಟಿದ್ದರಲ್ಲಿ: ೨೪. ಕುವಳಯಂ—ಕನ್ನೈದಿಲೆ; ೨೫. ಸಂಛನ್ನಮಪ್ಪುದಱೊಳ್—ಮುಚ್ಚಲ್ಪಟ್ಟಿರುವುದರಲ್ಲಿ.

**೧೮೧.** ೧: ಬಳಾಕ—ಒಂದು ನೀರಹಕ್ಕಿ; ಮಂಡೂಕ—ಕಪ್ಪೆ; ಜೀವಂ ಜೀವಕ—ಒಂದು ಬಗೆಯ ಪಕ್ಷಿ; ಜಲಚರವಿಹಂಗ—ನೀರ ಪಕ್ಷಿಗಳು; ೮. ಒಡೆಯದಱೊಳ್—ಉಳ್ಳುದರಲ್ಲಿ: ೩. ಜೀರ್ಕೊಳವಿಗಳಿಂದಂ—ಪಿಚಕಾರಿಗಳಿಂದ: ತಳಿಯುತ್ತುಂ—ಚಿಮುಕಿಸುತ್ತ; ೯. ಭೌಮವಿಹಾರಕ್ಕೆಂದು—ಭೂಮಿಯ ವಿಹಾರಕ್ಕಾಗಿ; ೯೯. ಎಳವೆಂಡಿರಿಂದಂ—ಕೋಮಲರಾದ ಸ್ತ್ರೀಯರಿಂದ; ೯೫. ತೂರ್ಯಧ್ವನಿಗಳ್—ವಾದ್ಯಧ್ವನಿಗಳು; ೧೭. ನಿಱಿಸಿ—ನಿಲ್ಲಿಸಿ; ೯೮. ನಾಮಾಕಾಶದೊಳ್ ಕಾಗೆಗಳಂತಿರೆ; ಪಾಱುವನಿತಲ್ಲದೆ—ನಾವು ಆಕಾಶದಲ್ಲಿ ಕಾಗೆಗಳ ಹಾಗೆ ಹಾರುವಷ್ಟಲ್ಲದೆ. ಈ ಮಾತುಗಳನ್ನು "ಅಂಗಾರಕವಾರದ ಪೆಸರ್ ಮಂಗಳವಾರಮೆಂಬಂತೆ ಬಱಿದೆ ಕಾಗೆಗಳಂತಂತರಿಕ್ಷದೊಳ್ ಪಾಱುವ ನಮಗೆ ವಿದ್ಯಾಧರರೆಂಬೊಣ ಪೆಸರಲ್ಲದೆ" ಎಂಬಲ್ಲಿ ನಯಸೇನ ಅನುಕರಿಸಿದ್ದಾನೆ. (ಧರ್ಮಾ. ೯೪-೨೧), ನಯಸೇನನ ಮಾತುಗಳನ್ನು "ಅಂಗರವಾರದ ಪೆಸರನು ಮತ್ತೊಮ್ಮೆ ಮಂಗಳವಾರ ಮೆಂಬಂತೆ, ಬಿಂಗದೆ ಬಿರಿಯಾಗಸದೊಳು ಕಾಗೆಕೆಳಂದದಿ ಪಾರುವ ತೀರುನಮಗೆ" ಎಂಬುದಾಗಿ ದೇವರಸನು ತನ್ನ 'ಗುರುದತ್ತಚರಿತ್ರೆ'ಯಲ್ಲಿ (೯-೨೦೦) ಅನುವದಿಸಿದ್ದಾನೆ.

೨೧. ಬರ್ದ—ಬದುಕಿದ < ಬಟ್ದಿ < ಬಾಟಿರ್; ಪುರುಡಿಸಿ—ಮತ್ಸರಿಸಿ; ೧೫. ವಿಗುರ್ವಿಸಿ—ಮಾಯೆಯಿಂದ ಸೃಷ್ಟಿಸಿ; ೧೭. ನಿಶ್ಛಿದ್ರಮಾಗಿ—ರಂಧ್ರವಿಲ್ಲದಂತೆ.

**೧೮೨.** ೧: ಮೋಹಿಸದ ಬುದ್ಧಿಯನೊಡೆಯರ್—ಆಸೆಪಡದ ಬುದ್ಧಿಯುಳ್ಳವರು; ೯. ಪೆರ್ವಾವಾಗಿ—ಹೆಬ್ಬಾವು ಆಗಿ; ೫. ಋಷಿನಿವೇದಕಂ—ಋಷಿಯ ಆಗಮನವನ್ನು ತಿಳಿಸುವವನು; ೮. ಗುರುಪರಿವಿಡಿಯಿಂದಂ—ಗುರುಪರಂಪರೆಗೆ ಅನುಸಾರವಾಗಿ: ೧೦. ಆಕಸ್ಮಿಕಂ—ಅಪಘಾತ; ಒರ್ಮೊದಲ್—ಏಕಕಾಲದಲ್ಲಿ; ಅನಿಬರ್ಗಂ—ಅಷ್ಟುಮಂದಿಗೂ; ೧೩. ಆಡುತ್ತಿರ್ಪನ್ನೆಗಂ—ಆಡುತ್ತಿರಲು; ೧೫. ವಿಭವಮುಂ—ವೈಭವವನ್ನು.

**೧೮೩.** ೬: ನಿಮ್ಮುಮಂ—ನಿಮ್ಮನ್ನೂ; ೮. ಪ್ರತಿಬೋಧಿಸಲ್ಕೆ—ಎಚ್ಚರ ಹೇಳುವುದಕ್ಕೆ; ೧೧. ಮಹಾಕಾಯ—ದೊಡ್ಡ ದೇಹವುಳ್ಳ; ೧೬. ಬಾಳ್ಕೆಯೊಳು—ಬಾಳುವಿಕೆಯಲ್ಲೂ: ಆಚ್ಚಿಯೆ—ಆದರವೆ?

ವುದು, ನಿಶ್ಚಯಂ—ದಿಟ. ಜಾತಸ್ಯ—ಜನ್ಮತಾಳಿದ. ಸರ್ವಸ್ಯ—ಎಲ್ಲಕ್ಕೂ. ಮರಣಂ—ಸಾವು. ಅಪಿ—ಕೂಡ. ನಿಶ್ಚಯಂ; ತಸ್ಮಾತ್—ಅದ್ದರಿಂದ, ಜಾತೇನ—ಹುಟ್ಟಿದ. ಧರ್ಮಕರ್ಮರತೇನ—ಧರ್ಮಕರ್ಮದಲ್ಲಿ ಆಸಕ್ತಿಯುಳ್ಳ, ವಿದುಷಾ—ವಿದ್ವಾಂಸನಿಂದ. ಸದಾ—ಯಾವಾಗಲೂ. ಭಾವ್ಯಂ ಏವ—ಭಾವಿಸಲ್ಪಡಬೇಕಾದದ್ದೇ.

**ವೃ** ॥ ಯೌವನ ಬಲ ವಿಭವರೂಪ ಸೌಭಾಗ್ಯಾನಿ—ಪ್ರಾಯ ಶಕ್ತಿ ವೈಭವರೂಪ ಸೌಭಾಗ್ಯಗಳು. ಪುಷ್ಪಫಲಭಾರತರುವತ್—ಹೂವು ಹಣ್ಣುಗಳ ಭಾರವನ್ನುಳ್ಳ ಮರದಂತೆ; ಸರ್ವೇಷಾಂ—ಎಲ್ಲರ. ಜೀವಿತಂ ಚ—ಬದುಕು ಕೂಡ, ಗಿರಿಸರಿದುಭಃ ಪ್ರತಿಮಂ—ಬೆಟ್ಟದ ಝರಿಯ ನೀರಿಗೆ ಸಮಾನ, ಶೀಘ್ರಂ—ತ್ವರಿತವಾಗಿ, ಧಾವತಿ—ಓಡುತ್ತದೆ.

**ಗಾಹೆ** ॥ ಏಗೋಯ—ಒಬ್ಬನೇ ಎಂದರೆ ಅಸಹಾಯನಾಗಿ, ಜೀವಃ—ಜೀವನು, ಮರದಿ—ಶರೀರತ್ಯಾಗವನ್ನು ಮಾಡುತ್ತಾನೆ; ಏಗೋಯ—ಒಬ್ಬನೇ, ಉವವಜ್ಜ ಇ—ಹುಟ್ಟುತ್ತಾನೆ; ಏಗೋ ಸಜಾಇ ಮರಣಂ—ಒಬ್ಬನ ಮರಣವು ಹತ್ತಿರ ಬರುತ್ತದೆ, ಏಗೋ ಸಜಾಇ ಣಿರಯಂ ವಾ—ಒಬ್ಬನೇ ನರಕಕ್ಕೆ ಹೋಗುತ್ತಾನೆ; ಇದಕ್ಕೆ ಏಓ ಸಿಜ್ಜಇ ಣೀರಓ—ಏಕಃ ಸಿದ್ಧ್ಯತಿ ಣೀರಓ ಎಂಬ ಪಾಠಾಂತರವಿದೆ—ಒಬ್ಬನು ನೀರಜನಾಗಿ ಎಂದರೆ ಕರ್ಮರಹಿತನಾಗಿ ಮುಕ್ತನಾಗುತ್ತಾನೆ ಎಂದರ್ಥ.

**೧೮೩. ಶ್ಲೋಕ** ॥ ಕಸ್ಯ ಮಾತಾ—ಯಾರ ತಾಯಿ, ಕಸ್ಯ ಪಿತಾ—ಯಾರ ತಂದೆ. ಕಸ್ಯ ಭಾರ್ಯಾ—ಯಾರ ಹೆಂಡತಿ. ಅಪಿ ವಾ—ಮತ್ತೆ, ಕಸ್ಯ—ಯಾರ. ಸುತಃ—ಮಗನು; ಜೀವಾನಾಂ—ಜೀವಿಗಳ. ಜಾತೌ ಜಾತೌ—ಜನ್ಮಜನ್ಮದಲ್ಲಿ. ಪರೇ ಪರೇ—ಬೇರೆಬೇರೆಯಾದವರು. ಭವಿಷ್ಯಂತಿ ಹಿ—ಆಗುವರಲ್ಲವೆ ?

**ಶ್ಲೋಕ** ॥ ಅರ್ಥಾಃ—ದ್ರವ್ಯಗಳು, ಗೃಹೇಷು—ಮನೆಗಳಲ್ಲಿ. ತಿಷ್ಠನ್ತಿ—ನಿಲ್ಲುತ್ತವೆ; ಬಾಂಧವಾಃ—ಬಂಧುಗಳು. ಶ್ಮಶಾನೇಷು ಚ—ಶ್ಮಶಾನದಲ್ಲಿ ನಿಲ್ಲುತ್ತಾರೆ; ಶರೀರಃ—ದೇಹವು. ಜ್ವಾಲಮಾಲಾಯಾಂ—ಉರಿಯ ಮಾಲೆಯಲ್ಲಿ ನಿಲ್ಲುತ್ತದೆ. ಸುಕೃತಂ—ಪುಣ್ಯವೂ. ದುಷ್ಕೃತಂ—ಪಾಪವೂ. ವ್ರಜೇತ್—ಬರುತ್ತವೆ ಜೊತೆಯಲ್ಲಿ, ೯. ಪಂದರಂ—ಚಪ್ಪರವನ್ನು; ೧೦. ನೇತ್ರಪಟ್ಟಿಯ—ನೇತ್ರವೆಂಬ ಬಟ್ಟೆಯ. ಉಲ್ಲದಂಗಳುಮಂ—ವಿತಾನಗಳನ್ನೂ ಮೇಲ್ಕಟ್ಟುಗಳನ್ನೂ; ೧೧. ಮೂಜು ಪೊಟ್ಟುಂ—ಮೂರುಹೊತ್ತೂ; ೧೨. ಪೊಡೆಮಡಿಸುತ್ತಿರೆ—ನಮಸ್ಕಾರ ಮಾಡಿಸುತ್ತಿರಲು : ಆರಾಧನೆಯನರ್ಚಿಸಿ—ಆರಾಧನಾ ಎಂಬ ಗ್ರಂಥವನ್ನು ಪೂಜೆಮಾಡಿ. ವಕ್ಕಾಣಿಸಲ್—ವಿಸ್ತಾರವಾಗಿ ಹೇಳಲು, ವ್ಯಾಖ್ಯಾನಿಸಲು. ತಗುಳ್ದರ್—ತೊಡಗಿದರು.

**ಶ್ಲೋಕ** ॥ ಕಂಠಗತೈಃ—ಗಂಟಲಿಗೆ ಬಂದ. ಪ್ರಾಣೈರಪಿ—ಪ್ರಾಣಗಳಿಂದಲೂ. ಯಃ—ಯಾವನು. ಸಂನ್ಯಸನೇ—ಸಂನ್ಯಾಸದಲ್ಲಿ. ಅಸ್ತಿಮತಿಃ—ಮನಸ್ಸುಳ್ಳವನಾಗಿರುವನೋ. ಸಃ—ಅವನು. ಪುನರಾಗಮವರ್ಜಿತಂ—ಹಿಂದಿರುಗಿ ಬರುವುದೆಂಬುದಿಲ್ಲದ. ಮೋಕ್ಷಸದನಂ—ಮೋಕ್ಷವೆಂಬ ಮನೆಗೆ, ಗಚ್ಛೇತ್—ಹೋಗುತ್ತಾನೆ.

ಇಹಜೀವಕೃತಂ ಪಾಪಂ—ಈ ಜನ್ಮದಲ್ಲಿ ಮಾಡಿದ ಪಾಪ, ಪುರಾಕೃತಂ—ಹಿಂದೆ ಮಾಡಿದ. ಪಾಪಂ—ಪಾಪವು. ಯಚ್ಚ—ಯಾವುದೋ. ತತ್ಸರ್ವಂ—ಆ ಸಕಲ ಪಾಪಗಳೂ. ಅಗ್ನಿಃ—ಉರಿಯು. ಇಂಧನಮಿವ—ಸೌದೆಯನ್ನು ಹೇಗೋ ಹಾಗೆ. ಸಂನ್ಯಸನೇನ—ಸಂನ್ಯಾಸದಿಂದ. ದಹತಿ—ಸುಡುತ್ತದೆ.

ಹೃದಯೇ—ಹೃದಯದಲ್ಲೂ. ಲಲಾಟೇ—ಹಣೆಯಲ್ಲೂ ಎಂದರೆ ಹುಬ್ಬಿನ ನಡುವೆಯೂ. ಜೀವಂ—ಆತ್ಮವನ್ನೂ. ಕರಂ—ಕೈಯನ್ನೂ. ಮುಹೂರ್ತಕಾಲೇ—ಒಂದು ಮುಹೂರ್ತಕಾಲ ಮಾತ್ರವೂ. ನ್ಯಸ್ಯ—ಇಟ್ಟುಕೊಂಡು. ಸಮುಸ್ಥಿತಸ್ಯ—ಸಮತೆಯಿಂದ ನಿಂತಿರುವವನ. ಅಜ್ಞಾನಭಾವಾತ್—ಅಜ್ಞಾನತೆಯ ದೆಸೆಯಿಂದ. ಕೃತ—ಮಾಡಲ್ಪಟ್ಟ, ಕರ್ಮಭಾರಃ—ಪುಣ್ಯಪಾಪರೂಪವಾದ ಕರ್ಮಗಳ ಭಾರವು. ಸಂನ್ಯಸನಾತ್—ಸಂನ್ಯಾಸದಿಂದ. ಸತ್ಕ್ಷಯಂ—ಒಳ್ಳೆಯ ವಿನಾಶವನ್ನು. ಪ್ರಯಾತಿ—ಪಡೆಯುತ್ತದೆ.

ತಣಕಟ್ಠೇಹಿ ವ—ತೃಣಕಾಷ್ಠಗಳಿಂದ ಹೇಗೆ, ಅಗ್ನಿಃ—ಉರಿಯು ತೃಪ್ತವಾಗುವುದಿಲ್ಲವೋ, ಲವಣಸಮುದ್ದೋ—ಉಪ್ಪುಗಡಲು, ಣದೀಸಹಸ್ಸೇಹಿಂ—ಹೇಗೆ ಸಾವಿರಾರು ನದಿಗಳಿಂದ ತುಂಬು ವುದಿಲ್ಲವೋ. ಹಾಗೆ, ಇಮೋ ಜೀವೋ—ಈ ಜೀವನು. ಕಾಮಭೋಗೇಹಿಂ—ಬಯಸಲ್ಪಟ್ಟ ಸ್ತ್ರೀವಸ್ತ್ರಾದಿ ಭೋಗವಸ್ತುಗಳಿಂದ. ತಪ್ಪೇದುಂ—ತೃಪ್ತಿಪಡಿಸಲು, ಣ ಸಕ್ಕೋ—ಸಾಧ್ಯವಾಗ ದವನು.

ಜಹಜಹ—ಹೇಗೆಹೇಗೆ, ಭೋಗೇ—ಭೋಗಗಳು. ಭುಂಜಇ—ಭೋಗಿಸಲ್ಪಡುವುದೋ. ತಹತಹ—ಹಾಗೆಹಾಗೆ, ಭೋಗೇಸು—ಸುಖಗಳಲ್ಲಿ. ತಣ್ಹಾ—ಆಸೆಯು, ವಡ್ಢದೇ—ವರ್ಧಿಸುತ್ತದೆ. ಇಂಧಣಾಣಂ—ಸೌದೆಗಳಿಂದ. ಅಗ್ಗೀವ—ಅಗ್ನಿಯಂತೆ; ಸೇ ಭೋಗಾ—ಆ ಭೋಗಗಳು, ತಣ್ಹಂ—ತೃಷ್ಣೆಯನ್ನು, ಆಸೆಯನ್ನು, ದೀವಂತಿ—ಉದ್ದೀಪನಗೊಳಿಸುತ್ತವೆ.

**ವೃ ||** ಸಲವಣರಸಮಂಭಃ—ಉಪ್ಪಿನ ರಸದಿಂದ ಕೂಡಿದ ನೀರು ಎಂದರೆ ಉಪ್ಪುನೀರು, ತೃಷಾರ್ತೈಃ—ಬಾಯಾರಿಕೆಯಿಂದ ಪೀಡಿಸಲ್ಪಟ್ಟವರಿಂದ, ಭುಜ್ಯಮಾನಂ—ಸೇವಿಸಲ್ಪಟ್ಟದಾದರೆ. ಅಧಿಕತರ ತೃಷಾರ್ತಾನ್—ಅತಿಶಯವಾದ ನೀರಡಿಕೆಯಿಂದ ಹಿಂಸಿಸಲ್ಪಟ್ಟವರನ್ನಾಗಿಯೋ. ದುಃಖಿ ತಾನ್ ಏವ—ದುಃಖಿಗಳನ್ನಾಗಿಯೋ. ಕುರ್ಯಾತ್—ಮಾಡುತ್ತದೆ; ಇದಂ—ಈ, ವಿಷಯ ಸುಖಮಪಿ—ಇಂದ್ರಿಯಸುಖವು ಕೂಡ. ತೃಷಾರ್ತೈಃ—ಆಸೆಯುಳ್ಳವರಿಂದ, ಭುಜ್ಯಮಾನಂ—ಸೇವಿಸಲ್ಪಟ್ಟದ್ದು. ಅಧಿಕತರ ತೃಷಾರ್ತಾನ್. ದುಃಖಿತಾನ್ ಏವ—ಅತಿಶಯತರವಾದ ಆಶೆಯಿಂದ ಹಿಂಸಿಸಲ್ಪಟ್ಟವರನ್ನಾಗಿಯೋ. ದುಃಖಿತರನ್ನಾಗಿಯೋ. ಕುರ್ಯಾತ್—ಮಾಡುತ್ತದೆ.

**ಆರ್ಯೆ ||** ಪುಟ ೧೫೭ ನೋಡಿ.

**ವೃ ||** ಮದ್ದುಂ—ಮದ್ದೂ, ಮಂತ್ರಮುಂ—ಮಂತ್ರಗಳೂ. ಇಷ್ಟದೇವತೆಗಳುಂ—ಉಪಾಸ್ಯ ದೇವತೆಗಳೂ, ದಿವ್ಯಾಸ್ತ್ರಮುಂ—ಶ್ರೇಷ್ಠವಾದ ಬಾಣಗಳೂ. ಕೋಂಟೆಯುಂ—ಕೋಟೆಯೂ. ಗುದ್ದುಂ—ಗುದ್ದೂ, ಪೊರ್ದಿದ—ಸೇರಿದ, ಚಾತುರಂಗ ಬಲಮುಂ—ಚತುರಂಗ ಸೈನ್ಯವೂ. ಮೆಯ್ಗಾಪುಂ—ಅಂಗರಕ್ಷಕರೂ, ವೇಳೆಗೊಂಡಿರ್ದ—ರಾಜನು ಸಾಯುತ್ತಲೇ ತಾವೂ ಸಾಯುತ್ತೇ ವೆಂಬ ಸಮಯಪಾಲನ ಪ್ರತಿಜ್ಞೆಯನ್ನು ತಾಳಿದ. ಆ ಅತ್ಯುಗ್ರ ಭಟರ್ಕಳುಂ—ಆ ಅತಿಭಯಂಕರ ರಾದ ಯೋಧರೂ. ಕವಚಮುಂ—ದೇಹವನ್ನು ರಕ್ಷಿಸುವ ಕವಚವೂ. ಮಿತ್ರರ್ಕಳುಂ—ಸ್ನೇಹಿತರೂ, ಮಿಟ್ಟು—ಮೃತ್ಯುವು. ಮೇಲೆವಾಗಳ್—ಮೇಲೆ ಹಾಯ್ದು ಬಂದಾಗ. ಶರಣಪ್ಪೊಡೆ—ಶರಣಾಗು ವುದಾದರೆ. ಪನ್ನಿರ್ವರುಂ ಚಕ್ರಿಗಳ್—ಹನ್ನೆರಡು ಜನ ಚಕ್ರವರ್ತಿಗಳು. ಏಕೆ ಮಡಿದರ್—ಏಕೆ ಸತ್ತರು ?

ಸಾವನಿತು—ಸಾಯುವಷ್ಟು. ಒಂದು ಅವಸ್ಥೆ—ಒಂದು ಸ್ಥಿತಿ, ತನಗೆ ಆದ ಎಡೆಯೊಳ್—ತನಗೆ ಉಂಟಾದ ಸಮಯದಲ್ಲಿ. ತಳೆಸಂದು—ನಿಶ್ಚಯಿಸಿ, ತತ್ತ್ವಮಂ—ಜಿನತತ್ತ್ವವಮಂ. ಭಾವಿಸಿ—ಧ್ಯಾನಿಸಿ. ಬಾಹ್ಯ ವಸ್ತುಗಳೊಳ್—ಹೊರಗಣ ಪದಾರ್ಥಗಳಲ್ಲಿ. ಒಂದದೆ—ಸೇರದೆ. ತನ್ನೊಳೆ—ತನ್ನೊಳಗೇ, ನಿಂದು—ನಿಂತು ಎಂದರೆ ಮನವನ್ನು ನಿಲ್ಲಿಸಿ, ಕರ್ಮ ವಿಶ್ರಾವಣೆಯಿಂ—ಕರ್ಮವು ಕಳಚಿ ಹೋಗುವುದರಿಂದ, ವಿಶೋಧಿ—ನಿರ್ಮಲತ್ವವು. ದೊರೆಕೊಂಡಿರೆ—ಲಭ್ಯವಾಗಿರಲು. ಪರೀಷಹಂಗಳಂ—ಶೀತವಾತ ಮುಂತಾದ ಇಪ್ಪತ್ತೆರಡು ಹಿಂಸೆಗಳನ್ನು. ಗೆಲ್ದು—ಗೆದ್ದು, ಜೀವಮಂ—ಪ್ರಾಣವನ್ನು, ಸಂತು—ಸಮಾಧಾನವಾಗಿ. ಇಂತು—ಹೀಗೆ, ಒಡಲಿಂ—ದೇಹದಿಂದ. ಕಳೆಗೆ—ಕಳೆಯಲಿ. ಎಂಬುದು—ಎಂದು ಹೇಳುವುದು, ಜೈನಶಾಸನಂ—ಜೈನ ಧರ್ಮವು.

ಆರೊಳಂ—ಯಾರಲ್ಲೂ, ಎನಗೆ—ನನಗೆ, ಮೋಹಂ—ಪ್ರೀತಿಯು, ಇಲ್ಲ, ಎನ್ಗೆ—ಎನ್ನಲಿ: ಜಿನೇಂದ್ರ ಪದಂಗಳ್—ಅರ್ಹಂತನ ಪಾದಗಳು. ಉಗ್ರಸಂಸಾರ ಹರಂಗಳ್—ಭೀಕರವಾದ ಜನನ ಮರಣಗಳನ್ನು ಪರಿಹರಿಸುವುವು. ಎನ್ಗೆ—ಎನ್ನಲಿ. ಎನಗೆ—ನನಗೆ, ಎನ್ನ—ನನ್ನ. ಅಱಿವಲ್ಲದೆ—ಜ್ಞಾನವಲ್ಲದೆ. ಪೆಱತು ಇಲ್ಲ—ಬೇರೆ ಇಲ್ಲ. ಎನ್ಗೆ—ಎನ್ನಲಿ; ಇಂದು ಅರಯೆ—ನಿಂತು ವಿಚಾರ ಮಾಡಿದರೆ. ಧರ್ಮವೊಂದೆ—ಧರ್ಮವೊಂದೇ. ಶರಣ್—ಶರಣು, ಎನ್ಗೆ—ಹೇಳಲಿ. ಪಲಾಲಮಂ—

ಜೊಳ್ಳನ್ನು ಎಂದರೆ ನಿಸ್ಸಾರವಾದುದನ್ನು. ಒಪ್ಪೆನ್—ಒಪ್ಪೆನು. ಇಂ—ಇದನ್ನು. ಜೀವಿತಾಂತ್ಯದೊಳ್—ಜೀವನದ ಕೊನೆಗಾಲದಲ್ಲಿ. ಎನಲಾರ್ಪೊಡೆ—ಹೇಳಲು ಶಕ್ತಿಯಿದ್ದರೆ, ನಮಸ್ಕಾರಮೆ—ಪಂಚಪರಮೇಷ್ಠಿಗಳ ನಮಸ್ಕಾರವೇ. ಸಾಲ್ಗುಂ—ಸಾಕು. ಎಂಬ—ಎನ್ನುವ, ಇನಿತಂ—ಇಷ್ಟನ್ನು. ಎನ್ಗೆ—ಹೇಳಲಿ.

**ಗಾಹೆ** ॥ ಇಣಂ ಜಿಣವಯಣಂ ಓಸಹಂ—ಈ ಜಿನನ ಉಪದೇಶವು ಔಷಧ ; ವಿಸಯಸುಹ ವಿರೇಯಣಂ—ವಸ್ತುಗಳಿಂದಾಗುವ ಸುಖಗಳಿಗೆ ವಿರೇಚನ ದ್ರವ್ಯವಾಗಿದೆ ; ಅಮಿದ ಭೂತಂ—ಅಮೃತಸ್ವರೂಪವಾಗಿದೆ ; ಸವ್ವಜೀವಾಣಂ—ಎಲ್ಲ ಜೀವಗಳ ; ಜರಮರಣಜಮ್ಮವೇಯಣ—ಮುಪ್ಪು. ಸಾವು, ಹುಟ್ಟು ರೋಗ ಬೇನೆಗಳನ್ನು, ಖಯಕರಣಂ—ಕ್ಷಯಮಾಡುವುದಾಗಿದೆ, ನಾಶಕರವಾಗಿದೆ.

**೧೮೮. ಗಾಹೆ** ॥ ಎಕ್ಕಮ್ಮಿ—ಒಂದೇ ಆದ, ಭವಗ್ಗಹಣೇ—ಜನ್ಮಧಾರಣೆಯಲ್ಲಿ. ಸಮಾಹಿಮರಣಂ—ಸಮಾಧಿಮರಣವೆಂಬ ಮರಣವನ್ನು; ಜೀವೋ—ಜೀವನು, ಆತ್ಮನು ; ಯದಿಲಹಿಜ್ಜ—ಯಾವಾಗ ಪಡೆಯುವನೋ ಆವರ ಅನಂತರದ, ಸತ್ತಟ್ಠ ಭವಗ್ಗಹಣೇ—ಏಳೆಂಟು ಜನ್ಮಧಾರಣೆಗಳಲ್ಲಿ, ಅಣುತ್ತರಂ—ಅತ್ಯಂತ ಶ್ರೇಷ್ಠವಾದ ಣಿವ್ವಾಣಂ—ನಿರ್ವಾಣವನ್ನು. ಮೋಕ್ಷವನ್ನು. ಲಹಇ—ಪಡೆಯುತ್ತಾನೆ.

***ಗಾಹೆ** ॥ ಸತ್ತಕ್ಖರ—ಸಪ್ತಾಕ್ಷರಗಳ ಎಂದರೆ ಣಮೊ ಅರಹಂತಾಣಂ ಎಂಬುದರ. ಸಜ್ಝಾಯಂ—ಪಠಣವನ್ನು, ತಿಭಾವೇಣ—ಕಾಯಾ ವಾಚಾ ಮನಸಾ ಎಂಬ ಮೂರು ಭಾವಗಳಿಂದ. ಅಣ್ಣಮಣೋ—ಅನ್ಯಮತಿಯಾದ. ಜೋ—ಯಾವನು. ಕುಣಇ—ಮಾಡುವನೋ. ಸೋ—ಅವನು. ಸವ್ವಕಲ್ಲಾಣಂ—ಸಮಸ್ತ ಕಲ್ಯಾಣಗಳನ್ನು. ಪಾವಇ—ಪಡೆಯುತ್ತಾನೆ.

**ಗಾಹೆ** ॥ ಸವ್ವ ಪಾವ ಪಣಾಸಣೋ—ಸಮಸ್ತ ಪಾಪಗಳನ್ನು ನಾಶಮಾಡುವ. ಏಸೋ—ಈ. ಪಂಚಣಮೋಕ್ಕಾರೋ—ಪಂಚನಮಸ್ಕಾರಗಳು. ಸವ್ವೇಸು—ಎಲ್ಲ, ಮಂಗಳೇಸು ಯ—ಮಂಗಳಗಳಲ್ಲಿ. ಪಢಮಂ—ಮೊದಲಿನವನಾದ, ಮಂಗಳಂ—ಮಂಗಳವು, ಹವಇ—ಆಗುತ್ತದೆ.

***ಗಾಹೆ** ॥ ಜೋ—ಯಾವನು. ಭಾವಣಮೋಕ್ಕಾರಗದೋ—ಮನಸ್ಸಿನಲ್ಲೇ ಧ್ಯಾನಿಸುವ ಪಂಚನಮಸ್ಕಾರಗಳನ್ನುಳ್ಳವನು, ಣಿಯಮಿಯಮ್ಮಿ—ನಿಯಮಿತವಾದ. ಚಿತ್ತಮ್ಮಿ—ಮನಸ್ಸಿನಲ್ಲಿ. ಝಾಯಂ—ಧ್ಯಾನಿಸುತ್ತ, ಏಅಗ್ಗೇಣ ಏಕಾಗ್ರತೆಯಿಂದ. ವಿಸುದ್ಧೋ—ನಿರ್ಮಲನೋ. ಸೋ—ಅವನು. ಮೊಕ್ಖಸುಹಭಾಈ—ಮೋಕ್ಷಸುಖಭಾಗಿಯಾಗಿ, ಹೋಹಿ—ಆಗುವನು.

**ಆರ್ಯೆ** ॥ ಗುರುಮೂಲೇ—ಗುರುಗಳ ಸಾನ್ನಿಧ್ಯದಲ್ಲಿ, ಯತಿನಿಕಟೇ—ಯತಿಗಳ ಸಮೀಪದಲ್ಲಿ. ಚೈತ್ಯೇ—ಜಿನಾಲಯದಲ್ಲಿ, ಸಿದ್ಧಾಂತವಾರ್ಧಿ ಸದ್ಘೋಷೇ—ಸಿದ್ಧಾಂತವೆಂಬ ಸಮುದ್ರದ ಉತ್ತಮನಾದದಲ್ಲಿ, ಜನ್ಮಜನ್ಮನಿ—ಜನ್ಮದಲ್ಲೂ, ಸಂನ್ಯಸನ ಸಮನ್ವಿತಂ ಮರಣಂ—ಸಂನ್ಯಾಸ ಸಮೇತವಾದ ಮರಣವು, ಮಮ—ನನಗೆ, ಭವತು—ಉಂಟಾಗಲಿ.

೧೧. ಆರಾಧನೆಯಂ—ಆರಾಧನಾ ಶಾಸ್ತ್ರವನ್ನು; ೧೨. ಮುಡಿಪುವಾಗಳ್—ಸಾಯುವಾಗ ; ೧೩. ಭುವನವಾಸಿಗಲೋಕದೊಳ್—ಮನೆಗಳಲ್ಲಿ ವಾಸಮಾಡುವವರಾದ ಅಸುರಾದಿ ಕುಮಾರರ ಲೋಕದಲ್ಲಿ ; ೧೪. ನೂಱು ಪಳಿತೋಪಮಾಯುಷ್ಯಮನೊಡೆಯೊಂ—ನೂರು ಪಳಿತಗಳಿಗೆ ಸಮಾನವಾದ ಆಯುಸ್ಸುಳ್ಳವನು : ೧೯. ಪೊಲ್ಲಗತಿಯೊಳ್—ದುರ್ಗತಿಯಲ್ಲಿ ; ೨೦. ತೊಱೆದಿರಲ್—ವಿರಕ್ತನಾಗಲು ; ಬಾರಿಸಿ—ತಡೆದು : ಬಲ್ಲಾಳ್ತನದಿಂ—ಬಲಾತ್ಕಾರದಿಂದ ; ೧೩. ಕಲ್ಪಿಸಿದಂ—ಕಲಿಸಿದನು.

**ವೃ** ॥ ತೃಷ್ಣಾಂ—ಆಸೆಯನ್ನು. ಛಿಂಧಿ—ಕತ್ತರಿಸು ; ಕ್ಷಮಾಂ—ಕ್ಷಮೆಯನ್ನು. ಭಜ—ಭಜಿಸು ; ಮದಂ—ಗರ್ವವನ್ನು, ಜಹಿ—ಬಿಡು. ಪಾಪೇ—ಪಾಪದಲ್ಲಿ. ರತಿಂ—ಪ್ರೀತಿಯನ್ನು. ಮಾ ಕೃಥಾ—ಮಾಡಬೇಡ. ಸತ್ಯಂ—ನಿಜವನ್ನು, ಬ್ರೂಹಿ—ಹೇಳು. ಸಾಧುಪದವೀಂ—ಸಾಧುಗಳ ಪದವಿಯನ್ನು. ಅನುಯಾಹಿ—ಅನುಸರಿಸಿ ಹೋಗು ; ವಿದ್ವಜ್ಜನಂ—ವಿದ್ವಾಂಸರನ್ನು, ಸೇವಸ್ವ—ಸೇವೆಮಾಡು. ಮಾನ್ಯಾನ್—ಮಾನ್ಯರಾದವರನ್ನು. ಮಾನಯ—ಗೌರವಿಸು ; ವಿದ್ವಿಷೋಽಪಿ—ಶತ್ರು

ಗಳನ್ನು ಕೂಡ. ಅನುನಯಂ—ಆದರಿಸು ; ಪ್ರಶ್ರಯಂ—ಆಶ್ರಯವನ್ನು. ಪ್ರಖ್ಯಾಪಯ—ಪ್ರಸಿದ್ಧ ಪಡಿಸು : ಕೀರ್ತಿಂ—ಕೀರ್ತಿಯನ್ನು. ಪಾಲಯ—ಪಾಲಿಸು. ದುಃಖಿತೇ—ದುಃಖಿತನಾದವನಲ್ಲಿ. ದಯಾಂ—ದಯೆಯನ್ನು. ಕುರು—ಮಾಡು : ಏತತ್—ಇದು, ಸತಾಂ—ಸತ್ಪುರುಷರ, ಚೇಷ್ಟಿತಂ —ಆಚರಣೆಗಳು.

**೧೮೯.** ೬. ಬಂದಿಸಲ್ವೇಡಿ—ವಂದಿಸಲು ಬಯಸಿ ; ೧೦. ಕೊಜಿದಿಕ್ಕಿ—ಕತ್ತರಿಸಿ ಹಾಕಿ ೨೨. ಮೊದಲೊಳ್—ಅಡಿಯಲ್ಲಿ ; ಪುದುಕುನೀರಬ್ದುತ್ತಂ—ಕುದಿನೀರಿನಲ್ಲಿ ಅದ್ದುತ್ತ ; ೨೧. ಪುತ್ರಾರ್ಥಿಯಪ್ಪ—ಮಗನು ಬೇಕೆಂದು ಬೇಡುವ ; ೨೨. ಆದೇಶದಿಂ—ಭವಿಷ್ಯವಾಣಿಯಿಂದ ; ೨೪. ಚತುಷ್ಷಷ್ಟಿ—ಅರುವತ್ತುನಾಲ್ಕು ; ದ್ವಾಸಪ್ತತಿ—ಎಪ್ಪತ್ತೆರಡು ; ೨೫. ನಿರವಶೇಷಂ—ಏನೂ ಉಳಿಯದಂತೆ ಎಂದರೆ ಪೂರ್ಣವಾಗಿ.

**೧೯೦.** ೧. ಗಾಡಿಯುಂ—ಸೌಂದರ್ಯವೂ ; ೩. ಎಂತಪ್ಪೊಡಂ—ಹೇಗಾದರೂ ; ೪. ಪೊಣ್ಚಿ ಯಿಸಿ—ಎದುರಿಸಿ, ಪ್ರತಿಭಟಿಸಿ, (ತಮಿಳು) ಮುಟ್ಟು—ಎದುರಿಸು ; ೫. ಮಂಡಲಂಗಳುಂ— ನಾಡುಗಳನ್ನೂ ; ೮. ಪುಲಿಯುಪದ್ರವಮಂ—ಹುಲಿಯ ಕಾಟವನ್ನು. ನಾಡವರ್—ನಾಡಿನ ಪ್ರಜೆ ಗಳು ; ಪಂದು—ಬಂದು ; ೯. ಬಳಸಿಯುಮಿರ್ದ—ಸುತ್ತಲೂ ಇದ್ದ ; ೧೧. ಅಣ್ಮರ್—ಪ್ರಯತ್ನ ಪಡರು ; ೧೫. ಎನಿತೆನಿತಂ—ಎಷ್ಟೆಷ್ಟನ್ನು ; ೧೬. ಅನಿತನಿತು—ಅಷ್ಟಷ್ಟು ; ೧೭. ಕಿಚ್ಚಂ ತಗುಳ್ಚಿ —ಉರಿಯನ್ನು ಹೊತ್ತಿಸಿ : ೧೦. ಕರ್ಮ ನಿರ್ಜರೆಯಿಂ—ಕರ್ಮಗಳು ನಾಶವಾಗುವುದರಿಂದ ; ೨೦. ಸಾರೆ—ಹತ್ತಿರ.

**೧೯೧.** ೧. ಎನಿತಾನುಂ ಸೂಲ್—ಎಷ್ಟೋ ಸಲ. ಎಷ್ಟೋ ಬಾರಿ. ೨. ಬೇಡಿಯಟ್ಟಿದೊಡೆ —ಬಯಸಿ ದೂತನ ಮೂಲಕ ಹೇಳಿ ಕಳುಹಿಸಿದರೆ ; ೬. ಓರೊರ್ವರ್—ಒಬ್ಬೊಬ್ಬರು : ೭. ಮಾಡಲ್ ತಗುಳ್ದು—ಮಾಡಲಾರಂಭಿಸಿ ; ೧೧. ಸಮೆಯಿಸಿ—ಪೂರ್ತಿಯಾಗಿ ಮಾಡಿ ; ೧೬. ಆರಯ್ದು—ಹುಡುಕಿ, ವಿಚಾರಿಸಿ ; ೧೯. ಅಟ್ಟುಗೆ—ಕಳುಹಿಸಿಕೊಡಲಿ : ೨೪. ಈ ಬಲಂಗಳಿಂ—ಈ ಸೈನ್ಯಗಳಿಂದ ; ಕಜ್ಜಮೇನ್—ಕಾರ್ಯವೇನು : ೨೫. ಪಟ್ಟವರ್ಧನಮುಮಂ—ಪಟ್ಟದಾನೆಯನ್ನೂ ; ೨೬. ತಲೆವೆರಸುಕೊಳ್ವೆ—ತಲೆಸಮೇತನಾಗಿ ತೆಗೆದುಕೊಳ್ಳುತ್ತೇನೆ.

**೧೯೨.** ೧. ಪೆರ್ಗಡೆಗಳೊಳ್—ಹೆಗ್ಗಡೆಗಳಲ್ಲಿ. ನಿಮ್ಮ ಬೞಿಯನೆ—ನಿಮ್ಮ ಹಿಂದೆಯೇ : ೩. ಕತಿಪಯ—ಕೆಲವು : ೪. ಮೂವಳಸು ವಳಸಿ—ದೂರು ಸುತ್ತು ಸುತ್ತಿ : ೫. ಸಾಧನಂ ಬೆರಸು —ಸೈನ್ಯಸಮೇತನಾಗಿ : ಒಡ್ಡಣಮಂ—ಸೈನ್ಯವನ್ನು ; ೬. ಒಡ್ಡೆ—ಎದುರಿಗೆ ನಿಲ್ಲಿಸಲು ; ಅಣಿ— ಪದಾತಿಸೈನ್ಯ ; ೧೦. ಖಂಡಿಸೆಪಟ್ಟುದಾಗಿ—ಕತ್ತರಿಸಲ್ಪಟ್ಟದ್ದಾಗಿ : ಪದ್ದು—ಹದ್ದು : ೧೨. ಚವುಕಿಗೆ—ಅಂಗಳ : (ಸಂ) ಚತುಷ್ಕಿಕಾ : ೧೩. ನಡಪಾಡುತ್ತಿರ್ದಳ—ಅತ್ತ, ಇತ್ತ ನಡೆಯುತ್ತಿದ್ದ ಳ ; ಇಂದ್ರನೀಲ—ನೀಲರತ್ನ ; ಕಂಕಣಂಗಳುಮಂ—ಬಳೆಗಳನ್ನೂ ; ೧೮. ತಳಮುಮಂ—ಅಂಗೈ ಯನ್ನೂ ; ಈ ತಳಮನೊಡೆಯಾತಂ—ಈ (ಇಂಥ) ಅಂಗೈಯನ್ನುಳ್ಳವನು : ೨೧. ಅವಯವಗಳ ನೊಡೆಯ—ಅಂಗಗಳನ್ನುಳ್ಳ : ಸತ್ತಪರ್—ಸಾಯುತ್ತಾರೆ : ೨೪. ದೀಪ್ತಿ—ಪ್ರಕಾಶ : ಧೃತಿ— ಧೈರ್ಯ.

**೧೯೩.** ೧. ಆದಮಾನುಂ—ವಿಶೇಷವಾಗಿ, ಅತಿಶಯವಾಗಿ : ಪ್ರಚಂಡ—ತೀಕ್ಷ್ಣವಾದ. ದೋರ್ದಂಡನುಂ—ಭುಜಾದಂಡಗಳುಳ್ಳವನೂ ; ಬಲಗರ್ವಿತನುಂ—ತನ್ನ ಶಕ್ತಿ ಅಥವಾ ಸೈನ್ಯ ಕಾರಣವಾಗಿ ಗರ್ವಿಷ್ಠನಾಗಿರುವವನು ; ೨. ಒಟ್ಟಯಿಸಿ—ಒಂದುಮಾಡಿ, (ತನ್ನ ರಾಜ್ಯಕ್ಕೆ) ಸೇರಿಸಿ ಕೊಂಡು : ಆಳ್ದಪ್ಪೊನ್—ಆಳುತ್ತಾನೆ : ೩. ಪಾಗುಡಂಗಳಂ—ಉಡುಗೊರೆ ಕಾಣಿಕೆಗಳನ್ನು : ೪. ನಿಮ್ಮಮ್ಮಂ—ನಿಮ್ಮ ತಂದೆ : ೫. ಚಾತುರ್ದಂತ ಬಲಂ ಬೆರಸು—ಚತುರಂಗಸೈನ್ಯಸಮೇತನಾಗಿ : ೧೧. ನುಡಿಯಿಂ—ಹೇಳಿರಿ : ೧೩. ಪೊಱೆಯಿಲ್ಲದವರ್—ಬಂಧುಗಳಿಲ್ಲದವರು : ೧೬. ಕೂಸಂ ಕೊಟ್ಟೆಂ—ಮಗಳನ್ನು ಕೊಟ್ಟೆನು ; ೧೭. ಬಾರಿಸಿದಂ—ತಡೆದನು : ೧೮. ಉಪಸಂಹರಿಸಿ—ನಿಲ್ಲಿಸಿ, ಮುಗಿಸಿ ; ೨೩. ಪಾೞ್ಗೆ—ನಾಡಿಗೆ : ೨೪. ಸೂೞೆಯರ್ಕಳುಮಂ—ದಾಸಿಯರನ್ನು.

ಪ್ರಹಾರಗಳನ್ನೂ. ಸಹಂತಿ—ಸೈರಿಸುತ್ತಾರೆ. ಮಹಾರಿಸೀ—ಮಹಾಋಷಿಗಳು, ಣಯಕುಪ್ಪಂತಿ—ಕೋಪ ಮಾಡಿಕೊಳ್ಳುವುದಿಲ್ಲ; ಸಮಣಾ (ಸಾಹೂ)—ಸಾಧುಗಳು; ಖಿಮಾಣಗುಣ ವಿಜಾಣಕಾ—ಕ್ಷಮಾಗುಣವನ್ನು ಬಲ್ಲವರಾಗಿದ್ದಾರೆ; ಸಾಧುಗಳು ಸರ್ವಪ್ರಕಾರಗಳಿಂದಲೂ ಸಹನಶೀಲರಾಗಿದ್ದು ಎಂದಿಗೂ ಕೋಪವಶರಾಗರು ಎಂದು ತಾತ್ಪರ್ಯ.

**ಗಾಹೆ ॥** ಇದರ ಪಾಠದಲ್ಲಿ ಕ್ಲೇಶಗಳಿರುವುದರಿಂದ ಅರ್ಥ ಸರಿಯಾಗಿ ಆಗುವುದಿಲ್ಲ.

**೧೯೮. ಗಾಹೆ ॥** ಜೀವಿದ ಮರಣೇ—ಬದುಕಿನಲ್ಲೂ ಸಾವಿನಲ್ಲೂ, ಲಾಭಾಲಾಭೇ—ಇಷ್ಟದ ಪ್ರಾಪ್ತಿಯಲ್ಲೂ ಇಷ್ಟದ ಅಪ್ರಾಪ್ತಿಯಲ್ಲೂ, ಸಂಜೋಗ ವಿಪ್ಪಜೋಗೇ ಜ—ಇಷ್ಟಸಂಯೋಗದಲ್ಲೂ ಇಷ್ಟವಿಯೋಗದಲ್ಲೂ, ಬಂಧ್ವರಿ ಸುಖದುಃಖಾದಿಸು—ಸ್ವಜನರು ಮಿತ್ರರು ಶತ್ರುಗಳು ಇವರಿಗೆ ಸಂಬಂಧಿಸಿದ ಸುಖದುಃಖಾದಿಗಳಲ್ಲೂ, ಹಸಿವು ನೀರಡಿಕೆ ಶೀತೋಷ್ಣಾದಿಗಳಲ್ಲೂ, ಸಮದಾ—ಸಮತೆಯು ಎಂದರೆ ಚಿತ್ತಸಮಾಧಾನದಿಂದಿರುವುದು. ಸಾಮಾಯಿಗಂ ಣಾಮ—ಸಾಮಾಯಿಕ ಎಂಬ ಹೆಸರುಳ್ಳದ್ದು.

**ಗಾಹೆ ॥** ಪುಟ ೯೨ ನೋಡಿ.

೫. ಬೆಂಟೆಯುಂ—ಹುಲ್ಲಿನ ಹಗ್ಗವನ್ನು; ೬. ನಖಾಗ್ರದಿಂ—ಕಾಲುಗುರ ತುದಿಯಿಂದ, ನೆತ್ತಿವರೆಗಂ—ನೆತ್ತಿಯವರೆಗೂ; ೭. ಕಿಚ್ಚಂ ತಗುಳ್ಚಿ—ಉರಿಯನ್ನು ಅಂಟಿಸಿ, ಹೊತ್ತಿಸಿ; ೮. ಏಕಜ್ವಾಲೆಯಾಗಿ—ಒಂದೇ ಉರಿಯಾಗಿ; ೧೨. ಚರಮಪಾಳಿ—ಕೊನೆಯ ಕರ್ಮಬಂಧ: ೧೪. ಕ್ಷೀಣಕಷಾಯನಾಗಿ—ನಾಶವಾದ ರಾಗದ್ವೇಷವುಳ್ಳವನಾಗಿ; ೧೭. ಅವಱೊಡನೆ—ಅವುಗಳೊಡನೆ ಎಂದರೆ ನಾಲ್ಕು ಕರ್ಮಗಳೊಡನೆ; ಅಘಾತಿಕರ್ಮಗಳೊಡನೆ; ೨೨. ಒಡೆಯರಾದರ್—ಉಳ್ಳವರಾದರು; ೨೭. ಧನದಂ—ಕುಬೇರ.

**೧೯೯.** ೪. ಪಲ್ಯಂಕದೊಳ್—ಪದ್ಮಾಸನದಲ್ಲಿ.

***ಗಾಹೆ ॥** ಇದರ ಪಾಠದಲ್ಲಿ ಕ್ಲೇಶಗಳಿರುವುದರಿಂದ ಸರಿಯಾಗಿ ಅರ್ಥವಾಗುವುದಿಲ್ಲ. ಸವ್ವೇಹಿ—ಸಕಲವೂ ಆದ, ಭವಣವಾಸೀ—ಭವನವಾಸಿಗಳೆಂಬ ದೇವತೆಗಳು, ವ್ಯಂತರ—ವ್ಯಂತರರು, ದೇವಾಯು—ದೇವತೆಗಳು, ಪಳಹ ಪಳುತಸಿಯಾ (?). ಪ್ರಂಟಿಹ ಕಪ್ಪವಾಸೀ—ಕಲ್ಪವಾಸಿಗಳೂ, ಸಿಹಿಣಣಾ ಎಣ—ಜೋಹ ಇಸಿಯಾ—ಜ್ಯೋತಿಷ್ಕರು.

ತಾತ್ಪರ್ಯ: ಎಲ್ಲ ಭವನವಾಸಿ ಮತ್ತು ವ್ಯಂತರದೇವತೆಗಳು ಪಟಹಗಳ ಶಬ್ದದಿಂದ ಹೆದರಿದ್ದಾರೆ; ಕಲ್ಪವಾಸಿಗಳು ಗಂಟೆಗಳ ಶಬ್ದದಿಂದಲೂ ಜ್ಯೋತಿಷ್ಕದೇವತೆಗಳು ನವಿಲುಗಳ ಕೇಕೆಗಳಿಂದಲೂ ಹೆದರಿದ್ದಾರೆ.

೧೧. ಸಮವಸರಣ ಕೋಷ್ಠಂಗಳೊಳ್—ಸಮವಸರಣ ಎಂದರೆ ಜಿನನು ಉಪದೇಶ ಮಾಡುವ ಸಭಾಭವನದ ಪ್ರದೇಶಗಳಲ್ಲಿ; ೧೩. ಪೊಲ್ಲಕೆಯ್ದೆಂ—ಕೇಡನ್ನು ಮಾಡಿದೆನು; ೧೯. ಭವ್ಯವರಪುಂಡರೀಕರ್ಕಳ್ಗೆ—ಭವ್ಯರೆಂಬ ಶ್ರೇಷ್ಠವಾದ ತಾವರೆಗಳಿಗೆ; ೨೫. ಒರ್ಮೊದಲೆ—ಏಕಕಾಲದಲ್ಲಿ.

**೨೦೦. ಗಾಹೆ ॥** ತೇ—ಮುಕ್ತರಾದವರು; ಅಜರಂ—ಮುಪ್ಪಿಲ್ಲದವರು; ಅರುಜಂ—ರೋಗವಿಲ್ಲದವರು; ಅಮರಂ—ಸಾವಿಲ್ಲದವರು; ಅಸರೀರಂ—ಔದಾರಿಕಾದಿ ಪಂಚಶರೀರವಿಲ್ಲದವರು; ಅಕ್ಷಯಂ—ಕ್ಷಯವಿಲ್ಲದವರು, ಅಣುವಮಂ—ಅಸದೃಶವಾದ, ಸೋಕ್ಖಂ—ಸುಖವುಳ್ಳವರು; ಅವ್ವಾಬಾಧಂ—ಯಾವ ತಡೆಯೂ ಇಲ್ಲದ, ಅಣಂತ ಅಣಾಗತಂ ಕಾಲಂ—ಅನಂತವಾದ ಭವಿಷ್ಯತ್ತಿನವರೆಗೂ. ಅಚ್ಛಂತಿ—ಮುಳುಗಿರುವವರು; ೪. ಊರನೆಯ್ದದೆ—ಊರಿಗೆ ಹೋಗದೆ; ಕುಮ್ಮರಿಯುಂ—ತಾತ್ಕಾಲಿಕ ಬೇಸಾಯಕ್ಕಾಗಿ ಕಾಡನ್ನು ಕಡಿದು ನೆಲ ಬಿಡಿಸಿ ಆಮೇಲೆ ಸುಡುವುದು; ಒಟ್ಟಿದ ಮರಂಗಳ—ರಾಶಿ ಹಾಕಿದ ಮರಗಳ: ೯. ಪೋಡುಂಗಾಱು—ಕಾಡನ್ನು ಕತ್ತರಿಸುವವನು, "ಒಂದೆ ಕುಠಾರದಿಂಪಡಪಿಯುಂ ಕಡಿವಂತಿರೆ ಪೋಡುಗಾಱುಂ" (ಪಂಪರಾ. ೪-೪೦), "ಮನುಜೇಂದ್ರನ ಸೇನೆಯು ವಿಘಡನಾಜಿಯೊಳ್ ಪೋಡುಗಾಱನಂತಿರೆ ತಱಿದಂ" (ಅದೇ: ೫೩-೫೦೪) ಎಂದು ನಾಗಚಂದ್ರನ ಪ್ರಯೋಗಗಳಿವೆ; ತೂಂಕದಿಂದೆ—ನಿದ್ದೆಯಿಂದ. ೧೦. ಕಟ್ಟಿದಿಂಗಳ್—ಕರ್ದಿಂಗಳ್—ಕಪ್ಪುಚಂದ್ರ, ಅಮಾವಾಸ್ಯೆಯ; ಕಡುಗತ್ತಲೆಯೊಳ್—ತೀವ್ರವಾದ ಕತ್ತಲೆ

ಯಲ್ಲಿ : ೧೬. ಸಿಂಹಗರುಷನೆ—ಸಿಂಹನಗರ್ಜನೆಗಳನ್ನು : ೧೯. ಎಚ್ಚೆಟ್ಟಿ—ಎಬ್ಬಿಸಿ. ಓಡಿಸಿ : ೨೫. ನೋಂಪಿಗಳಂ—ವ್ರತಗಳನ್ನು : ಪಾರಿಸುವ—ಪಾರಣೆಮಾಡುವ ; ಪ್ರಾಸುಕವಾಗುತ್ತಿರ್ದ—ಜೀವರಹಿತವಾಗಿದ್ದ, ನಿರ್ಮಲವಾದ ; ೫೭. ಕಾಟ್ಕಿಚ್ಚು ತಗುಳ್ದೊಡೆ—ಕಾಡಿನ ಕಿಚ್ಚು ಅಟ್ಟಿ ಬಂದರೆ.

**೨೦೧.** ೮. ಬಟ್ಟಿಬಂದು—ಕೆಳಕ್ಕೆ ಜಾರಿ ಬಂದು. "ಬಟೆಲ್ಲು—ಅಧಃಸ್ರಂಸನೇ" ; ೧೦. ಒಡೆಯನಪ್ಪಂ—ಒಡೆಯನಾಗಿದ್ದಾನೆ ; ೧೮. ಅರಿದೆಂದು—ಅಸಾಧ್ಯವೆಂದು ; ೧೯. ಪಾಂಗೆಲ್ಲಮಂ—ರೀತಿಯನ್ನೆಲ್ಲವನ್ನೂ ; ೨೬. ಪೇರಡವಿಗೆ—ದೊಡ್ಡ ಕಾಡಿಗೆ.

**೨೦೨.** ೧. ಅಟಿಸಿ—ಬಯಸಿ. ಪ್ರೀತಿಸಿ ; ೨. ಅವಲೋಕಿನೀ ವಿದ್ಯೆ—ದೂರದಲ್ಲಿ ನಡೆಯುವ ವಿದ್ಯಮಾನಗಳನ್ನು ತಿಳಿಸುವ ವಿದ್ಯೆ ; ೫. ಕೊಱೆದಿಕ್ಕಿ—ಕತ್ತರಿಸಿ ಹಾಕಿ ; ೭. ಅಗ್ಗಳದ ಸೂಳೆ—ಶ್ರೇಷ್ಠಳಾದ ದಾಸಿ ; ಕೞ್ತಿಂಗಳೊಳ್—ಅಮಾವಾಸ್ಯೆಯಲ್ಲಿ ; ೧೩. ಮಣಿಪೀಟಮಂ—ರತ್ನಖಚಿತವಾದ ಗುರಾಣಿಯನ್ನು : ಸಾರ್ಚಿ—ಸೇರಿಸಿ ; ಕಿತ್ತಿಬಾಳ್ವೆರಸು—ಬರೆಯಿಂದ ಕಿತ್ತ ಕತ್ತಿಯೊಡನೆ : ೧೫. ನೀನಾರ್ಗೆ—ನೀನು ಯಾರು ? ; ೨೩. ಪ್ರಸ್ತಾರಿಸಿ—ಪ್ರಸ್ತಾರ ಹಾಕಿ ; ತಿದ್ದಿ—ಸರಿಮಾಡಿ. ತಿದ್ದಿ.

**೨೦೩.** ೨. ಬೆಸಕೆಯ್ವಂ—ಸೇವೆಮಾಡುತ್ತೇನೆ ; ೯. ಸೋಂಕಿಲಂ—ಮಡಿಲನ್ನು : ಉಡಿಯನ್ನು ; ೧೯. ನಿನಗೆ ಬಾಟ್ಟಿಯಾದಂದು—ನಿನಗೆ ಬೇಕಾದಾಗ, ಕಾರ್ಯ ಒದಗಿದಾಗ ; ೨೦. ಆ ದೆಸೆಯತ್ತ—ಆ ದಿಕ್ಕಿನ ಕಡೆಗೆ ; ೨೬. ತಮ್ಮಿರ್ಪ್ಪೋವರಿಯೊಳಿರ್ದು—ತಾವು ಇರಬೇಕಾದ ಕೊಠಡಿಯಲ್ಲಿದ್ದು ; ೨೯. ಈ ಭವದಿಂ ತೊಟ್ಟು—ಈ ಜನ್ಮದಿಂದ ಹಿಡಿದು.

**೨೦೪.** ೧. ಪೊೞ್ತಿಡೆ—ಹೊತ್ತಾರೆ ; ೧೪. ಏಕಸ್ಥಿರಯೋಗಂಗೊಂಡು—ಏಕಾಕಿಯಾಗಿ ಚಲಿಸದೆ ನಿಂತು ತಪಸ್ಸು ಮಾಡುವುದನ್ನು ಸ್ವೀಕರಿಸಿ ; ಕಲ್ನೆಲೆ ನಿಂದರ್—ಕಲ್ಲು ನಿಲ್ಲುವ ಹಾಗೆ ನಿಂತರು ; ೧೭. ಕರುಮಾಡದ—ಉಪ್ಪರಿಗೆಯ, ಸುಣ್ಣಬಣ್ಣ ಮಾಡಿದ ಮನೆಯ ; ೨೦. ಕೌಟಿಲ್ಯಭಾವದಿಂ—ಕುಟಿಲವಾದ ಮನಸ್ಸಿನಿಂದ ; ೨೧. ಮಹಾವಾತಂ—ದೊಡ್ಡ ವಾತರೋಗ : ತಗುಳ್ದುದು—ಅಂಟಿಕೊಂಡಿತು ; ೨೨. ಮದ್ದೇನ್—ಮದ್ದು ಏನು ; ೨೪. ಚರಿಗೆವೋದರ್—ಭಿಕ್ಷಕ್ಕೆ ಹೋದರು ; ೨೭. ಮಗುೞ್ದು ಬರ್ಪೋರ್—ಹಿಂದಿರುಗಿ ಬರುವರು.

**೨೦೫.** ೧. ಪರಿಚ್ಛೇದಿಸಿ—ನಿಶ್ಚಯಿಸಿ ; ೫. ಕಿಚ್ಚಿನುಪಸರ್ಗಮಂ—ಬೆಂಕಿಯ ಉಪದ್ರವವನ್ನು ; ೯. ಚತುರ್ವಿಧದೇವನಿಕಾಯಂ—ನಾಲ್ಕು ಬಗೆಯಾದ ದೇವತೆಗಳ ಸಮೂಹ : ಭವನವಾಸಿ, ವ್ಯಂತರ, ಜ್ಯೋತಿಷ್ಕ, ವೈಮಾನಿಕ ಎಂಬವರು ; ೧೦. ಜಱಿದು ನುಡಿದೊಡೆ—ಗದರಿಸಿ, ಬಯ್ದು ಹೇಳಿದರೆ : ೧೧. ಒರ್ಮೆಗೆ—ಒಂದು ಸಲಕ್ಕೆ : ೧೫. ನೆಗೞ್ದಂ—ಮಾಡಿದನು. ಆಚರಿಸಿದನು. ೨೧. ಪ್ರತಿಬದ್ಧಂಗಳ್—ಅನುಬಂಧಗಳು.

## ೧೫. ಚಿಲಾತಪುತ್ರನ ಕಥೆ

**೨೦೬.** ೨. ಚಿಲಾತ < (ಸಂ) ಕಿರಾತ ; ಚಿಲಾತಮಿತ್ರ ಎಂದು ಕಥಾಕೋಶದಲ್ಲಿದೆ ; ೫. ಅರಿಯದಪ್ಪ ಪಱಗಳಿಂದಂ—ಅಸಾಧ್ಯವಾದ ಗಾಯಗಳಿಂದ : ೭. ಉರ್ಕಿಪಟ್ಟೊನಾಗಿ—ಛೇದಿಸಲ್ಪಟ್ಟವನಾಗಿ ; ಕಟ್ಟುಱುಂಪೆಗಳಿಂದಂ—ಕಟ್ಟಿರುವೆಗಳಿಂದ ; ೭. ಜನಲಿಯಪ್ಪೊಲ್—ಜರಡಿಯಂತೆ : ೯. ಪೊರ್ದಿದೊಂ—ಹೊಂದಿದನು : ೧೬. ಮುಷ್ಪಾಟ್ಸ್ವಮಂ—ತುಂಟತನವನ್ನು [illegible] : ೧೭. ಪಂದಿರು ಬಱಿಯಂ—[illegible] ದಾರಿಯನ್ನು ; ತಗುಳ್ದೊಡೆ—ಬೆನ್ನಟ್ಟಿ ಹೋದರೆ ; ಗಾಳಿಗೊಂಡು—ಗಾಳಿಯ ಮೂಲಕ ವಾಸನೆಯನ್ನು ತಿಳಿದು : ೧೮. ಸಾರೆ—ಹತ್ತಿರ ; ೧೯. ಪಲ್ಲಣಮಂ—ಜೀನನ್ನೂ (ತ) ಪಲ್ಯಾಣ : ಪಲ್ಯಾಣ, ಪಲ್ಯಯನ ; ೨೧. ಚದುರಸಿಗೆಯುಮಂ—ನಾಲ್ಕು ಮೂಲೆಗಳುಳ್ಳ ವಸ್ತುವನ್ನು, ಜೀನಿನ ಮೇಲೆ ಹಾಕುವ ಚತುಷ್ಕೋಣಗಳ [illegible], (ಸಂ) ಚತುರಶ್ರಕ "ಮುಂದಣ [illegible] ಹಣೆಪಟ್ಟಿಯ ಚದುರಸಿಗೆಯನು ಹಾಕಿ(ಸಿ)ದ" ಎಂಬ ಪ್ರಯೋಗ :

ಕೀಬುವಂ—ಕಬಿವಾಣವನ್ನು ; ಕಳೆದು—ತೆಗೆದುಹಾಕಿ ; ನೀರೂಡಿ—ನೀರು ಕುಡಿಸಿ ; ೨೨. ಚಮರಸಿಗೆಯುಂ ಪಾಸಿ—ಚೌಕವನ್ನು ಹಾಸಿ ; ಪಟ್ಟಿರ್ದಂ—ಮಲಗಿದ್ದನು.

**೨೦೭.** ಅರಸುಕುಲಂ—ಕ್ಷತ್ರಿಯವಂಶ ; ಉಚ್ಚಾಟಿಸಿ ಕಳೆಯಲ್ಪಟ್ಟೊನಾಗಿ—ಬಹಿಷ್ಕೃತ ಕಿತ್ತು ಅಟ್ಟಲ್ಪಟ್ಟವನಾಗಿ ; ೪, ಕಾಪಿನವರುಂ—ರಕ್ಷಕರೂ ; ೬. ಅಟಿಸಿ—ಪ್ರೀತಿಸಿ ; ಬಸವಾಟಿದು—ವಶತಪ್ಪಿ, ಪರವಶನಾಗಿ ; ನೀಡುಮೊಲ್ದು—ಬಹಳ ಒಲಿದು ; ೮. ನೊಜೆಯಲ್ಲರ್—ಬಂಧುಗಳಲ್ಲ ; ೯. ಪೆಱಗಣಿಂದಂ—ಹಿಂದುಗಡೆಯಿಂದ ; ೧೦. ತೇನತೇನದಿಂ—ಮೇಲೆಮೇಲಿಂದ ; ೧೧. ತಂತ್ರಮೆಲ್ಲಂ—ಸೈನ್ಯವೆಲ್ಲ ; ಪಱೆಯು—ಹರೆಯು. ತಂಬಟೆಯು ; ೧೩. ಓಡಲೀಯದೆ—ಓಡುವುದಕ್ಕೆ ಬಿಡದೆ ; ೧೪. ಸಂತವಿಸಿದೊಡೆ—ಸಮಾಧಾನಪಡಿಸಿದರೆ ; ೧೫. ತೊವಲ್ಗಳುಮಂ—ಚರ್ಮಗಳನ್ನೂ ; ೧೮. ಬಿದಿರ್ಮಾಡಿ—ಚಿತ್ರಣಮಾಡಿ ; (ತಮಿಳು) ವಿರುಂದು ; ೨೨. ಸಾರ್ಥಾಧಿಪತಿ—ಸರಕುಗಳನ್ನು ತುಂಬಿದ ಬಂಡಿಗಳಿಗೆ ಯಜಮಾನನಾದ ವರ್ತಕ ; ೨೩. ಪರದಿಂಗೆ—ವ್ಯಾಪಾರಕ್ಕೆ, ಬಿಟ್ಟಿರ್ದಂ—ತಂಗಿದ್ದನು ; ೨೪. ಏಕವಿಹಾರಿಗಳ್—ಒಂಟಿಯಾಗಿ ಸಂಚರಿಸುವ ಜೈನಯತಿ ; ೨೬. ಪಂಥಾತಿಚಾರನಿಯಮಂಗೆಯ್ದು—ದಾರಿಯಲ್ಲಿ ನಡೆಯುವಾಗ ಉಂಟಾಗುವ ಪ್ರಾಣಿಹಿಂಸೆ ಮುಂತಾದ ಅತಿಚಾರಗಳಿಗೆ ಪ್ರಾಯಶ್ಚಿತ್ತವನ್ನು ಮಾಡಿ.

**೨೦೮.** ೧. ಚರಿಗೆವೋಗಿ—ಭಿಕ್ಷಕ್ಕಾಗಿ ಹೋಗಿ ; ಆರುಂ ನಿಱಿಸದಿರ್ದೊಡೆ—ಯಾರೂ ನಿಲ್ಲಿಸದಿದ್ದರೆ ; ೩. ಪ್ರಾಸುಕಮಪ್ಪ—ಜೀವಜಂತುರಹಿತವಾದ ; ೪. ಬರ್ದು—ಬಾಳಿ ; ೬. ಪಳಿತೋಪಮ—ಒಂದು ಪಳಿತಕ್ಕೆ ಸಮಾನವಾದ, ಪಳಿತ ಎಂಬುದು ಒಂದು ದೊಡ್ಡ ಸಂಖ್ಯೆ

**ವೃ** ॥ ಮದ್ಯಾಂಗ—ಮದ್ಯವನ್ನು ಕೊಡುವ ಕಲ್ಪವೃಕ್ಷ, ತೂರ್ಯಾಂಗ—ವಾದ್ಯಗಳನ್ನು ಕೊಡುವ ಕಲ್ಪವೃಕ್ಷ, ವಿಭೂಷಣಾಂಗಾಃ—ಆಭರಣವನ್ನು ಕೊಡುವ, ಜ್ಯೋತಿರ್ಗೃಹಭೋಜನಭಾಜನಾಂಗಾಃ—ದೀಪವನ್ನು, ಮನೆಯನ್ನು, ಭೋಜನವನ್ನು, ಪಾತ್ರೆಗಳನ್ನು ಕೊಡುವ, ಪ್ರದೀಪ—ಪ್ರಕಾಶಮಾನವಾದ, ವಸ್ತ್ರಾಂಗವರಸ್ರಜಾಂಗಾಃ—ವಸ್ತ್ರವನ್ನೂ ಹೂವಿನ ಹಾರವನ್ನೂ ಕೊಡುವ, ದಶಪ್ರಕಾರಾಃ—ಹತ್ತು ತೆರನಾದ, ತರವಃ—ಮರಗಳೂ, ತತ್ರ—ಆ ಭೋಗಭೂಮಿಯಲ್ಲಿ. ಆಸನ್—ಇರುತ್ತವೆ ; ೨೧. ಬಟ್ಜಿ—ಕೆಳಕ್ಕೆ ಜಾರಿ ; ೨೨. ತುಯ್ಯಲಂ—ಪಾಯಸವನ್ನು, "ಕಾಟ್ಟಿಕ್ಕಿಗೂಡುವವೊಲ್ ತುಯ್ಯಲಂ" ಎಂದು ಜನ್ನನ ಪ್ರಯೋಗವಿದೆ.

**೨೦೯.** ೨. ಜಯನಶಾಲೆಯುಮಂ—ಆಯುಧಾಗಾರವನ್ನು, "ಮನಸಿಜ ಭೂಮಿಭೃಜ್ಜಯನಶಾಲೆಯ ಲೀಲೆಯನೊಪ್ಪಿ ತೋಱುಗುಂ" ಎಂದು ದುರ್ಗಸಿಂಹನ ಪ್ರಯೋಗ (ಪಂಚತಂ. ಪ್ರ. ೧೪–೧೬), ಜೇನಶಾಲೆ ಎಂಬ ರೂಪವೂ ಉಂಟು ; ೫. ಎಮ್ಮ ಬಾಟುತ್ತಿರೆ—ನಾವು ಬದುಕಿರಲು ; ಎಮ್ಮರಸಿಂಗಾಟಿಸಿದಯ್—ನಮ್ಮ ದೊರೆತನಕ್ಕೆ ಬಯಸಿದೆ ; ೧೨. ಉಱದೆ—ಹೊಂದಿಕೊಳ್ಳದೆ. ಲಕ್ಷ್ಯಮಾಡದೆ ; ೧೬. ಸೆಱೆಯುಂ ಬರ್ದುಂಕಿಸಿ—ಬಂದಿಯನ್ನು ಬಿಡುಗಡೆ ಮಾಡಿ ; ೧೯. ಘೋಷಣೆಯಿಂ—ಡಂಗುರವನ್ನು ; ೨೧. ಒಸಗೆಯಂ—ಬಯಸಿದ ಮೆಚ್ಚನ್ನು.

**೨೧೦.** ೧. ತಂತ್ರಂ ಬೆರಸು—ಸೈನ್ಯಸಮೇತನಾಗಿ ; ಚರಪುರುಷರಂ—ದೂತರನ್ನು ; ದಾಳಿವೋಗಿ—ದಂಡೆತ್ತಿಹೋಗಿ ; ೬. ಸಯ್ದು—ನೇರಾಗಿ, ಮುಚ್ಚುಮರೆಯಿಲ್ಲದೆ ; ೮. ಎಱತನಿಗರ = ಎಱೆತನಿಗರ—ಪ್ರಭುತ್ವವನ್ನುಳ್ಳವರ ; ೯. ಬಗ್ಗಿಸಿಯುಂ—ಬೈದೂ. ಒಟ್ಟಯಿಸಿಯುಂ—ಕೂಡಿಯೂ ; ೧೧. ಬೞ್ದು—ಬಾಳಿ ; ಇಂತಪ್ಪಗೊಡ್ಡಮಂ—ಇಂಥ ಚೇಷ್ಟೆಗಳನ್ನು—(ಪ್ರಾ. ದೇ. ಕೋಡ್ಡ—ಆಶ್ಚರ್ಯ, ಕೌತುಕ) ; ಅದಲ್ ಸಲ್ಲ—ಅದಲು ಸಲ್ಲದು ; ೧೨. ಬಾಳಿಸಿದೊಡೆ—ತಡೆದರೆ ; ಉಟಿಯಿಸದೆ—ಬಿಡದೆ ; ೧೬. ಕೆಲದುರ್ಗಗಳಂ—ಮಗ್ಗುಲ ಊರುಗಳನ್ನು ; ಒಟ್ಟಯಿಸಿಯುಂ—ಗೆದ್ದು ಸೇರಿಸಿಕೊಳ್ಳುತ್ತ ; ೨೧. ನೆಗೞ್ದು—ಆಚರಿಸಿ

**೨೧೧.** ೧. ಕಿಱಿಯಂದೆ—ಚಿಕ್ಕಂದಿನಂದೇ ; ೨. ಮೊಗವಡಂಗವಿರ್ದ—ಮುಖವಾಡವನ್ನು ಹಾಕಿಕೊಂಡಿದ್ದ ; ಕೂಸು—ಕನ್ಯೆಯನ್ನು ; ೪. ಕಿಱಿ—ಕೂಗಿ ; ೫. ಪುಯ್ಯಲಿಟ್ಟೊಡೆ—ಹುಯ್ಯಲು ಹೇಳಿದರೆ, ದೂರು ಹೇಳಿದರೆ ; ೮. ಬಱಿಯನೆ—ಹಿಂದಿಂದೆಯೋ ; ತಗುಳ್ವರ್—ಅಟ್ಟಿಸಿಕೊಂಡು ಹೋಗುತ್ತಾರೆ ; ಪಾಂಗಿಲ್ಲದೆ—ತೆರನಿಲ್ಲದೆ, ಅವಕಾಶವಿಲ್ಲದೆ.

**೨೧೬.** ೨ : ಪಾವಿನ ಪೆರೆ—ಹಾವಿನ ಪೊರೆ ; ಪುಲಿವಂತೆ—ಸುಲಿದುಹೋಗುವಂತೆ : ೬. ಕಾಲಂಗೆಯ್ದು—ಸತ್ತು ; ೭. ಕೋಡಗಪಮಾಗಿ—ಕೋತಿಯಾಗಿ ; ೧೧. ನಿಂದಣಗರುಹಣೆಗೆಯ್ದು—ನಿಂದನೆ ಗರ್ಹಣೆಗಳನ್ನು ಮಾಡಿ ; ೧೪. ಸ್ವಾಧ್ಯಾಯಂ ಗೆಯ್ಯುತ್ತಿರ್ದರ್—ಶಾಸ್ತ್ರಪಠನಮಾಡುತ್ತಿದ್ದರು ; ೧೫. ಓರಂತಾಗುತ್ತಿರ್ದ—ಸಮಾನವಾಗುತ್ತಿದ್ದ ; ೧೬. ಉರ್ಚಿಪೋಗೆ—ಸೀಳಿಕೊಂಡು ಹೋಗುವಂತೆ; ೧೮. ಬಾಟಿಸ್ತಿಯಲ್ತು—ಪ್ರಯೋಜನವಿಲ್ಲ ; ಎನ್ನದು—ನನ್ನ ಪ್ರಿಯನ್ನು; ಏವೆನ್—ಏನು ಮಾಡುವೆನು ? ; ೨೫. ಬರ್ದುಂಕಿ—ತಪ್ಪಿ.

**೨೧೭.** ೩ : ಸಿತಾತಪತ್ರ—ಬಿಳಿಯ ಕೊಡೆ ; ೬. ತನ್ನೊಡಲುಮಂ—ತನ್ನ ದೇಹವನ್ನು; ೧೧. ಪಲವು ಸೂಟಿಲ್—ಹಲವು ಬಾರಿ ; ೧೪. ಮಗುಟ್ದು ಬಂದು—ಹಿಂದಿರುಗಿ ಬಂದು : ೧೫. ಅವಱಿಂ—ಆ ಬಾಣಗಳಿಂದ ; ಶರಸಂಘಾತಂಗಳಿಂದಂ—ಬಾಣಗಳ ಸಮೂಹಗಳಿಂದ; ೨೪. ನೆಗೞ್ತಿಯಂ—ಆಚರಣೆಯನ್ನು, ಕಾರ್ಯವನ್ನು.

**೨೧೮.** ೬ : ಮೂವಳಸಂ—ಮೂರು ಬಳಸನ್ನು, ಸುತ್ತನ್ನು; ತಗುಳ್ದು—ವ್ಯಾಪಿಸಿ, ಹಿಂದೆ ಬಂದು ; ಜಾವಜ್ಜೀವಂ—ಜೀವವಿರುವವರೆಗೆ, ಘಾತಿಕರ್ಮಂಗಳಂ—ನಾಲ್ಕು ಬಗೆಯಾದ ಘಾತಿ ಕರ್ಮಗಳನ್ನು ಎಂದರೆ ಜ್ಞಾನಾವರಣೀಯ, ದರ್ಶನಾವರಣೀಯ, ಅಂತರಾಯ, ಮೋಹನೀಯ ಎಂಬ ನಾಲ್ಕು ಬಗೆಯ ಕರ್ಮಗಳನ್ನು; ೮. ಅಂತರ್ಗತ ಕೇವಲಿಯಾಗಿ—ಅಂತರ್ಗತವಾದ ಕೇವಲ ಜ್ಞಾನವುಳ್ಳವನಾಗಿ : ಎಂಟು ಕರ್ಮಂಗಳಂ—೪ ಘಾತಿಕರ್ಮ, ೪ ಅಘಾತಿಕರ್ಮ ಒಟ್ಟು ೮ ; ೧೦. ಕ್ಷಪಣಕರುಂ—ಜೈನಸಂನ್ಯಾಸಿಗಳೂ : ಉಪಸರ್ಗಮುಮಂ—ಹಿಂಸೆ, ತೊಂದರೆ ಉಪದ್ರವಾದಿಗಳನ್ನೂ.

## ೧೭. ಮಹೇಂದ್ರದತ್ತಾಚಾರ್ಯರ್ ಮೊದಲಾದ ಅಯ್ನೂರ್ವರ್ ರಿಸಿಯರ್ಕಳ ಕಥೆ

**೨೧೯.** ೧೧ : ಪಿಱಿಯೆಪಟ್ಟರಾಗಿಯುಂ—ಹಿಂಡಲ್ಪಟ್ಟವರಾಗಿಯೂ : ೧೬. ಕಿಱಿಯೊಳ್—ಕಿರಿಯಳು ; ೧೭. ಕೊಟ್ಟುದು—ಕನ್ಯಾದಾನವಾಗಿ ಕೊಟ್ಟಿತು ; ೨೧. ತಪಂಬಟ್ಟು—ತಪಸ್ಸನ್ನು ಸ್ವೀಕರಿಸಿ : ೨೩. ಬರ್ಪೋರ್—ಬರುವವರು : ೨೪. ಆಳ್ವೊಂ—ಆಳುವವನು.

**೨೨೦.** ೨ : ವಾದಂಗೆಯ್ದು—ವಾದಮಾಡಿ ; ೪. ಪೆತ್ತಿರ್ಪನ್ನೆಗಂ—ಪಡೆದಿರುತ್ತಿರಲು ; ೭. ಬಿಕ್ಕುವರ್ಗೆ—ಭಿಕ್ಷುಗಳಿಗೆ, ಎಂದರೆ ಜೈನಯತಿಗಳಿಗೆ : ೧೫. ಪರಿಪಾಟಿಗೆಯ್ದುದಂ—ಅನುಕ್ರಮವಾಗಿ ಪಠಿಸಿದ್ದನ್ನು ; ೧೬. ಸಾರೆ—ಸಮೀಪದಲ್ಲಿ ; ೧೮. ಅರಸುಮಕ್ಕಳ್—ಕ್ಷತ್ರಿಯ ಕುಮಾರರೇ : ೨೦. ಬಿಡದೆ—ತಪ್ಪದೆ. ೨೬. ಪೊಲ್ಲದೋರಾರಾನುಂ—ಕೇಡಿಗರು ಯಾರಾದರೂ.

**೨೨೧.** ೨ : ಕೆಮ್ಮಗಿರ್ದಂ—ಸುಮ್ಮನಿದ್ದನು. ೪. ಪುಡುಕೆಗಳುಂ—ಪೆಟ್ಟಿಗೆಗಳನ್ನು, ಭರಣಿಗಳನ್ನು ; ಪೋೞ್ದು—ಹೋಳುಮಾಡಿ. ದ್ರವ್ಯಮುಂ—ದ್ರವ್ಯಗಳೆಂಬ ನಾಣ್ಯಗಳೂ ; ತುಡುಗೆಗಳುಮಂ—ಒಡವೆಗಳನ್ನೂ ; ೫. ಉಗುತ್ತಂ—ಸುರಿಯುತ್ತ ; ಕೋಣೆಯೊಳ್—ಕೊಠಡಿಯಲ್ಲಿ ; ಒಟ್ಟಿ—ರಾಶಿಮಾಡಿ ; ಪೊೞ್ತಪ್ಪಡೆ—ಹೊತ್ತಾರೆ; ೧೧. ಸಾರಬೀದಿಯಾಗಿಯುಂ—ಬೀದಿಯುದ್ದಕ್ಕೂ ಕಟ್ಟಿ ಕಟ್ಟಿದಹಾಗೆ (?) ; ಉಗುತ್ತಂ—ಸುರಿಯುತ್ತ; ೧೨. ಕಳ್ಳದಿರಿಂ—ಕದಿಯದಿರಿ ; ೧೬. ಕಜ್ಜಮಂ ಸಮಕಟ್ಟಿ—ಕಾರ್ಯವನ್ನು ಏರ್ಪಡಿಸಿ ; ಬೂತಿಂಗೆ—ಭೂತಕ್ಕೆ ಎಂದರೆ ಯಾವನೋ ಒಬ್ಬನಿಗೆ ; ದ್ರವ್ಯಮನಾನ್ತು—ದ್ರವ್ಯಗಳನ್ನು ಹೊರಿಸಿ ಎಂದರೆ ಕೊಟ್ಟು ; ೧೭. ಕಿರಿಸಿ—ಬೋಳಿಸಿ, "ಕಿರಿ—ವಪನೇ" : ಕರಿಯ ಕೋವಣಮುಂ—ಕಪ್ಪು ಕೌಪೀನವನ್ನು, ಕವಡಿಕೆಯುಂ—ಸಣ್ಣ ಕವಡೆಗಳನ್ನು; ೧೮. ಕುಂಚಮುಂ—ನವಿಲುಗರಿಯ ಗೊಂಡೆಯನ್ನು : ೧೯. ತೆಗೞುತ್ತಂ—ನಿಂದಿಸುತ್ತ, ಬಯ್ಯುತ್ತ ; ಕಲ್ಪಿಸಿದಂ—ಕಲಿಸಿದನು : ೨೦. ಆ ಬೂತುಂ—ಆ ದುಷ್ಟಮನುಷ್ಯನೂ : ೨೨. ನಮೋಸ್ತು—ನಮಸ್ಕಾರ : "ನಮೋಸ್ತುಗಳೆಂದು ಸವಣರ್ಗೆ ಪೆಸರಾಯ್ತು" ಸವಣರೇ—ಜೈನಯತಿಗಳೇ : ೨೩. ಪೇೞಂಗೊಂಡು—ಪ್ರೇಮವನ್ನು ಹೊಂದಿ : ೨೫. ಸವಣರ ಗೊಡ್ಡಮಂ—ಸವಣರ ಚೇಷ್ಟೆಯನ್ನು ; ೨೬. ನೆಱೆದು—ಸಮರ್ಥರಾಗಿ.

**೨೨೨.** ೨: ಗೊಡ್ಡಮಾಡುವುದಂ—ಚೇಷ್ಟೆಯಮಾಡುವುದನ್ನು : ಬರ್ದುಕಲತ್ತವೋರಿಲ್ಲ—ಬದುಕಲು ಅವಕಾಶವನ್ನು ಕೊಡುವವರಲ್ಲ ; ೩. ಮುನ್ನ ಕಟಿದ—ಮುಂಚೆ ಆಗಿಹೋದ : ೮. ಪಿಟಿದು—ಹಿಂಡಿ : ೧೧. ಕೆಯ್ಮಿಗೆ—ಮಿತಿಮೀರಲು, ಕೈಮೀರಲು : ತೇಜೋಶುದ್ಧಿ—ತೇಜಸ್ಸಿನ ಶುದ್ಧಿ, ಏಳಿಗೆ : ಘನರವದಿಂ—ಗುಡುಗಿನ ಶಬ್ದದಿಂದ ; ೨೬. ಕೋಂಕಿನಾಗಿ—ವಕ್ರನಾಗಿ.

**೨೨೩.** ೨: ತ್ರಸಸ್ಥಾವರಂಗಳೊಳ್—ಚಲನ ಮತ್ತು ಚಲನವಿಲ್ಲದ ಜೀವಿಗಳಲ್ಲಿ ; ೩. ನೀಡಱಿಂದೆ—ದೀರ್ಘಕಾಲದಿಂದ : ಎತ್ತಾನುಂ—ಎಲ್ಲಿಯಾದರೂ ; ೫. ಪೆತ್ತು—ಪಡೆದು ; ಪಂಚನಮಸ್ಕಾರದೊಳ್—ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು—ಇವರಿಗೆ ಮಾಡುವ ಅಯ್ದು ನಮಸ್ಕಾರಗಳು . ೬. ಭವ್ಯರ್ಕಳ್—ಭವ್ಯಜನರು : ೭. ಮೊದಲಾಗೊಡೆಯ—ಮೊದಲಾಗುಳ್ಳ ; ಪಿಟಿಸಿ—ಹಿಂಡಿಸಿ ; ಅಪವರ್ಗ—ಮೋಕ್ಷ.

## ೧೭. ಚಾಣಾಕ್ಯರಿಸಿಯ ಕಥೆ

**೨೨೪.** ೫: ತುಱುಪಟ್ಟಿಯೊಳ್—ಆಕಳ ಹಟ್ಟಿಯಲ್ಲಿ ; ೬. ಗೊಬ್ಬರದೊಳ್—ಆಕಳ ಸೆಗಣಿಯಲ್ಲಿ. ಪ್ರಾ. ಗೊವ್ವರ—ಗೋವರಂ—ಕರೀಸಮ್ಮಿ ಎಂದು ಹೇಮಚಂದ್ರ, ಬೂಸೆಗಣಿ ಬೆರಣಿ ಎಂದರ್ಥ ; ಉರಿಪೆಪಟ್ಟುದಾದೊಡೆ—ಉರಿಸಲ್ಪಟ್ಟದ್ದಾದರೆ, ಪೊರ್ದಿದೊಂ—ಪಡೆದನು : ಉತ್ತಮಂ ಅರ್ತ್ಥಂ—ಪರಮಪುರುಷಾರ್ಥವನ್ನು ಎಂದರೆ ಉತ್ತಮಗತಿಯನ್ನು ; ೧೫. ನಂದವಂಶದೊಂ—ನಂದವಂಶದವನು ; ೧೮. ಕಣ್ಬೇಟಂಗೊಂಡು—ಚಕ್ಷುಪ್ರೀತಿಯನ್ನು ಹೊಂದಿ, ನೋಡಿದ ಕೂಡಲೇ ಪ್ರೇಮಿಸಿ : ಬಾಟ್ವೆಂ—ಸುಖವಾಗಿ ಬದುಕುತ್ತೇನೆ ; ಎಂಬ ಬಗೆಯಿಂದಂ—ಎನ್ನುವ ಬಯಕೆಯಿಂದ : ೧೯. ಮೀಗೆಟ್ವಂತರ—ಮೇಲೆ ದಂಡೆತ್ತಿಬರುವಹಾಗೆ ; ೨೦. ಸಾರಮಪ್ಪ—ಬೆಲೆ ಬಾಳುವ ; ದ್ರವ್ಯಮಂ—ವಸ್ತುಗಳನ್ನು ; ಮಡಗಿ—ಬಚ್ಚಿಟ್ಟು : ೨೧. ಉಚ್ಚವಿಗ್ರಹದೊಳ್—ದೊಡ್ಡ ಯುದ್ಧದಲ್ಲಿ, ಭಾರಿ ಹೋರಾಟದಲ್ಲಿ : ೨೨. ಬಯ್ಗುರುಳಿನ ಜಾವದಾಗಳ್—ಮುಂಜಾನೆಯ ಹೊತ್ತಿನಲ್ಲಿ : ೨೩. ಗುಂಡಿತಪ್ಪುದು—ಆಳವಾಗಿರುವುದು, "ಅದಲ ನೀರ್ ಗುಂಡಿತ್ತೆಂದೀ ದಲೆಯೊಳೆ" ಎಂದು ಪಂಪನ ಪ್ರಯೋಗ (ಪಂಪಭಾ. ೫-೬೧) : ನಾಡೆ ಕಸಜನೊಡೆಯ—ಅಧಿಕವಾಗಿ ಕೆಸರನ್ನುಳ್ಳ : ಪೞಿವಾವಿಯ ತಡಿಯೊಳ್—ಹಳೆಬಾವಿಯ ದಡದಲ್ಲಿ ; ೨೫. ಪೂಗೊಯ್ವ—ಹೂವನ್ನು ಬಿಡಿಸುತ್ತಿದ್ದ, ಕೊಯ್ಯುತ್ತಿದ್ದ.

**೨೨೫.** ೧. ಪಾಯ್ದೋಡುವ—ಮುಂದಕ್ಕೆ ನುಗ್ಗಿ ಓಡುವ : ಭರದಿಂ—ವೇಗದಿಂದ : ೨. ಅದಮಾನುಂ—ವಿಶೇಷವಾಗಿ :

**ಶ್ಲೋಕ ॥** ಇಯಂ—ಈ ಶಾಖಾ—ಮರದ ಕೊಂಬೆ, ಯೇನ—ಯಾವ, ವಾನರೇಣ—ಕಪಿಯಿಂದ, ವಾ—ಅಥವಾ, ನರೇಣ—ಮನುಷ್ಯನಿಂದ, ಕಂಪಿತಾ—ಅಲುಗಿಸಲ್ಪಟ್ಟಿತೋ, ವರ್ಷಸಹಸ್ರಾಂತಾತ್ ಅಪಿ—ಸಾವಿರ ವರ್ಷಗಳ ಅಂತ್ಯದವರೆಗಾದರೂ, ಮದ್ದೋಷಂ—ನನ್ನ ತಪ್ಪನ್ನು, ಕಥಯಿಷ್ಯತಿ—ಹೇಳುತ್ತದೆ.

೫. ನೇಸರ್ಮೂಡಿದೊಡೆ—ಸೂರ್ಯೋದಯವಾದರೆ, "ಣೇಸರೋ ರವಿ" ಎಂದು ಹೇಮಚಂದ್ರ, ಈ ಶಬ್ದ ದ್ರಾವಿಡದಿಂದ ಪ್ರಾಕೃತಕ್ಕೆ ಎರವಲು : ೬. ಬಿಲಗಕ್ಕೆ—ಅಸ್ಥಾನಕ್ಕೆ : ೭. ಎಲ್ಲಾ ವೋಳಿಯುಮಂ—ಎಲ್ಲಾ ಸಾಲುಗಳನ್ನೂ : ಅಱಿಯುಱಿಸಿ—ಹುಡುಕಿ ಹುಡುಕಿ : ಕೃತಕ ದುಃಖಮಂ—ಸುಳ್ಳು ದುಃಖವನ್ನು : ೧೧. ಮಱೆವಾಱುತ್ತಿರ್ದಂ—ರಹಸ್ಯವಾಗಿ ಸುಖವಾಗಿರುತ್ತಿದ್ದನು : ೧೩. ಅಱಿಯದಿರ್ದಾತನೆ—ತಿಳಿಯದಿರುವವನೆ ; ೧೫. ಅರಯ್ವೆಂ—ಹುಡುಕುತ್ತೇನೆ ; ಮಣಿಖೇಟಮನುದರದೊಳಾರ್ಚಿ—ರತ್ನಖಚಿತವಾದ ಗುರಾಣಿಯನ್ನು ಎದೆಯಲ್ಲಿ ಸೇರಿಟ್ಟುಕೊಂಡು : ೧೮. [illegible]—[illegible] ಆಗಲೆಯಿಂದ ; ಸಾಭಿಪ್ರಾಯ ಸಂಬಂಧಮಪ್ಪ—ವಿಶೇಷಾರ್ಥದ ಸಂಬಂಧವುಳ್ಳ.

**ಶ್ಲೋಕ ॥** ನೀಲೋತ್ಪಲದಳಶ್ಯಾಮೇ—ಕನ್ನೈದಿಲೆ ಎಸಳಿನಂತೆ ಶ್ಯಾಮಲಳಾಗಿರುವಳೇ. ನೀಲಸರೋರುಹೇ—ನೀಲಿಬಣ್ಣದ ತಾವರೆಯೇ : ಬಾಲೇ—ಬಾಲೆಯೇ, ಭದ್ರೇ—ಮಂಗಳಾಂಗಿಯೇ, ತ್ವದ್ಗುಣೈಃ—ನಿನ್ನ ಗುಣಗಳು ಕಾರಣವಾಗಿ. ಅಹಂ—ನಾನು, ದಹ್ಯೇ—ಸಂತಾಪಪಡುತ್ತಿದ್ದೇನೆ: ವಿಶ್ವಂ—ಪ್ರಪಂಚವು ಅಥವಾ ವಿಶ್ವಸೇನನು, ಶಾಖೇನ—ಮರದ ಕೊಂಬೆಯಿಂದ, ಕಂಪಿತಾ—ನಡುಗಿಸಲ್ಪಟ್ಟಿತು ಅಥವಾ ಪಟ್ಟನು. ೨೨. ಈ ವಾಕ್ಯಾರ್ಥಮಂ—ಈ ವಾಕ್ಯದ ಅರ್ಥವನ್ನು ; ೨೪. ಬಟ್ಟೆವಟ್ಟಿ—ದೂತನನ್ನು ಕಳುಹಿಸಿ :

**೨೨೬.** ೧: ಪಿಡಿಪೆತ್ತು—ಹಿಡಿತಕ್ಕೆ ಸಿಕ್ಕಿ, ಗ್ರಸ್ತನಾಗಿ : ೪. ಎತ್ತಾನುಂ—ಎಲ್ಲಿಯಾದರೂ : ೫. ಪಾಯ್ದೋಡಿಕೆಟ್ಟೆಂ—ನುಗ್ಗಿ ಓಡಿ ತಪ್ಪಿಸಿಕೊಂಡೆನು : ೬. ಬಿಚ್ಚಳಿಸಿ—ವಿಸ್ತರಿಸಿ ಎಂದರೆ ವಿಸ್ತಾರವಾಗಿ ಹೊಗಳಿ : ಅಂಗಚಿತ್ತಮುಮಂ—ಸ್ವತಃ ಧರಿಸಿದ ಆಭರಣ ವಸ್ತ್ರಾದಿಗಳನ್ನು : ಕೆಲವು ಬಾಡುಮಂ—ಕೆಲವು ಕ್ಷೇತ್ರಗಳನ್ನೂ (ಜಮೀನುಗಳನ್ನೂ) : ೬. ಪೊಲ್ಲಮೆಯುಂ—ದುಷ್ಟತನವನ್ನು ; ೯. ಬಾರಿಸಿದೊಡೆ—ತಡೆದರೆ : ಅನಿಬರುಮಂ—ಅಷ್ಟು ಜನರನ್ನೂ ; ಮಲ್ಲಲ್ ಪುಗುವನಿತು—ಒಂದು ಮಣ್ಣಿನ ಶ್ರಾವೆ ಹಿಡಿಸುವಷ್ಟು, (ತಮಿಳು) ಮಲ್ಲಂ, (ತುಳು) ಮಲ್ಲಯಿಲ್—ಸವುಟು ; ೧೦. ಮಲ್ಲಲ ಕೂೞಂ—ಒಂದು ಶ್ರಾವೆ ತುಂಬ ಅನ್ನ : ಒಂದು ಮೊಗಪೆ—ಒಂದು ಸಣ್ಣ ಮಣ್ಣಿನ ಕುಡಿಕೆ. "ಖಳ ಸಂಸ್ಕೃತಿಯೆಂಬುದೊಂದು ಟಣದೊಳಗಮ್ಮ ನೀಂ ಮೊಗಪೆಯಾಗದೆ ತಾಳ್ದಪವರ್ಗಮಂ" ಎಂದು ಪಂಪನ ಪ್ರಯೋಗ (ಆದಿಪು. ೩–೭೧) "ಜಾಟಣದ ಗುಂಡಿಗೆಯಂತೆ ಪೊಲಾದೆನೆಂದು" ಎಂಬ ನಾಗಚಂದ್ರನ ಮಾತನ್ನು ಹೋಲಿಸಿ (ಪಂಪರಾ. ೬–೯೫). ಮೊಗಪೆ—ಗುಂಡಿಗೆ < ಸಂ. ಕುಂಡಿಕಾ ; ೧೧. ಪಚ್ಚುಗೊಂಡು—ಹಂಚಿಕೊಂಡು ; ೧೪. ಪಗೆಯು ನಿಱಿಯಲುಂ—ಹಗೆಯನ್ನು ಘಾತಿಸಲೂ ; ೧೫. ಅರ್ಕುಂ—ಸಮರ್ಥನಾಗುತ್ತಾನೆ ; ಈ ಮಲ್ಲಲ ಕೂೞಂ—ಈ ಸರಾವೆಯ ಅನ್ನವನ್ನು : ೧೮. ಉಣ್ಣಪಟ್ಟು—ಉಣ್ಣದೆ ಮಲಗಿ, ಉಪವಾಸವಿದ್ದು ; ೧೯. ಬರ್ದೊರ್ನ್—ಬದುಕಿದನು : ಪ್ರತ್ಯಂತವಾಸಿಗಳಪ್ಪ—ರಾಜ್ಯದ ಎಲ್ಲೆಗಳಲ್ಲಿ ವಾಸ ಮಾಡುವವರಾದ ; ೨೦. ಮುಸಗಿದೊಡೆ—ಕೆರಳಿ ಮೇಲೆಬಿದ್ದರೆ ; ೨೧. ಆರಾನುಂ—ಯಾರಾದರೂ ; ಉಣ್ಬರೊಳರೇ—ತಿನ್ನುವವರು ಉಂಟೇ, ಇರುವರೇ ; ೨೩. ಕ್ಷಮೆಗೊಳಿಸಿ—ಕ್ಷಮಿಸಿ ; ಪರಚಕ್ರಮಂ—ಶತ್ರುಮಂಡಲವನ್ನು ;

**೨೨೭.** ೧ : ಮುಸಗಲೀಯದೆ—ವಿಜೃಂಭಿಸಲು ಬಿಡದೆ ; ಪೂರ್ವಕ್ರಮದೊಳ್—ಹಿಂದಿನ ಸ್ಥಿತಿಯಲ್ಲಿ ; ನಿಱಿಸಿದೊಡೆ—ಸ್ಥಾಪಿಸಿದರೆ; ೧. ತಂದೆಯ ಬಾೞೀವಗ್ಗಳಂ ಬಾೞ್ವೆಯುಂ—ತಂದೆಯ ವೃತ್ತಿಗಿಂತ ಅತಿಶಯವಾದ ವೃತ್ತಿಯನ್ನು ;

**ಶ್ಲೋಕ ॥** ಚತುರ್ದಂಷ್ಟ್ರಃ—ನಾಲ್ಕು ದಾಡೆಹಲ್ಲುಗಳನ್ನುಳ್ಳವನು, ಸ ಚಾಣಾಕ್ಯಃ—ಆ ಚಾಣಾಕ್ಯನು ; ಏಷಃ—ಇವನು, ನಂದಾನ್ವಯಕ್ಷಯಃ—ನಂದಕುಲಕ್ಕೆ ನಾಶಕಾರಿಯಾದವನು ; ಹಿ—ಅಲ್ಲವೇ ? ; ರಾಜಾ ವಾ—ರಾಜನಾಗಲಿ. ರಾಜಮರ್ತ್ಯೋ ವಾ—ರಾಜನನ್ನು ಕೊಲ್ಲುವವನಾಗಲಿ ಅಥವಾ ಮಂತ್ರೀ ವಾ—ಮಂತ್ರಿಯಾಗಲಿ, ಭವಿಷ್ಯತಿ—ಆಗುತ್ತಾನೆ, ನ ಸಂಶಯಃ—ಸಂಶಯವಿಲ್ಲ. ಇಲ್ಲಿರುವ "ರಾಜಮರ್ತ್ಯೋ ವಾ" ಎಂಬುದಕ್ಕೆ 'ರಾಜಮಂತ್ರೀ ವಾ' ಎಂಬ ಪಾಠಾಂತರವಿದೆ. ಇದರಂತೆ 'ರಾಜನೋ ಅಥವಾ ರಾಜಮಂತ್ರಿಯೋ' ಎಂದರ್ಥವಾಗುತ್ತದೆ. ಶ್ರೀಮದ್ರಾಮಾಯಣದಲ್ಲಿ "ರಾಜಾ ವಾ ರಾಜಮಾತ್ರೋ ವಾ" ಎಂದು ಮೂರು ಸಲ ಬರುತ್ತದೆ (೨–೯೬–೯ ; ೬–೬೩–೧೦ ; ಉರಾ. ೩೧–೩) : ಇಲ್ಲಿ ರಾಜನಂತಿರುವ ಇನ್ನೊಬ್ಬ ಎಂದರ್ಥವನ್ನು ಮಾಡಿದೆ. "ರಾಜಪುತ್ರೋ ವಾ" ಎಂಬ ಪಾಠಾಂತರವೂ ಇದೆಯೆಂದು ನನ್ನ ಮಿತ್ರರಾದ ಶ್ರೀ ಕ. ವೆಂ. ರಾಘವಾಚಾರ್ಯರು ತಿಳಿಸಿದ್ದಾರೆ. "ರಾಜಮರ್ತ್ಯೋ ವಾ" ಎಂಬ ಪಾಠ ಸರಿಯಾಗಲಾರದು. ರಾಜಮಂತ್ರಿ, ರಾಜಮಾತ್ರ, ರಾಜಪುತ್ರ—ಈ ಮೂವರಲ್ಲಿ ಯಾವುದಾದರೂ ಒಂದು ಸರಿಯಿರಬಹುದು.

೧೨. ಆದೇಶಂಗೆಯ್ದುದಂ—ಭವಿಷ್ಯ ಹೇಳಿದ್ದುದನ್ನು ; ಕೈಸಾಣೆಗಳಿಂ—ಕೈಯಲ್ಲಿ ಉಜ್ಜಬಹುದಾದ ಸಾಣೆಗಳಿಂದ ; ೧೪. ಉದಿರ್ಚಿ—ಉಜ್ಜಿಸಿ ; ಮಟ್ಟಂ ಮಾಡಿದೊಂ—ಮಟ್ಟಸವಾಗಿ ಮಾಡಿ

**೨೩೦.** ೨: ಪಡಿಯಱಸಿಂದಮೆ—ಬಾಗಿಲುಕಾಯುವವನಿಂದಲೇ: ಪೆಡತಲೆಯುಂ—ತಲೆಯ ಹಿಂಭಾಗವನ್ನು ; ೪ ಅಸಂದನಾಗಿ—ಅಂದವಿಲ್ಲದವನಾಗಲು (?) ; ಅಬಂಧು—ಬಂಧುವಲ್ಲದವನು ; ೬. ಕಾಸೆಗಳಂ—ಚಡ್ಡಿಗಳನ್ನು ; ಕಳೆಯೆನೆಂದು—ತೆಗೆಯುವುದಿಲ್ಲವೆಂದು ; ಜಾದಿನ ಸೀಲೆಗಳನುಟ್ಟು—ಕಾವಿಯ ಬಣ್ಣದ ವಸ್ತ್ರಗಳನ್ನು ಧರಿಸಿ ; ಭಗವಂತ ವೇಷಮಂ—ಸನ್ಯಾಸಿನಿಯ ವೇಷವನ್ನು ; ೧೨. ನೆಱಪುವೆಂ—ಪೂರ್ಣಗೊಳಿಸುತ್ತೇನೆ; ಪುಟ್ಟಿದ ಕೂಸಂ—ಹುಟ್ಟಿದ ಮಗುವನ್ನು. ಈಯಲಾರ್ಪೊಡೆ—ಕೊಡಲು ಸಮರ್ಥರಾದ ಪಕ್ಷಕ್ಕೆ: ೧೩. ನನ್ನಿಗೊಂಡು—ಭಾಷೆ ತೆಗೆದುಕೊಂಡು : ೧೪. ಬಾದಣದಂತಿರೆ—ಗವಾಕ್ಷಿಯಂತೆ. (ಸಂ) ವಾತಾಯನ > ಬಾದಣ ; ಛಿದ್ರಂ ಮಾಡಿ—ರಂಧ್ರ ಮಾಡಿ ; ೧೫. ಇರುಳ್ ಮಧ್ಯಾಹ್ನಮಪ್ಪ ಪೊೞ್ತಱೊಳ್—ರಾತ್ರಿ ಚಂದ್ರ ನಡುನೆತ್ತಿಗೆ ಬರುವ ಹೊತ್ತಿನಲ್ಲಿ, ಚಂದ್ರನು ಆಕಾಶದ ಮಧ್ಯಕ್ಕೆ ಬರುವ ವೇಳೆಯಲ್ಲಿ ; ಒಂದೊಂದು ಕಾಜಿನ ಬಟ್ಟಲೊಳ್—ದೊಡ್ಡದಾದ ಒಂಟು ಗಾಜಿನ ಬಟ್ಟಲಲ್ಲಿ ; ೧೬. ಕಮ್ಮಿತಪ್ಪ—ಗಮಗಮಿಸುತ್ತಿರುವ : ೧೭. ತೃಷ್ಣಾಭಿವೃದ್ಧಿಯಪ್ಪ—ಬಾಯಾರಿಕೆಯನ್ನು ಹೆಚ್ಚಿಸುವ ; ಊಡಿ—ತಿನ್ನಿಸಿ ; ೨೦. ನೆಱೆದತ್ತು—ಪೂರ್ಣವಾಯಿತು. ೨೨. ಬೆಸಲೆಯಾದ—ಹೆತ್ತ ; ಕೂಸಂ—ಮಗುವನ್ನು ; ೨೩. ದಾದಿಯನಿಟ್ಟು—ದಾದಿಯನ್ನು ನೇಮಿಸಿ ; ೨೪. ಬಾಯ್ಬೆಣ್ಣೆಯೊಡನೆ—ತಿನ್ನಿಸುವ ಬೆಣ್ಣೆಯೊಡನೆ: ಕಿಱಿಕಿಱಿದೆ—ಕೊಂಚಕೊಂಚವಾಗಿಯೇ ; ನಂಜನೂಡಿ—ವಿಷವನ್ನು ತಿನ್ನಿಸಿ : ೨೫. ತಗುಳ್ದೊನ್—ತೊಡಗಿದನು.

**೨೩೧.** ೧: ತಳವಱರ್ಕಳ್ಗೆ—ನಗರರಕ್ಷಕರಿಗೂ ಕೊತ್ವಾಲರಿಗೂ ; ೩ ಈತಂಗರಸುಮಾಡಿಪ್ಪೆಂ—ಇವನಿಗೆ ದೊರೆತನವನ್ನು ಕೊಡುತ್ತೇನೆ ; ಇಲ್ಲಿಯ ಬಾೞ್ಕೆಯಿಂ ಪದಿರ್ಮಡಿ ಬಾೞಂ—ಇಲ್ಲಿನ ಜೀವಿತಕ್ಕಿಂತ ಹತ್ತರಷ್ಟು ಮಿಗಿಲಾದ ಜೀವಿಕೆಯನ್ನು ; ೫. ತಂತ್ರಮುಂ—ಸೈನ್ಯವನ್ನು ; ೬. ಪೊನ್ನಂ ಮಾೞ್ಪ—ಚಿನ್ನವನ್ನು ಮಾಡುವ ; ಬಗೆಯಿಂದಂ—ಮನಸ್ಸಿನಿಂದ ; ಮರ್ದುಗಳನಱಸಿ—ಮೂಲಿಕೆಗಳನ್ನು ಹುಡುಕುತ್ತ : ೭. ತೊೞಲ್ವನ್—ಅಲೆದಾಡುವನು ; ತಪ್ಪಲೊಳ್—ತಪ್ಪಲಿನಲ್ಲಿ : ಅದಮಾನುಂ ಗುಂಡಿತಪ್ಪ—ತುಂಬ ಆಳವಾದ: ರಸದ ಬಾವಿಯಂ—ಸಿದ್ಧರಸದ ಎಂದರೆ ಮುಟ್ಟಿದ್ದನ್ನೆಲ್ಲ ಚಿನ್ನವಾಗಿಸುವ ರಸವುಳ್ಳ ಬಾವಿಯನ್ನು ; ೮. ಮೊಡೆನಾರ್ಪುದಂ—ಹುಳಿ ಮಜ್ಜಿಗೆಯಂತೆ ನಾತಬಡಿಯುತ್ತಿರುವುದನ್ನು, ಹಳಸಿದ ಮಾಂಸದ ನಾತವುಳ್ಳುದನ್ನು, (ತಮಿಳು) ಮುಡೈನಾಱ್ಪವ್ ; "ಪೆಣಮೆಂಬ ಪೆಸರಾಗಿ, ಅಣಮಿರಿಸದಂತಾಗಿ, ಮೊಡೆನಾತಕಿಡೆಯಾಗಿ, ಪಡುಕೆಯೆಂಬುದುಮಾಗಿ" ಎಂದು ಬಂಧುವರ್ಮನ ಪ್ರಯೋಗವುಂಟು (ಜೀವಸಂ. ೭—೩೨) ; ಕಳೆದು—ತೆಗೆದುಹಾಕಿ ; ೯. ಬಾೞುತಿರ್ದ—ಬದುಕಿರುವ ; ೧೧. ಬಿಕ್ಷುವಂ—ಸನ್ಯಾಸಿ ; ಮೊಗೆದು—ತುಂಬಿ : ೧೩. ಲೋಭದಿಂದಂ—ದುರಾಶೆಯಿಂದ ; ೧೪. ಸೋರೆಯುಂ—ಸೋರೆಯ ಬುರುಡೆಯಲ್ಲಿ ; ತೀವಿ—ತುಂಬಿ : ೧೬. ಬಾೞಿಪ್ಪೆಂ—ಬದುಕಿಸುತ್ತೇನೆ ; ೧೭. ನೀಡುನೇಣಂ—ಉದ್ದವಾದ ಹಗ್ಗವನ್ನು ; ೧೮. ರಸಂ ತಿಂದ ಮೆಯ್ಗೆ—ಸಿದ್ಧರಸವು ಕೊರೆದು ಗಾಯಗೊಳಿಸಿದ ಮೈಗೆ; ಪ್ರತೀಕಾರದ ಮರ್ದುಗಳಂ—ಪರಿಹಾರ ಕೊಡುವ ಔಷಧಿಗಳನ್ನು ; ೨೧. ಒಂದು ಪೇೞು—ಒಂದು ಹೇರು ; ಒಟ್ಟುವರ್—ರಾಶಿ ಮಾಡುವರು : ಪೇೞು—ಹೇರು, ಹೊರೆ.

**೨೩೨.** ೪: ಬಾೞ್ತೆಯಾಗೆ—ಕೆಲಸಕ್ಕೆ ಬೇಕಾಗಲು ; ಬಾೞ್ತೆಯಲ್ತು—ಉಪಯೋಗವಿಲ್ಲ ; ೧೦. ಮೇಗೆರ್ದು—ಮೇಲೆ ಧಾಳಿಯಿಟ್ಟು ; ಬರ್ದುಂಕಿ—ತಪ್ಪಿಸಿಕೊಂಡು : ೧೪. ಕೊಳ್ಗುಳದೊಳಗೆ—ಯುದ್ಧಭೂಮಿಯಲ್ಲಿ : ೧೬. ಸಾಲಿಗರ ಮನೆಯಂ—ನೇಕಾರರ ಮನೆಯನ್ನು : ೧೭. ಸಾಲಿಗರ ಬಿರ್ದಿ—ನೇಕಾರರ ಮುದುಕಿ ; ಏಱಲಿಕ್ಕಿ—ಕುಳ್ಳಿರಲು ಮಣೆಯನ್ನು ಹಾಕಿ ; ೧೮. ಕಂಚೆನಿಟ್ಟು—ತಟ್ಟೆಯನ್ನಿಟ್ಟು : ಅಲಂಪಿನಿಂ—ಸಂತೋಷದಿಂದ : ೨೦. ಅದಿರ್ದು—ಅಲುಗಾಡಿ. ಕೈಯುಂ ಬಿದಿರ್ದು—ಕೈಯನ್ನು ಕೊಡವಿ ; ಬಿರ್ದಿ—ಮುದುಕಿ : "ಕೈಯುಂ ಬಿದಿರ್ದವನಂ ಬಿರ್ದಿ ಕಂಡು ನಕ್ಕಿಂತೆಂದಳ್" ಇದು ಕಂದಪದ್ಯದ ಕೊನೆಯ ಪಾದದಂತಿದೆ. ವೃತ್ತಗಂಧಿ ; ೨೫. ಬುದ್ಧಿಯೊಡೆಯಂ—ಬುದ್ಧಿಯುಳ್ಳವನು.

**೨೩೩.** ೨; ತನ್ನ ಕೊಟ್ಟ—ತಾನು ಕೊಟ್ಟ; ಪಗೆಗೊಂಡು—ದ್ವೇಷವನ್ನು ಹೊಂದಿ; ೩: ತನ್ನಾರ್ಪಿನೆಗಂ—ತಾನು ಸಮರ್ಥನಾಗಿರುವಾಗಲೇ; ೭. ಪ್ರತಿಪಕ್ಷಮಂ—ಶತ್ರುಸೈನ್ಯವನ್ನು; ೧೬. ಒತ್ತಣಮನೊಡ್ಡಿ—ಸೈನ್ಯವನ್ನು ಎದುರಿಗೆ ನಿಲ್ಲಿಸಿ, ಜಾಚಿ; ೨೨. ಕಾಪನಿಟ್ಟು—ಕಾವಲಿರಿಸಿ.

**೨೩೪.** ೪: ಉಣಿಸಂ ಮಾಡಿ—ಊಟಮಾಡಿ: ನೋಕ್ಕಪ್ಪ—ನೋಕ್ಕನ್ನುಂಟುಮಾಡುವ. ೬. ಮೆಯ್ಯಱಿಯದೆ—ಮೈಮೇಲೆ ಪ್ರಜ್ಞೆಯಿಲ್ಲದೆ; ೯. ಆಡಿದಂ—ಕುಣಿದನು; ೧೦. ಪೂಣ್ದು—ಕೈಕೊಂಡ; ನೆಱೆದತ್ತು—ಪೂರ್ಣವಾಯಿತು; ೧೧. ಕಾವಿನೊಳಂದಿದವು—ಕಾವಿಯನ್ನು ಬಳಿದುವು; ಪೊನ್ನಗುಂಡಿಗೆಯುಂ—ಚಿನ್ನದ ಕಮಂಡಲವು; ೧೨. ಮೂಱುದಂಡಮುಂ—ತ್ರಿದಂಡವು, ಸನ್ಯಾಸಿ ಹಿಡಿಯುವ, ಮೂರು ಕೋಲುಗಳನ್ನು ಕಟ್ಟಿದ ದಂಡ; ೧೩. ಎನಗೆ ಬಸಮಾದಂ—ನನಗೆ ವಶವಾದನು: ಪೊದೆ ಪಚ್ಚಡಮಂ—ಹೊದೆ, ಹಚ್ಚಡವನ್ನು; ೧೫. ಲಟಹದಿಂದ—ರಮ್ಯವಾಗಿ, ಸುಂದರವಾಗಿ, (ಪ್ರಾ.ದೇ.) "ಲಡಹೋ ರಮ್ಮಂ, ಲಡಹೋ ವಿದಗ್ಧಮಿತ್ಯನ್ಯೇ." "ಲಟಹಮಾ ಲಾವಣ್ಯಮಾ ಬಿಂಕಮಾ" ಎಂದು ರನ್ನನ ಪ್ರಯೋಗ (ಗದಾ. ೧೦): ಆಡಿದೋಂ—ನರ್ತಿಸಿದನು; ೨೬. ಪಾರ್ವಂತಿ—ಪಾರ್ವಸ್ತ್ರೀ, ಬ್ರಾಹ್ಮಣಿತಿ; ೧೮. ಜೀವಿತಂ ಗೆಯ್ದು—ಬಾಳನ್ನು ಕೊಟ್ಟು; ೧೯. ತಳವರ್ಗಮುಮಂ—ತಳವಾರರನ್ನೂ;. ಸಂತವಿಸಿ—ಸಮಾಧಾನಪಡಿಸಿ: ೨೧. ಪತ್ತುಂ ಕದಿರ್ಗಳ್—ಹತ್ತೂ ಅರಕಾಲ್ಗಳು: ಅರ್ದುದಂ—ಮುಳುಗಿದ್ದನ್ನು: ೨೩. ದಶಮಯೂರರ್ಕಳ್—ಹತ್ತು ಜನ ಮೌರ್ಯರು.

**೨೩೫.** ೧: ಬಾಳಂಕಿಱ್ಱು—ಒರೆಯಿಂದ ಕತ್ತಿಯನ್ನು ಸೆಳೆದು: ನಿಮಿರ್ದು—ನೆಟ್ಟಗಾಗಿ: ೨. ಬಂಚಿಸಿ—ವಂಚಿಸಿ; ಪ್ರಚ್ಛನ್ನದಿಂದಂ—ಮರೆಯಿಂದ; ೩. ತಲೆಯುಂ ಪೋಗೆಇಱಿದು—ತಲೆ ಕತ್ತರಿಸಿ ಹೋಗುವಂತೆ ಹೊಡೆದು: ೪. ಪೋಟ್ದು—ಹೋಳುಮಾಡಿ; ೮. ಪನಿತುದಱಿಂದೆ—ಹನಿಯಾಗಿ ಬಿದ್ದದ್ದರಿಂದ; ೧೨. ಪರಿಸಿ—ಬದಮಾಡಿಕೊಂಡು; ೧೯. ತುಱುಪಟ್ಟಿಯೊಳ್—ಆಕಳ ಹಟ್ಟಿಯಲ್ಲಿ. ೨೧. ಪಗೆಯುಮಂ—ದ್ವೇಷವನ್ನೂ: ೨೪. ಗೋಷ್ಠಿಯಿರ್ದು—ಕೂಡಿದ್ದು, ಒಂದಾಗಿದ್ದು; ೨೬. ಸೆಡೆಗುಂ—ಮುರುಟಿಕೊಳ್ಳುತ್ತಾತೆ, ಸೆಡೆಗೆಡು = ಸೆಡೆಯಿಂ + ಕೆಡು: ಬಳಸಿಯುಂ—ಸುತ್ತಲೂ. ಗೊಬ್ಬರಮಂ—ಒಣಗಿಸಿದ ಸೆಗಣಿ, ಕಾಡು ಬೆರಣಿ.

**೨೩೬.** ೧: ಒಟ್ಟಿಂ—ರಾಶಿಹಾಕಿ: ಕಿಚ್ಚಂ ತಗುಳ್ಚಲ್ ವೇಳ್ದು—ಉರಿಯನ್ನು ಹೊತ್ತಿಸುವಂತೆ ನೇಮಿಸಿ.

**ಗಾಹೆ ॥** ಪುಟ ೯೨ ನೋಡಿ.

೧೪. ಕ್ಷಪಣಕರುಂ—ಜೈನಯತಿಗಳೂ; ೧೮. ಆರಾಧಿಸಿ—ಉಪಾಸನೆ ಮಾಡಿ; ಅಪವರ್ಗ—ಮೋಕ್ಷ.

## ೧೯. ವೃಷಭಸೇನರೆಂಬ ರಿಸಿಯ ಕಥೆ

**೨೩೭.** ೧೫: ಪಿರಿಯ ಪಂಡಿತಂ—ದೊಡ್ಡ ವಿದ್ವಾಂಸ; ೧೮. ಬರವಂ—ಆಗಮನವನ್ನು; ೧೯. ಪೊಡೆವಡುವುದಂ—ನಮಸ್ಕಾರ ಮಾಡುವುದನ್ನು. ೨೧. ನೆರವಿಯೊಳ್—ಸಭೆಯಲ್ಲಿ: ಸಿಗ್ಗಾಗಿ—ಲಜ್ಜಿತನಾಗಿ; ೧೫. ಮುಡಿಪಿ—ಸತ್ತು.

**೨೩೮.** ೧೧: ಈ ಪೇಟ್ದ—ಇಗೋ ಹೇಳಿದ ಎಂದರೆ ನಿರೂಪಿತವಾದ: ಕಥೆಗಳಂ, ಎಂಬುದು ಕಥೆಗಳಾಪ್ ಎಂದಿರಬಹುದು—ಕಥೆಗಳನ್ನು: ೧೨. ಪೇಟ್ದಾರ್—ಹೇಳಿದರು. ರಚಿಸಿದರು. ಪೇೞ್ ಧಾತುವನ್ನು ಕಾವ್ಯರಚನೆಮಾಡು ಎಂಬರ್ಥದಲ್ಲಿ ಪ್ರಯೋಗಿಸಿರುವುದು ಕಾಣುತ್ತದೆ. "ಕಥಾಭಿತ್ತಿಯುಮನಾದಿಯ ಪೊಗೞಲೆಂದೆತ್ತಿಕೊಂಡೆಂ" (ಪಂಪಭಾ. ೧–೧೧). "ಇಂತು ಪೇೞಿದ ಪದೇಂದ್ರುಪ್ರಯುಂ ನೆಱೆಮೇ ಮೆಚ್ಚೆ ಕವೀಂದ್ರರುಮಾಗ್ ಧಾತ್ರಿಯೊಳ್" (ಅದೇ. ೧೪–೫೩), "ನೆರವಿನೊಳ್ಳಱೆ ಮಯುರಂ ಪೇಟಿನೆ ತಾಂ ಪರಿಣತನೀ ಕಬ್ಬಿಗರೊಳೆರೆದಂ ರನ್ನ ನಾಗಭಟ್ಟನತ್ಯಾದರದಿಂ" (ಕವಿಚ. ೧–೨೮) ಇತ್ಯಾದಿ.

## ೨. ಹರಿಷೇಣನ 'ಬೃಹತ್ಕಥಾಕೋಶ'ದ ಕಥೆಗಳ ೧೨೬–೧೪೪ ಸಾರಾಂಶ

### ೧೨೬. ಅವಂತಿ ಸುಕುಮಾಲ ಕಥಾನಕಂ

ವತ್ಸಕಾವತಿಯ ಕೌಶಂಬೀನಗರದ ರಾಜ ಅತಿಬಲ. ಅವನ ಪುರೋಹಿತ ಸೋಮಶರ್ಮ ; ಅವನ ಭಾರ್ಯೆ ಕಾಶ್ಯಪಿ. ಅವರಿಗೆ ಅಗ್ನಿಭೂತಿ ವಾಯುಭೂತಿ ಎಂಬ ಇಬ್ಬರು ಮಕ್ಕಳು. ಅವರು ತಂದೆಯ ಮಾತನ್ನು ಕೇಳದವರಾಗಿ ಸಪ್ತವ್ಯಸನಯುಕ್ತರಾಗಿ ನಿಷ್ಠುರಾಶಯರಾದರು. ತಂದೆ ಸತ್ತಮೇಲೆ ರಾಜ ಅವರ ಮೂರ್ಖತನವನ್ನು ನೋಡಿ ಅವರ ಐಶ್ವರ್ಯವನ್ನು ದಾಯಾದಿಗಳಿಗೆ ಕೊಟ್ಟನು. ದುಃಖಿತರಾದ ಆ ಇಬ್ಬರು ರಾಜಗೃಹಕ್ಕೆ ಹೋಗಿ ಅಲ್ಲಿದ್ದ ಸೂರ್ಯಮಿತ್ರನಿಗೆ ತಂದೆಯ ಮರಣವನ್ನೂ ಪರರಿಗೆ ತಮ್ಮ ಸಂಪತ್ತು ಸೇರಿದ್ದನ್ನೂ ತಿಳಿಯಪಡಿಸಿದರು. ಸೂರ್ಯಮಿತ್ರನು ದುಃಖಿತನಾಗಿ ಏಳೆಂಟು ವರ್ಷಗಳಲ್ಲಿ ಅವರಿಬ್ಬರನ್ನೂ ಸರ್ವಶಾಸ್ತ್ರಕೋವಿದರನ್ನಾಗಿ ಮಾಡಿದನು. ಆಮೇಲೆ ಅವರು ಕೌಶಂಬಿಗೆ ಬಂದು ರಾಜನನ್ನು ಕಂಡು ತಮ್ಮ ಮೊದಲಿನ ಐಶ್ವರ್ಯವನ್ನು ಅವನಿಂದ ಪಡೆದು ಸುಖವಾಗಿದ್ದರು.

ಇತ್ತ ರಾಜಗೃಹದಲ್ಲಿ ಸೂರ್ಯಮಿತ್ರನು ಸೌಧರ್ಮ ಮುನಿಗಳಿಂದ ದಿಗಂಬರದೀಕ್ಷೆಯನ್ನು ಹೊಂದಿ ಸಿದ್ಧಕ್ಷೇತ್ರಗಳಲ್ಲಿ ಸಂಚಾರ ಮಾಡುತ್ತ ಭಿಕ್ಷಾರ್ಥವಾಗಿ ಕೌಶಂಬಿಗೆ ಬಂದರು. ಮನೆಯಿಂದ ಮನೆಗೆ ಸಂಚರಿಸುತ್ತ ಅವನು ಅಗ್ನಿಭೂತಿಯ ಮನೆಗೆ ಬಂದನು. ಮುಂಜಿಬಂಧನ ಕಾರಣವಾಗಿ ಅಗ್ನಿಭೂತಿಯ ಮನೆಯಲ್ಲಿ ಅನೇಕ ವಿಪ್ರರು ನೆರೆದಿದ್ದರು. ಆಗ ಅಗ್ನಿಭೂತಿ ಮುನಿಯನ್ನು ಎದುರುಗೊಂಡು ಅವನನ್ನು ಆಹಾರಾದಿಗಳಿಂದ ಸತ್ಕರಿಸಿದನು ; ಆಗ ಆಶ್ಚರ್ಯಪಂಚಕಗಳಾದುವು. ವಿಪ್ರರೆಲ್ಲ ವಂದಿಸಿದರು. ವಾಯುಭೂತಿಯಾದರೆ. ಶಿಷ್ಯರಿಗೆ ಪಾಠ ಹೇಳುತ್ತಿದ್ದವನು, ಆ ಮುನಿಗೆ ಗೌರವವನ್ನು ತೋರಿಸಲಿಲ್ಲ. ಆಗ ಅಗ್ನಿಭೂತಿ ಅವನ ಕೈ ಹಿಡಿದು, ಬಾ, ಮುನಿಗಳಿಗೆ ನಮಸ್ಕರಿಸು. ಅವರ ಪ್ರಸಾದದಿಂದ ನಮಗೆ ಇಷ್ಟೆಲ್ಲ ಐಶ್ವರ್ಯ ಬಂತು ಎಂದು ಹೇಳಿ ಅವನನ್ನು ಕರೆದುಕೊಂಡು ಹೋದನು. ಎಂದೂ ಸ್ನಾನಮಾಡದ ಈ ಋಷಿಗಳಿಗೆ ನಾನು ನಮಸ್ಕರಿಸಬೇಕೋ ಎಂದು ವಾಯುಭೂತಿ ಗರ್ವದ ಮಾತುಗಳನ್ನಾಡಿದನು, ಅಗ್ನಿಭೂತಿಗೆ ವ್ಯಾಕುಲವುಂಟಾಗಿ ಅವನು ವಯಾವಾದಗಿರಿಗೆ ಹೋಗಿ ಸೂರ್ಯಮಿತ್ರನಿಂದ ಜೈನದೀಕ್ಷೆಯನ್ನು ಸ್ವೀಕರಿಸಿದನು. ಅಗ್ನಿಭೂತಿಯ ಹೆಂಡತಿ ಸೋಮದತ್ತೆ ವಾಯುಭೂತಿಗೆ ಬುದ್ಧಿ ಹೇಳಲು ಅವನು ಕೋಪಗೊಂಡು ಅವಳನ್ನು ಕಾಲಿನಿಂದ ಒದೆದು ನಿನ್ನ ಗಂಡನು ಎಲ್ಲಿರುವನೋ ಅಲ್ಲಿಗೆ ಹೋಗು ಎಂದು ಮನೆಯಿಂದ ಓಡಿಸಿದನು. ಅವಳಿಗೆ ಕೋಪಬಂದು ಮುಂದಿನ ಜನ್ಮದಲ್ಲಿ ನಿನ್ನ ಕಾಲುಗಳನ್ನು ತಿನ್ನದೆ ಇರೆನೆಂದು ಸಂಕಲ್ಪಿಸಿ ಸತ್ತು ಭವಸಾಗರದಲ್ಲಿ ಸುತ್ತುತ್ತಿದ್ದಳು.

ಇತ್ತ ವಾಯುಭೂತಿ ಋಷಿಯರನ್ನು ತಿರಸ್ಕರಿಸಿದ ಪಾಪದ ಫಲವಾಗಿ ಉದುಂಬರಕುಷ್ಠದಿಂದ ಪೀಡಿತನಾಗಿ ಏಳು ದಿವಸಗಳಲ್ಲಿ ಸತ್ತನು. ಅಂಗದೇಶದ ಚಂಪಾನಗರಕ್ಕೆ ಸೂರ್ಯಮಿತ್ರ ಬಂದನು ; ಅವನ ಸಂಗಡ ಅಗ್ನಿಭೂತಿಯೇ ಮೊದಲಾದ ಶಿಷ್ಯರಿದ್ದರು. ಅಲ್ಲಿದ್ದ ವಾಸುಪೂಜ್ಯನ ಸಿದಿಗೆಯನ್ನು ಸೂರ್ಯಮಿತ್ರ ವಂದಿಸಿ ಚತುರ್ಜ್ಞಾನಸಮನ್ವಿತನಾದನು. ಇತ್ತ ಸತ್ತ ವಾಯುಭೂತಿ ಕೌಶಂಬಿಯ ವಿದ್ಯಾಧರ ಬಂಬಿನ ಮನೆಯಲ್ಲಿ ಗರ್ದಭಿಯಾಗಿ ಹುಟ್ಟಿ ಸತ್ತು ಭೀಷಣಾಕಾರದ ಸೂಕರಿಯಾಗಿ ಹುಟ್ಟಿ ಸತ್ತು ಚಂಪಾನಗರದಲ್ಲಿ ನಾಯಿಯಾಗಿ ಹುಟ್ಟಿ ಸತ್ತು ಹುಟ್ಟುಕುರುಡಿಯಾಗಿ ಹೊಲೆಯರ ಕೂಸಾಗಿ ಚಂಪಾನಗರದಲ್ಲಿ ಹುಟ್ಟಿದನು. ಆ ಹುಡುಗಿ ನೇರಳೆ ಮರದ ಕೆಳಗೆ ಕುಳಿತು ಬಿದ್ದ ಹಣ್ಣುಗಳನ್ನು ಆರಿಸಿ ತಿನ್ನುತ್ತಿರಲು ಅವಳನ್ನು ಕಂಡ ಅಗ್ನಿಭೂತಿಗೆ ಮರುಕವಾಗಿ ಗುರುಗಳ ಬಳಿಗೆ

ಬದುಕಿದ. ಬಿಟ್ಟುಬಿಟ್ಟರು. ಅವನಿಗೆ ಮಣಿಸ್ವರ್ಣಾದಿಗಳನ್ನು ಕೊಟ್ಟು ಸಂತೋಷಪಡಿಸಲಾಯಿತು. ಇಂಥ ಕಥೆಗಳನ್ನು ಹೇಳುತ್ತ ಜನರ ಕಣ್ಮನಗಳನ್ನು ವಂಚಿಸುತ್ತ ತಾರಕನು ಬಹುಧಾನ್ಯವನ್ನು ಕದ್ದನು. ಧರ್ಮಾಧಿಕರಣದವರು ಇದನ್ನು ಕಂಡುಹಿಡಿದು ಅವನ ಮೇಲೆ ಅಸತ್ಯದ ಮತ್ತು ಚೌರ್ಯದ ದೋಷವನ್ನು ತಂದರು. ರಾಜನು ಅವನ ಜಿಹ್ವಾಹಸ್ತ ಪರಿಚ್ಛೇದವನ್ನು ಮಾಡಿ ಎಂದು ಅಪ್ಪಣೆ ಮಾಡಿದನು. ಹಾಗೆ ಮಾಡಲು ಇವನನ್ನು ಒಯ್ಯುತ್ತಿದ್ದಾರೆ. ಮಗಳೆ" ಎಂದು ನಾಗಶರ್ಮ "ಅಸತ್ಯವನ್ನು ಹೇಳದ ಚೋರತನ ಮಾಡದ ವ್ರತಗಳು ನಿನಗಿರಲಿ" ಎಂದು ಹೇಳಿದ ಮಾತನ್ನು ನಾಗಶ್ರೀ ಒಪ್ಪಿ, ಮುಂದುವರಿದು ತಂದೆಯೊಡನೆ ಹೋಗುತ್ತಿದ್ದಳು.

ದಾರಿಯಲ್ಲಿ ಒಬ್ಬನನ್ನು ಶೂಲಕ್ಕೇರಿಸಲು ಕರೆದುಕೊಂಡು ಹೋಗುತ್ತಿದ್ದರು. ಏಕೆ ಎಂಬುದನ್ನು ವಿಚಾರಿಸಿ ನಾಗಶರ್ಮ ಮಗಳಿಗೆ ಹೇಳುತ್ತಾನೆ : ಚಂಪಾಪುರಿಯ ಸಮೀಪದಲ್ಲಿ ಶೈಲಪುರ ಎಂಬ ಊರು. ಅಲ್ಲಿ ಪುಷ್ಪ ಎಂಬ ಹೆಸರಿನ ರಾಷ್ಟ್ರಕೂಟ ಕುಟುಂಬಿಕ : ಅವನ ಹೆಂಡತಿ ಜಯಕಾ : ಅವರಿಗೆ ನಂದ. ಮೋದಕ ಎಂಬಿಬ್ಬರು ಮಕ್ಕಳು : ಅವರ ಮಾವ ತನ್ನ ಮಗಳನ್ನು ಜ್ಯೇಷ್ಠನಾದ ನಂದನಿಗೆ ಕೊಟ್ಟನು : ಅವರಿಬ್ಬರಿಗೂ ಮದುವೆ ಆಗಿರಲಿಲ್ಲ : ನಂದನು ಧನಾಕಾಂಕ್ಷೆಯಿಂದ ಹನ್ನೆರಡು ವರ್ಷ ವ್ಯಾಪಾರಕ್ಕೆ ಹೊರಟನು. ದೇಶಾಂತರಗಳಿಗೆ. ನಂದನು ಬರಲಿಲ್ಲವೆಂದು ಅವನ ಮಾವ ತನ್ನ ಮಗಳನ್ನು ಮೋದನಿಗೆ ಕೊಟ್ಟು ಮದುವೆ ಮಾಡುವ ದಿನದಲ್ಲಿ ನಂದನು ಬಂದನು. ಅವನ ಮಾವನ ಮಗಳ ಮದುವೆಯಾಗೆಂದು ಕೇಳಿದಾಗ ಅವನು ಒಪ್ಪಲಿಲ್ಲ : ಮೋದನೂ ಸಮ್ಮತಿಸಲಿಲ್ಲ. ಹೀಗೆ ನಂದಮೋದರಿಂದ ಪರಿತ್ಯಕ್ತಳಾದ ಆ ಕನ್ಯೆ ಸೋಮಾರಿಕಾ ಎಂಬುವಳು. ಪಿತೃಗೃಹದಲ್ಲಿಯೇ ಇದ್ದಳು. ಅದೇ ನಗರದಲ್ಲಿದ್ದ ನಾಗಶರ್ಮ ಕುಟುಂಬಿಯರ ಮಗ ನಾಗಶೂರನೆಂಬುವನು ತನ್ನ ನಾಲ್ವರು ಭಾರ್ಯೆಯರನ್ನು ಬಿಟ್ಟು ಸೋಮಾರಿಕೆಯೊಡನೆ ರಮಿಸುತ್ತಿದ್ದನು. ಒಂದು ಸಲ ಅವನು ಸೋಮಾರಿಕೆಯೊಡನೆ ಚಂಪಾಪುರಿಗೆ ಬಂದು ಮಹಾತುರನಾಗಿದ್ದಾಗ ನಗರರಕ್ಷಕರು ಅವರನ್ನು ಹಿಡಿದರು. ರಾಜನ ಬಳಿಗೆ ಅವರನ್ನು ಒಯ್ದರು. ಕಬ್ಬಿಣದ ಸ್ತ್ರೀವಿಗ್ರಹವನ್ನು ಮಾಡಿಸಿ ಅದನ್ನು ಕೆಂಪಗೆ ಕಾಸಿ ಅದನ್ನು ಅಪ್ಪಿಕೊಳ್ಳುವಂತೆ ರಾಜನು ನಿಯಮಿಸಿದನು. ಅದ್ದರಿಂದ ಅವನನ್ನು ಕರೆದುಕೊಂಡು ಹೋಗುತ್ತಿದ್ದಾರೆ ಎಂದು ನಾಗಶರ್ಮ ಹೇಳಿದನು. ಅವರಿಬ್ಬರು ಇನ್ನೂ ಮುಂದಕ್ಕೆ ಹೋಗುತ್ತಿರಲು ಹಿಂದಿನಂತೆ ಇನ್ನೊಬ್ಬ ಮನುಷ್ಯನನ್ನು ಹೆಡಗೈ ಕಟ್ಟಿ ಒಯ್ಯುತ್ತಿದ್ದರು. ವಿಚಾರಿಸಲಾಗಿ ಅವನ ಕಥೆ ನಾಗಶರ್ಮನಿಗೆ ತಿಳಿಯಿತು : ಅವನು ಧೀರಪೂರ್ಣನೆಂಬ ಗೋಪಾಲಕ. ಅವನ ಕೆಲಸವನ್ನು ನೋಡಿ ರಾಜನು ಸಂತುಷ್ಟನಾದನು. ಇತರರೂ ತಮ್ಮ ಗೋಮಂಡಲಗಳನ್ನು ಅವನ ರಕ್ಷೆಗೆ ಒಪ್ಪಿಸಿದರು. ಧೀರಪೂರ್ಣನು ಒಳ್ಳೆಯ ಪಶುಗಳನ್ನು ಆರಿಸಿಕೊಂಡು ಅವು ತನ್ನವೆಂದು ತನ್ನ ಮನೆಯಲ್ಲಿಟ್ಟುಕೊಂಡನು ; ರಾಜನ ಕಾಮಧೇನುವನ್ನು ಕೂಡ ತನ್ನದಾಗಿಸಿಕೊಂಡನು. ರಾಜನಿಗೆ ಎಲ್ಲರೂ ದೂರು ಹೇಳಲಾಗಿ ಅವನು ಕೋಪೋದ್ದೀಪಿತನಾಗಿ ಧೀರಪೂರ್ಣನನ್ನು ನಗರದಿಂದ ಅಟ್ಟಿ ಕಳೆಯಬೇಕೆಂದು ಅಪ್ಪಣೆಮಾಡಿದನು. ಇದನ್ನು ಕೇಳಿ ನಾಗಶ್ರೀ ಹೆದರಿದವಳಾಗಿ ಅಹಿಂಸೆ. ಸತ್ಯ. ಅಸ್ತೇಯ. ಬ್ರಹ್ಮಚರ್ಯ. ಅಪರಿಗ್ರಹ ಎಂಬ ಪಂಚಾಣು ವ್ರತಗಳನ್ನು ಆ ಮುನಿಗೆ ಒಪ್ಪಿಸಿಬಿಟ್ಟರೆ ತಾನು ಇವರೆಲ್ಲರಂತೆ ದುರ್ಗತಿಗೆ ಹೋಗಬೇಕಾಗುತ್ತದೆ ಎಂದು ಹೇಳಲು ನಾಗಶರ್ಮ "ಅಯ್ದು ವ್ರತಗಳನ್ನೂ ಇಟ್ಟುಕೊ. ನಾವು ಹೋಗಿ ಆ ಶ್ರಮಣನನ್ನು ನೋಡಿ ಮನೆಗೆ ಹೋಗೋಣ" ಎಂದು ಸೂರ್ಯಮಿತ್ರಾಚಾರ್ಯರಿದ್ದಲ್ಲಿಗೆ ಬಂದನು. ಬಂದು "ಭೋ. ಶ್ರಮಣಾ. ಯಾವ ಕಾರಣದಿಂದ ನನ್ನ ಮಗಳನ್ನು ವಂಚನೆಯಿಂದ ನಿನ್ನವಳನ್ನಾಗಿ ಮಾಡಿಕೊಂಡೆ" ಎಂದು ಅರಚಿದನು. ಆಗ ಆ ಮುನಿ "ನಾಗಶ್ರೀ ಇತ್ತ ಬಾ" ಎಂದು ಕರೆಯಲು ಅವಳು ಅವನ ಬಳಿಗೆ ಹೋಗಿ ಕುಳಿತಳು. ಇದನ್ನು ನೋಡಿ ನಾಗಶರ್ಮ ಆ ನಗರದ ರಾಜ ಚಂದ್ರವಾಹನನಿಗೆ ದೂರಿತ್ತನು. ರಾಜನು ಸಪರಿವಾರನಾಗಿ ಸೂರ್ಯಮಿತ್ರನ ಸಮೀಪಕ್ಕೆ ಬಂದು ವಿಷಯವೇನೆಂದು ತಿಳಿಯಲು ಕುತೂಹಲಿತನಾದನು. ನಾಗಶರ್ಮ ರಾಜನ ಎದುರಿಗೆ ಆಗ "ನಾಗಶ್ರೀ ನನ್ನ ಮಗಳು. ನಾಗನ ಪ್ರಸಾದದಿಂದ ಹುಟ್ಟಿದವಳು. ಇವರು ನನಗೆ ಮೋಸಮಾಡಿ ತಮ್ಮ ಮಗಳಿವಳು ಎಂದು ಹೇಳುತ್ತಾರೆ" ಎಂದನು. ಆಗ ಸೂರ್ಯಮಿತ್ರ "ರಾಜ.

ನಾಗಶ್ರೀ ನನ್ನ ಮಗಳು, ನಾನು ನಾಲ್ಕು ವೇದಗಳನ್ನೂ ಇವಳಿಗೆ ಹೇಳಿಕೊಟ್ಟಿದ್ದೇನೆ" ಎಂದನು. ಹಾಗಾದರೆ ಇವಳಿಂದ ವೇದಪಠನ ಮಾಡಿಸಿರಿ ಎಂದು ಸೂರ್ಯಮಿತ್ರನಿಗೆ ಹೇಳಿದನು. ಆ ಮುನಿ ನಾಗಶ್ರೀಗೆ "ಮಗೂ, ನಾನು ನಿನಗೆ ವಾಯುಭೂತಿಯಾಗಿದ್ದಾಗ ಕಲಿಸಿದ ವೇದಗಳನ್ನು ಹೇಳು" ಎನ್ನಲಾಗಿ ಅವಳು ಜಾತಿಸ್ಮರೆಯಾಗಿ ಓಂಕಾರಪೂರ್ವಕವಾಗಿ ಕ್ರಮವಾಗಿ ವೇದಪಠನವನ್ನು ಮಾಡಿದಳು. ರಾಜನು ಆಶ್ಚರ್ಯಪಟ್ಟು ನಾಗಶ್ರೀ ನಿಮ್ಮ ಮಗಳೇ ಸರಿ ಎಂದು ಮುನಿಗೆ ಹೇಳಿ ನಾಗಶ್ರೀಗೆ ಇವೆಲ್ಲ ಹೇಗೆ ಬಂದವು ಎಂದು ಕೇಳಲಾಗಿ ಸೂರ್ಯಮಿತ್ರ ಹಿಂದಿನ ಕಥೆಯನ್ನೆಲ್ಲಾ ವಿವರವಾಗಿ ಹೇಳಿದನು. ಇದನ್ನು ಕೇಳಿ ಚಂದ್ರವಾಹನರಾಜ ವೈರಾಗ್ಯಹೊಂದಿ ಸೂರ್ಯಮಿತ್ರನಿಂದ ಜೈನತಪಸ್ವಿ ದೀಕ್ಷೆಯನ್ನು ಪಡೆದನು. ಸೋಮಶರ್ಮನೂ ದಿಗಂಬರ ದೀಕ್ಷೆಯನ್ನು ಸೂರ್ಯಮಿತ್ರನಿಂದ ಪಡೆದನು. ನಾಗಶ್ರೀಯೂ ಅವಳ ತಾಯಿ ತ್ರಿವೇದಿಯೂ ಹ್ರಾಸ್ತಿಕಾರ್ಯೆಯ ಸಮೀಪದಲ್ಲಿ ತಪೋದೀಕ್ಷೆಯನ್ನು ತೊಟ್ಟರು. ಸೂರ್ಯಮಿತ್ರನೂ ಅಗ್ನಿಭೂತಿಯೂ ಕರ್ಮಾಷ್ಟಕಗಳನ್ನು ನಾಶ ಮಾಡಿ ಅಗ್ರಪರ್ವತಮಸ್ತಕದಲ್ಲಿ ಮೋಕ್ಷಸಿದ್ಧಿಯನ್ನು ಪಡೆದರು. ನಾಗಶ್ರೀಯೂ ಅವಳ ತಾಯಿ ತ್ರಿವೇದಿಯೂ ಅಚ್ಯುತಕಲ್ಪದ ಪದ್ಮಗುಲ್ಮ ವಿಮಾನದಲ್ಲಿ ದೇವತೆಗಳಾಗಿ ಹುಟ್ಟಿದರು.

ಉಜ್ಜಯಿನಿಯಲ್ಲಿದ್ದ ಇಂದ್ರದತ್ತ ಶ್ರೇಷ್ಠಿ, ಅವನ ಭಾರ್ಯೆ ಗುಣಮತಿ. ಇವರಿಗೆ ನಾಗಶರ್ಮನಾಗಿದ್ದ ದೇವನು ಸುರೇಂದ್ರದತ್ತನೆಂಬ ಮಗನಾದನು. ಅದೇ ನಗರದಲ್ಲಿ ಇಭ್ಯಕುಲಸಂಭವನಾದ ಸುಭದ್ರನೂ ಅವನ ಭಾರ್ಯೆ ಸರ್ವಯಶೆ ಎಂಬುವಳೂ ಇದ್ದರು. ಇವರಿಗೆ ತ್ರಿವೇದಿಯಾಗಿದ್ದವಳು ಯಶೋಭದ್ರೆಯೆಂಬ ಕನ್ಯೆಯಾಗಿ ಹುಟ್ಟಿದಳು. ಇವಳಿಗೂ ಸುರೇಂದ್ರದತ್ತನಿಗೂ ವಿವಾಹವಾಯಿತು. ಇವರಿಗೆ ನಾಗಶ್ರೀಯ ಜೀವ ಅವಂತಿಕುಸುಮಾಲನೆಂಬ ಹೆಸರಿನಿಂದ ಮಗನಾಗಿ ಹುಟ್ಟಿತು. ಮಗನಿಗೆ ಶ್ರೇಷ್ಠಿ ಪದವಿಯನ್ನು ಕೊಟ್ಟು ಸುರೇಂದ್ರದತ್ತನು ಜಿನಸೇನರ ಹತ್ತಿರ ಜೈನ ದೀಕ್ಷಿತನಾದನು. ಅವಂತಿಸುಕುಮಾಲನು ನವಯೌವನನಾಗಿ ಮೂವತ್ತೆರಡು ಅರಮನೆಗಳಲ್ಲಿ ಇರುವವನಾಗಿ ಮೂವತ್ತೆರಡು ಲಕ್ಷಣಗಳಿಂದ ಕೂಡಿದವನಾಗಿ ಮೂವತ್ತೆರಡು ಸತಿಯರಿಂದ ಸೇರಿದವನಾಗಿ ಹಾರರಾಜಿತ ವೃಕ್ಷಸ್ಥನಾಗಿ ಸ್ವಪತ್ನಿಯರಲ್ಲಿ ಸುಖಿಯಾಗಿದ್ದನು. ಇವನನ್ನು ನೋಡಿ ನೈಮಿತ್ತಿಕರು ಇವನು ಜೈನ ಮುನಿರೂಪವನ್ನು ಕಂಡಕೂಡಲೇ ವಿರಕ್ತನಾಗಿ ಜೈನದೀಕ್ಷೆಯನ್ನು ತಾಳುವನೆಂದು ಭವಿಷ್ಯ ಹೇಳಿದರು. ಅವನ ತಾಯಿ ಅವನ ಮನೆಯ ಬಳಿ ದೂರದಲ್ಲಿಯಾದರೂ ಕೂಡ ಯಾವ ಜೈನಯತಿಯೂ ಸುಳಿದಾಡದಂತೆ ನೋಡಿಕೊಂಡಳು. ಉಜ್ಜಯಿನೀ ನಗರದ ರಾಜ ಪ್ರದ್ಯೋತ : ಅವನ ಮಹಾದೇವಿ ಜ್ಯೋತಿರ್ಮಾಲೆ. ಒಂದು ದಿನ ಆ ಊರಿಗೆ ದಕ್ಷಿಣ ದೇಶದಿಂದ ಒಬ್ಬ ರತ್ನಕಂಬಳಿ ವ್ಯಾಪಾರಿ ಬಂದನು. ಅವನು ತಂದ ಎಂಟು ರತ್ನಕಂಬಳಿಗಳನ್ನು ರಾಜನು ಕೊಳ್ಳಲಾಗಲಿಲ್ಲ ; ಅವಂತಿಸುಕುಮಾಲನ ತಾಯಿ ಅವುಗಳನ್ನು ಬೆಲೆಗೆ ಕೊಂಡು ಅವುಗಳನ್ನು ಮೂವತ್ತೆರಡು ವಿಭಾಗಗಳಾಗಿ ಮಾಡಿ ಮೂವತ್ತೆರಡು ಸೊಸೆಯರಿಗೆ ಹಂಚಿದಳು. ರಾಜ ಇದನ್ನು ಕೇಳಿದವನಾಗಿ ಸುಕುಮಾಲನ ಹರ್ಮ್ಯಕ್ಕೆ ಬಂದು ಸತ್ಕೃತನಾಗಿ ಸ್ನಾನಕ್ಕಾಗಿ ಅಲ್ಲಿದ್ದ ಬಾವಿಯಲ್ಲಿ ಇಳಿದನು ; ಅವನ ಮಣಿಹಾರ ಕಳಚಿಬಿದ್ದು ನೀರೊಳಗೆ ಮುಳುಗಿತು. ಅದನ್ನು ಹುಡುಕಿಸಲು ಹೋದಾಗ ಅಂಥ ಹಾರಗಳು ಲೆಕ್ಕವಿಲ್ಲದಷ್ಟು ಆ ಬಾವಿಯ ತಳದಲ್ಲಿದ್ದುವು. ರಾಜನು ಆಶ್ಚರ್ಯಪಟ್ಟು ದಿವ್ಯಭೋಜನ ಮಾಡಿ ಸರಸಸಂಭಾಷಣೆಯಿಂದ ಸುಕುಮಾಲ ಸುಖಶ್ರೀಯನ್ನು ಹೊಗಳಿದನು.

ಒಂದು ದಿನ ಅಲ್ಲಿಗೆ ಮುನಿಸಂಘ ಮಳೆಗಾಲದಲ್ಲಿ ಬಂತು. ಆ ಋಷಿಗಳು ಸುಕುಮಾಲನ ಅರಮನೆಯ ಹತ್ತಿರ ತಂಗಿ ಚಾತುರ್ಮಾಸ್ಯವಿದ್ದು ಅದರ ಅವಸಾನದಲ್ಲಿ ಪ್ರಜ್ಞಪ್ತಿಪಠನವನ್ನು ಮಾಡಿದರು. ಅದನ್ನು ಕೇಳಿ ಸುಕುಮಾಲನು ಜಾತಿಸ್ಮರನಾಗಿ ವೈರಾಗ್ಯವನ್ನು ಹೊಂದಿ ಋಷಿಗಳ ಸಮೀಪಕ್ಕೆ ಬಂದು ತನ್ನ ಆಯುಸ್ಸಿನ ಮಿತಿಯನ್ನು ಕೇಳಿದನು. ಮೂರೇ ದಿವಸ ನಿನಗಾಯುಷ್ಯ ಎಂದು ಅವರು ಹೇಳಲು ಸುಕುಮಾಲನು ಪ್ರತ್ಯಾಖ್ಯಾನಪೂರ್ವಕವಾಗಿ ಶೀಲವ್ರತದ ಜೊತೆಗೆ ತಪೋಗ್ರಹಣ ಮಾಡಿದನು. ಮಹಾಕಾಲ ಉದ್ಯಾನದಲ್ಲಿ ಅವನು ನಿಷ್ಪಂದನಾಗಿ ಧ್ಯಾನಾರೂಢ

ನಾಗಿದ್ದನು : ಶುಭೋಪಯೋಗಚಿತ್ತನಾಗಿ ಪ್ರತಿಕ ಕಾಯೋತ್ಸರ್ಗದಲ್ಲಿದ್ದನು. ನರಿಯಾಗಿ ಹುಟ್ಟಿದ್ದ ಅಗ್ನಿಭೂತಿ ಭಾರ್ಯೆ ಸೋಮದತ್ತೆಯೂ ಅವಳ ನಾಲ್ಕರು ಮಕ್ಕಳೂ ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ಸುತ್ತುತ್ತ ಮಹಾಕಾಲಕ್ಕೆ ಬಂದು ಪೂರ್ವವೈರ ಕಾರಣವಾಗಿ ಸುಕುಮಾಲನನ್ನು ನೋಡಿದ ಕೂಡಲೇ ಅವನ ಕಾಲುಗಳನ್ನು ಹಿಡಿದು ರಕ್ತಪಾನ ಮಾಡಿದುವು. ಹೀಗೆ ಮೂರು ದಿನಗಳು ಆ ನರಿಗಳು ಅವನ ದೇಹವನ್ನು ತಿಂದರೂ ಸಮಾಧಿಮರಣದಿಂದ ಅವನು ಸತ್ತು ಅಚ್ಯುತಕಲ್ಪದ ನಳಿನೀ ಗುಲ್ಮವಿಮಾನದಲ್ಲಿ ಮೂವತ್ತೆರಡು ಸಾಗರೋಪಮಾಯುಷ್ಯನಾಗಿ ದೇವತೆಯಾಗಿ ಹುಟ್ಟಿದನು.

ಇರುಳಿನ ನಾಲ್ಕನೆಯ ಜಾವದಲ್ಲಿ ದೇವಕಾದಿಗಳ ಶಬ್ದಗಳನ್ನು ಕೇಳಿ ಯಶೋಭದ್ರೆ ಸೊಸೆಯರೊಡನೆ ಹುಡುಕುತ್ತ ಬಂದು ಮೃತಕವನ್ನು ಕಂಡು ದುಃಖಿತಳಾದಳು. ಗರ್ಭವತಿಯಾದ ಒಬ್ಬ ಸೊಸೆಯನ್ನು ಉಳಿದು ಮಿಕ್ಕವರೆಲ್ಲ ಜೈನದೀಕ್ಷೆಯನ್ನು ಧರಿಸಿದರು ; ತಪಸ್ಸಿನಿಂದ ಸ್ವರ್ಗವನ್ನು ಸಂಪಾದಿಸಿಕೊಂಡರು. ಈ ಕಥೆಯನ್ನು ಕುಶಲರಾದ ನರರು ಇಂದಿಗೂ ಹೇಳುತ್ತಾರೆ. ಅವಂತಿ ಸುಕುಮಾಲನು ಸತ್ತ ಎಡೆ ಇಂದಿಗೂ ಕಾಪಾಲಿಕರಿಂದ ರಕ್ಷಿತವಾಗಿದೆ. ಆ ಕಾಪಾಲಿಕರಿಗೆ ಹೂವನ್ನು ಕೊಟ್ಟು ಮಹಾಜನರು ಪುಣ್ಯಬುದ್ಧಿಯಿಂದ ಅಲ್ಲಿ ಶವದಹನ ಮಾಡುತ್ತಾರೆ. ದೇವತೆಗಳು ಬಂದು ಅವಂತಿಸುಕುಮಾಲನ ಶವವನ್ನು ಗಂಧೋದಕಗಳಿಂದ ಪೂಜೆ ಮಾಡಿದ್ದರಿಂದ ಸರ್ವದಿಕ್ಕುಗಳೂ ಸುಗಂಧಮಯವಾಗಿ ಗಂಧವತೀ ಎಂಬ ನದಿ ಉತ್ಪನ್ನವಾಯಿತು. ಸುಕುಮಾಲನ ಭಾರ್ಯೆಯರು ಮಾಡಿದ ಕಲಕಲ ಸ್ವನದಿಂದ ಲೋಕವಿಖ್ಯಾತನಾದ ಕಲಕಲೇಶ್ವರನೆಂಬ ದೇವನು ಅಲ್ಲಿ ನೆಲಸಿರುವನು. (೨೬೯ ಶ್ಲೋಕಗಳು)

## ೧೩. ಸುಕೌಶಲ ಕಥಾನಕಂ

ವಿನೀತಾವಿಷಯ. ಕೋಶಲವೆಂಬ ನಗರ. ರಾಜ ಪ್ರಜಾಪಾಲ : ಅವನ ಮಹಾದೇವಿ ಸುಪ್ರಭೆ. ಅವರ ಶ್ರೇಷ್ಠಿ ಇಭ್ಯಕುಲದ ಸಿದ್ಧಾರ್ಥ : ಅವನ ತಂದೆಯ ಹೆಸರು ಧನಪತಿ. ಅವನಿಗೆ ಮೂವತ್ತೆರಡು ವನಿತೆಯರು. ಮೂವತ್ತೆರಡು ಕೋಟಿ ಕಸವರ ; ಅವನ ಅಗ್ರವಲ್ಲಭೆ ಜಯಮತಿ. ಮಗನ ಉತ್ಪತ್ತಿಯನ್ನು ಬಯಸಿ ಅವನೂ ಅವನ ವಲ್ಲಭೆ ಜಯಮತಿಯೂ ಸೌಧತಲದ ಮೇಲೆ ಇರುವಾಗ ತನ್ನ ತಲೆಯಲ್ಲಿ ಅವನ ನರೆಗೂದಲನ್ನು ಕಂಡನು. ಜಯಮತಿ ಅವನಿಗೆ ಅದನ್ನು ತೋರಿಸುತ್ತ ಅದು ಧರ್ಮದೂತನೆಂದು ಹೇಳಿದಳು. ಅವನಿಗೆ ವೈರಾಗ್ಯ ಹುಟ್ಟಿ ತಪಸ್ಸಿಗೆ ಹೋಗಲು ಮನವಾಯಿತು. ವಂಶವರ್ಧನನಾದ ಮಗನು ಹುಟ್ಟುವವರೆಗೆ ತಪಸ್ಸಿಗೆ ಹೋಗಕೂಡದೆಂದು ಅವನ ಆಪ್ತರು ಹೇಳಿದರು. ಆ ಮಾತನ್ನು ಅವನು ಒಪ್ಪಿದನು. ಒಬ್ಬ ಜೈನಮುನಿ ಜಯಮತಿಗೆ ಸಮ್ಯಕ್ತ್ವೋಪದೇಶ ಮಾಡಿ ಅವಳಿಗೆ ಮಗನಾಗುವನೆಂದು ಆದೇಶಿಸಿದನು. ಅನಂತರ ಸರ್ವಲಕ್ಷಣ ಸಂಪನ್ನನಾದ ಒಬ್ಬ ಮಗ ಹುಟ್ಟಿದನು. ಈ ಸುದ್ದಿ ಸಿದ್ಧಾರ್ಥನಿಗೆ ತಿಳಿಯದಂತೆ ನೋಡಿಕೊಳ್ಳಲಾಗಿತ್ತು. ಅವರ ಒಬ್ಬ ಚೇಟಿ ಇನ್ನೊಬ್ಬಳಿಗೆ 'ನೋಡೇ ಜಯಮತಿಗೆ ಮಗನು ಹುಟ್ಟಿದನು' ಎಂದು ಹೇಳಿದಳು. ಸೋಮಶರ್ಮನೆಂಬ ಬಡಬ್ರಾಹ್ಮಣನಿಗೆ ಈ ಮಾತು ಕೇಳಿಸಿತು. ಅವನು ಈ ಶುಭ ಸಮಾಚಾರವನ್ನು ಸೆಟ್ಟಿಗೆ ತಿಳಿಯಪಡಿಸಿ ಅವನಿಂದ ಅಂಗಸ್ಪೃಷ್ಟವನ್ನೂ ನೂರು ಗ್ರಾಮಗಳನ್ನೂ ಪಡೆದನು. ಅನಂತರ ಜಯಮತಿಯ ಬಳಿಗೆ ಹೋಗಿ ಪುತ್ರಮುಖವನ್ನು ನೋಡಿ ಸಂತುಷ್ಟನಾಗಿ ಸೆಟ್ಟಿ ಜಿನಪೂಜೆ ಮಾಡಿ ಧನದೇವನೆಂದು ಮಗುವಿಗೆ ಹೆಸರಿಟ್ಟನು. ನಗರದ ಜನರೆಲ್ಲ ನೆರೆದು ಅತಿ ಸಂತೋಷದಿಂದ ಅವನನ್ನು ಸುಕೌಶಲನೆಂದು ಕರೆದರು. ಸಿದ್ಧಾರ್ಥನು ಮಗನಿಗೆ ಸೆಟ್ಟಿಪಟ್ಟವನ್ನು ಕೊಟ್ಟು ವಿನಯಂಧರ ಗುರುಗಳ ಪಕ್ಕದಲ್ಲಿ ಅನೇಕ ಅನುಯಾಯಿಗಳೊಡನೆ ತಪೋದೀಕ್ಷೆಯನ್ನು ಧರಿಸಿದನು. ಅವನ ಹೆಂಡತಿ ಜಯಮತಿಗೆ ಗಂಡನ ಮೇಲೆ ಮುಳಿಸುಂಟಾಗಿ ಮನೆಯ ಹತ್ತಿರ ಸನ್ಯಾಸಿಗಳ ಸುಳಿದಾಟವಿಲ್ಲದಂತೆ ನಿಯಮಿಸಿದಳು. ಮಗನ ಪಾಲನೆಯನ್ನು ನೋಡಿಕೊಳ್ಳುತ್ತ ಅವಳು ಸುಖವಾಗಿದ್ದಳು. ಆ ಬಾಲಕನಿಗೆ ಐವರು ದಾದಿಗಳಿದ್ದರು ; ಒಬ್ಬಳು ಸುನಂದೆ ಮೊಲೆ ಊಡುವವಳು. ನಂದೆಯು ಅಲಂಕರಿಸುವ ದಾದಿ. ಸುಮತಿ ಆಟವಾಡಿಸುವ ದಾದಿ. ಸುಪ್ರಭೆ

ಚಾತುರ್ಮಾಸ್ಯಕ್ಕಾಗಿ ಬಂದು ಗುಹೆಯಲ್ಲಿದ್ದರು. ಮಳೆಗಾಲ ಮುಗಿದ ಕೂಡಲೇ ಅವರಿಬ್ಬರೂ ಪಾರಣೆಗೆಂದು ಭಿಕ್ಷಾರ್ಥಿಗಳಾಗಿ ನಗರದ ಕಡೆಗೆ ಹೋಗುತ್ತಿದ್ದರು. ಹುಲಿ ಇವರನ್ನು ಕಂಡು ಮೇಲೆ ಬಿದ್ದು ಉಗುರು ಹಲ್ಲುಗಳಿಂದ ಸೀಳಿ ಸಾಯಿಸಿತು. ಅವರಿಬ್ಬರೂ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರರಾಗಿ ಜನ್ಮಿಸಿದರು. ಹುಲಿ ತನ್ನ ಮರಿಗಳ ಸಮೇತ ಅವರಿಬ್ಬರ ದೇಹಗಳನ್ನು ತಿನ್ನುತ್ತಿರುವಾಗ ಸುಕೋಶಲನ ಕೈಮೇಲಿದ್ದ ಕಾಲಾದಿ ತಿಲಕವನ್ನು ನೋಡಿ ಜಾತಿಸ್ಮರಣೆಯನ್ನು ಹೊಂದಿ ತನ್ನನ್ನು ತಾನೇ ನಿಂದಿಸಿಕೊಳ್ಳುತ್ತ ಸರ್ವತ್ಯಾಗಮಾಡಿ ಸತ್ತು ಸ್ವರ್ಗವಾಸಿಯಾಯಿತು. ಶ್ರೀಕಾಂತೆಯೇ ಮುಂತಾದ ಸಿದ್ಧಾರ್ಥನ ಹೆಂಡತಿಯರೂ ಸುಕೋಶಲನ ಮಡದಿಯರೂ ಗುಣಾರ್ಯೆಯ ಹತ್ತಿರ ದೀಕ್ಷಾಧಾರಣೆಯನ್ನು ಮಾಡಿದರು. ಉಗ್ರವಾದ ತಪಸ್ಸನ್ನಾಚರಿಸಿ ಅವರು ಸುರಲೋಕಪ್ರಾಪ್ತರಾದರು. ಗಂಧಮಾದನ ರಾಜನು ಕೂಡ ಯಶೋಧರ ಗುರುಗಳಿಂದ ತನ್ನ ಪೂರ್ವವೃತ್ತಾಂತವನ್ನೆಲ್ಲಾ ತಿಳಿದು ವಿರಕ್ತಿ ಹೊಂದಿ ದೀಕ್ಷೆ ಪಡೆದು ತಪಸ್ಸುಮಾಡಿ ಪಾಂಡುಕಪರ್ವತದಲ್ಲಿ ಸಿದ್ಧಿಯನ್ನು ಸಂಪಾದಿಸಿದನು. (೨೮೪ ಶ್ಲೋಕಗಳು)

## ೧೨೮. ಗಜಕುಮಾರ ಕಥಾನಕಂ

ಸೌರಾಷ್ಟ್ರ ವಿಷಯ. ದ್ವಾರವತೀ ನಗರ. ರಾಜ ವಸುದೇವ. ರಾಣಿ ಗಂಧರ್ವದತ್ತೆ. ಇವರ ಮಗ ಗಜಕುಮಾರ. ಪೌದನಪುರದ ರಾಜ ಅಪರಾಜಿತ. ಅವನ ಪ್ರಿಯೆ ಅಪರಾಜಿತೆ. ಇವನಿಗೆ ವಸುದೇವನ ಮೇಲೆ ರೋಷ. ಅದ್ದರಿಂದ ವಸುದೇವನು ಅಪರಾಜಿತನನ್ನು ಹಿಡಿದು ತಂದವರಿಗೆ ವರವನ್ನು ಕೊಡುತ್ತೇನೆಂದು ತನ್ನ ನಗರದಲ್ಲಿ ಘೋಷಿಸಿದನು. ಈ ಘೋಷಣೆಯನ್ನು ಗಜಕುಮಾರನು ಕೇಳಿ ಪೌದನಪುರಕ್ಕೆ ಹೋಗಿ ಭಯಂಕರ ಕಾಳಗವಾಗಿ ಅಪರಾಜಿತನನ್ನು ಕಟ್ಟಿ ಸೆರೆಯಾಗಿಸಿ ವಸುದೇವನ ಮುಂದೆ ತಂದಿರಿಸಿದನು. ವರವನ್ನು ಕೇಳು ಕೊಡುತ್ತೇನೆ ಎಂದ ವಸುದೇವ. ನಿನ್ನ ಪುರದಲ್ಲಿ ನಾನು ಸ್ವಚ್ಛಂದವಾಗಿ ವಿಹರಿಸುತ್ತೇನೆ. ನಿನ್ನ ಪ್ರಸಾದದಿಂದ. ಎಂದು ಗಜಕುಮಾರ ವರವನ್ನು ಪಡೆದು ಆ ಪುರದ ಪಂಗುಲ ಶ್ರೇಷ್ಠಿಯ ಭಾರ್ಯೆ ಸುರತಿಯೊಡನೆ ಭಯವಿರಹಿತನಾಗಿ ಸಂತುಷ್ಟನಾಗಿ ರಮಿಸಿದನು. ಪಂಗುಲನು ಇದನ್ನೆಲ್ಲ ನೋಡಿದರೂ ಏನನ್ನೂ ಮಾಡಲು ಅಸಮರ್ಥನಾಗಿ ಮನಸ್ಸಿನಲ್ಲಿ ಕೋಪಾನ್ವಿತನಾದನು. ಈ ನಡುವೆ ಗಜಕುಮಾರನು ನೇಮಿನಾಥ ತೀರ್ಥಂಕರನ ಸಮೀಪದಲ್ಲಿ ಧರ್ಮವನ್ನು ಕೇಳಿ ವಿರಕ್ತನಾಗಿ ಪ್ರವ್ರಜ್ಯವನ್ನು ಕೈಕೊಂಡನು. ಅನಂತರ ಅನೇಕ ತಪಸ್ಸುಗಳನ್ನು ಆಚರಿಸುತ್ತ ನಾನಾತರುವಿರಾಜಿತವಾದ ರೈವತಕೋದ್ಯಾನಕ್ಕೆ ಬಂದು ಪಾದೋಪಗಮನ ಮೃತ್ಯುವನ್ನು ಬಯಸುತ್ತ ಉತ್ತಾನಶಯ್ಯೆಯಲ್ಲಿ ಕುಮಾರನು ನಿಂತುಕೊಂಡನು. ಈ ವಿಷಯವನ್ನು ಪಂಗುಲಕನು ಕೇಳಿ ಮುನಿಯ ಬಳಿಗೆ ಲೋಹಕೀಲಗಳ ಸಮೇತನಾಗಿ ಹೋಗಿ ಅತ್ಯಂತ ಕೋಪಾವಿಷ್ಟನಾಗಿ ಅವನ ಶರೀರವನ್ನು ಕೀಲಕಗಳಿಂದ ಜಡಿದು ಹೊಡೆದು ತನ್ನ ಮನೆಗೆ ಮರಳಿದನು. ಈ ವೇದನೆಯನ್ನು ಗಜಕುಮಾರನು ಸೈರಿಸಿ ಸತ್ತು ದೇವಲೋಕಕ್ಕೆ ಹೋದನು. (೧೯ ಶ್ಲೋಕಗಳು)

## ೧೨೯. ಸನತ್ಕುಮಾರಚಕ್ರಿ ಕಥಾನಕಂ

ಕುರುಜಾಂಗಲ ದೇಶ. ಹಸ್ತಿನಾಪುರ ರಾಜ ಕುರುವಂಶಸಂಭೂತ ವಿಶ್ವಸೇನ. ಅವನ ಮಹಾದೇವಿ ಪ್ರಿಯಂವದೆಯಾದ ಸಹದೇವಿ. ಇವರ ಮಗ ಸನತ್ಕುಮಾರ. ಚತುರ್ಥಕ ಚಕ್ರವರ್ತಿ. ಇವನು ರೂಪಾತಿಶಯಸಂಪನ್ನನಾಗಿ ರಾಜಭೋಗಗಳನ್ನು ಅನುಭವಿಸುತ್ತ ಇದ್ದನು. ಪ್ರಥಮ ಕಲ್ಪೇಂದ್ರನು ಸೌದಾಮನ್ಯಾದಿ ನಾಟಕವನ್ನು ನೋಡುತ್ತ ಸಿಂಹಾಸನಸ್ಥಿತನಾಗಿದ್ದಾಗ ಸಂಗಮ ನಾಮಕ ದೇವನು ಈಶಾನಕಲ್ಪದಿಂದ ಬಂದ ಸೌಧರ್ಮೇಂದ್ರನನ್ನು ಕಂಡನು. ದೇವತೆಗಳ ತೇಜಸ್ಸು ಅವನ ಬರವಿನಿಂದ ನಷ್ಟವಾಯಿತು. ಸೂರ್ಯೋದಯದಲ್ಲಿ ಚಂದ್ರನ ಕಾಂತಿಯ ಹಾಗೆ. ವಿಸ್ಮಿತರಾದ ದೇವತೆಗಳು ಶಕ್ರನನ್ನು ಕೇಳಿದರು. ಯಾವ ಕಾರಣದಿಂದ ಈ ದೇವನು ದೀಪ್ತಿಶ್ರೇಷ್ಠ ನಾದನು ಎಂದು. ಅದಕ್ಕೆ ಇಂದ್ರ ಹೇಳಿದ. ಆಚಾಮ್ಲವರ್ಧನಾಖ್ಯತಪವನ್ನು ಇವನು ಮಾಡಿದ್ದ

## ೧೩೧. ಭದ್ರಬಾಹು ಕಥಾನಕಂ

ಪೌಂಡ್ರವರ್ಧನ ವಿಷಯ. ಕೋಟೀಮತ ಎಂಬ ಪುರ. ರಾಜ ಪದ್ಮರಥ. ಅವನ ದೇವಿ ಪದ್ಮಶ್ರೀ ಪತಿವಲ್ಲಭಾ. ಇವನ ದ್ವಿಜ ಸೋಮಶರ್ಮ. ಭಾರ್ಯೆ ಸೋಮಶ್ರೀ. ಇವರಿಬ್ಬರ ಮಗ ಭದ್ರಬಾಹು (ಭದ್ರಂ ಭದ್ರಾಶ್ರಯಃ). ಇವನಿಗೆ ಮುಂಜಿ ಆದಮೇಲೆ ಅನೇಕ ಬ್ರಹ್ಮಚಾರಿಗಳೊಡನೆ ದೇವಕೋಟ್ಟ (= ಕೋಟೀಮತ). ಪುರದಲ್ಲಿ ಆಡುತ್ತಿದ್ದನು. ಒಂದು ವಟ್ಟಿನ ಮೇಲೆ ಇನ್ನೊಂದು ವಟ್ಟನ್ನಿಟ್ಟು ೧೪ ಆಗುವವರೆಗೆ ಆಟ. ಆಗ ಗೋವರ್ಧನನು ಚತುರ್ದಶಪೂರ್ವಧಾರಿ ವರ್ಧಮಾನ ಜಿನನ ನಿರ್ವಾಣಾನಂತರ ಊರ್ಜಯಂತ ಗಿರಿಗೆ ಹೋಗುತ್ತ ಕೋಟೀನಗರಕ್ಕೆ ಬಂದು ಭದ್ರಬಾಹು ಕುಮಾರನನ್ನು ನೋಡಿದನು. ಈ ಹುಡುಗನು ಪಂಚಮಶ್ರುತ ಕೇವಲಿ ಆಗುವನೆಂದು ತಿಳಿಸಿದನು. ಹೀಗೆ ಆದೇಶ ಮಾಡಿದನು. ತಂದೆಯ ಒಪ್ಪಿಗೆಯಿಂದ ಭದ್ರಬಾಹುವನ್ನು ಶಿಷ್ಯನನ್ನಾಗಿ ಮಾಡಿಕೊಂಡು ಅವನಿಗೆ ಗೋವರ್ಧನ ನಾನಾ ಶಾಸ್ತ್ರಗಳನ್ನು ಕಲಿಸಿದನು. ಭದ್ರಬಾಹು ವಿರಕ್ತನಾಗಿ ತಪೋನಿರತನಾದನು. ಸ್ವಲ್ಪ ಕಾಲದಲ್ಲೇ ಸಮಸ್ತ ಶ್ರುತಪಾರಗನಾದನು. ಗೋವರ್ಧನನ ಪ್ರಸಾದದಿಂದ ಮುನಿಯಾದನು. ಕಾಯೋತ್ಸರ್ಗದಲ್ಲಿ ನಿಂತನು. ದೇವತೆಗಳೆಲ್ಲ ಇವನಿಗೆ ಪೂಜೆಮಾಡಿದರು. ಅನಂತರ ಅವನು ಸಮಸ್ತಗಣಪಾಲಕನಾದನು. ನಾನಾ ತಪಸ್ಸುಗಳನ್ನು ಮಾಡಿ ಗೋವರ್ಧನ ಸುರಲೋಕಕ್ಕೆ ಹೋದ. ಆಮೇಲೆ ಭದ್ರಬಾಹು ವಿಹಾರಿಸುತ್ತ ಅವಂತೀ ವಿಷಯದ ಉಜ್ಜಯಿನೀಪುರಿಗೆ ಬಂದನು. ಸಿಪ್ರಾನದೀತಟದ ಉಪವನದಲ್ಲಿ ಚತುರ್ವಿಧ ಸಂಘ ಸಮೇತನಾಗಿ ಭದ್ರಬಾಹು ಮುನಿ ತಂಗಿದನು.

ಆ ಪುರಿಯಲ್ಲಿ ಚಂದ್ರಗುಪ್ತರಾಜನು ಸಮ್ಯಗ್ದರ್ಶನಸಂಪನ್ನನು. ತನ್ನ ದೇವಿ ಸುಪ್ರಭೆಯೊಡನೆ ಇದ್ದನು. ಭದ್ರಬಾಹು ಮನೆಯಿಂದ ಭಿಕ್ಷಾರ್ಥವಾಗಿ ತೊಳಲುತ್ತ ಬಂದನು. ಅವನು ಹೊಕ್ಕ ಒಂದು ಮನೆಯಲ್ಲಿ ಜನರೇ ಇರಲಿಲ್ಲ ಆ ಮನೆಯಲ್ಲಿ ಜೋಲಿಕಾಂತರ್ಗತ ಶಿಶುವೊಂದಿತ್ತು; ಭಗವನ್. ಇಲ್ಲಿಂದ ಬೇಗನೆ ಹೊರಟುಹೋಗು ಎಂದು ಅದು ಹೇಳಿತು. ದಿವ್ಯಜ್ಞಾನಿಯಾದ ಭದ್ರಬಾಹು ಮಗುವಿನ ಮಾತಿನಿಂದ ದ್ವಾದಶ ವರ್ಷಗಳ ಕ್ಷಾಮ ಬರುತ್ತದೆಂಬುದನ್ನು ಅರಿತವನಾಗಿ ಭೋಜನ ವಿಮುಖನಾಗಿ ಜಿನಮಂದಿರಕ್ಕೆ ಬಂದನು. ಅಲ್ಲಿ ಮಧ್ಯಾಹ್ನವೇಳೆಯಲ್ಲಿ ತನ್ನ ಸಂಘಕ್ಕೆ ಹೀಗೆಂದು ಹೇಳಿದನು: ಈ ದೇಶದಲ್ಲಿ ಅನಾವೃಷ್ಟಿಯಾಗಿ ದ್ವಾದಶ ವರ್ಷಗಳ ದುರ್ಭಿಕ್ಷ ಬರುತ್ತದೆ. ದೇಶ ಜನಶೂನ್ಯವಾಗುತ್ತದೆ? ನೃಪ ತಸ್ಕರ ಲುಂಟಾಕರಿಂದ. ನಾನು ಕ್ಷೀಣಾಯುಷ್ಯನಾಗಿರುವುದರಿಂದ ಇಲ್ಲಿಯೇ ಇರುತ್ತೇನೆ. ನೀವೆಲ್ಲ ಸಾಧುಗಳು ಲವಣಾಬ್ಧಿ ಸಮೀಪಕ್ಕೆ ಹೋಗಿ ಎಂದು ಹೇಳಿದನು. ಭದ್ರಬಾಹುವಿನ ಮಾತನ್ನು ಕೇಳಿ ಚಂದ್ರಗುಪ್ತ ನಾನೂ ಯೋಗಿಯ ಜೆಸೆಯಲ್ಲೇ ಇರುವೆನೆಂದು ಹೇಳಿ ತಪಸ್ಸನ್ನು ಸ್ವೀಕರಿಸಿದನು. ಚಂದ್ರಗುಪ್ತ ಮುನಿಯು ದಶಪೂರ್ವಧರರಲ್ಲಿ ಪ್ರಥಮನಾಗಿ ವಿಶಾಖಾಚಾರ್ಯನೆಂಬ ಹೆಸರಿನಿಂದ ಸರ್ವಸಂಘಾಧಿಪನಾದನು. ಈ ಸಂಘ ಸಮುದಾಯದೊಡನೆ ಗುರುವಾಕ್ಯಾನುಸಾರವಾಗಿ ಚಂದ್ರಗುಪ್ತನು ದಕ್ಷಿಣಾಪಥದ ದೇಶದಲ್ಲಿರುವ ಪುನ್ನಾಟ ವಿಷಯಕ್ಕೆ ಪ್ರಯಾಣ ಮಾಡಿದನು. ರಾಮಿಲ್ಲ. ಸ್ಥೂಲವೃದ್ಧ. ಭದ್ರಾಚಾರ್ಯ ಎಂಬ ಮೂವರು ಸ್ವಸಂಘ ಸಮುದಾಯಗಳೊಡನೆ ಸಿಂಧ್ವಾದಿದೇಶಗಳಿಗೆ ಹೋದರು. ಭದ್ರಬಾಹು ಮುನಿಯು (ಭಾದ್ರಪದಮ ದೇಶಂ ಉಜ್ಜಯಿನೀಭವಂ) ಹಲವು ದಿವಸಗಳು ಅನಶನ ವ್ರತವನ್ನು ಕೈಕೊಂಡು ಆರಾಧನಾವಿಧಿಯಿಂದ ಸಮಾಧಿಮರಣವನ್ನು ಹೊಂದಿ "ದಿವಂ ಯಯೌ." ಕ್ಷಾಮ ಕಳೆದು ಸುಭಿಕ್ಷ ತಲೆದೋರಲು ಭದ್ರಬಾಹು ಗುರುವಿನ ಶಿಷ್ಯ ವಿಶಾಖಾಚಾರ್ಯನು (= ಚಂದ್ರಗುಪ್ತ) ದಕ್ಷಿಣಾಪಥದಿಂದ ಮಧ್ಯ ಪ್ರದೇಶಕ್ಕೆ ಬಂದನು. ಸಿಂಧು ವಿಷಯಕ್ಕೆ ಹೋದ ಆ ಮೂವರು ಮುನಿಗಳು ಪಾಪಾನ್ನಭೋಜನ ಲೀನವಾದ ಆ ಭೀಷಣ ಕಾಲದಲ್ಲಿ ಜನಸನ್ನಿಧಿಯಲ್ಲಿ ಹೀಗೆ ಹೇಳಿದರು: "ಬಾಗಿಲಲ್ಲಿ ನಿಂತ ಭಿಕ್ಷುಕ ಜನ ಗಲಾಟೆ ಮಾಡುತ್ತ ತಿನ್ನುವುದಕ್ಕೆ ಇಲ್ಲದವರಾಗಿದ್ದಾರೆ. ಎಲ್ಲರೂ ಕ್ಷುಧಾಗ್ರಸ್ತರಾಗಿದ್ದಾರೆ. ಇವರ ಹೆದರಿಕೆಯಿಂದ ರಾತ್ರಿ ಅಡಿಗೆ ಮಾಡಬೇಕಾಗಿದೆ. ಭಿಕ್ಷುಗಳೇ. ನೀವು ಕೂಡ ರಾತ್ರಿ ಭಿಕ್ಷೆಯನ್ನು ತಂದು ಅದನ್ನು ಹಗಲು ಊಟ ಮಾಡಿರಿ" ಎಂದು. ಸಾಧುಗಳು ಹಾಗೆಯೇ ಮಾಡಲಾರಂಭಿಸಿದರು. ಒಬ್ಬ ಮುನಿ ಚಿತ್ತರಹಿತನಾಗಿ. ಕ್ಷೀಣವಿಗ್ರಹನಾಗಿ ಭಿಕ್ಷಾಪಾತ್ರೆಯನ್ನು ಹಿಡಿದುಕೊಂಡು ಶ್ರಾವಕ ಗೃಹಕ್ಕೆ ಹೋದನು. ರಾತ್ರಿಹೊತ್ತಿನಲ್ಲಿ. ಒಬ್ಬ ಗರ್ಭಿಣಿ ಶ್ರಾವಕಿ ಈ ಮುನಿರೂಪವನ್ನು ಕಂಡು

ಬಿಟ್ಟರಳು. ಗರ್ಭಸ್ರಾವವಾಯಿತು. ಇದನ್ನು ನೋಡಿದ ಶ್ರಾವಕರೆಲ್ಲ ಯತೀಶರನ್ನು ಕುರಿತು ಹೀಗೆಂದರು: ಈ ಕೆಟ್ಟ ಕಾಲ ಕಳೆದಮೇಲೆ ಪ್ರಾಯಶ್ಚಿತ್ತ ಮಾಡಿಕೊಳ್ಳಬಹುದು. ಒಳ್ಳೆ ಕಾಲ ಬಂದಾಗ ಮರಳಿ ತಪಸ್ಸಿಗೆ ತೊಡಗಬಹುದು; ಅಲ್ಲಿಯವರೆಗೆ ಎಡಗೈಯಿಂದ ಅರ್ಧವಸ್ತ್ರ ಹಿಡಿದುಕೊಂಡು ಭಿಕ್ಷೆಗೆ ಬನ್ನಿರಿ. ರಾತ್ರಿ ಬೇಡಿ ಹಗಲು ಊಟ ಮಾಡಿರಿ ಎಂದು. ಸಾಧುಗಳು ಇದಕ್ಕೆ ಒಪ್ಪಿಕೊಂಡರು. ಒಳ್ಳೆ ಕಾಲ ಬಂತು. ಆಗ ಆ ಮೂವರು ಮುನಿಗಳು ಸರ್ವ ಸಾಧುಗಳನ್ನು ಕೂಗಿ ಕರೆದು 'ಅರ್ಧಫಾಲಕವನ್ನು ಬಿಟ್ಟು ನಿರ್ಗ್ರಂಥರೂಪವನ್ನು ಧಾರಣೆ ಮಾಡಿರಿ' ಎಂದು ಹೇಳಿದರು. ಮುಕ್ತಿಲಾಲಸಚೇತನರು ಕೆಲವರು ನಿರ್ಗ್ರಂಥರೂಪಧಾರಣೆ ಮಾಡಿದರು. ಆ ಬಳಿಕ ಆ ಮೂವರು ಆಚಾರ್ಯರು ವಿಶಾಖಾಚಾರ್ಯನ (ಚಂದ್ರಗುಪ್ತನ) ಬಳಿಗೆ ಬಂದರು. ಅವರು ಅರ್ಧಕರ್ಪಟವನ್ನು ಬಿಟ್ಟು ಮೂವರೂ ದಿಗಂಬರರಾದರು. ಜಿನಕಲ್ಪ, ಸ್ಥವಿರಕಲ್ಪ—ಎಂಬೆರಡು ವಿಧಾನಗಳಾದುವು. ಅರ್ಧಫಾಲಕ ಸಂಯುಕ್ತರಿಂದ. ಸೌರಾಷ್ಟ್ರ ದೇಶದ ವಲಭಿಪುರ. ರಾಜ ವಪ್ರಪಾದ. ಮಿಥ್ಯಾದರ್ಶನ ದೂಷಿತನು. ಅವನ ದೇವಿ ಸ್ವಾಮಿನಿ. ಇವಳಿಗೆ ಅರ್ಧಫಾಲಕರಲ್ಲಿ ತುಂಬ ಭಕ್ತಿ. ಒಂದು ದಿವಸ ರಾಜನೂ ದೇವಿಯೂ ದಿಗವಲೋಕನವನ್ನು ನೋಡುತ್ತಿರುವಾಗ ಒಬ್ಬ ಅರ್ಧಫಾಲಕನು ಮಧ್ಯಾಹ್ನ ವೇಳೆಯಲ್ಲಿ ರಾಜಮಂದಿರಕ್ಕೆ ಬಂದನು. ಇದನ್ನು ನೋಡಿ ರಾಜ ತನ್ನ ದೇವಿಗೆ ಹೇಳಿದನು— ಅರ್ಧಫಾಲಕ ಸಂಘ ನಿನಗೆ ಶೋಭನವಾದುದಲ್ಲ. ಇವರು ನಗ್ನರೂ ಅಲ್ಲ. ವಸ್ತ್ರವೀತರೂ ಅಲ್ಲ ಎಂದು. ವಿಡಂಬನಪೂರ್ವಕವಾಗಿ. ಒಂದು ದಿನ ಅರ್ಧಫಾಲಕ ಸಂಘವೊಂದು ನಗರಕ್ಕೆ ಬಂತು. ಅದನ್ನು ನೋಡಿ ರಾಜನು ಅರ್ಧಫಾಲವನ್ನು ಬಿಟ್ಟು ನಿರ್ಗ್ರಂಥರಾಗಿರಿ ಎಂದು ಅಪ್ಪಣೆ ಮಾಡಿದನು. ನಿರ್ಗ್ರಂಥರಾಗಲು ಇಷ್ಟವಿಲ್ಲದಿದ್ದರೆ ಅರ್ಧಕಪ್ಪಟವನ್ನು ಬಿಟ್ಟು ಋಜುವಸ್ತ್ರವನ್ನು ಧರಿಸಿಕೊಳ್ಳಿರಿ. ಸುಖವಾಗಿರಿ ನನ್ನ ರಾಜ್ಯದಲ್ಲಿ ಎಂದ. ಹೀಗೆ ವಪ್ರಪಾದ ನೃಪಾಜ್ಞೆಯಿಂದ ಲಾಟದೇಶದಲ್ಲಿ ಕಾಂಬಲ ತೀರ್ಥವು ಅಂದಿನಿಂದ ಆರಂಭವಾಯಿತು. ಈ ಕಂಬಲಿಕಾ ತೀರ್ಥದಿಂದ ಸಾವಲಿಪತ್ತನದಲ್ಲಿ (ದಕ್ಷಿಣಾಪಥದ) ಯಾಪನ ಸಂಘವು ಹುಟ್ಟಿತು. (ಇದೇ ಯಾಪನೀಯ ಸಂಘವಿರಬಹುದು. ಶ್ವೇತಭಿಕ್ಷು ಜಾಪುಲಿ ಸಂಘ ಎಂದಿದೆ ವಡ್ಡಾರಾಧನೆಯಲ್ಲಿ.) (೮೧ ಶ್ಲೋಕಗಳು)

## ೧೩೨. ಸಮುದ್ರದತ್ತಾದಿ ಕಥಾನಕ (=ಲಲಿತಘಟೆ)

ಕೌಶಾಂಬೀ ನಗರದಲ್ಲಿ ಹುಟ್ಟಿದ ಇಭ್ಯಕುಲೋತ್ಪನ್ನರಾದ ೩೨ ಶ್ರಾವಕರು. ಇಂದ್ರದತ್ತಾದಿಗಳು ಇದ್ದರು. ಅವರಿಗೆಲ್ಲ ಮಕ್ಕಳಿದ್ದರು. ಸಮುದ್ರದತ್ತಾದಿ ಶ್ರಾವಕರು ಕೇವಲಿಯ ವಂದನೆಗಾಗಿ ಹೋಗಿ ಭಕ್ತಿಯಿಂದ ಮುನಿಯನ್ನು ಕೇಳಿದರು—ನಮಗೆ ಆಯುಷ್ಯ ಪ್ರಮಾಣವೆಷ್ಟು ಎಂದು. ನೀವೆಲ್ಲ ಅಲ್ಪಾಯುಷ್ಯರು ಎಂದರವರು. ಇದನ್ನು ಕೇಳಿ ಆ ಮೂವತ್ತೆರಡು ಕುಮಾರರರು ಮಹಾ ವೈರಾಗ್ಯಸಹಿತರಾಗಿ ಪ್ರವ್ರಜಿಸಿದರು. ಯಮುನಾನದೀತೀರದಲ್ಲಿ ಪಾದೋಪಗಮನದಿಂದ ನಿಂತರು. ನದೀಪ್ರವಾಹದಿಂದ ಅವರು ಸೆಳೆಯಲ್ಪಟ್ಟವರಾಗಿ ಮಡುವಿನಲ್ಲಿ ಮುಳುಗಿ ಸತ್ತರು. ಸುರಲೋಕಕ್ಕೆ ಹೋದರು. (೮ ಶ್ಲೋಕಗಳು)

## ೧೩೩. ಧರ್ಮಘೋಷ ಮುನಿ ಕಥಾನಕಂ

ಧರ್ಮಘೋಷಮುನಿ. ಚಂಪಾನಗರ ವಾಸ್ತವ್ಯ. ಮಾಸೋಪವಾಸಾಂತ್ಯದಲ್ಲಿ ಪಾರಣೆಗಾಗಿ ತುರುಪಟ್ಟಿಗೆ (ವ್ರಜಂ) ಹೋದನು. ದಾರಿತಪ್ಪಿ ನಡೆಯಲು ಇಷ್ಟವಿಲ್ಲದೆ ಬಾಯಾರಿಕೆಯಿಂದ ಪೀಡಿತನಾಗಿ ಗಂಗಾನದೀತೀರದ ಹಸುರು ಹಸಲೆಯ ಮೇಲೆ ನಿಂತನು. ಇದನ್ನು ಗಂಗಾದೇವಿ ನೋಡಿ ಜಲಪೂರ್ಣಕಲಶಗಳನ್ನು ತಂದು ಆಲದ ಮರದ ಕೆಳಗಿದ್ದ ಮುನಿಯನ್ನು ಕುರಿತು ಈ ನೀರನ್ನು ಕುಡಿದು ಸೇದೆಯನ್ನಾರಿಸಿ ಎಂದಳು. ನಿನ್ನ ಕೈಯಿಂದ ಈ ನೀರನ್ನು ಕುಡಿಯಲಾರೆ ಎಂದನು ಆತನು. ಗಂಗಾದೇವಿ ಬೇಗನೆ ಪೂರ್ವ ವಿದೇಹದಲ್ಲಿದ್ದ ಜಿನನಲ್ಲಿಗೆ ಹೋಗಿ ಮುನಿಯ ವಿಚಾರವನ್ನು ಅವನಿಗೆ ತಿಳಿಸಿ ನನ್ನ ಹಸ್ತದಿಂದ ಅವನು ನೀರು ಕುಡಿಯುವುದಿಲ್ಲ, ಇದಕ್ಕೆ ಕಾರಣ

ವೇನು ಎಂದು ಕೇಳಿದಳು. ಜಿನನು ಅಮೃತವಾಣಿಯಿಂದ ಹೇಳಿದನು—ಮುನಿಗಳು ತಿರ್ಯಗ್ದೇವಾಸುರರ ಕೃತಿಯಿಂದ ಪಾನಭೋಜನಗಳನ್ನು ಸ್ವೀಕರಿಸುವುದಿಲ್ಲ. ಆದ್ದರಿಂದ ನೀನು ಸಮ್ಯಕ್ತ್ವ, ಜಿನಪೂಜೆ, ಪ್ರಾತಿಹಾರ್ಯಗಳನ್ನು ಮಾಡು, ಇದೇ ನಿನ್ನ ಕೆಲಸ – ಎಂದನು. ಆಗ ಗಂಗಾದೇವಿ ಸುಶೀತಲ ಜಲವರ್ಷವನ್ನು ಮುನಿಯ ಮೇಲೆ ಕರೆದಳು. ಮುನಿಗೆ ಸಿಡಿ ತೊಲಗಿ ಘಾತಿಕರ್ಮಗಳು ಕ್ಷಯಿಸಿ ಕೇವಲಜ್ಞಾನಪ್ರಾಪ್ತಿಯಾಯಿತು. ಅದರಿಂದ ದೇವಿಯು ಧರ್ಮವನ್ನು ಕೇಳಿ ಅದನನ್ನು ಪೂಜಿಸಿ ಸ್ವಮಂದಿರಕ್ಕೆ ತೆರಳಿದಳು. ಮುನಿಯು ಮೋಕ್ಷವನ್ನು ಸಂಪಾದಿಸಿದನು. (೧೮ ಶ್ಲೋಕಗಳು)

## ೧೩೪. ಶ್ರೀಧರಮುನಿ ಕಥಾನಕಂ (= ಸಿರಿದಿಣ್ಣ)

ಸಿಂಹಪುರದಲ್ಲಿ ಸಿಂಹರಥನೆಂಬ ರಾಜ. ಸಿಂಹಿಕೆ ಎಂಬ ಶ್ರಾವಿಕೆಯು ಪತಿ. ಸಾಕೇತ ನಗರದಲ್ಲಿ ಅಂಶುಮಾನನೆಂಬ ರಾಜ, ಅವನ ಪ್ರಿಯೆ ಅಂಶುಮಾಲಿನಿ. ಇಲಾಪುರದ ರಾಜ ಜಿತಶತ್ರು, ಅವನ ಕಾಂತೆ ಇಲಾದೇವಿ. ಈ ಮೂವರು ಮಿತ್ರದಂಪತಿಗಳು ಸುಖವಾಗಿ ಕಾಲಯಾಪನೆ ಮಾಡುತ್ತಿದ್ದರು. ನಂದೀಶ್ವರ ದಿನದಂದು ಈ ಮೂವರೂ ತಂತಮ್ಮ ನಗರಗಳಲ್ಲಿ ಭಕ್ತಿಯಿಂದ ಜಿನಮಹಾಮಹಿಮೆಯನ್ನು ಮಾಡಿದರು. ಜಿತಶತ್ರು ಜಿನರಿಗೆ ಸಪರ್ಯೆಯನ್ನು ಮಾಡಲಾರಂಭಿಸಿದನು. ಅವನ ದಾದಿ ವಿರೂಪೆ, ದೀರ್ಘದಂತೆ, ಕರಾಳಾಸ್ಯ, ಜಲಬುದ್ಬುದಲೋಚನೆ, ಪಾದಖಂಜೆ, ಬೃಹತ್ತುಂಡೆ, ಪ್ರಾಣಿಗಳಿಗೆ ಭಯಕಾರಿಣಿ, ಲಂಬಸ್ತನಿ, ಲಂಬೋಷ್ಠ, ವಿಷಮಾಸ್ಥಿಶಿರಾತತಿ—ಜಿನಮಂದಿರಕ್ಕೆ ಬರುತ್ತಿದ್ದವಳನ್ನು ಜಿತಶತ್ರು ಕಂಡು ಹೀಗೆಂದನು: ನೀನು ಇಲ್ಲಿಯೇ ನಿಲ್ಲು. ನಿನ್ನ ಭೀಷಣಾಕಾರವನ್ನು ನೋಡಿದವರು, ಜಿನಪೂಜೆಗೆ ಬಂದವರು, ಜುಗುಪ್ಸೆಗೊಳ್ಳುವರು. ಆದ್ದರಿಂದ ನೀನು ಬರಬೇಡ ಜಿನಾಲಯಕ್ಕೆ ಎಂದು. ದಾದಿ ದುಃಖಿತಳಾಗಿ ಕಣ್ಣೀರನ್ನು ಸುರಿಸುತ್ತ ಮಂದಭಾಗ್ಯೆಯಾದ ನನಗೆ ಜಿನಪೂಜಾದರ್ಶನಲಾಭವಿಲ್ಲ ಎಂದು ಹೇಳಿ ಜಿನಪೂಜೆಯ ಆ ಎಂಟು ದಿವಸಗಳಲ್ಲಿ ಉಪವಾಸ ಮಾಡಿದಳು. ತನ್ನ ಮನೆಯಲ್ಲೇ. ಜಿತಶತ್ರು ಅಷ್ಟಾಹ್ನಿಕವನ್ನು ಮುಗಿಸಿ ಮನೆಗೆ ಬಂದು ದಾದಿಯನ್ನು ನೋಡಿ ಅಬ್ಬೆ, ನೀನೇಕೆ ದುರ್ಬಲಳಾಗಿದ್ದೀಯೆ. ಶೋಕಯುಕ್ತಳಾಗಿರುವೆ ಯಾರಿಂದ ನಿನಗೆ ಅಪಕಾರ ಎಂದು ಕೇಳಿದನು. ಅದಕ್ಕೆ ದಾದಿ ಮನೆಯಲ್ಲೇ ಅಷ್ಟಾಹ್ನಿಕ ಮಾಡಿದೆ ಎಂದಳು. ಮಾತೆ, ನಿನಗೆ ಬೇಕಾದ ವರವನ್ನು ಕೇಳು ಎಂದನು ರಾಜ. ಅದಕ್ಕೆ ಅವಳು ನನಗಾಗಿ ಇನ್ನೊಂದು ಸಲ ಅಷ್ಟಾಹ್ನಿಕವನ್ನು ಮಾಡು ಎಂದಳು. ಜಿತಶತ್ರು ಮರಳಿ ಜಿನಪೂಜೆ ಆರಂಭಿಸಿದನು. ಧಾತ್ರಿ ಮರಳಿ ಅಷ್ಟೋಪವಾಸವನ್ನು ಮಾಡಿದಳು. ಹಿಮವದ್ಗಿರಿಸಂಭೂತ ಪದ್ಮಹ್ರದ ನಿವಾಸಿನಿಯಾದ ಶ್ರೀದೇವಿ ನಿಜಪರಿವಾರಸಹಿತಳಾಗಿ ದಾದಿಯ ಬಳಿಗೆ ಬಂದು ಚಿನ್ನದ ಕಲಶದ ನೀರಿನಿಂದ ಸ್ನಾನ ಮಾಡಿಸಿ ಅವಳನ್ನು ಪೂಜಿಸಿ ತನ್ನ ಮನೆಗೆ ಮರಳಿದಳು. ದಾದಿ ಶ್ರೀದೇವಿಯಂತೆ ತಾನಾಗಬೇಕೆಂದು ನಿದಾನಂಗೆಯ್ದು ಸತ್ತಳು.

ಭರತಕ್ಷೇತ್ರದ ಜಂಬೂಮತಿ ದ್ವೀಪದಲ್ಲಿ ಪದ್ಮಹ್ರದದಲ್ಲಿ ಅವಳು ದೇವಿಯಾಗಿ ಹುಟ್ಟಿದಳು. ಶ್ರೀದೇವಿ ಇಲಾವರ್ಧನಕ್ಕೆ ಬಂದು ಜನರಿಗೆ ಸ್ವಪ್ನವನ್ನು ಕಾಣಿಸಿದಳು. ಶ್ರೀದೇವಿಗೆ ಶ್ರೀಗೃಹವನ್ನು ಮಾಡಿಸಿ ಭಕ್ತಿಯಿಂದ ಪೂಜಿಸಿರಿ. ನಿಮಗೆ ಇಷ್ಟವಾದ ವರವನ್ನು ಕೊಡುತ್ತೇನೆ ಎಂದು. ಶ್ರೀಗೃಹ ನಿರ್ಮಾಣವಾಯಿತು. "ಧ್ವಜಭೂಷಿತಂ". ಇಲಾದೇವಿ ಸ್ವಗೃಹಸ್ಥಿತ ಶ್ರೀಯಾದೇವಿಯನ್ನು ನೋಡಿದಳು. ೧೨ ವರ್ಷಗಳು ಪೂಜೆಮಾಡಿದಳು. ಶ್ರೀದೇವಿ ಸ್ವಯಂಪ್ರಭ ಜಿನನ ಬಳಿಗೆ ಹೋಗಿ ಇಲಾದೇವಿಗೆ ಮಕ್ಕಳಾಗುವುದೋ ಇಲ್ಲವೋ ಎಂದು ಕೇಳಿದಳು. ನಾಕಪರಿಚ್ಯುತನಾದ ದೇವತೆಯೊಬ್ಬ (ವರ್ಧಮಾನ) ಇಲಾದೇವಿಗೆ ಮಗನಾಗುವನೆಂದು ಜಿನ ಹೇಳಿದ. ಇಲಾದೇವಿಗೆ ಶ್ರೀದೇವಿ ಸ್ವಪ್ನದಲ್ಲಿ ಈ ವಿಷಯವನ್ನು ತಿಳಿಸಿದಳು. ಮಗ ಹುಟ್ಟಿದ, ಶ್ರೀದತ್ತನೆಂಬ ಹೆಸರಾಯಿತು. ಸಾಕೇತ ಪತಿಯ ಪುತ್ರಿ ಇವನಿಗೆ ಸ್ವಯಂವರದಲ್ಲಿ ಪತ್ನಿಯಾದಳು. ಅವಳ ಹೆಸರು ಅಂಶುಮತಿ. ಇವಳೊಡನೆ ಬಳುವಳಿಯಾಗಿ ಒಂದು ಗಿಳಿ ಬಂತು. ದಂಪತಿಗಳು ಅಕ್ಷಕ್ರೀಡೆಯನ್ನಾಡುತ್ತಿರಲು ಅಂಶುಮತಿ ಗೆದ್ದಾಗ ಗಿಳಿ ರೆಕ್ಕೆಗಳನ್ನು ಬಡಿಯುತ್ತ ಲೇಖಾದ್ವಯವನ್ನು ಬರೆಯಿತು. ಅಂಶುಮತಿ ಸೋತಾಗ ಒಂದು ಗೆರೆಯನ್ನು ಬರೆಯಿತು. ಶ್ರೀದತ್ತನಿಗೆ ಇದನ್ನು ನೋಡಿ ಕೋಪ ಕೆರಳಿ ಗಿಳಿಯ ಕೊರಳನ್ನು ಹೊಸೆದನು. ಅದು

ಬರಮಾಡಿಕೊಂಡು ಆದರಿಸಿ ಕುಮಾರನಿಗೆ ವೃಷಭಸೇನನೆಂದು ಹೆಸರಿಟ್ಟನು. ಕುಮಾರನಿಗೆ ಎಂಟು ವರ್ಷಗಳಾದಾಗ ಪ್ರದ್ಯೋತ ಧರ್ಮಾನುಶ್ರಮಣನಾಗಿ ಮಗನಿಗೆ ರಾಜ್ಯಪಟ್ಟವನ್ನು ಕಟ್ಟಲು ಮನಸ್ಸುಮಾಡಿ ಹೇಳಿದ. ಅದಕ್ಕೆ ಮಗನ ಉತ್ತರ:

ಮನುಷ್ಯರಾಜ್ಯಪಟ್ಟಂ ಕಿಂ ಬಧ್ನಾಸಿ ತ್ವಂ ಮಮ ಪ್ರಭೋ ॥ ೪೫ ॥
ದೇವಮೋಕ್ಷಾದಿಸಂಯುಕ್ತಂ ರಾಜ್ಯಪಟ್ಟಂ ಮಹಾಗುಣಂ ।
ಪ್ರಾಧ್ವಂಕೃತ್ಯ ಮಮ ಸ್ಪಷ್ಟಂ ಪ್ರವ್ರಜ್ಯಾಂ ಕರ್ತುಮರ್ಹಸಿ ॥ ೪೬ ॥

ಎಂದನು. ನಿನಗೆ ನನ್ನಿಂದ ಮೊದಲು ಮನುಷ್ಯರಾಜ್ಯಪಟ್ಟ. ಅನಂತರ ತಪಸ್ಸಿನಿಂದ ದೇವರಾಜ್ಯಪಟ್ಟ, ಮೋಕ್ಷರಾಜ್ಯಪಟ್ಟ ಎಂದ ರಾಜ. ಕೂಡಲೇ ಕುಮಾರನು ಅಭಿನಂದನ ಮುನಿಗಳ ಹತ್ತಿರ ದೀಕ್ಷಾಗ್ರಹಣಮಾಡಿ ತಪಸ್ವಿಯಾಗಿ ಏಕವಿಹಾರಿಯಾಗಿ ವತ್ಸಕಾವತೀ ವಿಷಯದ ಕೌಶಂಬೀ ನಗರದ ಹತ್ತಿರ ಇದ್ದ ದೇವಪಾಟನಗರಕ್ಕೆ ಬಂದು ಪ್ರತಿಮಾಯೋಗದಲ್ಲಿ ನಿಂತನು. ಆ ನಗರದ ಶ್ರಾವಕರೆಲ್ಲ ಆ ಬೆಟ್ಟಕ್ಕೆ ಹೋಗಿ ಮುನಿಯನ್ನು ಪೂಜಿಸಿ ಬಂದರು. ಅದೇ ನಗರದ ಬುದ್ಧದಾಸನೆಂಬುವನು ಜಿನಧರ್ಮದ್ವೇಷಕನು. ಆ ಬೆಟ್ಟಕ್ಕೆ ಹೋಗಿ ಮುನಿ ಭಿಕ್ಷೆಗೆ ಹೋಗಿದ್ದಾಗ, ಅವನು ನಿಂತಿದ್ದ ಶಿಲೆಯನ್ನು ಕಿಚ್ಚಿನಿಂದ ಕೆಂಪಗೆ ಕಾಸಿ ತನ್ನ ಮನೆಗೆ ಬಂದನು. ಭಿಕ್ಷೆಯಿಂದ ಹಿಂದಿರುಗಿದ ಮುನಿ ಅಗ್ನಿತಪ್ತ ಶಿಲಾತಲವನ್ನು ನೋಡಿ ಹೆದರದೆ ಹತ್ತಿ ಕುಳಿತನು. ಈ ಪರೀಷಹವನ್ನು ಸೈರಿಸಿ ವೃಷಭನು ಕೇವಲಜ್ಞಾನಿಯಾದನು. (೫೮ ಶ್ಲೋಕಗಳು)

## ೧೩೬. ಸ್ವಾಮಿ ಕಾರ್ತಿಕೇಯ ಕಥಾನಕಂ

ಕಾರ್ತಿಕನ್ಯಾಪುರ, ಅಗ್ನಿನಾಮಕ ರಾಜ. ಭಾರ್ಯೆ ವೀರವತಿ. ಇವರಿಗೆ ಆರು ಜನ ಹೆಣ್ಣುಮಕ್ಕಳು ——ಬಂಧುಮತಿ, ಶ್ರೀಷೇಣೆ, ಶ್ರೀಮತಿ, ಸ್ವಯಂಪ್ರಭೆ, ಪ್ರಭಾವತಿ, ಕೀರ್ತ್ಯಾರ್ಗ, ಲಕ್ಷ್ಮೀಮತಿ. ನಂದೀಶ್ವರ ದಿನದಂದು ಈ ಆರು ಜನರೂ ಉಪವಾಸಮಾಡಿ ಜಿನನನ್ನು ಪುಷ್ಪಗಳಿಂದ ಪೂಜಿಸಿ, ಪ್ರಸಾದವನ್ನು ಎಲ್ಲರಿಗೂ ಕೊಡುವಾಗ ರಾಜ ಇವರನ್ನು ನೋಡಿದನು. ಕನಿಷ್ಠಳಾದ ಕೀರ್ತಿಕೆಯನ್ನು ಅವನು ನೋಡಿದಾಗ ಅವನಿಗೆ ಕಾಮವುಂಟಾಯಿತು. ತನ್ನ ಭಾರ್ಯೆಯನ್ನು ಒಪ್ಪಿಸಿ ಮಗಳನ್ನೇ ಮದುವೆ ಆದ. ಕೀರ್ತಿಕೆ ಗರ್ಭವತಿ ಆದಳು; ೯ನೆಯ ತಿಂಗಳಲ್ಲಿ ಶರವಣೋದ್ಯಾನದ ವಾಪಿಯಲ್ಲಿ ವಿಹರಿಸಬೇಕೆಂದು ಅವಳಿಗೆ ಮನವಾಗಿ ಅಲ್ಲಿ ಕ್ರೀಡಿಸುತ್ತಿರಲು ಮಗನನ್ನು ಹೆತ್ತಳು. ಅವನಿಗೆ ಕಾರ್ತಿಕೇಯ ಎಂಬ ಹೆಸರಾಯಿತು; ಆಮೇಲೆ ವೀರಶ್ರೀ ಎಂಬ ಮಗಳು ಹುಟ್ಟಿದಳು. ಇವಳನ್ನು ರೋಹೇಟಕಪುರೇಶನಾದ ಕ್ರೌಂಚನೆಂಬುವನು ಮದುವೆಯಾದನು. ಸ್ವಾಮಿ ಕಾರ್ತಿಕೇಯನು ಹುಡುಗರೊಡನೆ ಆಡುತ್ತಾ ೧೪ ವರ್ಷಗಳ ಪ್ರಾಯವನ್ನು ಪಡೆದನು. ತನ್ನೊಡನಾಡಿಗಳಿಗೆ ಅವರವರ ಮಾತಾಮಹ ಮಂದಿರಗಳಿಂದ ವಸಂತಕಾಲದ ಪ್ರಾಭೃತಗಳು ಬಂದುದನ್ನು ಕಾರ್ತಿಕೇಯ ನೋಡಿ ತಾಯ ಬಳಿಗೆ ಹೋಗಿ ನನಗೆ ಮಾತಾಮಹನು ಇರುವನೇ, ಇಲ್ಲವೇ ಎಂಬುದನ್ನು ಹೇಳು ಎಂದನು.

ಶ್ರುತ್ವಾ ಪುತ್ರವಚೋ ಮಾತಾ ದುಃಖಪೂರಿತಮಾನಸಾ ।
ಜಗಾದ ನಂದನಂ ಚೈಕಃ ಪಿತಾ ತೇ ಮೇಽಪಿ ಬಾಲಕಃ ॥ ೧೬ ॥

ಎಂದಳು ಅವಳು. ತಾಯ ಮಾತನ್ನು ಕೇಳಿ ಕಾರ್ತಿಕೇಯನಿಗೆ ಮಹಾವಿರಕ್ತಿ ಹುಟ್ಟಿ ಯಶೋಧರ ಮುನಿಗಳ ಪಾರ್ಶ್ವದಲ್ಲಿ ದೀಕ್ಷಾಗ್ರಹಣಮಾಡಿ ನಾನಾ ತಪಸ್ಸುಗಳನ್ನು ಮಾಡುತ್ತ ವಿಹರಿಸುತ್ತ ಅವನು ಕಿಷ್ಕಿಂಧ ಪರ್ವತಕ್ಕೆ ಬಂದನು. ಅಲ್ಲಿ ರಾತ್ರಿ ಪ್ರತಿಮಾಯೋಗದಲ್ಲಿ ನಿಂತುಕೊಂಡನು. ಮಳೆ ಸುರಿದು ಅವನ ಕಾಯಮಲವೆಲ್ಲ ತೊಳೆಯಿತು; ಆ ಮಲದ ನೀರು ಸರ್ವೌಷಧವಾಗಿ ಪರಿಣಮಿಸಿತು: ಅದರಲ್ಲಿ ಸ್ನಾನಮಾಡಿ ಲೋಕವ್ಯಾಧಿ ವಿವರ್ಜಿತವಾಯಿತು. ದಕ್ಷಿಣಾಪಥದಲ್ಲಿ ಹುಟ್ಟಿದ ಆ ತೀರ್ಥವು ಪವಿತ್ರವಾದದ್ದಾಯಿತು. ಒಂದು ದಿನ ಆ ಮುನಿ ರೋಹೇಟಕಪುರಕ್ಕೆ ಬಂದನು. ಅರಮನೆಯ ಸೌಧದಲ್ಲಿದ್ದ ಕ್ರೌಂಚನೂ ವೀರಶ್ರೀಯೂ ಅವನನ್ನು ನೋಡಿದರು; ವೀರಶ್ರೀಗೆ ಅಣ್ಣನನ್ನು ಕಂಡು ಪ್ರೀತಿಯುಂಟಾಯಿತು. ಇಷ್ಟರಲ್ಲಿ ಅರಮನೆಗೆ ಬಂದು ಹಿಂದಿರುಗುತ್ತಿದ್ದ

ಹೋದನು. ಅವನ ಸೈನ್ಯದ ಕೋಲಾಹಲ ಶಬ್ದವನ್ನೂ ಆನೆಗಳ ಘೀಂಕಾರವನ್ನೂ ಕೇಳಿದ ಆ ಹುಲಿ (= ವಸರ) ಹೆದರಿ ಗುಹೆಯ ನಡುವೆ ಅವಿತುಕೊಂಡಿತು. ಅದನ್ನು ಕೊಲ್ಲಲು ಆಗದಿದ್ದುದರಿಂದ ಆ ಗುಹೆಯ ಮುಖದಲ್ಲಿ ತೃಣಾದಿಗಳನ್ನು ಒಟ್ಟಿ ಕಿಚ್ಚನ್ನು ಹೊತ್ತಿಸಿದರು. ಅದರ ಹೊಗೆ ಸುತ್ತಿ ಹುಲಿ ಸತ್ತಿತು. ಚಂದ್ರಾಪುರಿಯಲ್ಲಿ ಭವಧರ್ಮನೆಂಬ ವಿಪ್ರ, ಅವನ ಪ್ರಿಯೆ ಮಹಾಹಸಿ ಎಂಬುವಳು. ಇವರಿಗೆ ಆ ಹುಲಿ ಕಪಿಲನೆಂಬ ಮಗನಾಗಿ ಹುಟ್ಟಿತು ; ಅವನ ಹೆಂಡತಿ ಕಪಿಲಾ.

ಚಂದ್ರಪುರಿಯಲ್ಲಿ ತಂಗಿದ್ದ ಗುರುದತ್ತ ಸ್ವಸೈನ್ಯಪರಿವಾರಸಮೇತನಾಗಿ ತನ್ನ ನಗರವಾದ ಹಸ್ತಿ ನಗರಕ್ಕೆ ಬಂದನು. ಅವನ ಭಾರ್ಯೆ ಅಭಯಮತಿ ಮಗನನ್ನು ಹೆತ್ತಳು. ಒಂದು ದಿನ ಆ ಪಟ್ಟಣದ ಹತ್ತಿರವಿದ್ದ ಧರಣೀಭೂಷಣಗಿರಿಗೆ ಅಮೃತಾಶ್ರವರೆಂಬ ತಪಸ್ವಿಗಳು ಬಂದರು. ಅವರನ್ನು ವಂದಿಸಲು ಗುರುದತ್ತನು ಅಲ್ಲಿಗೆ ಹೋದನು ; ತನ್ನ ಪೂರ್ವಭವ ವೃತ್ತಾಂತವನ್ನು ಹೇಳಬೇಕೆಂದು ಅವರನ್ನು ಪ್ರಾರ್ಥಿಸಿದನು. ಕೃಪೆಯಿಂದ ಅವರು ಹೀಗೆ ಹೇಳಿದರು—ಹಿಂದಿನ ಭವದಲ್ಲಿ ನೀನು ಉಪರಿಚರ ರಾಜನಾಗಿದ್ದೆ, ಹಾವಾಗಿದ್ದೆ. ಆಮೇಲೆ ನಾಗಕುಮಾರನಾದೆ. ಈಗ ಗುರುದತ್ತನಾಗಿರುವೆ—ಎಂದರು. ಇದನ್ನು ಕೇಳಿ ಅಭಯಮತಿ ತನ್ನ ಭವಾವಳಿಯನ್ನು ಬೆಸಗೊಂಡಳು. ಅವಧಿಜ್ಞಾನ ಲೋಚನನು ಹೇಳಿದನು : 'ಗಂಧರ್ವನಗರೋದ್ಭವನಾದ ಗರುಡವೇಗನೆಂಬೊಬ್ಬನಿದ್ದನು ; ಅವನ ಪ್ರಿಯೆ ಗೋಮತಿ. ಆ ಪುರಿಗೆ ಒಂದು ದಿವಸ ಸಮಾಧಿಗುಪ್ತರೆಂಬ ಮುನಿಗಳು ಬಂದರು. ಇವರ ಹತ್ತಿರ ಗೋಮತಿ ಮಧುಮಾಂಸ ಸುರಾಪಾನ. ಸ್ತೇಯ. ಪ್ರಾಣಿವಧೆ—ಇವುಗಳಿಂದ ರಹಿತವಾದ ವ್ರತವನ್ನು ಸ್ವೀಕರಿಸಿ ಮನೆಗೆ ಬಂದಳು. ಅವಳ ಗಂಡ ಅನೇಕ ತಿತ್ತಿರಿ ಪಕ್ಷಿಗಳನ್ನು ಕಟ್ಟಿಕೊಂಡು ಪಂಜರದಲ್ಲಿಟ್ಟನು. ಅವುಗಳನ್ನು ಗೋಮತಿ ಬಿಟ್ಟು ಹಾರಿಸಿದಳು. ಅವಳನ್ನು ಕೋಪದಿಂದ ಗಂಡ ಮನೆಯಿಂದ ಹೊರಕ್ಕೆ ಅಟ್ಟಿಬಿಟ್ಟನು. ಅವಳು ಕಾಲಕ್ರಮದಲ್ಲಿ ಸತ್ತು ಚಂದ್ರಲೇಖಾತನಯಳಾದ ಅಭಯಮತಿಯಾಗಿದ್ದಾಳೆ. ಅಲ್ಲದೆ ನೀನು ಗರ್ಭದಲ್ಲಿರುವಾಗ ನಿನ್ನ ತಾಯಿಗೆ ಬಯಕೆಯಾಯಿತು. ಸಕಲ ಪ್ರಾಣಿಗಳಿಗೂ ಅಭಯವನ್ನು ಕಾಣಿಸಬೇಕೆಂದು, ರಾಜ ಪ್ರಾಣಿಹಿಂಸೆ ಆಗಬಾರದೆಂದು ಘೋಷಿಸಿದನು. ನಿನಗೆ ಅಭಯಮತಿ ಎಂಬ ಹೆಸರಾಯಿತು ಇದಕ್ಕಾಗಿ.' ತನ್ನ ಭವಾವಳಿಯನ್ನು ಕೇಳಿ ಅಭಯಮತಿ ಅಭಯಾಳೆಂಬ ಆರ್ಯಿಕೆಯ ಬಳಿ ಜೈನದೀಕ್ಷಾಧಾರಿಯಾದಳು. ಗುರುದತ್ತನು ತನ್ನ ಮಗ ಶ್ರೀದತ್ತನಿಗೆ ರಾಜ್ಯ ಕೊಟ್ಟು ಅಮಿತಮುನಿಗಳ ಪಾರ್ಶ್ವದಲ್ಲಿ ದೀಕ್ಷೆಯನ್ನು ವಹಿಸಿದನು.

ಕಪಿಲೆಯು ದಧಿ ಮಿಶ್ರಿತ ಅನ್ನವನ್ನು (ಭತ್ತಂ) ತೆಗೆದುಕೊಂಡು ತನ್ನ ಪತಿಯ ಅಪ್ಪಣೆಯಂತೆ ಹೊಲಕ್ಕೆ ಹೋದಳು. ಹೊಲವನ್ನು ಉಳುತ್ತಿದ್ದ ಕಪಿಲನು ಕಾದು ಸಾಕಾಗಿ ಹಸಿವಿನಿಂದ ಬಳಲಿ ಅಷ್ಟರಲ್ಲಿ ತನ್ನ ಮನೆಗೆ ಬಂದನು, ಮಧ್ಯಾಹ್ನ ವೇಳೆಯಲ್ಲಿ. ಕೋಪಗೊಂಡ ಅವನು. 'ದುಷ್ಟೆ. ನೀನು ಅನ್ನವನ್ನು ತಿಂದು ಮನೆಗೆ ಬಂದ ಕಾರಣವೇನು. ಹಸಿವು ಬಾಯಾರಿಕೆಯಿಂದ ಪೀಡಿತನಾದ ನಾನು ಇಲ್ಲಿದ್ದೇನೆ. ದುರ್ಜನರಲ್ಲಿ ದುರ್ಜನೆಯೇ' ಎಂದನು. ಈ ಮಾತನ್ನು ಕೇಳಿ ಕಪಿಲೆ, 'ನಿನಗಾಗಿ ನಾನು ಅನ್ನವನ್ನು ತೆಗೆದುಕೊಂಡು ಹೊಲಕ್ಕೆ ಹೋದೆ. ನಿನ್ನನ್ನು ಕಾಣದೆ ಇಲ್ಲಿಗೆ ಬಂದೆ' ಎಂದಳು. 'ಏಕೆ ಅಲ್ಲಿದ್ದ ಮುನಿ ಹೇಳಲಿಲ್ಲವೆ ನಿನಗೆ, ಈ ಹೊಲದಿಂದ ಬೇರೆ ಹೊಲಕ್ಕೆ ಉಳಲು ನಾನು ಹೋಗಿದ್ದೆನು' ಎಂದನು ಅವನು. 'ನಾನು ಆ ಮುನಿಯನ್ನು ಕೇಳಿದೆ. ಆದರೆ ಅವನು ಮಾತೇ ಆಡಲಿಲ್ಲ. ಮೂಕನಂತೆ ಇದ್ದನು' ಎಂದಳವಳು. ಈ ಮಾತನ್ನು ಕೇಳಿ ಕಪಿಲ ಕೋಪವನ್ನು ಬಿಟ್ಟು ಹೆಂಡತಿಯನ್ನು ಸಮಾಧಾನಪಡಿಸಿ ತನ್ನ ಕೋಪವನ್ನು ಮುನಿಯ ಕಡೆಗೆ ತಿರುಗಿಸಿದನು : ಸರ್ಜವಂಟಸಗಳನ್ನೂ ಅಗ್ನಿಯನ್ನೂ ತಂದು ಪ್ರತಿಮಾಯೋಗದಲ್ಲಿದ್ದ ಆ ಮುನಿಯ ಬಳಿಗೆ ಬಂದು ಕಾಲಿನಿಂದ ಹಿಡಿದು ತಲೆಯವರೆಗೆ ಸುತ್ತಿ (ಪೇಂಟಣೇ) ಪೂರ್ವವೈರಾನುಬಂಧದಿಂದ ಉರಿ ಹೊತ್ತಿಸಿದನು. ಈ ವೇದನೆಯನ್ನು ಗುರುದತ್ತ ಸೈರಿಸಿ ಕೇವಲಜ್ಞಾನವನ್ನು ಪಡೆದನು. ಚತುರ್ನಿಕಾಯಾಮರರು ಬಂದು ಗುರುದತ್ತನನ್ನು ಪೂಜಿಸಿದರು. ಇದನ್ನು ಕಂಡ ಕಪಿಲ ತನ್ನನ್ನು ತಾನೇ ನಿಂದಿಸಿಕೊಂಡು ಗುರುದತ್ತನ ಪಾದಗಳ ಮೇಲೆ ಬಿದ್ದು ಜಿನೋಕ್ತ ಧರ್ಮವನ್ನು ಕೇಳಿ ಸ್ವಭವಾಂತರಗಳನ್ನು ಹೇಳಬೇಕೆಂದು ಕೇಳಿದನು. ಗುರುದತ್ತ ಹೇಳಿದನು : ನೀನು ಮೊದಲು ವಿದ್ಯುದ್ದಂಷ್ಟ್ರನೆಂಬ ಖೇಚರನಾಗಿದ್ದೆ : ನಾಗಕುಮಾರನಿಂದ ನಿನ್ನ ವಧೆಯಾಗಿ ರತ್ನಪ್ರಭೆಯೆಂಬ

ನರಕಕ್ಕೆ ಹೋದೆ. ಅಲ್ಲಿಂದ ಬಂದು ತೋಯಮಂತ ಪರ್ವತದಲ್ಲಿ ಹುಲಿಯಾಗಿ ಹುಟ್ಟಿದೆ. ಗುರುದತ್ತನಿಂದ ಮಡಿದು ಈಗ ಕಪಿಲನಾದೆ—ಎಂದನು. ಈ ಮಾತನ್ನು ಕೇಳಿ ಕಪಿಲ ಪುರಾತನ ವೈರವನ್ನು ಬಿಟ್ಟು ದೀಕ್ಷಾಗ್ರಹಣಮಾಡಿ ಮುನಿಯಾದನು. ಆಮೇಲೆ ಏಕವಿಹಾರಿಯಾಗಿ ಸುತ್ತುಮುತ್ತ ಕೊಂಕಣ ವಿಷಯಕ್ಕೆ ಬಂದನು. ಭಯಂಕರವಾದ ಗಿರಿವಲ್ಲರಿಕೆಯೊಳಗಲ್ಲಿ ಸೂರ್ಯಕಾಷ್ಠದಾತಿಯ ಮೇಲೆ ಅವನು ಇರುಳು ಪ್ರತಿಮಾಯೋಗದಲ್ಲಿ ನಿಂತನು. ಅಲ್ಲಿಗೆ ಬಂದ ಪಾಮರನು ಆ ವಲ್ಲರದಲ್ಲಿ ಉರಿಯನ್ನು ಇಟ್ಟು ತನ್ನ ಮನೆಗೆ ಹೋದನು. ಈ ಉಪಸರ್ಗವನ್ನು ಸೈರಿಸಿ ಕಪಿಲನು ಸಮಾಧಿ ಮರಣದಿಂದ ಸತ್ತನು. ಅಚ್ಯುತಕಲ್ಪದಲ್ಲಿ ದೇವನಾಗಿ ಹುಟ್ಟಿದನು. ಬೆಳಗಾದಾಗ ಆ ಕೌಂಕಣನು ವಲ್ಲರದ ಬಳಿಗೆ ಬಂದು ಬೆಂದ ಮುನಿಯನ್ನು ಕಂಡನು (ವಲ್ಲರ = ಹೊದರು). ದುಃಖದಿಂದ ತನ್ನನ್ನು ತಾನೇ ನಿಂದನೆಗರ್ಹಣೆ ಮಾಡಿಕೊಂಡು ಅದೇ ಅಗ್ನಿಯಲ್ಲಿ ಬಿದ್ದು ಸತ್ತು ಹೀನನೆಂಬ ದೇವತೆಯಾದನು.

ಆಯುರಂತ್ಯದಲ್ಲಿ ಅವನು ವಿಂಧ್ಯದ ಕಾಡಿನಲ್ಲಿ ಶ್ವೇತಹಸ್ತಿಯಾಗಿ ಹುಟ್ಟಿದನು. ಜನ ಸಂಕ್ಷೋಭಮಾಡುತ್ತಿದ್ದ ಈ ಆನೆಯನ್ನು ಅಚ್ಯುತೇಂದ್ರನು ನೋಡಿ ಅದಕ್ಕೆ ಉಪದೇಶಮಾಡಿದನು. ಆನೆಯು ಪ್ರಶಮನವನ್ನು ಪಡೆಯಿತು, ಸಂಯಮಾಖ್ಯ ತಪಸ್ಸನ್ನು ಸ್ವೀಕರಿಸಿತು. ಒಂದು ದಿನ ಕಾಳ್ಕಿಚ್ಚು ಹತ್ತಿಕೊಂಡು ಅಡವಿ ಬೇಯುತ್ತಿರುವಾಗ ಆನೆಯು ಓಡಿನೊಡನೆ ಈ ಆನೆ ವಟವೃಕ್ಷದ ಅಡಿಯಲ್ಲಿ ನಿಂತಿತು. ಬೆಂಕಿ ಅದಕ್ಕೂ ಆವರಿಸಿ ಉರಿಯುತ್ತಿರಲು ಆ ಆನೆಯ ಕಾಲ್ಕೆಳಗೆ ಒಂದು ಮೊಲ ಬಂದು ನಿಂತಿತು. ಆನೆ ಸತ್ತು ಸಹಸ್ರಾರಕಲ್ಪದಲ್ಲಿ ಹುಟ್ಟಿತು. ಆಮೇಲೆ ಅದು ರಾಜಗೃಹಪುರದಲ್ಲಿ ಶ್ರೇಣಿಕನ ಮಹಾದೇವಿ ಧನಶ್ರೀಯ ಗರ್ಭದಲ್ಲಿ ಬಂದು ನೆಲಸಿತು. ಅವಳಿಗೆ ಬಯಕೆಯಾಯಿತು : ಮಳೆಗಾಲದಲ್ಲಿ ಆನೆಯನ್ನೇರಿ ಸ್ವಸ್ತಿಕವೇಷವಾಗಿ ಅಡವಿಯನ್ನು ಹೊಕ್ಕು ಆಲದ ಹಣ್ಣುಗಳನ್ನು ತಿಂದು ಬಿಳಿಯಾನೆಯನ್ನು ಹತ್ತಿ ಇರುಳು ವಿಹರಿಸುವ ಕನಸಾಯಿತು ನನಗೆ ಎಂದಳವಳು ರಾಜನಿಗೆ. ಈ ಮಾತನ್ನು ಕೇಳಿ ಶ್ರೇಣಿಕ ತನ್ನ ಮಗ ಅಭಯಕುಮಾರನನ್ನು ಕರೆದು ಅವನಿಗೆ ಹೀಗೆಂದನು—ಧನಶ್ರೀಯ ದೌಹೃದಕ್ಕೆ ಉಪಾಯವನ್ನು ಹೇಳು ಎಂದು. ಅದಕ್ಕೆ ಕುಮಾರ—ವಿಜಯಾರ್ಧದ ದಕ್ಷಿಣದಲ್ಲಿ ಅಕಾಶತಿಲಕವೆಂಬ ನಗರವಿದೆ; ನನಗೆ ಪ್ರಿಯನಾದ ಖೇಚರನೊಬ್ಬ ಅಲ್ಲಿದ್ದಾನೆ; ಅವನ ಹೆಂಡತಿ ಕನಕಮಾಲೆ. ಅವರಿಗೆ ಮಗಳು ಕನಕಚಿತ್ರೆ. ಇವಳು ಖೇಚರೀ ವಿದ್ಯಾಸಾಧನೆ ಮಾಡುತ್ತಿರಲು ಒಬ್ಬ ಚಿತ್ರಗತಿ ಎಂಬ ಖೇಚರನು ಇವಳ ಕೈಯನ್ನು ಹಿಡಿದುಕೊಂಡನು. ಇದನ್ನು ಕಂಡ ಮನೋಗತ್ಯಾದಿ ಖೇಚರರು ಕೋಪದಿಂದ ಹನ್ನೆರಡು ವರ್ಷಗಳು ನೀನು ಮನುಷ್ಯನಾಗಿರು ಎಂದು ಶಪಿಸಿದರು. ಅವನು ಹಾಗೆಯೇ ಮನುಷ್ಯನಾಗಿ ಹುಟ್ಟಿ ಕಾಮಲತೆಯ ಗೃಹದಲ್ಲಿದ್ದನು. ಹನ್ನೆರಡು ವರ್ಷಗಳಾದಮೇಲೆ ಆ ಖೇಚರ ತನ್ನ ಲೋಕಕ್ಕೆ ಹೋಗಬೇಕೆಂದು ವಿದ್ಯಾಸಾಧನೆ ಮಾಡುತ್ತಿದ್ದನು. ನಾನು ಅಭಯಕುಮಾರ ವಿದ್ಯೆಯ ಸಾಧನೆಯಲ್ಲಿ ಸಹಾಯ ಮಾಡಿದೆನು. ಆ ಖೇಚರನು ಸ್ಮರಿಸಿದ ಮಾತ್ರದಿಂದಲೇ ಬರುತ್ತಾನೆ. ಅವನಿಂದ ದೌಹೃದದ ಪೂರ್ತೈಕೆ ಆಗುತ್ತದೆ—ಎಂದನು. ಆ ವಿದ್ಯಾಧರ ಹಾಗೆಯೇ ಬಂದು ಬಯಕೆಯನ್ನು ಪೂರೈಸಿ ತನ್ನ ಲೋಕಕ್ಕೆ ಹೋದ. ಆಮೇಲೆ ಧನಶ್ರೀಗೆ ಗಜಕುಮಾರಾಖ್ಯ ಮಗನು ಹುಟ್ಟಿದನು. ಅಲ್ಲಿಗೆ ಬಂದ ಸುಮತಿ ಮುನಿಯಿಂದ ಗಜಕುಮಾರ ಪೂರ್ವಭವವನ್ನು ಕೇಳಿ ತಿಳಿದು ವಿರಕ್ತನಾಗಿ ತಪಸ್ವಿಯಾದನು. ಏಕವಿಹಾರಿಯಾದನು. ಕಲಿಂಗ ವಿಷಯದ ದಂತಿಪುರಕ್ಕೆ ಅವನು ಬಂದನು. ಆ ಪುರದ ಪಶ್ಚಿಮಭಾಗದಲ್ಲಿ ಆ ಮುನಿ ಆತಪ ಯೋಗದಲ್ಲಿ ನಿಂತನು. 'ಅಲ್ಲಿ' ರಾಜ ನರಸಿಂಹ, ಅವನ ದೇವಿ ಸುಮತಿ, ಮಗ ಗುಣಪಾಲ. ಗೂಢಮಂತ್ರ ಪ್ರಯೋಗಜ್ಞನೂ ನಿಷ್ಠುರಮಾನಸನೂ ಆದ ಬುದ್ಧದಾಸನೆಂಬ ಮಂತ್ರಿ ಇದ್ದ. ಗಜಪರ್ವತದಲ್ಲಿದ್ದ ಮುನಿಪುಂಗವನನ್ನು ನೋಡಿ ಗುಣಪಾಲ ಮಂತ್ರಿಗಳಿಗೆ ಹೇಳಿದ—ಈ ಯೋಗಿ ಪರ್ವತದಲ್ಲಿ ಏಕೆ ಇದ್ದಾನೆ, ಬಿಸಿಲಿನಲ್ಲಿ ಒಣಗುತ್ತ ಎಂದು. ಈ ಮಾತನ್ನು ಕೇಳಿ ಬುದ್ಧದಾಸ ಹೇಳಿದ—ಈ ಮುನಿಗೆ ಚಂಡವಾಯು ಹಿಡಿದಿದೆ ಎಂದು. ವಾತನಾಶನ ಔಷಧಿಯನ್ನು ಹೇಳು ಎಂದ ಗುಣಪಾಲ. ಶಿಲಾತಲವನ್ನು ಉರಿಯಿಂದ ಕಾಯಿಸುವುದೇ ಔಷಧಿ ಎಂದ ಬುದ್ಧದಾಸ.

ಮುನಿ ಪುರಕ್ಕೆ ಭಿಕ್ಷೆಗೆ ಹೋಗಿದ್ದಾಗ ಬುದ್ಧದಾಸ ಶಿಲಾತಲವನ್ನು ಚೆನ್ನಾಗಿ ಕಾಯಿಸಿಟ್ಟ. ಆ ಬಂದು ಮೇಲೆ ಕಾಯೋತ್ಸರ್ಗದಿಂದ ಮುನಿ ನಿಂತು ಉಪಸರ್ಗವನ್ನು ಸೈರಿಸಿ ಸಮಾಧಿಯಿಂದ ಸತ್ತು ಅಂತಕೃತ್ಕೇವಲಿಯಾಗಿ ನಿರ್ವಾಣಕ್ಕೆ ಸಂದನು. ಇದನ್ನು ಕಂಡು ಬುದ್ಧದಾಸ ಸಮ್ಯಗ್ದರ್ಶನಸಹಿತನಾದನು. ಗುಣಪಾಲ ತನ್ನ ಮಗ ನರಪಾಲನಿಗೆ ರಾಜ್ಯ ಕೊಟ್ಟು ದೀಕ್ಷಾಧಾರಿಯಾದನು.

## ೧೪೦. ಚಿಲಾತಪುತ್ರ ಕಥಾನಕಂ

ಮಗಧ ವಿಷಯದ ಗೋಪಾಲಕನೆಂಬ ಸಾರ್ಥವಾಹಕನು ಸಾರ್ಥದೊಡನೆ ಹೋಗುತ್ತಿರುವಾಗ ಯತೋಧರರೆಂಬ ಮುನಿಗಳನ್ನು ಕಂಡು ಅವರಿಗೆ ಭಿಕ್ಷಾದಾನ ಮಾಡಿದನು. ಆಮೇಲೆ ಅವನು ಸತ್ತು ದೇವತೆಯಾದನು. ಆಮೇಲೆ ಅವನು ಪ್ರಶ್ರೇಣಿಕ ರಾಜನ ಮಗನಾಗಿ ಹುಟ್ಟಿ ಚಿಲಾತನೆಂಬ ಹೆಸರನ್ನು ಪಡೆದನು. ಪ್ರಶ್ರೇಣಿಕನು ಉಜ್ಜಯಿನೀ ನಗರದ ಮುದ್ರಾಯಣ ಕುಮಾರನ ಬಳಿಗೆ ದೂತನನ್ನು ಕಳಿಸಿದನು. ಆ ಊರಿನ ರಾಜ ಪ್ರದ್ಯೋತನು ಆ ದೂತನನ್ನು ಹಿಡಿದು ಸೆರೆಯಲ್ಲಿಟ್ಟನು. ಕಂದನೆಂಬ ಇನ್ನೊಬ್ಬ ಸಾರ್ಥಾಧಿಪತಿ ಮುದ್ರಾಯಣನನ್ನು ಅಪಹರಿಸಿಕೊಂಡು ರಾಜಗೃಹ ನಗರಕ್ಕೆ ತೆಗೆದುಕೊಂಡು ಹೋದನು. ಆಗ ಪ್ರದ್ಯೋತನು ಕೋಪಾವಿಷ್ಟನಾಗಿ ಸೈನ್ಯಸಮೇತನಾಗಿ ಪ್ರಶ್ರೇಣಿಕನ ಮೇಲೆ ದಂಡೆತ್ತಿ ಬಂದನು. ಪ್ರಶ್ರೇಣಿಕನು ಸಾರಿಸಿದನು—ಪ್ರದ್ಯೋತನನ್ನು ಹಿಡಿದು ಕಟ್ಟಿ ತಂದವರಿಗೆ ಇಷ್ಟವಾದ ವರವನ್ನು ಕೊಡುತ್ತೇನೆಂದು. ಈ ಘೋಷಣೆಯನ್ನು ಚಿಲಾತಪುತ್ರ ಕೇಳಿ ಜಲಕ್ರೀಡಾರತನಾಗಿದ್ದ ಪ್ರದ್ಯೋತನನ್ನು ಕಟ್ಟಿ ತಂದನು. ಅವನಿಗೆ ವರಪ್ರದಾನ—ರಾಜಗೃಹದಲ್ಲಿ ಸ್ವೇಚ್ಛೆಯಿಂದ ೧೨ ವರ್ಷಗಳ ಕಾಲ ಭೋಗಾಸಂಸಕ್ತಮಾನಸನಾಗಿರುವಂತೆ. ಆಮೇಲೆ ಪ್ರಶ್ರೇಣಿಕ ತನ್ನ ಮಗನಿಗೆ ರಾಜ್ಯಸಂಪದವನ್ನು ಕೊಟ್ಟು ಜಿನಸೇನ ಗುರುಗಳ ಬಳಿ ದೀಕ್ಷಾಗ್ರಹಣಮಾಡಿದನು. ಆಮೇಲೆ ಚಿಲಾತಪುತ್ರನು ಕೋಪಮಿಳಿದ ಶ್ರೇಣಿಕನಿಂದ ಸ್ವದೇಶದಿಂದ ನಿರ್ಘಾಟಿತನಾಗಿ ಮಾತಾಮಹನಿದ್ದ ವನಕ್ಕೆ ಬಂದನು. ಅಲ್ಲಿ ದುರ್ಗಕೋಟೆಯನ್ನು ಕಟ್ಟಿ ಭೋಗಭಾಗಿಯಾಗಿ ಸುಖಿಯಾಗಿದ್ದನು. ಅಲ್ಲಿ ಅವನಿಗೆ ಭರ್ತೃಮಿತ್ರನೆಂಬ ಪ್ರಾಣಸಖನೊಬ್ಬನು ದೊರೆತನು. ಅವನ ಮಾತುಲ ಭದ್ರದತ್ತ. ಮಗಳು ಸುಭದ್ರೆ—ಇವಳನ್ನು ಭರ್ತೃಮಿತ್ರನಿಗೆ ಕೊಡಲು ಇಷ್ಟಪಡಲಿಲ್ಲ. ಭರ್ತೃಮಿತ್ರನು ಐವರು ಭಟರೊಡನೆ ಆ ಕನ್ನೆಯನ್ನು ಅಪಹರಿಸಲು ಹೋಗಿ ಸ್ನಾನಮಾಡುತ್ತಿದ್ದ ಅವಳನ್ನು (ವಿಗಾಹಸಮಯೇ) ಕದ್ದುಕೊಂಡು ಹೋದನು. (ಇಲ್ಲಿ ಸ್ವಲ್ಪ ಅಸ್ಪಷ್ಟತೆ ಇದೆ.) ಶ್ರೇಣಿಕನು ಧನುರ್ಧಾರಿಯಾಗಿ ಅಟ್ಟಿಸಿಕೊಂಡು ಬಂದನು. ಭಯದಿಂದ ಭರ್ತೃಮಿತ್ರ ಕನ್ನೆಯನ್ನು ಕೊಂದನು: ಅವಳು ವ್ಯಂತರಿಯಾಗಿ ಹುಟ್ಟಿದಳು. ಆಮೇಲೆ ಭರ್ತೃಮಿತ್ರ ವೈಭಾರ ಪರ್ವತದ ಶಿಖರವನ್ನು ಹತ್ತಿದನು. ಐನೂರ್ವರು ಶಿಷ್ಯರೊಡನೆ ಅಲ್ಲಿದ್ದ ಮುನಿದತ್ತನೆಂಬ ಮುನಿಯನ್ನು ಅವನು ಕಂಡು ಅವನಿಂದ ಜಿನದೀಕ್ಷೆಯನ್ನು ವಹಿಸಿದನು. ಚಿಲಾತಮಿತ್ರನು ಕಾಯೋತ್ಸರ್ಗದಲ್ಲಿದ್ದನು. ಅಲ್ಲಿಗೆ ಸೈನ್ಯಸಮೇತನಾದ ಶ್ರೇಣಿಕನು ಬಂದು ಅವನನ್ನು ಪೂಜಿಸಿ ಸ್ವಪುರಕ್ಕೆ ಮರಳಿದನು. ಆ ವ್ಯಂತರಿ ವಿಭಂಗಜ್ಞಾನದಿಂದ ತಿಳಿದು ಕೌಶಿಕರೂಪವನ್ನು (ಕಾಗೆ) ಧರಿಸಿ ಬಂದು ಆ ಮುನಿಯ ತಲೆಯ ಮೇಲೆ ಕುಳಿತು ಚಂಚುಪ್ರಹಾರದಿಂದ ಎರಡು ಕಣ್ಣುಗಳನ್ನೂ ಕಿತ್ತು ತಿಂದಿತು. ದೀರ್ಘಮಸ್ತಕಯುಕ್ತ ಕೀಟಕಗಳು ಕಿತ್ತು ತಿಂದವು. ಈ ಉಪಸರ್ಗವನ್ನು ಸೈರಿಸಿ ಚಿಲಾತಪುತ್ರನು ಸತ್ತು ಸರ್ವಾರ್ಥಸಿದ್ಧಿಗೆ ಹೋದನು. (೩೬ ಶ್ಲೋಕಗಳು).

## ೧೪೧. ಧಾನ್ಯಕುಮಾರಮುನಿ ಕಥಾನಕಂ (ದಂಡಕರಿಸಿಯ ಕಥೆ)

ಪೂರ್ವ ವಿದೇಹದ ವೀತಶೋಕಪುರ. ಅಶೋಕ ರಾಜ. ದೇವಿ ಅಶೋಕಾ. ಎತ್ತುಗಳ ಮುಖಗಳನ್ನು ಕಟ್ಟಿ ತನ್ನ ಕೃಷಿಕ್ಷೇತ್ರಕ್ಕೆ ಧಾನ್ಯಸಂಗ್ರಹ [illegible] ರಾಜ [illegible]. ತನ್ನ [illegible] ಸ್ತ್ರೀಯರ ಸ್ತನಗಳನ್ನು ಮಕ್ಕಳು ಸ್ತನ್ಯಪಾನಮಾಡದಂತೆ ಕಟ್ಟಿ ಅವರನ್ನು [illegible]

ಮುನಿಭಿಃ ಸಮಂ॥) ರಾಜ ಮುನಿಗಳನ್ನು ಗಾಣದಲ್ಲಿ ಹಿಂಡಿಸಿದನು. ಅವರೆಲ್ಲ ಅನಶನಮಾಡಿ ಸಮಾಧಿಮರಣದಿಂದ ಸತ್ತರು. (೮ ಶ್ಲೋಕಗಳು)

## ೧೪೩. ಚಾಣಾಕ್ಯಮುನಿ ಕಥಾನಕಂ

ಪಾಟಲೀಪುತ್ರ. ನಂದನೆಂಬ ರಾಜ. ಮಹಾದೇವಿ ಸುವ್ರತೆ. ಇವನಿಗೆ ಮಂತ್ರಿಗಳು ಕವಿ, ಸುಬಂಧು, ಶಕಟಾಖ್ಯ—ಎಂಬ ಮೂವರು ಸಮಸ್ತ ಲೋಕವಿಖ್ಯಾತರು. ಅದೇ ಪುರದಲ್ಲಿ ಕಪಿಲನೆಂಬ ಬ್ರಾಹ್ಮಣ ನಿದ್ದನು: ಅವನ ಭಾರ್ಯೆ ದೇವಿಲೆ. ಇವರ ಮಗ ಚಾಣಕ್ಯ. ವೇದವೇದಾಂಗಸಂಯುಕ್ತ. ಸರ್ವ ಶಾಸ್ತ್ರಾರ್ಥಕೋವಿದ. ಸಮಸ್ತಜನಪೂಜಿತ, ಇವನ ಪ್ರಿಯೆ ಯಶೋಮತಿ. ಕಪಿಲನ ಸೋದರಸೊಸೆ ಯನ್ನು ಕವಿಗೆ ಕೊಟ್ಟು ಮದುವೆಯಾಗಿತ್ತು. ಪ್ರತ್ಯಂತವಾಸಿಗಳ ದಂಗೆ ನಡೆದದ್ದನ್ನು ಕವಿ ರಾಜನಿಗೆ ತಿಳಿಸಲು ರಾಜ ಮಂತ್ರಿಗಳಿಗೆ ಹೇಳಿದ: ಅವರಿಗೆಲ್ಲ ಹಣ ಕೊಟ್ಟು ವಶಪಡಿಸಿಕೊಳ್ಳಿರಿ ಎಂದು. ಕವಿ ಒಬ್ಬೊಬ್ಬರಿಗೂ ಒಂದೊಂದು ಲಕ್ಷವನ್ನು ಕೊಟ್ಟನು. ಒಂದು ಸಲ ನಂದ ರಾಜಭಂಡಾರಿಗನನ್ನು ಕರೆದು ಎಷ್ಟು ಹಣ ಉಳಿದಿದೆಯೆಂದು ಕೇಳಿದನು. ಭಂಡಾರದಲ್ಲಿ ಏನೂ ಧನವಿಲ್ಲ. ನಿನ್ನ ಸಕಲ ಧನ ವನ್ನು ಕವಿ ಪ್ರತ್ಯಂತವಾಸಿಗಳಿಗೆ ಕೊಟ್ಟುಬಿಟ್ಟನು ಎಂದನು ಧನಪಾಲ : ನಂದನಿಗೆ ಸಿಟ್ಟುಬಂದು ಕವಿ ಯನ್ನು ಅವನ ಹೆಂಡತಿಮಕ್ಕಳ ಸಮೇತವಾಗಿ ಅಂಧಕೂಪದಲ್ಲಿ ಹಾಕಿಸಿದನು. ದಿನವೊಂದಕ್ಕೆ ಒಂದು ಶರಾವೆ ಅನ್ನವನ್ನು ಕವಿಗಾಗಿ ಕೊಡುವಂತೆ ನಿಯಮ. ಯಾರು ವೈರ ನಿರ್ಯಾತನಮಾಡಲು ಸಮರ್ಥನೋ ಅವನು ಮಾತ್ರ ಈ ಶರಾವೆಯ ಅನ್ನವನ್ನು ತಿನ್ನಲಿ ಎಂದು ಕವಿ ಹೇಳಿದ. ಅವನ ಕುಟುಂಬದವರು ನೀನೇ ಊಟಮಾಡು ಎಂದರು. ಅದರಂತೆ ಕವಿ ಭೋಜನ ಮಾಡುತ್ತ ಅಂಧಕೂಪದಲ್ಲಿ ತನ್ನಟಿ ಗೋಚರ ಬಿಲವನ್ನು ಕೊರೆದು ಇದ್ದನು. ಮೂರು ವರ್ಷಗಳಾದುವು. ಎಲ್ಲರೂ ಸತ್ತರು. ಕವಿ ಮಾತ್ರ ಜೀವಿಸಿದ್ದನು. ಪ್ರತ್ಯಂತವಾಸಿಗಳು ಈ ಸುದ್ದಿಯನ್ನು ಕೇಳಿ ನಂದಪತ್ತನವನ್ನು ಮುತ್ತಿದರು. ಆಗ ನಂದ ಕವಿಯನ್ನು ಸ್ಮರಿಸಿಕೊಂಡು ಕವಿಯನ್ನು ಕೂಪದಿಂದ ಹೊರಕ್ಕೆ ತೆಗೆಯಿಸಿ ಕ್ಷಮೆಯನ್ನು ಕೇಳಿದನು. ವರವನ್ನು ಕೇಳು ಎಂದನು. ನಿನ್ನ ಕೈಯಿಂದಲೇ ನನಗೆ ದ್ರವ್ಯವನ್ನು ಕೊಡು ಎಂದನು ಕವಿ. ಸಭಾಮಧ್ಯೆ ಹಾಗೇ ಆಗಲಿ ಎಂದ ರಾಜ,

ಒಂದು ಸಲ ಅಲ್ಲಿ ಇಲ್ಲಿ ಓಡಾಡುತ್ತಿದ್ದ ಕವಿ ದರ್ಭಸೂಚಿಯನ್ನು ಅಗೆಯುತ್ತಿದ್ದ ಚಾಣಕ್ಯನನ್ನು ನೋಡಿದನು. ಏತಕ್ಕೆ ಇದನ್ನು ಅಗೆಯುತ್ತೀಯೆ ಎಂದು ಕೇಳಿದನು. ಈ ದರ್ಭಸೂಚಿ ನನ್ನ ಕಾಲನ್ನು ಚುಚ್ಚಿತು. ರಕ್ತ ಬರುತ್ತಿದೆ ನೋಡು. ಇದನ್ನು ಬೇರುಸಹಿತ ಕಿತ್ತುಹಾಕುತ್ತೇನೆ ಎಂದನು. ಕವಿ ಇದನ್ನು ಕೇಳಿ ನಂದವಂಶವನ್ನು ನಿರ್ಮೂಲಮಾಡಲು ಇವನೇ ಸಮರ್ಥನೆಂದು ತಿಳಿದುಕೊಂಡನು. ಸಭಾಮಧ್ಯದಲ್ಲಿ ಅವನು ಒಂದು ಶ್ಲೋಕವನ್ನು ಬರೆದನು. "ನರೇಣೈಕ ಶರೀರೇಣ ನಯಶಾಸ್ತ್ರಯುತೇನ ಚ । ವ್ಯವಸಾಯೇನ ಯುಕ್ತೇನ ಜೇತುಂ ಶಕ್ಯಾ ವಸುಂಧರಾ"—ಈ ಶ್ಲೋಕವನ್ನು ನೋಡಿ ಚಾಣಕ್ಯ ಬರೆದ—"ನರೇಣೈಕ ಶರೀರೇಣ ನಯಶಾಸ್ತ್ರಯುತೇನ ಚ । ವ್ಯವಸಾಯೇನ ಯುಕ್ತೇನ" ಇತ್ಯಾದಿ. ಇದನ್ನು ನೋಡಿ ಕವಿ ಸಂತುಷ್ಟನಾಗಿ ಭಾರ್ಯಾಸಮೇತನಾದ ಚಾಣಕ್ಯನನ್ನು ತನ್ನ ಮನೆಗೆ ಕರೆದನು. ಅವನು ಬಂದ. ಆಗ ಕವಿ ಚಾಣಕ್ಯನ ಮನೆಯ ಅಂಗಳದಲ್ಲಿ ಪರೀಕ್ಷಿಸುವುದಕ್ಕಾಗಿ ಅನೇಕ ದೀನಾರಗಳನ್ನು ಚೆಲ್ಲಿಸಿದನು. ಯಶೋಮತಿ ದೀನಾರಗಳನ್ನು ತಂದು ಚಾಣಕ್ಯನಿಗೆ ತೋರಿಸಿದಳು. ರಾಜನು ಬ್ರಾಹ್ಮಣರಿಗೆ ಕಪಿಲೆಗಳನ್ನು ಕೊಡುತ್ತಾನಂತೆ. ನೀನು ಏಕೆ ಹೋಗಿ ತರಬಾರದು ಎಂದಳು. ಹಾಗೆಯೇ ಆಗಲಿ ಎಂದ ಚಾಣಕ್ಯ ಹೋದ. ಇದನ್ನು ಮಂತ್ರಿ ಕವಿ ತಿಳಿದು ರಾಜನಿಗೆ ಹೇಳಿದ— ಈ ಬ್ರಾಹ್ಮಣನಿಗೆ ಬಹುದುಗ್ಧ ಸಮಾಯುಕ್ತವಾದ ಗೋಸಹಸ್ರವನ್ನು ಕೊಡು ಎಂದು. ಹಾಗೆ ಆಗಲಿ ಎಂದ. ಕವಿ ಚಾಣಕ್ಯನನ್ನು ಕರೆದು ಅಗ್ರಾಸನದಲ್ಲಿ ಕುಳ್ಳಿರಿಸಿದನು. ಬಳಿಕ ಚಾಣಕ್ಯನು ದರ್ಭಾಸನ ಕಮಂಡಲದಿಂದಲೂ ಕುಂಡಿಕೆಗಳಿಂದಲೂ ರುದ್ಧನಾಗಿ ಮಂಡಿಸಿದನು. ಆಗ ರಾಜ—ಇತರ ಬ್ರಾಹ್ಮಣರು ಬಂದಿದ್ದಾರೆ. ಆಸನವನ್ನು ಬಿಡು ಎಂದು ಹೇಳಿದ ಚಾಣಕ್ಯನಿಗೆ. ಒಂದು ಆಸನವನ್ನು ಬಿಟ್ಟು ಚಾಣಕ್ಯ ಕುಳಿತನು. ಹೀಗೆಯೇ ಒಂದೊಂದಾಗಿ ಆಸನವನ್ನು ಅವನು ಬಿಡಬೇಕಾಯಿತು. ನಂದನು ಹೇಳಿದ

ನಿಂದಣೆ ೨೦೦-೧೬
ನೀರಿಟಿ ೧೦೪-೧೮
ನಾಳಿಬೀಳ್ ೫೩-೧ ; ೫೭-೪
ನಾಜು ೧೪೨-೧೫
ನಾಟ್ ೧೨೦-೨೦ ; ೧೯೩-೨೩ ; ೧೯೪-೨
ನಿಶ್ರಾವ ೨೨೮-೨೦, ೨೨
ನೆಗಟು ೫೮-೨ ; ೫೯-೨೫ ; ೧೮೧-೭
ನೇಣ್ ೨೩೧-೧೭
ನೇತ್ರಪಟಿ ೬೩-೮

ಪಂಡಿತಿಕ್ಕೆ ೪೮-೨೫ ; ೬೮-೧೩
ಪಂದರ ೧೮೬-೯
ಪಂದೊವಲ್ ೯೫-೨೮
ಪಗರಣ ೧೬೨-೨೨
ಪಗರಣಿಗ ೧೬೨-೧೪, ೨೧
ಪಚ್ಚುಗೊಡು ೬೯-೨೮
ಪಟ್ಟಿಸಭಂಡಾರ ೧೮೪-೨೨
ಪಡಿಕಮಣ ೫೦-೩, ೨೭ ; ೬೨-೨೬ ; ೧೩೫-೮ ; ೧೩೬-೫, ೨೭
ಪಡಿಗಹ ೫೧-೮
ಪಡು ೧೨೭-೧೦ ; ೧೯೬-೧೧ ; ೨೦೬-೨
ಪಡುವೊಳ್ ೧೫೦-೩೩
ಪಣ್ ೮೪-೨೭
ಪತ್ತು ೧೪೧-೨
ಪದನ್ ೧೯೬-೭
ಪದಿರ್ ೧೬೯-೧೦
ಪದಿರ್ಮಡಿ ೨೩೧-೩
ಪಯನು ೬೬-೩
ಪರಿಯಾಣ ೧೦೮-೨೧
ಪರಿವಡಿ ೭೨-೧೦
ಪರಿವೊಟ್ಟೆ ೧೭೪-೧೮
ಪರ್ಚು ೯೩-೧೧
ಪಲ್ಲಣ ೨೦೬-೧೬
ಪಸ ೧೩೬-೨, ೧೬, ೧೯
ಪಸವು ೧೩೦-೧೨ ; ೧೩೨-೧೦ ; ೧೩೪-೧೯
ಪಳಿಕೆ ೧೪೨-೬
ಪಜಿಪೊಟ್ಟು ೭೧-೨೮
ಪಟಿ ೫೨-೨೪ ; ೫೪-೩ ; ೫೫-೩೦ ; ೧೨೭-೨೬ ; ೧೩೭-೬ ; ೧೭೬-೧೧ ; ೨೧೧-೬
ಪಟ್ಟಿ ೧೨೦-೬

ಪಾಗುಡ ೭೮-೪ ; ೯೨-೨೦ ; ೧೦೫-೧೯ ; ೧೯೩-೩
ಪಾಟ ೯೯-೨
ಪಾನಿಗಟ್ಟು ೧೨೩-೧೨, ೧೦ ; ೧೦೭-೧, ೪
ಪಾಪೆ ೬೩-೧೧
ಪಾರಕು ೧೧೨-೨೬
ಪಾರು ೧೦೮-೨೨
ಪಾರ್ವಂತಿ ೪೯-೨೩ ; ೮೨-೮ ; ೧೨-೧೧ ; ೨೩೪-೧೯
ಪಾವುಕೊಳ್ ೫೭-೯ ; ೫೬-೯
ಪಾಳಿಧ್ವಜ ೨೦೮-೨೪
ಪಾಟಿ ೨೨೯-೧೮
ಪಡಿಪೆಜು ೨೨೬-೧
ಪಿನ್ನ ೧೩೦-೯
ಪಿಟಿ³ ೨೨೨-೬
ಪಿಟಿಸು ೨೨೩-೭
ಪುಗುಳ್ ೭೩-೧೦
ಪುಟ್ಟಿಗೆ ೧೬೭-೧
ಪುಡಿಕೆ ೧೬೭-೮, ೧೯
ಪುಡುಕುನೀರ್ ೧೮೯-೧೨
ಪುಡುಕೆ ೬೩-೧೧ ; ೨೨೧-೧
ಪುರುಳಿ ೧೪೧-೯
ಪುಳುಂಗಾಜಿ ೧೯೪-೨೨
ಪೆಂಗುರು ೧೪೧-೯
ಪೆಟ್ಟೆ ೭೩-೧೦ ; ೧೮೦-೨
ಪೆಜುಕು ೯೦-೭
ಪೇಪಂದಿ ೫೩-೯ ; ೫೪-೬ ; ೫೭-೫ ; ೬೮-೫
ಪೊಟ್ಟಳಿಗೆ ೫೯-೬, ೭, ೭ ; ೬೧-೧೪, ೨೧, ೨೨, ೨೩, ೨೪
ಪೊರೆತಾಪು ೯೫-೨೮
ಪೊಲ್ಲದು ೫೧-೨೦ ; ೬೦-೨೦
ಪೊಲ್ಲವಯನಸ ೫೮-೨೮
ಪೊಲ್ಲಮಾನಸಿ ೬೦-೫, ೨೮
ಪೊಲ್ಲಮೆ ೫೭-೧ : ೮೭-೧೦ ; ೧೪೦-೨೪ ; ೨೧೧-೬ ; ೨೩೧-೭
ಪೋಜಿಸು ೧೭೮-೮
ಪೊಟ್ಟು ೧೪೭-೩೦ ; ೧೪೮-೬, ೮
ಪೊಟ್ಟುಡು ೧೨೩-೧೮
ಪೊಟ್ಟುಡೆ ೨೦೪-೧

# ೪. ಜೈನ ಪಾರಿಭಾಷಿಕ ಶಬ್ದಕೋಶ

(ಮೊದಲಿನ ಸಂಖ್ಯೆ ಪುಟವನ್ನು ನಿರ್ದೇಶಿಸುತ್ತದೆ).

**ಅಂತರ್ಗತ ಕೇವಲಿ** ೧೧೭—ಒಳಗಡೆ ಸೇರಿರುವ ಎಂದರೆ ಲೀನವಾದ ಕೇವಲಜ್ಞಾನವುಳ್ಳವನು.

**ಅಘಾತಿಕರ್ಮ** ೧೪೮—ಆತ್ಮನ ಗುಣಗಳನ್ನು ನಾಶಮಾಡದ ಕರ್ಮ. ಇದು ನಾಲ್ಕುತೆರ; (೧) ಆಯು = ಆಯುಸ್ಸಿನ ಅವಧಿಯನ್ನು ನಿರ್ಣಯಿಸುವ ಕರ್ಮ. (೨) ನಾಮ = ವ್ಯಕ್ತಿಯ ತೂಕ, ಎತ್ತರ, ಗಾತ್ರ, ಬಣ್ಣ ಮುಂತಾದುವನ್ನು ನಿರ್ಣಯಿಸುವ ಕರ್ಮ. (೩) ಗೋತ್ರ = ವ್ಯಕ್ತಿಯ ವಂಶ, ಕುಲ, ದೇಶವನ್ನು ನಿರ್ಣಯಿಸುವ ಕರ್ಮ. (೪) ವೇದನೀಯ = ಇಹಜೀವನದಲ್ಲಿ ಸುಖದುಃಖಕಾರಣವಾದ ಕರ್ಮ.

**ಅಚ್ಯುತಕಲ್ಪ** ೭೮—ಹದಿನಾರು ಸ್ವರ್ಗಗಳಲ್ಲಿ ಕೊನೆಯದು.

**ಅಣುವ್ರತ** ೫೫—ಜೈನಗೃಹಸ್ಥರು ಧರಿಸಿ ಪೂರ್ಣ ಆಸಕ್ತಿಹೊಂದುವ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ವ್ರತಗಳು.

**ಗುಣವ್ರತ** ೧೭೧—ಜೈನ ಸಂನ್ಯಾಸಿ ಹಾಕಿಕೊಳ್ಳುವ ದೈನಂದಿನ ಮಿತಿಗಳು. ಇವು ಮೂರು ತೆರ :
(೧) ದಿಗ್ವ್ರತ—ನಿಶ್ಚಿತ ದಿಕ್ಕಿನಲ್ಲಿ ಮಾತ್ರ ಚರಿಸುವುದೆಂದು ಗೊತ್ತುಮಾಡಿಕೊಳ್ಳುವುದು.
(೨) ದೇಶವ್ರತ—ನಿಶ್ಚಿತ ಸ್ಥಳಕ್ಕೆ ಮಾತ್ರ ಹೋಗುವುದೆಂದು ಗೊತ್ತುಮಾಡಿಕೊಳ್ಳುವುದು.
(೩) ದಂಡವಿರತಿವ್ರತ—ದಂಡಿಸುವುದನ್ನು ಬಿಡುವುದು.

**ಅನಂತಚತುಷ್ಟಯ** ೧೪೩—**ನಾಲ್ಕು ಸಿದ್ಧಿಗಳು :** (೧) ಅನಂತಜ್ಞಾನ, (೨) ಅನಂತದರ್ಶನ, (೩) ಅನಂತವೀರ್ಯ, (೪) ಅನಂತಸುಖ

**ಅಭವ್ಯಜೀವ** ೫೪—ಸಮ್ಯಗ್ದರ್ಶನಾದಿಗಳಲ್ಲಿ ಪರಿಣತವಾಗದೆ ಸಿದ್ಧಸ್ಥಿತಿಗೆ ಏರದ ಜೀವ.

**ಅಭಕ್ಷ್ಯ** ೧೪೦—ತಿನ್ನಬಾರದ ಪದಾರ್ಥಗಳು : ಜೇನು, ಅತ್ತಿಹಣ್ಣು, ಅರಳಿಹಣ್ಣು, ಆಲದಹಣ್ಣು, ಹಲಸಿನಹಣ್ಣು, ಬಸುರಿ ಮರದ ಹಣ್ಣು.

**ಅಯುಘಾಕರ್ಮದ ದೋಷ** ೧೪೭—ಉಚಿತವಲ್ಲದ ಕಾರ್ಯವನ್ನು ಮಾಡುವುದರಿಂದ ಬರುವ ದೋಷ.

**ಅಯೋಗಿಕೇವಲಿ** ೧೯೯—ಯೋಗದ ಅಭಾವವಿರುವ ಅಯೋಗಿಕೇವಲಿ ಗುಣಸ್ಥಾನ ಎಂಬ ೧೪ನೆಯ ಗುಣಸ್ಥಾನದಲ್ಲಿ ವರ್ತಿಸುವವನು.

**ಅರ್ಧಚಕ್ರವರ್ತಿ** ೯೪—ಷಟ್ಖಂಡಗಳ ಒಡೆಯ, ಚಕ್ರವರ್ತಿ. ಮೂರು ಖಂಡಗಳ ಒಡೆಯ, ಅರ್ಧ ಚಕ್ರವರ್ತಿ.

**ಅವಧಿಜ್ಞಾನ** ೫೩, ೫೭—ಜೈನಯತಿಗಳಿಗೆ ಒದಗುವ ವಿಶೇಷ ಜ್ಞಾನ, ಕಾಲದೇಶಗಳು ಎಷ್ಟೇ ದೂರವಾಗಿದ್ದರೂ ಕೆಲವು ಮಿತಿಗೊಳಪಟ್ಟು ಅಲ್ಲಿನ ವಿಷಯಗಳನ್ನು ತಿಳಿಯುವ ಜ್ಞಾನ.

**ಅವಧಿಜ್ಞಾನಿ** ೮೭—ಅವಧಿಜ್ಞಾನವುಳ್ಳ ಜೈನಯತಿ.

**ಅವಲೋಕಿನೀ ವಿದ್ಯೆ** ೧೧೯—ದೂರಸ್ಥ ಸಂಗತಿಯನ್ನು ತಿಳಿಯುವ ವಿದ್ಯೆ.

**ಅಷ್ಟಮದ** ೫೦—ಕುಲಮದ, ರೂಪಮದ, ವಯಸ್ಸಿನ ಮದ, ತೋಳಿನ ಮದ, ತಪೋಮದ, ಕಲಾಮದ, ದೇವತಾಬಲಮದ, ರಾಜ್ಯಮದಗಳು.

**ಅಷ್ಟವಿಧಕರ್ಮ** ೧೪೨—೪ ಘಾತಿಕರ್ಮಗಳು ಮತ್ತು ೪ ಅಘಾತಿಕರ್ಮಗಳು.

**ಆಚಾಮ್ಲವರ್ಧನ** ೧೧೦—ಇದು ಒಂದು ವ್ರತ. ಸೌವೀರಭುಕ್ತಿ ಎಂದು ಇದರ ಹೆಸರು. ಒಂದು ಆಚಾಮ್ಲ ಒಂದು ಪಾರಣೆ, ಎರಡು ಆಚಾಮ್ಲ ಒಂದು ಪಾರಣೆ, ಮೂರು ಆಚಾಮ್ಲ ಒಂದು ಪಾರಣೆ, ಹೀಗೆ ಹತ್ತರವರೆಗೂ. ಅನಂತರ ಒಂಬತ್ತು ಆಚಾಮ್ಲ ಒಂದು ಪಾರಣೆ, ಎಂಟು

(೬) ಪವಯಣ ಕುಶಲ (ಪ್ರವಚನಕುಶಲ), (೭) ಮದಿಪ್ಪಗಬ್ಭೋಯು (ಬುದ್ಧಿಯಲ್ಲಿ ಪ್ರೌಢಿಮೆ).

**ಕಷಾಯ** ೬೮—ಕ್ರೋಧ, ಮಾನ, ಮಾಯ, ಲೋಭಗಳು.

**ಕಾಯೋತ್ಸರ್ಗ** ೯೨—ಶರೀರಾದಿಗಳ ಮಮತೆಯನ್ನು ತೊರೆದು ಆತ್ಮವನ್ನು ಸಮಾಧಿಮಾಡಿ ಕೊಳ್ಳುವುದು.

**ಕ್ಷಪಕಶ್ರೇಣಿ** ೧೭೮—ಗುಣಸ್ಥಾನಗಳಲ್ಲಿ ಜೀವ ಉನ್ನತಿ ಹೊಂದುತ್ತಾ ಹೋಗುವಾಗ ಯಾವುದು ಚಾರಿತ್ರ ಮೋಹನೀಯಗಳ ನಾಶಮಾಡುತ್ತದೋ ಅದು. ಕ್ಷಪಕಶ್ರೇಣಿಯನ್ನು ಏರುವವನು ೧೧ನೆಯ ಗುಣಸ್ಥಾನವನ್ನು ಸ್ಪರ್ಶಿಸುವುದಿಲ್ಲ.

**ಖೇಳೋಷಧಿ ಸುದ್ಧಿ** ೧೧೩—ತಪರ್ಧಿಗಳಲ್ಲಿ ಒಂದು. ಯತಿಯ ಎಂಜಲಿನಿಂದ ರೋಗ ಪರಿಹಾರ ವಾಗುವುದು.

**ಗುಣಸ್ಥಾನ** ೧೯೮—ಸಂಸಾರದಲ್ಲಿ ಸಿಕ್ಕು ಮಿಥ್ಯಾತ್ವದಲ್ಲಿ ಮುಳುಗಿರುವ ಜೀವ ಕರ್ಮಕ್ಷಯ ಮಾಡಿಕೊಂಡು ಮೇಲೇರುವಾಗ ೧೪ ಮೆಟ್ಟಿಲುಗಳಿವೆ. ಈ ಮೆಟ್ಟಿಲುಗಳೇ ಗುಣಸ್ಥಾನಗಳು. ಕರ್ಮದ ಉದಯ, ಉಪಶಮ, ಶಾಂತ, ಕ್ಷಯ, ಕ್ಷಯೋಪಶಮಗಳಿಂದ ಉಂಟಾಗುವ ಜೀವದ ಸ್ಥಿತಿಗೆ ಗುಣಸ್ಥಾನವೆಂದು ಹೆಸರು.

**ಗೋಚಾರನಿಯಮ** ೧೨೩, ೧೨೯—ಸಾಧುವಿನ ಭಿಕ್ಷಾಕ್ರಮ. ಆಹಾರಕ್ಕಾಗಿ ಹಸುವು ವನದ ಶೋಭೆ, ಸೌಂದರ್ಯಗಳನ್ನು ಲಕ್ಷಿಸದೆ ಚರಿಸುವಂತೆ ಸಂನ್ಯಾಸಿ ಭಿಕ್ಷವನ್ನು ಮಾತ್ರ ಗಮನಿಸ ಬೇಕು. ದಾತಾರನನ್ನಾಗಲಿ ಅವನ ಐಶ್ವರ್ಯವನ್ನಾಗಲಿ ಗಣಿಸಬಾರದು.

**ಘಾತಿಕರ್ಮ** ೧೪೮, ೧೯೮—ಘಾತಿಕರ್ಮಗಳು ೪. ಜೀವಕ್ಕೆ ಸಹಜವಾದ ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ ಎಂಬ ನಾಲ್ಕು ಅನಂತಗುಣಗಳಿಗೆ ಘಾತಿ ಉಂಟುಮಾಡುವ ಕರ್ಮ. ಅವು (೧) ಜ್ಞಾನಾವರಣೀಯ—ಅನಂತಜ್ಞಾನವನ್ನು ಆವರಿಸುವುದು, (೨) ದರ್ಶನಾ ವರಣೀಯ—ಅನಂತದರ್ಶನವನ್ನು ಆವರಿಸುವುದು, (೩) ಅಂತರಾಯ—ಅನಂತವೀರ್ಯವನ್ನು ಆವರಿಸುವುದು, (೪) ಮೋಹನೀಯ—ಜೀವವನ್ನು ಮೋಹಗೊಳಿಸಿ ಅನಂತಸುಖವನ್ನು ಮರೆ ಸುವುದು. ಘಾತಿಕರ್ಮಗಳು ಜೀವವನ್ನು ಸಂಸಾರದಲ್ಲಿ ಸಿಲುಕಿಸುತ್ತವೆ.

**ಘೋರತಪ** ೧೧೩—ಭಯಾನಕ ಸ್ಥಳದಲ್ಲಿ ರೋಗಾದಿಗಳುಂಟಾದರೂ ತಪಸ್ಸು ಮಾಡುವುದು.

**ಚತುರ್ನಿಕಾಯಾಮರ** ೩೦—ಭವನಪತಿ, ವ್ಯಂತರಿಕ, ಜ್ಯೋತಿಷ್ಯ ಮತ್ತು ವಿಮಾನವಾಸಿಗಳೆಂಬ ನಾಲ್ಕು ಬಗೆಯ ದೇವತೆಗಳು.

**ಚತುರ್ದಶಪೂರ್ವಗಳು** ೯೩—ದ್ವಾದಶಾಂಗಗಳಲ್ಲಿ ೧೨ನೆಯ ದೃಷ್ಟಿವಾದಾಂಗಕ್ಕೆ ಮೂಲವಾಗಿದ್ದು ಈಗ ಕಾಣೆಯಾಗಿರುವ ೧೪ ಪೂರ್ವಗಳು : (೧) ಉತ್ಪಾದ ಪೂರ್ವ, (೨) ಅಗ್ರಾಯಣೀ ಪೂರ್ವ, (೩) ವೀರ್ಯಾನುವಾದ ಪೂರ್ವ, (೪) ಅಸ್ತಿನಾಸ್ತಿಪ್ರವಾದ ಪೂರ್ವ, (೫) ಜ್ಞಾನಪ್ರವಾದ ಪೂರ್ವ, (೬) ಸತ್ಯಪ್ರವಾದ ಪೂರ್ವ, (೭) ಆತ್ಮಪ್ರವಾದ ಪೂರ್ವ, (೮) ಕರ್ಮಪ್ರವಾದ ಪೂರ್ವ, (೯) ಪ್ರತ್ಯಾಖ್ಯಾನವಾದ ಪೂರ್ವ, (೧೦) ವಿದ್ಯಾನುವಾದ ಪೂರ್ವ, (೧೧) ಕಲ್ಯಾಣ ವಾದ ಪೂರ್ವ, (೧೨) ಪ್ರಾಣವಾದ ಪೂರ್ವ, (೧೩) ಕ್ರಿಯಾ ವಿಶಾಲ ಪೂರ್ವ, (೧೪) ತ್ರಿಲೋಕ ಬಿಂದುಸಾರ ಪೂರ್ವ.

**ಚಾರಣರಿಸಿಯರ್** ೧೦೬—ಆಕಾಶದಲ್ಲಿ ಸಂಚರಿಸುವ ಮುನಿ.

**ಜಲ್ಲೋ(ಲ್ಲೋ)ಷಧಿಋದ್ಧಿ** ೧೧೩—ಹತ್ತು ತಪಸ್ಸಿದ್ಧಿಗಳನ್ನು ಪಡೆದವಂಗೆ ಉಂಟಾಗುವ ಮಹಿಮೆ. ತಪರ್ಧಿಗಳಲ್ಲಿ ಒಂದು. ಸಾಧುವಿನ ಬೆವರಿನ ಸ್ಪರ್ಶದಿಂದ ರೋಗ ಪರಿಹಾರವಾಗುವುದು.

**ಜಿನಕಲ್ಪ** ೧೩೭—ಏಕವಿಹಾರಿಯಾದ ಜೈನ ಸಾಧು ಸಂಪ್ರದಾಯ.

**ದೀಪ್ತತಪ** ೧೧೩—ಅನೇಕ ಉಪವಾಸಗಳ ಅನಂತರವೂ ಶರೀರದ ಕಾಂತಿ ಕುಂದದಿರುವುದು. ಮುಖದಲ್ಲಿ ದುರ್ಗಂಧ ಬರದಿರುವುದು.

**ದ್ವಾದಶವಿಧತಪ** ೧೫—ಕರ್ಮನಿರ್ಜರೆಗೆ ಸಾಧನವಾದ ತಪಸ್ಸುಗಳು ೧೨. ಅವು ಎರಡು ವಿಧ: (೧) ಬಾಹ್ಯ, (೨) ಅಭ್ಯಂತರ.

**ಬಾಹ್ಯತಪಗಳು** ೬: (೧) ಅನಶನ (ಆಹಾರವಿಲ್ಲದೆ ತಪಸ್ಸು ಮಾಡುವುದು), (೨) ಅವಮೋದರ್ಯ (ಹೊಟ್ಟೆ ತುಂಬುವುದಕ್ಕಿಂತ ಕಡಮೆ ತೆಗೆದುಕೊಳ್ಳುವುದು), (೩) ವೃತ್ತಿಸಂಖ್ಯಾನ (ನಿರ್ದಿಷ್ಟ ರೀತಿಯಲ್ಲಿ ಮಾತ್ರ ಭಿಕ್ಷೆ ಮಾಡುವುದಾಗಿ ಮಿತಿಹಾಕಿಕೊಳ್ಳುವುದು), (೪) ರಸತ್ಯಾಗ (ಹಾಲು, ಮೊಸರು ಮೊದಲಾದ ತನಗೆ ಪ್ರಿಯವಾದುದನ್ನು ಬಿಡುವುದು), (೫) ಕಾಯಕ್ಲೇಶ (ಗಾಳಿ, ಮಳೆ, ಬಿಸಿಲುಗಳಲ್ಲಿ ದೇಹವನ್ನು ದಂಡಿಸಿ ತಪಸ್ಸು ಮಾಡುವುದು), (೬) ವಿವಿಕ್ತಶಯನಾಸನ (ಏಕಾಂತವಾಗಿ ಕೂರುವುದು, ಮಲಗುವುದು ಈ ಬಗೆಯ ತಪಸ್ಸು).

**ಅಭ್ಯಂತರ ತಪಸ್ಸು** ೬: (೧) ಪ್ರಾಯಶ್ಚಿತ್ತ (ಮಾಡಿದ ತಪ್ಪನ್ನು ಒಪ್ಪಿಕೊಂಡು ಶಿಕ್ಷೆಯನ್ನು ಅನುಭವಿಸುವುದು), (೨) ವಿನಯ (ಜ್ಞಾನದರ್ಶನ ಚಾರಿತ್ರಗಳಲ್ಲಿ ಹಿರಿಯರಿಗೆ ವಿನಯವಾಗಿರುವುದು), (೩) ವೈಯಾವೃತ್ಯ—ವೃದ್ಧರೂ ಅಶಕ್ತರೂ ರೋಗಿಷ್ಠರೂ ಆದ ಯತಿಗಳ ಸೇವೆ ಮಾಡುವುದು, (೪) ಸ್ವಾಧ್ಯಾಯ (ಆಗಮ ಗ್ರಂಥಗಳನ್ನು ಅಭ್ಯಾಸ ಮಾಡುವುದು), (೫) ವ್ಯುತ್ಸರ್ಗ (ಶರೀರದ ಮೇಲಣ ಆಸೆಯನ್ನು ಬಿಟ್ಟು ಸಮಚಿತ್ತದಿಂದಿರುವುದು, (೬) ಧ್ಯಾನ.

**ದ್ವಾದಶಾಂಗಗಳು** ೯೩—(೧) ಆಚಾರಾಂಗ—ಯತಿಯ ನಡವಳಿಕೆಯನ್ನು ತಿಳಿಸುತ್ತದೆ (೨) ಸೂತ್ರಕೃತಾಂಗ—ಜ್ಞಾನ, ವಿನಯ, ಧಾರ್ಮಿಕಕ್ರಿಯೆ ಮೊದಲಾದುವನ್ನು ತಿಳಿಸುತ್ತದೆ. (೩) ಸ್ಥಾನಾಂಗ—ಜೀವಪುದ್ಗಲ ಮೊದಲಾದ ದ್ರವ್ಯಗಳ ಸ್ಥಾನವನ್ನು ತಿಳಿಸುತ್ತದೆ. (೪) ಸಮವಾಯಾಂಗ—ದ್ರವ್ಯ ಕಾಲ ಕ್ಷೇತ್ರ ಭಾವಗಳ ದೃಷ್ಟಿಭೇದಗಳಿಂದ ತೋರುವ ಸಾಮ್ಯವನ್ನು ತಿಳಿಸುತ್ತದೆ. (೫) ವ್ಯಾಖ್ಯಾಪ್ರಜ್ಞಪ್ತಿ—ಗಣಧರರ ಪ್ರಶ್ನೆಗಳಿಗೆ ತೀರ್ಥಂಕರರ ಉತ್ತರಗಳನ್ನು ತಿಳಿಸುತ್ತದೆ. (೬) ಜ್ಞಾತೃಧರ್ಮಕಥಾಂಗ—ಧಾರ್ಮಿಕ ಕಥೆ, ಗಣಧರ ತೀರ್ಥಂಕರರ ಸಂವಾದವಿದೆ. (೭) ಉಪಾಸಕಾಧ್ಯಯನಾಂಗ—ಶ್ರಾವಕಾಚಾರಗಳನ್ನು ತಿಳಿಸುತ್ತದೆ. (೮) ಅಂತಕೃದ್ದಶಾಂಗ—ಪ್ರತಿ ತೀರ್ಥಂಕರರ ಕಾಲದಲ್ಲಿಯೂ ಉಪಸರ್ಗವನ್ನು ಸಹಿಸಿ ತಪಸ್ಸುಮಾಡಿದ ಹತ್ತು ಹತ್ತು ಮುನಿಗಳ ಚರಿತ್ರೆಯಿದೆ. (೯) ಅನುತ್ತರೋಪಪಾದಕ ದಶಾಂಗ—ಪ್ರತಿ ತೀರ್ಥಂಕರರ ಕಾಲದಲ್ಲಿಯೂ ತಪಸ್ಸಿನಿಂದ ಐದು ಅನುತ್ತರಗಳಲ್ಲಿ ಹುಟ್ಟಿದ ಹತ್ತು ಹತ್ತು ಮುನಿಗಳ ಚರಿತ್ರೆಯಿದೆ. (೧೦) ಪ್ರಶ್ನವ್ಯಾಕರಣಾಂಗ—ಪ್ರಾಣಿಗಳ ಸುಖದುಃಖದ ಪ್ರಶ್ನೆಗಳಿಗೆ ಉತ್ತರವಿದೆ. (೧೧) ವಿಪಾಕಸೂತ್ರಾಂಗ—ಕರ್ಮಗಳ ವಿಪಾಕ ಸ್ವರೂಪವನ್ನು ತಿಳಿಸುತ್ತದೆ. (೧೨) ದೃಷ್ಟಿವಾದಾಂಗ—ಬೇರೆ ಬೇರೆ ದರ್ಶನಗಳನ್ನು ವಿವರಿಸಿ ಸಮ್ಯಗ್ ದರ್ಶನವನ್ನು ತಿಳಿಸುತ್ತದೆ. ಇಲ್ಲಿ ಚತುರ್ದಶ ಪೂರ್ವಗಳೂ ಸೇರಿವೆ.

**ನಂದೀಶ್ವರ** [illegible]—ನಂದೀಶ್ವರದಲ್ಲಿ ಸೌಧರ್ಮಾದಿ ಇಂದ್ರರು ಸಾನ್ನಿಧ್ಯದಲ್ಲಿ ಮಾಡುವ ಪೂಜೆ. ಇದನ್ನು ಕಾರ್ತಿಕ, ಫಾಲ್ಗುಣ, ಆಷಾಢಗಳ ಅಂತ್ಯವಾರಗಳಲ್ಲಿ ಮಾಡುವುದು.

**ಧರ್ಮಧ್ಯಾನ** ೬೨—ಧರ್ಮಸ್ವರೂಪವನ್ನು ಯಾವಾಗಲೂ ಚಿಂತಿಸುತ್ತಿರುವುದು.

**ನವಪದಾರ್ಥಗಳು**—ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಸಂವರ, ನಿರ್ಜರ, ಬಂಧ, ಮೋಕ್ಷ.

**ನಿಶ್ಶಲ್ಯಗಳು** ೮೫—ಮಾಯಾ (ಕಪಟ), ಮಿಥ್ಯಾ (ಶ್ರದ್ಧೆಯ ಅಭಾವ), ನಿಧಾನ (ಭೋಗಾಕಾಂಕ್ಷೆ) ಗಳೆಂಬ ಶಲ್ಯಗಳಿಲ್ಲದಿರುವುದು.

**ಪಂಚಮಹಾಪಾತಕ** ೧೪೦—ಬಾಲವಧೆ, ಸ್ತ್ರೀವಧೆ, ಗೋವಧೆ, ಋಷಿವಧೆ, ಬ್ರಾಹ್ಮಣವಧೆ.

**ಪಂಚಾಸ್ತಿಕಾಯಗಳು**—ಕಾಲವನ್ನುಳಿದು ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶಗಳು.

**ಪಂಚಾತಿಚಾರನಿಯಮ** ೧೪೬—ಹುಟ್ಟಿನಿಂದ ಇಂದಿನವರೆಗೆ ನಡೆದಿರಬಹುದಾಗಿದ್ದ ಅತಿಚಾರಗಳ ಶುದ್ಧಿಗೆ ಮಾಡಬೇಕಾದ ನಿಯಮ.

**ಪಡಿಕಮಣ** ೫೦, ೭೨—೧೪ ಪ್ರಕೀರ್ಣಕಗಳಲ್ಲಿ ನಾಲ್ಕನೆಯದು. ಹಿಂದೆ ಮಾಡಿದ ದೋಷಗಳಿಗೆ

ಪಶ್ಚಾತ್ತಾಪಪಡುವುದು, ಇದು ಏಳು ಬಗೆ: (೧) ದೈವಸಿಕ (ಹಗಲು ಮಾಡಿದ ದೋಷ). (೨) ರಾತ್ರಿಕ (ರಾತ್ರಿ ಮಾಡಿದ ದೋಷ). (೩) ಐರ್ಯಾಪಥಿಕ (ಬೀದಿಗೆ ಹೋಗುವಾಗ ನಡೆದ ದೋಷ), (೪) ಪಾಕ್ಷಿಕ (ಹದಿನೈದು ದಿವಸಗಳಲ್ಲಿ ನಡೆದ ದೋಷ), (೫) ಚಾತುರ್ಮಾಸಿಕ (ನಾಲ್ಕು ತಿಂಗಳಲ್ಲಿ ನಡೆದ ದೋಷ), (೬) ಸಾಂವತ್ಸರಿಕ (ವರ್ಷಪೂರ್ತಿ ನಡೆದ ದೋಷ), (೭) ಉತ್ತಮಾರ್ಥ (ಸಮಾಧಿಮರಣ ಸಮಯದಿಂದ ಜೀವನ ಪರ್ಯಂತರ ನಡೆದ ದೋಷ).

**ಪದಿನೆಂಟು ದೋಷಂಗಳು** ೫೦—ಅರ್ಹಂತನಿಗೆ ಇವು ಇರುವುದಿಲ್ಲ. ಹಸಿವು, ಬಾಯಾರಿಕೆ, ಭಯ. ದ್ವೇಷ, ರಾಗ, ಮೋಹ, ಚಿಂತೆ, ಜರೆ, ರೋಗ, ಮರಣ, ಬೆವರು, ಖೇದ, ಮದ, ರತಿ, ಆಶ್ಚರ್ಯ, ಜನನ, ನಿದ್ರಾ, ವಿಷಾದ.

**ಪರೀಷಹಂಗಳು** ೪೫—೨೨ ಪರೀಷಹಗಳು ನೋಡಿ.

**ಪೃಥಕ್ತ್ವವಿತರ್ಕವಿಚಾರ** ೬೩—ಮೊದಲ ಶುಕ್ಲ ಧ್ಯಾನದಲ್ಲಿ ೮ನೆಯ ಗುಣಸ್ಥಾನದಿಂದ ೧೨ನೆಯ ಗುಣಸ್ಥಾನದ ಕೆಲವು ಭಾಗದವರೆಗೆ ನಡೆಯುವಂಥದು.

**ಪ್ರಾಯೋಪಗಮ** ೪೫, ೬೨, ೧೨೬—ಜೈನಯತಿಗಳು ತಮ್ಮ ರೋಗಕ್ಕೆ ತಾವೂ ಚಿಕಿತ್ಸೆಮಾಡಿಕೊಳ್ಳದೆ ಬೇರೆಯವರಿಂದಲೂ ಮಾಡಿಸದೆ ಧ್ಯಾನದಲ್ಲಿ ಲೀನರಾಗಿ, ಅಚಲರಾಗಿ ಪ್ರಾಣತ್ಯಾಗ ಮಾಡುವುದು.

**ಬಾಹ್ಯಾಭ್ಯಂತರ ಪರಿಗ್ರಹ** ೪೫. ೫೩. ೫೫. ೧೪೦—ದ್ವಾದಶ ವಿಧ ತಪಗಳನ್ನು ಸ್ವೀಕರಿಸುವುದು.

**ಭವ್ಯ** ೪೯—ಚೈತನ್ಯ ಜೀವವು ಸಮ್ಯಗ್ದರ್ಶನಾದಿ ಭಾವರೂಪದಲ್ಲಿ ಪರಿಣತಿಹೊಂದಿ ಮೋಕ್ಷಗಾಮಿಯಾಗುವುದು.

**ಭುಕ್ತಪ್ರತ್ಯಾಖ್ಯಾನವಿಧಿ** ೩೮—ಕ್ರಮಪೂರ್ವಕವಾಗಿ ಆಹಾರಪಾನೀಯಗಳನ್ನು ತ್ಯಾಗಮಾಡುವುದು.

**ಮಹಾತಪ** ೧೧೩—ಸಿಂಹನಿಷ್ಕ್ರೀಡಿತಾದಿ ಮಹಾತಪಗಳನ್ನು ಮಾಡುವುದು.

**ಮಹಾವ್ರತ** ೫೦—ಸಾಧುವು ಪಾಲಿಸಲು ಯೋಗ್ಯವಾದ ಅಹಿಂಸೆ, ಸತ್ಯ, ಅಸ್ತೇಯ. ಬ್ರಹ್ಮಚರ್ಯ, ಅಪರಿಗ್ರಹಗಳೆಂಬ ಐದು ವ್ರತಗಳು.

**ಮಿಥ್ಯಾತ್ವ** ೬೮—ಅತತ್ವಶ್ರದ್ಧಾನದ ಉದಯದಿಂದ ಜೀವನು ಆಪ್ತರು ಮತ್ತು ತೀರ್ಥಂಕರರು ಹೇಳಿದ ಮೋಕ್ಷಮಾರ್ಗದಿಂದ ಪರಾಙ್ಮುಖನಾಗಿ ಸಮ್ಯಕ್ತ್ವರಹಿತನಾಗಿ ಮಿಥ್ಯಾದೃಷ್ಟಿಯಾಗುತ್ತಾನೆ.

**ಮುಂಡಕೇವಲಿ** ೧೬೮—ಮುಂಡನಾ ಅಥವಾ ವಶಪಡಿಸಿಕೊಳ್ಳುವ ಕೇವಲಿ. ಇವು ಹತ್ತು ಬಗೆ ಐದು ವಿಧವಾದ ಸ್ಪರ್ಶನ. (೬) ವಚನಮುಂಡ (ಮಾತಾಡದಿರುವುದು), (೭) ಹಸ್ತಮುಂಡ (ಕುಚೇಷ್ಟೆಗಾಗಿ ಕೈಯಾಡಿಸುವುದು) (೮) ಪಾದಮುಂಡ (ಪಾದಗಳನ್ನು ಆಸನದಲ್ಲಿ ಸೇರಿಸದಿರುವುದು). (೯) ಮನಮುಂಡ (ಕೆಟ್ಟದ್ದನ್ನು ಯೋಚಿಸದಿರುವುದು). (೧೦) ಶರೀರ ಮುಂಡ (ಶರೀರವನ್ನು ಹತೋಟಿಯಲ್ಲಿಟ್ಟುಕೊಳ್ಳುವುದು). ಪ್ರಯೋಜನವಿಲ್ಲದ ಕೆಲಸದಲ್ಲಿ ಯಾವುದರಿಂದ ಹಿಂಸೆಯಾಗುತ್ತದೆಯೋ ಅದನ್ನು ಬಳಸಬಾರದು.

**ಮೂರು ಮೂಢಗಳು** ೫೧—(೧) ದೇವತಾಮೂಢ (ಮಿಥ್ಯಾದೇವತೆಗಳ ಅರ್ಚನೆ). (೨) ಲೋಕಮೂಢ (ಮಿಥ್ಯಾಕ್ಷೇತ್ರಗಳಲ್ಲಿ ನಂಬಿಕೆ), (೩) ಪಾಷಂಡಿಮೂಢ (ಮಿಥ್ಯಾಗುರುಗಳನ್ನು ನಂಬುವುದು).

**ರತ್ನತ್ರಯ** ೬೮, ೨೩೬—ಮೋಕ್ಷಸಾಧನಗಳಾದ ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಗ್ಚಾರಿತ್ರಗಳು.

**ವಿಪ್ರೋ(ಟ್ರೋ)ಷಧಿಋದ್ಧಿ** ೫೪—ತಪಸ್ಸಿದ್ಧಿ ಪಡೆದವರಿಗೆ ಉಂಟಾಗುವ ಮಹಿಮೆಗಳಲ್ಲಿ ಒಂದು. ಔಷಧರ್ಧಿಗಳಲ್ಲಿ ಒಂದು. ಯತಿಯ ಮಲಮೂತ್ರಸ್ಪರ್ಶದಿಂದ ರೋಗಹರವಾಗುವುದು.

**ವಿಭಂಗಜ್ಞಾನ** ೧೮೯, ೨೧೫—ಮಿಥ್ಯಾತ್ವಯುಕ್ತ ಅವಧಿಜ್ಞಾನಕ್ಕೆ ವಿಭಂಗಜ್ಞಾನವೆಂದು ಹೆಸರು.

ಆತ್ಮನಿಗೆ ಅಹಿತವನ್ನುಂಟುಮಾಡುವ ಪದಾರ್ಥಗಳನು ತಿಳಿಯಬಲ್ಲುದಲ್ಲದೆ ಹಿತಕರ ಪದಾರ್ಥಗಳ ಸ್ವರೂಪವನ್ನು ಅರಿಯದು.

**ವೀಚಿಮರಣ** ೧೧೨—ಅಲೆಯು ಎದ್ದು ಬಿದ್ದು ನಾಶವಾಗುವಂತೆ ಸಂತತವಾದ ಮರಣವನ್ನು ಹೊಂದುವಿಕೆ. ಮನುಷ್ಯರ ಆಯುಸ್ಸು, ತೇಜಸ್ಸುಗಳು ನಿರಂತರವಾಗಿ ಕುಂದುತ್ತಿರುವುದು.

**ವ್ಯಂತರದೇವ** ೮೫—ಬೇರೆ ಬೇರೆ ದೇಶಗಳಲ್ಲಿ ಯಾರು ಇರುವರೋ ಆ ದೇವತೆಗಳು. ಇವರು ಎಂಟು ಬಗೆ: (೧) ಕಿನ್ನರ, (೨) ಕಿಂಪುರುಷ, (೩) ಮಹೋರಗ, (೪) ಗಂಧರ್ವ, (೫) ಯಕ್ಷ, (೬) ರಾಕ್ಷಸ, (೭) ಭೂತ, (೮) ಪಿಶಾಚ.

**ಶಂಕಾದ್ಯಷ್ಟಮಲಂಗಳು** ೫೦—ಶಂಕಾ, ಆಕಾಂಕ್ಷಾ, ವಿಚಿಕಿತ್ಸಾ, ಅನ್ಯದೃಷ್ಟಿ ಪ್ರಶಂಸಾ, ಸಂಸ್ತವಾ. ಸಮ್ಯಗ್‌ದೃಷ್ಟಿ, ಅತಿಚಾರಗಳು.

**ಶುಕ್ಲಧ್ಯಾನ** ೭೩—ಶುಚಿತ್ವ ಸಮೇತವಾದದ್ದು ಶುಕ್ಲಧ್ಯಾನ. ಧರ್ಮಧ್ಯಾನವನ್ನು ಮುಗಿಸಿ ಮುಕ್ತಿ ಹೊಂದುವುದನ್ನು ಕುರಿತು ಚಿಂತಿಸುವುದು. ಶುಕ್ಲಧ್ಯಾನವು ಸಾಕ್ಷಾತ್ತಾಗಿ ಮುಕ್ತಿಗೆ ಸಾಧನವಾಗುತ್ತದೆ.

**ಷಡ್ದ್ರವ್ಯಗಳು** ೫೦—ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ.

**ಸಪ್ತವ್ಯಸನ** ೪೭—ದ್ಯೂತಕ್ರೀಡೆ, ವೇಶ್ಯಾಸೇವನೆ, ಪರಸ್ತ್ರೀಗಮನ, ಚೌರ್ಯಕರ್ಮ, ಮಾಂಸ ಭಕ್ಷಣ, ಮದ್ಯಪಾನ, ಬೇಟೆಯಾಡುವುದು.

**ಸಮಾಧಿಮರಣ** ೮೯—ಅನ್ನ ಕಷಾಯ ಮುಂತಾದವುಗಳನ್ನು ತ್ಯಾಗಮಾಡಿ ರತ್ನತ್ರಯಗಳಲ್ಲಿ ಸ್ಥಿರನಾಗಿ ಪ್ರಾಣತ್ಯಾಗ ಮಾಡುವ ಕ್ರಮ.

**ಸಮ್ಯಕ್ತ್ವ** ೫೭—ಜೈನಮತದ ಸಮ್ಯಗ್‌ದರ್ಶನಾದಿ ತತ್ತ್ವಗಳ ಸತ್ಯತ್ವದಲ್ಲಿ ಸಂಪೂರ್ಣವಾದ ನಂಬಿಕೆಯಿರುವುದು. ಮಿಥ್ಯಾತ್ವಕ್ಕೆ ವಿರುದ್ಧವಾದದ್ದು.

**ಸರ್ವಾರ್ಥಸಿದ್ಧಿ** ೪೫—೨೭ ಅನುತ್ತರವಿಮಾನಗಳಲ್ಲಿ ಎಲ್ಲಕ್ಕೂ ಮೇಲಿರುವುದು ಮತ್ತು ಅತ್ಯುತ್ತಮವಾದದ್ದು.

**ಸರ್ವೋಷಧಿಋದ್ಧಿ** ೧೧೩—ಹತ್ತು ತಪಸ್ಸಿದ್ಧಿಗಳನ್ನು ಪಡೆದವರಿಗೆ ಒದಗುವ ಮಹಿಮೆ. ಸಾಧುವಿನ ಅಂಗಸ್ಪರ್ಶ, ಉಸಿರು, ಮಲಮೂತ್ರಗಳೆಲ್ಲಾ ರೋಗನಾಶಕವಾಗಿರುವುದು.

**ಸಿಂಹನಿಷ್ಕ್ರೀಡಿತ** ೨೦೭—೮೦ ದಿನದಲ್ಲಿ ೬೦ ಉಪವಾಸ ಮತ್ತು ೨೦ ಪಾರಣೆಗಳನ್ನು ಮಾಡುವ ವ್ರತ.

**ಸಿದ್ಧಗುಣ** ೫೧—ಮುಕ್ತಜೀವರಿಗಿರುವ ಎಂಟು ಗುಣಗಳು: (೧) ಸಮ್ಯಕ್ತ್ವ, (೨) ಅನಂತದರ್ಶನ, (೩) ಅನಂತಜ್ಞಾನ, (೪) ಅನಂತವೀರ್ಯ, (೫) ಸೂಕ್ಷ್ಮತ್ವ, (೬) ಅವಗಾಹಿತ್ವ, (೭) ಅವ್ಯಾಬಾಧತ್ವ ಮತ್ತು (೮) ಅಗುರುಲಘುತ್ವಗಳು.

**ಸಿದ್ಧಸ್ವರೂಪ** ೫೧—ಆತ್ಮವು ೮ ಕರ್ಮಗಳನ್ನು ನಾಶಪಡಿಸಿ ೮ ಗುಣಗಳನ್ನು ಪ್ರಕಟಪಡಿಸುವುದು. ದೇಹರಹಿತವಾಗಿ ಪುರುಷಾಕಾರವು ಲೋಕಶಿಖರದ ಮೇಲೆ ವಿರಾಜಮಾನವಾಗಿರುವುದು. ನಿತ್ಯ ಜ್ಞಾನಾನಂದದಲ್ಲಿ ಮಗ್ನವಾಗಿ ಸಾಧ್ಯವಿದ್ದುದನ್ನು ಸಾಧಿಸುವುದು. ಪೂರ್ಣ ಕೃತಕೃತ್ಯವಾಗಿ, ಅವಿನಾಶಿಯಾಗಿ, ಸ್ವಭಾವದಲ್ಲಿ ಸದಾ ತಲ್ಲೀನವಾದುದು.

**ಸ್ಪರ್ಶೌಷಧಿ**—ಆಮರ್ಶೌಷಧಿ. ಯತಿಯ ಸ್ಪರ್ಶದಿಂದ ರೋಗ ಪರಿಹಾರವಾಗುವಂಥದು.

**ಸಾಮಾನಿಕದೇವ** ೬೮—ಇಂದ್ರನಿಗಿರುವ ಆಜ್ಞೆ, ಐಶ್ವರ್ಯ, ಶಕ್ತಿಗಳಿಲ್ಲದೆ ಆಯುಸ್ಸು, ವೀರ್ಯ, ಪರಿವಾರ, ಭೋಗೋಪಭೋಗಾದಿ ಶಕ್ತಿಗಳಿಂದ ಇರುವಂಥವನು. ಗುರು, ತಂದೆ, ಉಪಾಧ್ಯಾಯರಂತೆ ಪೂಜ್ಯರಾದ ದೇವರುಗಳು ಸಾಮಾನಿಕ ದೇವರು.

**ಸ್ಥವಿರಕಲ್ಪ** ೧೧೭—ಆಚಾರ್ಯಾಧಿಕಾರಿಯಾಗಲಾರದೆ ಯಾವ ಸಂಘದಲ್ಲಿದ್ದು ಸಂಘದ ರೀತಿ ಅಥವಾ ಪರಂಪರಾಗತ ರೀತಿಯನ್ನು ತಿಳಿಸುವ ಸಾಧು.

# ೫. ಉದ್ಧೃತ ಪದ್ಯಗಳ ಅಕಾರಾದಿ

## (i) ಪ್ರಾಕೃತ

| | |
|---|---|
| ಅಚ್ಛಣಿಮೀಳಣ | ೧೭೦, ೨೧೪ |
| ಅಟ್ಠಹಿ ಛಣ್ಣಂ | ೧೭೬ |
| ಅರುಜಮಮರಣಂ | ೨೦೦—ಮೂಲಾ ೧೨-೧೪೫ |
| ಅಹಾರಣಿಮಿತ್ತಂ | ೧೮೭—ಮೂಲಾ ೨-೮೨ |
| ಉಡ್ಡಮಹೇತಿರಿಯಮ್ಮಿಯ | ೧೮೬—ಮೂಲಾ ೮೨-೭೫ |
| * ಉಣ್ಹಂ ವಾದಂ | ೧೫೪—ಭ. ಆ. ೧೫೪೮ |
| ಎಕ್ಕಂಪಂಡಿಯ | ೧೮೬—ಮೂಲಾ ೨-೭೭, ೩-೧೧೭ |
| ಎಕ್ಕಂಮ್ಮಿ ಭವಗ್ಗಹಣೇ | ೧೮೮—ಮೂಲಾ ೩-೧೧೮ |
| ಏಗೋಽಯ ಮರದಿ | ೧೨೫—ಮೂಲಾ ೨-೪೭ |
| ಏದಂ ಸರೀರಮಸುಚಿಂ | ೧೭೬—ಮೂಲಾ ೯-೭೮ |
| ಏದಾರಿಸೇ ಸರೀರೇ | ೧೭೬—ಮೂಲಾ ೯-೮೪ |
| ಏಸೋ ಪಂಚಣ | ೧೮೮—ಮೂಲಾ ೭-೧೩ |
| * ಓಮೋದರಿಏ | ೧೧೭—ಭ. ಆ. ೧೫೪೪ |
| * ಕಚ್ಚುಜರಖಾಸ | ೯೭—ಭ. ಆ. ೧೫೪೨ |
| * ಕಾಕಂದಿ ಅಭಯ | ೧೬೪—ಭ. ಆ. ೧೫೫೦ |
| * ಕಿಂಪುಣ ಅಣಗಾರ | ೨೩೮—ಭ. ಆ. |
| * ಕೋಸಂಬೀ ಲಲಿತಘಡಾ | ೧೩೯—ಭ. ಆ. ೧೫೪೫ |
| * ಖಮ್ಮಾಮಿ ಸವ್ವಜೀವಾಣಂ | ೯೨—೧೫೩ |
| | ೧೭೭, ೧೯೮, ೧೩೬—ಮೂಲಾ ೨-೯೩ |
| * ಗಾಢಪ್ಪಹಾರ ವಿದ್ಧೋ | ೨೦೬—ಭ. ಅ. ೧೫೫೩ |
| * ಗೊಟ್ಠೇಪಾಓವಗದೋ | ೨೨೪—ಭ. ಆ. ೧೫೫೬ |
| * ಚಂಪಾ ಏ ಮಾಸಖವಣಂ | ೧೪೬—ಭ. ಆ. ೧೫೪೬ |
| ಛಾಯೇವ ಸಕದಕಮ್ಮಂ | ೧೭೬ |
| * ಛಿಜ್ಜಉ ಭಿಜ್ಜವು | ೯೨, ೨೩೬—ಪರಪ್ರ ೧-೭೨ |
| ಜಂ ಇಚ್ಛಸಿತಂಣಂತಂ | ೨೧೧ |
| ಜಂಜೇಣ ಮಂತೇಣ | ೧೨೮ |
| ಜಇ ಉಪ್ಪಜ್ಜಇ | ೧೮೬—ಮೂಲಾ ೨-೭೮ |
| * ಜದಿತಾ ಏವಂ | ೨೩೮—ಭ. ಆ. |
| * ಜಹ ಜಹ ಭುಂಜಇ | ೧೮೭—ಭ. ಆ. ೧೨೬೩ |
| * ಜಿಣವಯಣ ಮರುದ | ೨೩೮—ಭ. ಆ. |
| ಜಿಣವಯಣ ಮೋಸಹ | ೧೮೭—ಮೂಲಾ ೨-೯೫, ೯-೭೫ |

* ಈ ಗುರುತು ಇರುವ ಪದ್ಯಗಳ ಆಕರಗಳನ್ನು ಮೊತ್ತಮೊದಲಿಗೆ ಕಂಡುಹಿಡಿದವರು ಡಾ. ಆ. ನೇ. ಉಪಾಧ್ಯೆ. ಎಂ. ಎ., ಡಿ. ಲಿಟ್. ಅವರು.

## (ii) ಸಂಸ್ಕೃತ

## (iii) ಕನ್ನಡ

# ಸಂಕೇತಗಳ ವಿವರ.

ಅಜಿಪು — ಅಜಿತನಾಥಪುರಾಣ (ರನ್ನ)
ಅರ್ಧನೇ — ಅರ್ಧನೇಮಿ (ನೇಮಿಚಂದ್ರ)
ಆದಿ, ಆದಿಪು — ಆದಿಪುರಾಣ (ಪಂಪ)
ಕಕೋ — ಕಥಾಕೋಶ (ಹರಿಷೇಣ)
ಕಾದಂಬರಿಉ — ಕಾದಂಬರಿಯ ಉತ್ತರಭಾಗ (ನಾಗವರ್ಮ)
ಕಾಮಸೂ — ಕಾಮಸೂತ್ರ (ವಾತ್ಸ್ಯಾಯನ)
ಕಾವ್ಯಾಲೋ — ಕಾವ್ಯಾವಲೋಕನ (ನಾಗವರ್ಮ)
ಕುವ್ಯಾಉ — ಉದ್ಯೋಗಪರ್ವ (ಕುಮಾರವ್ಯಾಸ)
ಗದಾ — ಗದಾಯುದ್ಧ (ರನ್ನ)
ಗಿರಿಕಾ — ಗಿರಿಜಾಕಲ್ಯಾಣ ಕಾವ್ಯ (ಹರಿಹರ)
ಚಂದ್ರಪು — ಚಂದ್ರಪುರಾಣ (ಅಗ್ಗಳ)
ಚಾವುಂಡ — ಚಾವುಂಡರಾಯಪುರಾಣ (ಚಾವುಂಡರಾಯ)
ಜಗವಿ — ಜಗನ್ನಾಥವಿಜಯ (ರುದ್ರಭಟ್ಟ)
ಜೀವಸಂ — ಜೀವಸಂಬೋಧನೆ (ಬಂಧುವರ್ಮ)
ತ — ತಮಿಳು
ಪಂಪಭಾ — ಪಂಪಭಾರತ (ಪಂಪ)
ಪಂಪರಾ — ಪಂಪರಾಮಾಯಣ (ನಾಗಚಂದ್ರ)
ಪರಪ್ರ — ಪರಮಾತ್ಮಪ್ರಕಾಶ (ಜೋಯಿಂದು)
ಪು — ಪುಟ
ಪೂಹಗ — ಪೂರ್ವದ ಹಳಗನ್ನಡ
ಪ್ರಶರ — ಪ್ರಶಮರತಿಪ್ರಕರಣ (ಉಮಾಸ್ವಾತಿ)
ಪ್ರಾ — ಪ್ರಾಕೃತ
ಭ. ಆ. — ಭಗವತೀ ಆರಾಧನೆ (ಶಿವಕೋಟಿ)
ಭ. ನೀ. — ನೀತಿಶತಕ (ಭರ್ತೃಹರಿ)
ಭ. ವ. — ವೈರಾಗ್ಯಶತಕ (ಭರ್ತೃಹರಿ)
ಮೂಲಾ — ಮೂಲಾರಾಧನಾ (ವಟ್ಟಕೇಶ್ವರಸ್ವಾಮಿ)
ಲೀಲಾವ — ಲೀಲಾವತಿ (ನೇಮಿಚಂದ್ರ)
ವರಾಂಗ — ವರಾಂಗಚರಿತೆ (ಜಟಾಸಿಂಹನಂದಿ)
ಲೋಕೋಪ — ಲೋಕೋಪಕಾರ (ಚಾವುಂಡರಾಯ)
ಮಲ — ಮಲಯಾಳ
ಶಬ್ದವಿ — ಶಬ್ದವಿಹಾರ (ಡಿ. ಎಲ್. ನರಸಿಂಹಾಚಾರ್)
ಶಮದ — ಶಬ್ದಮಣಿದರ್ಪಣ (ಕೇಶಿರಾಜ)
ಶಾಂತೀಶ್ವ — ಶಾಂತೀಶ್ವರಪುರಾಣ (ಕಮಲಭವ)
ಸಂ — ಸಂಸ್ಕೃತ
ಸುಕುಮಾ — ಸುಕುಮಾರಚರಿತೆ (ಶಾಂತಿನಾಥ)



ಈ ಮೂಲದಲ್ಲಿರುವ ಕಥೆಗಳು ಒಂದೊಂದೇ ಗಾಹೆಯಲ್ಲಿ ನಿರೂಪಿತವಾಗಿವೆ. ಅವು ಅತಿ ಸಂಕ್ಷಿಪ್ತವಾಗಿವೆ; ಕಥೆಗಳ ಯಾವ ವಿವರಗಳೂ ಅಲ್ಲಿ ದೊರೆಯುವುದಿಲ್ಲ. ಹರಿಷೇಣನೂ ಕೋಗಳಿಯ ಶಿವಕೋಟಿಯೂ ಈ ಕಥೆಗಳನ್ನು ಸವಿಸ್ತಾರವಾಗಿಯೂ ಸಾಲಂಕಾರವಾಗಿಯೂ ನಿರೂಪಿಸಿದ್ದಾರೆ. ಹರಿಷೇಣನಿಗಿಂತ ಶಿವಕೋಟಿಯು ಹೆಚ್ಚು ವಿವರಗಳನ್ನು ಕೊಡುತ್ತಾನೆ. ಹರಿಷೇಣನು 'ಅಭಿನಂದನಮುನಿ ಕಥಾನಕ'ವನ್ನು ಅತಿ ಸಂಗ್ರಹವಾಗಿ ೮ ಶ್ಲೋಕಗಳಲ್ಲಿ ಯಾವ ವರ್ಣನೆಗೂ ಹೋಗದೆ ಸುದ್ದಿಯನ್ನು ತಿಳಿಸುವ ವರದಿಗಾರನಂತೆ ಹೇಳಿದ್ದಾನೆ. ಇದೇ ಕಥೆ 'ವಡ್ಡಾರಾಧನೆ'ಯಲ್ಲಿ "ಮಹೇಂದ್ರದತ್ತಾಚಾರ್ಯರ್ ಮೊದಲಾದ ಅಯ್ನೂರ್ವರ್ ರಿಸಿಯರ್ಕಳ ಕಥೆ" ಎಂಬ ಹೆಸರಿನಿಂದ ಸಪರಿಕರವಾಗಿ, ಸರಸವಾಗಿ, ಕುತೂಹಲಕಾರಕವಾಗಿ ಹೃದ್ಯವಾದ ಗದ್ಯದಲ್ಲಿ ಐದು ಪುಟಗಳಲ್ಲಿ ನಿರೂಪಿತವಾಗಿದೆ. ಆದ್ದರಿಂದ ಈ ಇಬ್ಬರು ಕವಿಗಳು ತಮಗೆ ಸಿಕ್ಕ ಮೂಲ ಸಾಮಗ್ರಿಯನ್ನು ತಮಗೆ ಇಷ್ಟ ಬಂದ ಹಾಗೆ ಬಳಸಿಕೊಂಡಿದ್ದಾರೆಂದು ಭಾವಿಸಬಹುದು. ಇವರಿಬ್ಬರಿಗೆ ಸಮಾನ ಮೂಲವೊಂದು ಇದ್ದಿತೆಂದೂ ಅದು 'ಭಗವತೀ ಆರಾಧನಾ' ಗ್ರಂಥಕ್ಕೆ ಇದ್ದಿರಬಹುದಾದ ಯಾವುದೋ ಪ್ರಾಕೃತ ವ್ಯಾಖ್ಯಾನವೆಂದೂ ಡಾ. ಆ. ನೇ. ಉಪಾಧ್ಯೆಯವರು ಕೆಲವು ಆಧಾರಗಳ ಮೇಲೆ ಊಹಿಸಿದ್ದಾರೆ. ಇದು ಅತ್ಯಂತ ಸಂಭವನೀಯವೆಂದೂ ಪರಿಗ್ರಾಹ್ಯಯೋಗ್ಯವೆಂದೂ ತೋರುತ್ತದೆ. ಈ ಮೂಲದಲ್ಲಿ ಒಂದೊಂದು ಗಾಹೆಯಲ್ಲೇ ಸೂಚಿತವಾಗಿದ್ದ ಕಥೆಗಳನ್ನು ವ್ಯಾಖ್ಯಾನದಲ್ಲಿ ವಿಸ್ತರಿಸಿ ನಿರೂಪಣೆ ಮಾಡಿದ್ದಿತೆಂದು ಹೇಳಬಹುದು. ಈ ವಿಸ್ತೃತ ಕಥೆಗಳನ್ನು ಕವಿಯ ದೃಷ್ಟಿಯಿಂದ ಹರಿಷೇಣನೂ ಶಿವಕೋಟಿಯೂ ನೋಡಿ ಅವುಗಳ ನಿರೂಪಣೆಯಲ್ಲಿ ತಮ್ಮ ಕೌಶಲ್ಯವನ್ನೂ ಪ್ರತಿಭೆಯನ್ನೂ ಪ್ರಕಾಶಪಡಿಸಿರುವರೆಂದು ತಿಳಿಯಬಹುದು... 'ವಡ್ಡಾರಾಧನೆ'ಯ ನಿರೂಪಣೆ, ಸಂನಿವೇಶ ನಿರ್ಮಾಣ, ಪಾತ್ರರಚನೆ, ರಸಾವಿಷ್ಕರಣ, ಗದ್ಯದ ರಮಣೀಯತೆ, ವಾಕ್ಯಗಳ ವೈವಿಧ್ಯ, ಧ್ವನಿ— ಇವೆಲ್ಲ ಹರಿಷೇಣನ ಕೃತಿಯಲ್ಲಿರುವುದಕ್ಕಿಂತ ಅಧಿಕ ಪ್ರಮಾಣದಲ್ಲೂ ಗುಣದಲ್ಲೂ 'ವಡ್ಡಾರಾಧನೆ'ಯಲ್ಲಿ ಇವೆಯೆಂದು ಸ್ಥಾಪಿಸಲು ಸಾಧ್ಯವಾಗುತ್ತದೆ. ಈ ತೋಲನಾತ್ಮಕ ದೃಷ್ಟಿಯಿಂದಲೇ ಈ ಕೃತಿಯ ಮೌಲ್ಯವಿಚಾರ ನಡೆಯಬೇಕಾಗಿದೆ.

— ಡಿ. ಎಲ್. ನರಸಿಂಹಾಚಾರ್

'ಪೀಠಿಕೆ'ಯಿಂದ

---

ಡಿ. ವಿ. ಕೆ. ಮೂರ್ತಿ : : ಪ್ರಕಾಶಕರು : : ಮೈಸೂರು ೪

ಬೆಲೆ : ರೂ. 45